ಎ.ಎಸ್. ನಟರಾಜ್

# ಆತಂಕ

ಪ್ರಕಾಶಕರು :

ಹಂಸ ಪ್ರಕಾಶನ
947, 3ನೇ ಮುಖ್ಯ ರಸ್ತೆ
ವಿಜಯನಗರ
ಬೆಂಗಳೂರು- 560040.

# ಮುನ್ನುಡಿ

1983-84ರಲ್ಲಿ ದಿಲ್ಲೀಯ ಬ್ಯಾಂಕೊಂದರಲ್ಲಿ ನೌಕರಿ ಮಾಡುತ್ತಿದ್ದಾಗ, ಪಡೆದ ಅನುಭವ ಮತ್ತು ಜರುಗಿದ ಸತ್ಯ ಘಟನೆಗಳ ಆಧಾರದ ಮೇಲೆ ಈ ಕಾದಂಬರಿಯನ್ನು ಹೆಣೆದಿದ್ದೇನೆ.

ಮನುಷ್ಯನ ಅತ್ಯಂತ ಮೂಲಭೂತವಾದ, ಅನಾಗರೀಕ ಪ್ರಚೋದನೆ–ಹಿಂಸಾಚಾರ, ಹೊಡೆದಾಡುವಿಕೆ, ಕೊಲ್ಲುವಿಕೆ, ಆಕ್ರಮಣಗಳ ಅನುಭವ, ಇಂದಿರಾ ಗಾಂಧಿಯವರ ಹತ್ಯೆಯಿಂದುಂಟಾದ ನರಹತ್ಯ, ದಂಗೆಗಳ ಪ್ರತ್ಯಕ್ಷದರ್ಶನದಿಂದ ಉಂಟಾಯಿತು. ಈ ಅನುಭವಗಳ ಆಧಾರವೇ ಈ ಕಾದಂಬರಿಯ ವಸ್ತು.

ನನ್ನ ಈ ಕಾದಂಬರಿಯನ್ನು ಬರೆಯುವ ಮತ್ತು ಮುದ್ರಿಸುವ ಕಾರ್ಯಕ್ಕೆ ನೆರವಾದ ಶ್ರೀ ಸು.ರಂಗಸ್ವಾಮಿಯವರಿಗೆ ನಾನು ಆಭಾರಿಯಾಗಿದ್ದೇನೆ.

ಕನ್ನಡಿಗರು, ಈ ಕಾದಂಬರಿಯನ್ನು ಓದಿ, ಮೆಚ್ಚಿದರೆ ನಾನು ಧನ್ಯ.

ಜೈ ಕರ್ನಾಟಕ ಮಾತೆ !

**ಎ.ಎಸ್.ನಟರಾಜ್**

# ಅರ್ಪಣೆ

ಪೂಜ್ಯ ತಂದೆ ತಾಯಿಯರ
ದಿವ್ಯ ಸ್ಮರಣೆಗೆ ಈ
ಪುಸ್ತಕ ಅರ್ಪಿತ

# 1

ಜನಜಂಗುಳಿ ಅಧಿಕವಾಗಿತ್ತು. ಕಾಲುದಾರಿಗಳ ಮೇಲೆಲ್ಲಾ ಜನರ ಸಂತೆ ಸೇರಿ, ನಡೆಯುವುದೇ ದುಸ್ತರವಾಗಿತ್ತು. ಎಲ್ಲಿ ನೋಡಿದರೂ ಪೆಟ್ಟಿಗೆ ಅಂಗಡಿಗಳ ಸಾಲೇ ಸಾಲು. ಜೋಡಿ ರಸ್ತೆಯ ಇಕ್ಕೆಡೆಯಲ್ಲೂ ಅಂಗಡಿಗಳ ಸಮೂಹವೇ ಇದ್ದು, ಓಡಾಡುವರ ಜೊತೆಗೆ, ಅಂಗಡಿಗಳ ಮುಂದೆ ವ್ಯಾಪಾರ ಮಾಡುತ್ತಿರುವ ಜನರ ಗುಂಪು, ಪುರಾತನ ಕಾಲದಿಂದ ನಿಂತಿರುವ ಹಾಗೆ ಭಾಸವಾಗಿತ್ತು! ಬಹಳ ಕಷ್ಟಪಟ್ಟು ಗುಂಪನ್ನು ಬಿಡಿಸಿಕೊಂಡು ನಾನು ದಿಲ್ಲೀಯ ಪ್ರಸಿದ್ಧ ಚಾಂದನೀ ಚೌಕ್ ರಸ್ತೆಯಲ್ಲಿ ನಡೆದು ಹೋಗುತ್ತಿದ್ದೆ. ಬಾದ್‌ಶಹ ಶಹಜಹಾನ್ ಕಟ್ಟಿಸಿದ ಕೆಂಪು ಕೋಟೆಯ ಪಶ್ಚಿಮಕ್ಕೆ ಹಾದು ಹೋಗುವ ಈ ನೇರ ರಸ್ತೆ, ಅವನ ಹೆಂಡತಿ ಕಟ್ಟಿಸಿದ ಫತೇಪುರೀ ಮಸೀದಿಯನ್ನು ಮುಟ್ಟಿ, ಅದರ ಎರಡೂ ಪಕ್ಕಕ್ಕೆ ಹಾದು ಹೋಗಿ, ಚೌರೀ ಬಜಾರ್ ಮತ್ತು ಸದರ್ ಬಜಾರ್‌ಗಳನ್ನು ಸೇರಿ, ಅಲ್ಲಿಂದ ಹೊಸ ದೆಹಲಿಯ ಬಡಾವಣೆಯಾದ ಕರೋಲ್‌ಬಾಗ್ ಸೇರುತ್ತದೆ. ಈ ರಸ್ತೆ ಇತಿಹಾಸ ಪ್ರಸಿದ್ಧವಾಗಿದ್ದು, ಇಲ್ಲೇ ಶೀಖರ ಗುರು ತೇಜ್ ಬಹದ್ದೂರ್‌ರ ತಲೆ ಕಡಿದದ್ದು; ಇಲ್ಲೇ ಇರಾನಿನ ನಾದಿರ್ ಶಹಾ ದಿಲ್ಲೀ ಜನರ ಹತ್ಯೆ ನಡೆಸಿದ್ದು, ಇಲ್ಲೇ ಸ್ವಾತಂತ್ರ ಹೋರಾಟಗಾರ ಬ್ರಿಟಿಷ್ ಸಾಮ್ರಾಜ್ಯದ ಪ್ರತಿನಿಧಿಯ ಮೇಲೆ ಬಾಂಬ್ ಸಿಡಿಸಿದ್ದು!

ಗುರು ತೇಜ್ ಬಹದ್ದೂರ್‌ರ ವಧೆಯಾದ ಸ್ಥಳದಲ್ಲಿ ಅವರ ಅನುಯಾಯಿಗಳು ಒಂದು ಸುಂದರ ಗುರುದ್ವಾರ ನಿರ್ಮಿಸಿದ್ದಾರೆ. ಅದೇ ಸೀಸ್ ಗಂಜ್ ಗುರುದ್ವಾರ್. ಜನಗಳ ಸಂತೆ ನೆರೆದಿತ್ತು ನಾನು ಗುರುದ್ವಾರ ತಲುಪಿದಾಗ. ಒಳಗೆ ಹೋಗಲು ಯತ್ನಿಸಿದಾಗ, ಭುಜ ಹಿಡಿದು ಒಬ್ಬ ಶೀಖ ಕಾವಲುಗಾರ ನನ್ನನ್ನು ತಡೆದು, ತಲೆಗೆ ಬಟ್ಟೆ ಹಾಕಿ, ಕೂದಲು ಮುಚ್ಚುವಂತೆ ಸನ್ನೆ ಮಾಡಿದ. ಎಲ್ಲೆಲ್ಲೂ ವರ್ಣರಂಜಿತ ಪೇಟಗಳೇ ಕಾಣಿಸುತ್ತಿದ್ದ ನನಗೆ ಬರೀ ತಲೆ ಹೊತ್ತ ಜನರ ನೋಟ ಕಾಣಸಿಗಲಿಲ್ಲ. ಕರವಸ್ತ್ರವನ್ನು ತಲೆಗೆ ಏರಿಸಿ, ಚಪ್ಪಲಿಗಳನ್ನು, ಚಪ್ಪಲಿಗೂಡುಗಳಲ್ಲಿರಿಸಿ, ದೇವಾಲಯ ದೊಳಗೆ ಕಾಲಿರಿಸಿದೆ. ಒಳಗೆ ಹೋಗಿ ನೋಡಿದಾಗ, ದೊಡ್ಡ ಪಡಸಾಲೆ ಕಂಡು ಬಂತು. ಭಕ್ತಾದಿಗಳು, ಕುಳಿತು ಭಜನೆಯಲ್ಲಿ ಭಕ್ತಿಪೂರ್ವಕವಾಗಿ ಭಾಗವಹಿಸುತ್ತಿದ್ದರು. 'ಶಬದ್ ಕೀರ್ತನ್' ನಡೆಯುತ್ತಿದ್ದದ್ದನ್ನು ನೋಡುತ್ತಾ ನಿಂತ ನನ್ನನ್ನು ಒಬ್ಬ ಶೀಖ

ತನ್ನ ಬಳಿ ಕೂರುವಂತೆ ಆಹ್ವಾನಿಸಿದ. ಸ್ವಲ್ಪ ಜಾಗ ಸರಿಮಾಡಿಕೊಂಡು ಅವನ ಬಳಿ ಕುಳಿತೆ. ತೂಗು ಉಯ್ಯಾಲೆಯಂತಹ ಪೆಟ್ಟಿಗೆಯ ಮೇಲೆ ಇರಿಸಿದ್ದ 'ಗುರು ಗ್ರಂಥ ಸಾಹಿಬ್'ನ್ನು ಚಾಮರ ಬೀಸಿ ಕುಳಿತ ಇಬ್ಬರು ಶೀಖರು ಬಹಳ ಉತ್ಸಕತೆಯಿಂದ ಕೀರ್ತನೆ ಹೇಳುತ್ತಿದ್ದರು. ಪಕ್ಕದಲ್ಲೇ ಕೀರ್ತನಕಾರರು ಪಕ್ಕವಾದ್ಯದೊಡನೆ ಕೀರ್ತನೆ ಗಳನ್ನು ತಮ್ಮ ಇಂಪಾದ ಧ್ವನಿಯಲ್ಲಿ ಹಾಡುತ್ತಿದ್ದರು. ಕೇಳುವುದಕ್ಕೆ ಸುಮಧುರ ಗಾನವದು. ಹಿಂದೂಸ್ಥಾನಿ ಪದ್ಧತಿಯಲ್ಲಿ ಹಾಡುತ್ತಿದ್ದ ಅವರು ತಮ್ಮ ಗಾನ ಮಾಧುರ್ಯವನ್ನು ಎಲ್ಲರಿಗೂ ಹಂಚಿ ಕೃತಾರ್ಥರಾಗಿದ್ದರು. ನಾನು ಎಷ್ಟು ಹೊತ್ತು ಕುಳಿತು ಆ ಮಧುರ ಗಾನ ಸ್ವಾದಿಸುತ್ತಿದ್ದೆನೋ ನನಗೇ ಅರಿವಿರಲಿಲ್ಲ. ಗಾನವನ್ನು ಆಲೈಸುತ್ತಿದ್ದ ಹಾಗೇ ಗುರು ತೇಜ್‌ಬಹದ್ದೂರರ ಬಗ್ಗೆ ಚಿಂತಿಸತೊಡಗಿದೆ. ಕಾಶ್ಮೀರದ ಹಿಂದೂಗಳೂ ಮುಸ್ಮಿಮರ ಕಿರುಕುಳ, ಉಪಟಳ ಕೌರ್ಯ ತಾಳಲಾರದೆ, ಗುರುತೇಜ್ ಬಹದ್ದೂರ್‌ರ ಮೊರೆ ಹೊಕ್ಕುತ್ತಾರೆ. ದಿಲ್ಲೀ ಬಾದ್‌ಶಹಾ ಔರಂಗ್ ಜೇಬ್‌ನ ಕಾಶ್ಮೀರೀ ರಾಜ್ಯಪಾಲರು ಮತ್ತು ಇತರ ಅನುಯಾಯಿಗಳು ದೇಶದ ಹಿಂದೂಗಳ ಮೇಲೆ ಅತ್ಯಾಚಾರ ಎಸಗಿ ಅವರನ್ನು ಬಲಾತ್ಕಾರದಿಂದ ಇಸ್ಲಾಂ ಧರ್ಮಕ್ಕೆ ಪರಿವರ್ತಿಸುತ್ತಿದ್ದ ಕಾಲವಾಗಿತ್ತು ಅದು. ಅವನ ಕ್ರೌರ್ಯ ದಬ್ಬಾಳಿಕೆಗೆ ಬೇಸತ್ತ ಹಿಂದೂಗಳು ಎಲ್ಲೆಲ್ಲೂ ಕ್ರಾಂತಿಯ ಕಹಳೆ ಊದುತ್ತಿದ್ದ ಕಾಲವಾಗಿತ್ತು! ಗುರು ತೇಜ್‌ಬಹದ್ದೂರ್, ಹೆಸರಿಗೆ ತಕ್ಕ ಹಾಗೆ ಬಹದ್ದೂರೇ ಆಗಿದ್ದರು. ತಮ್ಮಲ್ಲಿಗೆ ಆಶ್ರಿತರಾಗಿ ಬಂದ ಕಾಶ್ಮೀರೀ ಬ್ರಾಹ್ಮಣ ಮತ್ತು ಇತರ ಹಿಂದೂಗಳಿಗೆ 'ದಿಲ್ಲೀ ಬಾದ್‌ಶಾಹಾ ನನ್ನನ್ನು ಇಸ್ಲಾಂ ಧರ್ಮಕ್ಕೆ ಸೇರಿಸಲು ಸಫಲನಾದರೆ, ನಾವೆಲ್ಲಾ ಮುಸ್ಲಿಂರಾಗಬಹುದು ಎಂದು ಹೇಳಿ ಕಳುಹಿಸಿರಿ' ಎಂದು ಅವರಿಗೆ ಹೇಳುತ್ತಾನೆ.

ಸುದ್ದಿ ತಿಳಿದ ಬಾದ್‌ಶಹಾ ಗುರುವಿಗೆ ದಿಲ್ಲಿಗೆ ಬರಲು ಕರೆ ಕಳುಹಿಸುತ್ತಾನೆ. ಬಾದ್‌ಶಹಾ ಔರಂಗಜೇಬ್‌ನ ಕ್ರೂರತನ ಅರಿತಿದ್ದರೂ ಅವನ ಧರ್ಮಾಂಧತೆಯ ಬಗ್ಗೆ ವಿಶೇಷ ಜ್ಞಾನವಿದ್ದರೂ, ಗುರು ಅಳುಕದೆ, ಧೈರ್ಯದಿಂದ ದಿಲ್ಲೀಗೆ ಪ್ರಯಾಣ ಬೆಳಸುತ್ತಾರೆ ! ದಿಲ್ಲೀ ಬಾದ್‌ಶಹಾನ ಮುಂದೆ ಹಾಜರಾಗಿ ಹೇಳುತ್ತಾರೆ, "ನನ್ನನ್ನು ಇಸ್ಲಾಂ ಮತಕ್ಕೆ ಸೇರಿಸು. ನಿನ್ನ ಕೈಲಾಗದಿದ್ದರೆ ದುರ್ಬಲ ನಿರ್ದೋಷಿ, ನಿಷ್ಕಪಟ, ನಿರುದ್ರುಪಿ ಜನಗಳ ಮೇಲೆ ಬಲವಂತವಾಗಿ ಅನ್ಯಾಯದಿಂದ ಮತಾಂತರ ಕಾರ್ಯ ಗಳನ್ನು ಎಸಗಬೇಡ." ಇದಕ್ಕೆ ಪ್ರತಿಯಾಗಿ ನಿಷ್ಕರುಣೆ, ಕ್ರೂರಿ, ದಯಾಹೀನ ಬಾದ್ ಶಹಾ, ದಾಕ್ಷಿಣ್ಯವಿಲ್ಲದೆ, ಗುರುವಿಗೆ ಮರಣದಂಡನೆ ವಿಧಿಸುತ್ತಾನೆ. ಇದೇ ನಾನು ಕುಳಿತ ಸ್ಥಾನದಲ್ಲೇ, ಅವನ ಕತ್ತು ಕಡಿದು ಹಾಕುತ್ತಾರೆ. ಆದರೆ ಗುರುವಿನ ಬಲಿದಾನ

ದಿಂದ ಔರಂಗ್‌ಜೇಬ್‌ನ ಸೋಲು ಉಂಟಾಗಿ ಶೀಖರಲ್ಲಿ, ಕೆಚ್ಚು, ಎದೆಗಾರಿಕೆ, ಆತ್ಮಗೌರವ, ಆತ್ಮಸಮರ್ಪಣಾ ಭಾವ ಉಂಟಾಗುತ್ತದೆ. ತಮ್ಮ ಉದಾತ್ತ ಬಲಿದಾನದಿಂದ ಶೀಖರಲ್ಲಿ ಒಗ್ಗಟ್ಟು ಉಂಟಾಗಿ ತಮ್ಮ ಧರ್ಮದ ಬಗ್ಗೆ ಅಭಿಮಾನ ಮುಗಿಲೆತ್ತರದಷ್ಟು ಮೂಡಿ ಭಾರತದ ಚರಿತ್ರೆಯನ್ನೇ ಬದಲಾಯಿಸುತ್ತಾರೆ ! ನನ್ನ ಯೋಚನೆಗಳಿಗೆ, ಧಕ್ಕೆಯುಂಟಾಗುವಂತೆ ಯಾರೋ ನನ್ನ ಭುಜ ಹಿಡಿದು ಅಲ್ಲಾಡಿಸಿದರು. ಭಜನೆ ಸಾಗಿತ್ತು. 'ಗಾನರೂಪದಲ್ಲಿರುವ ಪ್ರಾರ್ಥನೆ, ದೇವರ ಕೃಪಾಮಂದಿರವನ್ನು ತೆರೆಯುವ ಬೀಗದ ಕೈ ಅಲ್ಲವೇ?' ಬಹಳ ನಮ್ರತೆಯಿಂದ ದಿವ್ಯಾನಂದದಿಂದ ಹಾಡುತ್ತಿದ್ದ ಗಾನವನ್ನು ಆಲೈಸಿದೆ. ಗಾನ ಮಧುರವಾಗಿತ್ತು. ಹಾಡು, ಕೇಡುಗಳನ್ನು ಹೆದರಿಸಿ ಓಡಿಸುವುದಂತೆ! ಪ್ರಾರ್ಥನಾ ರೂಪವಾಗಿ ಹಾಡುವುದರಿಂದ ನಮಗೆ ದೊರೆಯುವುದಾದರೂ ಏನು? ದೇವರನ್ನು ಏನು ಬೇಡಿದರೂ ಅದು ಒಂದು ರೀತಿಯ ಪತ್ರ ವ್ಯವಹಾರವಾಗಿಬಿಡುತ್ತದೆ ಎನ್ನುತ್ತಾರೆ ಕೆಲವರು. ಅಂತೆ ಅದು ನಿಶ್ಕಾಮ ಪ್ರಾರ್ಥನೆ ಆಗಲೊಲ್ಲದು. ಎಲ್ಲರ ಹಿತವನ್ನು ಒಳಿತಿಗೂ ಬೇಡುವ ಪ್ರಾರ್ಥನೆ ನಿಜವಾದ ನಿಶ್ಕಾಮ ಪ್ರಾರ್ಥನೆ ಎನ್ನುವವರು ಎಷ್ಟು ಜನ ಹಾಗೆ ಮಾಡುತ್ತಾರೆ? ಉಪನಿಷತ್ತಿನ ಪ್ರಾರ್ಥನೆ 'ಅಸತ್ಯದಿಂದ ಸತ್ಯದ ಕಡೆಗೆ ಕತ್ತಲೆಯಿಂದ ಬೆಳಕು, ಮೃತ್ಯುವಿನಿಂದ ಅಮೃತತ್ವದೆಡೆಗೆ ಅರಿತು, ಗುಡಿಗಳಲ್ಲಿ ಮಾಡುತ್ತೇವೆಯೆ? ಪಕ್ಕದಲ್ಲಿ ಕುಳಿತಿದ್ದ ಆ ಸಿಖ್ ವ್ಯಕ್ತಿಯನ್ನು ನೋಡಿದೆ. ಅವ ಕಣ್ಣು ಮುಚ್ಚಿ ಕುಳಿತಿದ್ದ: ಗಾನವನ್ನು ಕೇಳುತ್ತಿದ್ದ, ನುಡಿಯುತ್ತಿರಲಿಲ್ಲ. ಕಣ್ಣುಗಳಲ್ಲಿ ಕಣ್ಣೀರಿನ ಹನಿಗಳು ಇಣುಕು ಹಾಕುತ್ತಿದ್ದವು. ಭಾವಪರವಶನಾಗಿರಬೇಕು ಎನಿಸಿತು. ಅವನ ಬಗ್ಗೆ ಕುತೂಹಲ ಉಂಟಾಯಿತು. ಏಕೆ ಅವನ ಪರಿಚಯ ಮಾಡಿಕೊಳ್ಳಬಾರದು ಎನಿಸಿತು. ಅವನು ತನ್ನ ಭಾವನಾ ಲೋಕದಿಂದ ಏಳುವುದನ್ನೇ ಕಾದು ಕುಳಿತೆ. ನನ್ನ ತಾಳ್ಮೆಗೆ ಸ್ವಲ್ಪ ಸಮಯದಲ್ಲೇ ಬೆಲೆ ಸಿಕ್ಕಿತು. ಆತ ತನ್ನ ಕಣ್ಣುಗಳನ್ನು ತೆಗೆದು ನನ್ನ ಮುಖ ನೋಡಿ, ಗಡಿಬಿಡಿಯಿಂದ ಕಣ್ಣುಗಳನ್ನು ಒರಿಸಿಕೊಂಡು, ಪೆಚ್ಚಾಗಿ ನಕ್ಕ. ನಾನು ನಕ್ಕು, ಮೇಲೆಕ್ಕೆದ್ದೆ. ಅವನೂ ಸಾವರಿಸಿಕೊಂಡು ಏಳುವ ಮುನ್ನ, ಗ್ರಂಥಸಾಹಿಬ್ ಕಡೆ ಮಂಡಿಯೂರಿ ನಮಸ್ಕರಿಸಿದ. ಹೊರಗಡೆ ಬಂದೆವು. ಪ್ರಸಾದವನ್ನು ಕೈಗೆ ತೆಗೆದುಕೊಂಡು ತಿಂದು ಅಲ್ಲೇ ನಲ್ಲಿಯಲ್ಲಿ ನೀರು ಕುಡಿದು ಚಪ್ಪಲೇರಿಸಿ, ಕೆಂಪು ಕೋಟೆಯ ಕಡೆ ಹೆಜ್ಜೆ ಹಾಕತೊಡಗಿದೆವು.

"ಸೌತ್ ಇಂಡಿಯನ್?" ಸಿಖ್ ಕೇಳಿದ.

"ಹೌದು, ಬೆಂಗಳೂರಿನವ " ಎಂದೆ.

"ಕನ್ನಡ ?"

ಆಶ್ಚರ್ಯವಾಯಿತು ನನಗೆ. ದಿಲ್ಲಿಯವ ಕನ್ನಡ ಎಂಬ ಭಾಷೆಯ ಬಗ್ಗೆ ಅರಿತಿದ್ದಾನಲ್ಲಾ ಎಂದು ಸಂತೋಷವೂ ಆಯಿತು.

'ಹೌದು!' ಎಂದು, ಅವನನ್ನೇ ಕೂಲಂಕುಶವಾಗಿ ನೋಡಿದೆ. ಹೆಚ್ಚು ಎತ್ತರವಿಲ್ಲದಿದ್ದರೂ, ಧೃಡಕಾಯನಾಗಿದ್ದನು. ಗೋಧಿ ಬಣ್ಣವನ್ನು ಹೊಂದಿದ್ದು, ಎಳೇ ಪ್ರಾಯದ ಸುಂದರ ವ್ಯಕ್ತಿ ಎಂದು ಯಾರಾದರೂ ಹೇಳಬಹುದಾಗಿತ್ತು. ತಲೆಗೆ ನೀಲಿ ಬಣ್ಣದ ಪೇಟ ಅವನ ಲಕ್ಷಣವಾದ ಮುಖಕ್ಕೆ ಮೆರಗು ನೀಡಿತ್ತು. ಕೈಗೆ ಎಲ್ಲಾ ಪಂಜಾಬಿಗಳು ಹಾಕುವಂತೆ ಕಬ್ಬಿಣದ ಕಡಗ ತೊಟ್ಟಿದ್ದ. ಅವನ ಎಳೇ ಕೆನ್ನೆಯ ತುಂಬಾ ಕರೀ ಗಡ್ಡ ಮಿನುಗುತ್ತಿತ್ತು.

"ನಾನು ಒಂದು ಚಾಕೊಲೇಟ್ ಕಂಪನಿಯಲ್ಲಿ ಅಕೌಂಟೆಂಟ್ ಆಗಿದ್ದೇನೆ. ನನ್ನ ಮನೆ ಟ್ರಾನ್ಸ್ -ಜಮುನಾದಲ್ಲಿದೆ."

ಅಂದರೆ, ಅವನ ಮನೆ ಜಮುನಾ ನದೀ ದಾಟಿ ಬಹಳ ದೂರದಲ್ಲಿದೆ ಎಂದ ಹಾಗೆ ಆಯಿತು. ನಾನು ನನ್ನ ಪರಿಚಯ ಮಾಡಿಕೊಂಡೆ. ಬ್ಯಾಂಕ್ ಒಂದರಲ್ಲಿ ನೌಕರೀ ಮಾಡುತ್ತಿದ್ದು ವಾಸ ರಾಜೇಂದ್ರನಗರದಲ್ಲಿ ಎಂದು ಹೇಳಿದೆ.

"ರಾಜೇಂದ್ರನಗರ ಬಿಟ್ಟು ಬೇರೆ ಕಡೆ ವಾಸ ಮಾಡಲಿಕ್ಕೆ ಹೆದರಿಕೆಯಾ ನಿಮಗೆ?" ಕೇಳಿದ ನಗುತ್ತಾ.

"ಹಾಗೇನಿಲ್ಲ. ಅಲ್ಲಿ ನಮ್ಮವರು ಹೆಚ್ಚಾಗಿದ್ದಾರಲ್ಲಾ ಮತ್ತೆ ಎಲ್ಲಾ ಅನುಕೂಲಗಳೂ ಇವೆಯಲ್ಲಾ ಅಲ್ಲಿ" ಎಂದೆ.

"ರೈಲ್ವೆ ಸ್ಟೇಷನ್ ಕೂಡ ಹತ್ತಿರ ಇದೆಯಲ್ಲಾ, ಬೇಗ ಓಡಿ, ನಿಮ್ಮ ಊರು ಸೇರಿಕೊಳ್ಳುವುದಕ್ಕೆ!"

ದಕ್ಷಿಣ ಭಾರತೀಯರು ಪುಕ್ಕಲು ಸ್ವಭಾವದವರು, ಎದೆಗಾರಿಕೆ ಇಲ್ಲದವರು, ಮೆದು ಸ್ವಭಾವದವರು, ಸೈನ್ಯಕ್ಕೆ ಸೇರಲು ಹಿಂದೆಗೆಯುವಂತಹವರು, ಹೋರಾಟಕ್ಕೆ ನುಗ್ಗದಂತಹವರು ಇತ್ಯಾದಿ ಇತ್ಯಾದಿ ಉತ್ತರ ಭಾರತೀಯರ ಅನಿಸಿಕೆ.

"ನೀವು ತಿಳಿದಷ್ಟು ಪುಕ್ಕಲರಲ್ಲ ನಾವು !" ಎಂದೆ ಎದೆಯುಬ್ಬಿಸಿ.

"ಹಾಗಾದರೆ ಸೈನ್ಯಕ್ಕೆ ಸೇರಲು ಯಾಕೆ ಇಷ್ಟ ಪಡುವುದಿಲ್ಲ?" ಸವಾಲು ಹಾಕಿದ ಅವ.

ಉತ್ತರಿಸಲು ತಡವರಿಸಿದೆ. ಹೌದು ! ಅವನು ಹೇಳಿದುದರಲ್ಲಿ ಅತಿಶಯೋಕ್ತಿ ಇರಲಿಲ್ಲ. ದಕ್ಷಿಣ ಭಾರತೀಯರು, ಅದರಲ್ಲೂ ಕರ್ನಾಟಕದವರು ಸೈನ್ಯಕ್ಕೆ ಸೇರಿ ತಾಯಿನಾಡ ಸೇವೆ ಮಾಡಲಿಕ್ಕೆ ಉತ್ಸುಕತೆ ತೋರುವುದಿಲ್ಲ.

"ನೀವೇತಕ್ಕೆ ಸೇರಲಿಲ್ಲ ಸೈನ್ಯಕ್ಕೆ ?" ಮರುಸವಾಲನ್ನು ನಾನು ಅವನಿಗೆ ಎಸೆದೆ.

"ನನ್ನನ್ನು ಆಯ್ಕೆ ಮಾಡಲಿಲ್ಲ ! ಫಿಸಿಕಲ್ ಫಿಟ್‌ನೆಸ್ ಇಲ್ಲ ಎಂದು ನಿರಾಕರಿಸಿದರು !"

ಅವನ ಧ್ವನಿಯಲ್ಲಿ ಬೇಸರದ ಛಾಯೆ ಇತ್ತು.

"ಒಂದು ಕಾಲದಲ್ಲಿ ಪಂಜಾಬಿಗಳನ್ನು ಬಿಟ್ಟರೆ, ಬೇರೆ ಯಾರನ್ನೂ ಸೇರಿಸುತ್ತಿರಲಿಲ್ಲ, ಸೈನ್ಯಕ್ಕೆ! ಈಗ ಎಲ್ಲಾ ರಾಜ್ಯದವರಿಗೂ ಅವರವರ ಜನಸಂಖ್ಯಾನು ಗುಣದ ಪ್ರಕಾರ ಸೈನ್ಯದಲ್ಲಿ ಭರ್ತಿ ಮಾಡಿಕೊಳ್ಳುತ್ತಿದ್ದಾರೆ. ಈಗ ನಮಗೆ ಸೈನ್ಯಕ್ಕೆ ಸೇರುವ ಅವಕಾಶ ತಪ್ಪಿಹೋದಾಂತಾಗಿ ಬೇರೆ ಕೆಲಸಮಾಡ ಬೇಕಾಗಿದೆ."

"ಬೇರೆ ಕೆಲಸ ಮಾಡಿದರೆ ತಪ್ಪೇನು ?"

"ನೋಡಿ! ನಮಗೆ ಯಾವುದು ಇಷ್ಟವೋ ಆ ಕೆಲಸ ಮಾಡಬೇಕು. ಸೈನ್ಯದಲ್ಲಿ ದುಡಿಯುವ ಆಸೆ ಇಟ್ಟುಕೊಂಡ ನನಗೆ ಚಾಕೋಲೇಟ್ ಫ್ಯಾಕ್ಟರಿಯಲ್ಲಿ ಯಾಕೆ ಗುಮಾಸ್ತಗಿರಿ ಮಾಡಬೇಕು?"

ಎಷ್ಟು ಉತ್ಕಟ ಆಸೆ ಇಟ್ಟುಕೊಂಡಿದ್ದಾನಲ್ಲ ಸೈನ್ಯ ಸೇರಬೇಕೆಂದು ಈ ಸಾರದಾರ್‌ಜೀ !

"ಯಾಕೆ ಅಷ್ಟು ಆಸೆ ಹೊಂದಿದ್ದೀರಿ ?"

"ಯಾಕೆಂದರೆ, ನಮ್ಮದು ಕ್ಷತ್ರಿಯ ಕುಲ! ಪಂಜಾಬೀ ಸಿಖ್‌ರಿಗೆ ಸೈನ್ಯಕ್ಕೆ ಸೇರಿ ಯುದ್ಧ ಮಾಡುವುದು ರಕ್ತಗತವಾಗಿ ಬಂದಿದೆ. ನನ್ನ ತಂದೆ, ತಾತ, ಮುತ್ತಾತ ಎಲ್ಲರೂ ಸೈನ್ಯದಲ್ಲಿದ್ದವರೆ! ನಾನು ಸೈನ್ಯದಲ್ಲಿ ಭರ್ತಿಯಾಗದೇ ಇದ್ದುದಕ್ಕೆ ನಮ್ಮೆಲ್ಲರಿಗೂ ಅವಮಾನವಾಗಿದೆ !"

'ಬೆಂಗಾಲಿಗಳು ದೇಶದ ಕಾರಕೂನರು; ಮದ್ರಾಸೀಗಳು ದೇಶದ ಅಡಿಗೆ ಭಟ್ಟರು; ಮೈಸೂರಿನವರು ದೇಶದ ಅಲಂಕಾರ ಪ್ರಿಯರು ; ಪಂಜಾಬಿಗಳು ದೇಶದ ವೀರಭಟರು!' ಇಂಗ್ಲೀಷ್‌ನವರು ನಮ್ಮ ದೇಶಿಯರನ್ನು ಕುರಿತು ಆಡಿದ ಅಭಿಪ್ರಾಯ ನೆನಪಿಗೆ ಬಂದಿತು. ಎಷ್ಟು ನಿಜ ಮತ್ತು ಸಮಂಜಸ ! ಮೊಟ್ಟ ಮೊದಲಿಗೆ ಬೆಂಗಾಲವನ್ನು ಆಕ್ರಮಿಸಿ, ಬೆಂಗಾಲಿಗಳಿಗೆ ಇಂಗ್ಲೀಷ್ ಭಾಷೆಯನ್ನು ಮೊಟ್ಟಮೊದಲು ಕಲಿಸಿದ ಇಂಗ್ಲೀಷ್‌ರು, ತಮಿಳು ಅಡಿಗೆ ಭಟ್ಟರನ್ನು ತಮ್ಮ ಮನೆ, ಅಂಗಡಿ, ಫೌಜುಗಳಲ್ಲಿ ನೇಮಕ ಮಾಡಿ, ರುಚಿ ರುಚಿಯಾದ ಅಡಿಗೆ ಮಾಡಿಸಿ ಆನಂದ ಪಡೆಯುತ್ತಿದ್ದುದು ಇತಿಹಾಸ ಸತ್ಯವಷ್ಟೆ.

ಮಧ್ಯಾಹ್ನದ ಬಿಸಿಲಿನ ಬೇಗೆಗೆ ಬೆವೆತುಬೆಂಡಾಗಿದ್ದ ಅವನ ಮೈ, ಕೋಪದಿಂದ ಅಡರುತ್ತಿತ್ತು ! ಬಿಸಿಲಿನ ಬೇಗೆಯ ತಾಪದ ಜೊತೆಗೆ, ಅವನ ಕೋಪದ ತಾಪ, ನನ್ನನ್ನೂ ತಟ್ಟಲಾರಂಭಿಸಿತ್ತು! ತಾಪ ಕಡಿಮೆ ಮಾಡಿಕೊಳ್ಳೋಣವೆಂದು ನಿಂಬೆ

ಶರಬತ್ತು ಮಾಡುತ್ತಿದ್ದವನ ಬಳಿ ನಿಂತೆ. ಇಬ್ಬರೂ ಶರಬತ್ತು ಕುಡಿದು ಮುಂದೆ ಹೊರಟೆವು. ಈಗಾಗಲೇ ಕೆಂಪುಕೋಟೆ ಸಮೀಪ ಬಂದಿದ್ದೆವು. ಹೆದ್ದಾರಿಯ ಪಕ್ಕದಲ್ಲೇ ಒಂದು ಶಿವ ದೇವಸ್ಥಾನ ಕಾಣಿಸಿತು. ಕೈ ಮುಗಿದು ನಾನು ಮುಂದೆ ಸಾಗಿದೆ. ಹಿಂದೆಯೇ ಬಂದ ಸರದಾರಜೀ ನನ್ನನ್ನು ತಡೆದು.

"ಇಲ್ಲಿ ಒಂದು ಪಕ್ಷಿಗಳ ಆಸ್ಪತ್ರೆ ಇದೆ, ನೋಡಿದ್ದೀರಾ ? ಎಂದು ಕೇಳಿದ.

"ಇಲ್ಲ !" ಎಂದು ತಲೆಯಾಡಿಸಿದೆ.

"ಮನುಷ್ಯರಿಗೇ ಸರಿಯಾದ ಒಂದು ಆಸ್ಪತ್ರೆ ಇಲ್ಲ ಈ ಊರಿನಲ್ಲಿ. ಇದ್ದರೂ ನೋಡಿಕೊಳ್ಳಲು ಸರಿಯಾದ ಡಾಕ್ಟರ್‌ಗಳಿಲ್ಲ. ಇನ್ನು ಪಕ್ಷಿಗಳಿಗೆ ಒಂದು ಆಸ್ಪತ್ರೆ!"

ನಕ್ಕ ಸರದಾರ್‌ಜೀ. ನಾನು ನಗಲಿಲ್ಲ. ಒಂದು ಉದಾತ್ತ ಧ್ಯೇಯವಿಟ್ಟು ಕೊಂಡು ನಡೆಸುತ್ತಿರಬೇಕು ಈ ಆಸ್ಪತ್ರೆಯನ್ನು. ಯಾಕೆ ಟೀಕೆ ? ಅದರಿಂದೇನು ಉಪಯೋಗ?

"ಅಂದ ಹಾಗೆ ನನ್ನ ಹೆಸರು ಕೃಪಾಲ್ ಸಿಂಗ್. ನಿಮ್ಮ ಹೆಸರು ?"

ನನ್ನ ಹೆಸರು ಹೇಳಿದೆ.

"ಮತ್ತೆ ಭೇಟಿಯಾಗುವ " ಎಂದು ಹೇಳಿ, ಸಿಂಗ್ ಗುಂಪಿನಲ್ಲಿ ಕರಗಿಹೋದ.

ಅನಿರೀಕ್ಷಿತವಾಗಿ ಭೇಟಿಯಾದ ಈ ಸಿಂಗ್, ಅನಿರೀಕ್ಷಿತವಾಗಿಯೇ ನಿರ್ಗಮಿಸಿದ್ದ !

ಕೃಪಾಲಸಿಂಗ್‌ನ ಕೃಪೆ ಯಾಕೆ ಈ ನರಳುತ್ತಿರುವ ಪಕ್ಷಿಗಳ ಮೇಲೆ ಬೀಳಲಿಲ್ಲ ಎಂದು ಯೋಚಿಸುತ್ತಾ ಮುಂದುವರಿದಿದ್ದ ನನ್ನ ಮುಂದೆ ಒಬ್ಬ ನಿಂತು,

"ಸಾಬ್, ಸಿರ್ಫ್ ದಸ್ ರೂಪಾಯಿ ಕೋ ದೋ ತೋತಾ!" ಎಂದು ಒಂದು ಗಿಣಿ ಪಂಜರವನ್ನು ನನ್ನ ಮುಖದ ಮುಂದೆ ಒಡ್ಡಿದ.

ಗಿಣಿಯನ್ನು ನೋಡಿದೆ. ಬಿಸಿಲಿಗೆ ಬೆಂಡಾಗಿ ಸಾಯುವ ಹಾಗೆ ಇತ್ತು. ಆಹಾರ ವಿಲ್ಲದೆ ಸಾಯುವ ಸ್ಥಿತಿಯಲ್ಲಿದ್ದ ಗಿಣಿಯನ್ನು ನೋಡಿ,

"ಇದಕ್ಕೆ ಆಹಾರ ಕೊಟ್ಟು, ಸಾಕಿ, ಆಮೇಲೆ ಮಾರಬಾರದಾ?" ಎಂದು ಆಕ್ಷೇಪಿಸಿದೆ.

"ನನಗೇ ತಿನ್ನಲಿಕ್ಕೆ ಬೆಳಗಿನಿಂದ ಆಹಾರ ಇಲ್ಲ! ಇದನ್ನು ಮಾರಿದರೆ, ನಾನೂ ತಿನ್ನಬಹುದು ಇದಕ್ಕೂ ತಿನ್ನಿಸಬಹುದು!" ಎಂದ ಅವ.

"ಪಕ್ಷಿ ಹಿಡಿಯಲಿಕ್ಕೆ ಆಗುತ್ತದೆ ನಿಮಗೆ, ಆಹಾರ ನೀಡಲಿಕ್ಕೆ ಆಗೋ ದಿಲ್ಲವಾ?" ಮತ್ತೆ ಆಕ್ಷೇಪಿಸಿದೆ.

"ಒಂದು ಕೆಲಸ ಮಾಡಿ ಸಾಬ್! ಪಕ್ಷಿ ಕೊಳ್ಳಿರಿ, ಅದಕ್ಕೆ ತಿನ್ನಿಸಿರಿ. ತಿನ್ನದೇ ಇದ್ದರೆ ಇಲ್ಲೇ ಪಕ್ಷಿ ಆಸ್ಪತ್ರೆ ಇದೆ. ಅಲ್ಲಿ ಸೇರಿಸ್ಬಿಡಿ !

ನಾನು ಮಾತಿಲ್ಲದೆ ಮುಂದೆ ನಡೆದೆ. ನನ್ನ ಹಿಂದೆ ಅವ ನಕ್ಕ ಹಾಗೆ ಆಯಿತು.

ಜೂನ್ ತಿಂಗಳ ದಿಲ್ಲೀ ಬಿಸಿಲು ಕೂದಲು ಉದರಿ, ಬೋಳಾಗುತ್ತಿದ್ದ ನೆತ್ತಿ ಮೇಲೆ ಬಿದ್ದು, ತಲೆ ಸಿಡಿಯುವ ಹಾಗೆ ಆಯಿತು. ಬೇಗ ಬೇಗ ಹೆಜ್ಜೆ ಹಾಕಿದೆ ಬಸ್ ನಿಲ್ದಾಣದ ಬಳಿ. ಬಸ್ ಒಡನೆಯೇ ಸಿಕ್ಕಿತು. ರಾಜೇಂದ್ರನಗರದಲ್ಲಿಯ ನನ್ನ ಮನೆಗೆ ಬಂದು ಬೀಗ ತೆಗೆದು, ಒಳಗೆ ಬಂದು, ಫ್ಯಾನ್ ಸ್ವಿಚ್ ಅದುಮಿದರೆ, ಫ್ಯಾನ್ ತಿರುಗಲಿಲ್ಲ ! ಪವರ್ ಕಟ್‌ನ ದೆಸೆಯಿಂದ, ವಿದ್ಯುತ್ ಖೋತಾ ಆಗಿತ್ತು. ಉಸ್ಸಪ್ಪಾ ಎಂದು ಮಂಚದ ಮೇಲೆ ಉರಳಿದೆ.

ಮೂರನೇ ಅಂತಸ್ತಿನಲ್ಲಿರುವ ಈ ಎರಡು ರೂಮಿನ ಬರಸಾತಿ ಮನೆಗೆ, ಕುತುಬ್ ಮಿನಾರ್‌ನ ಸುತ್ತು ಮೆಟ್ಟಲೇರಿ, ಮನೆ ಒಳಗೆ ಸೇರಿ, ಹೊರಗಿನ ಸುಡುವ ಬಿಸಿಲಿನ ಬೇಗೆಯಿಂದ ದಣಿವಾರಿಸಿಕೊಳ್ಳುವ ಸಲುವಾಗಿ ಫ್ಯಾನ್ ಗಾಳಿಯ ಸೌಕರ್ಯವೂ ಇಲ್ಲದಾಯಿತಲ್ಲಾ ಎಂದು ಹಲುಬಿ, ಬಾಯಾರಿದ್ದ ಬಾಯಿಗೆ ನೀರು ಸುರಿದುಕೊಳ್ಳುವ ಎಂದು, ನೀರಿನ ಬಟ್ಟಲನ್ನು ಬಾಯಿಗೆ ಇಟ್ಟುಕೊಂಡರೆ ಬಿಸಿ ಬಿಸಿ ನೀರು ನನ್ನ ಮುಖದ ಮೇಲೆಲ್ಲಾ ಚೆಲ್ಲಾಡಿತು! ಯಾರೋ ನಕ್ಕ ಹಾಗಾಯಿತು ! ಸಂದೇಹ. ದೂರದಲ್ಲಿ ಗಿಣಿ ಮಾರುತ್ತಿದ್ದ ಆ ಮನುಷ್ಯನೇ ಇರಬಹುದೇ ? ನಕ್ಕದ್ದು ನನ್ನ ಸ್ಥಿತಿಯನ್ನು ನೋಡಿ ತಾ ನಗುತ್ತಿರಬಹುದೇ ?

# 2

"ನೀವು ಆ ಕಪೂರ್‌ಗೆ ಸ್ವಲ್ಪ ಬುದ್ಧಿವಾದ ಹೇಳಿ ಸಾರ್ !"

ಕುಮಾರ್ ನನ್ನ ಬಳಿ ಒಂದು ಅಂಗಲಾಚಿದ.

"ಏನು ಹೇಳ್ಬೇಕು ಅವನಿಗೆ ?" ಕೇಳಿದೆ ನಾನು.

"ಗೊತ್ತಿದೆ ನಿಮಗೆ ಎಲ್ಲಾ !" ಆಕ್ಷೇಪಣೆಯ ದನಿಯಲ್ಲಿ ಹೇಳಿದ ಕುಮಾರ್

ಕಪೂರ್ ನಮ್ಮ ಬ್ಯಾಂಕಿನ ಒಬ್ಬ ಮುಖ್ಯ ಗಿರಾಕಿ. ಪ್ಯಾಕೇಜಿಂಗ್ ಉದ್ಯಮ ಹೊಂದಿದ್ದ. ದಿನವಹೀ ಬ್ಯಾಂಕಿಗೆ ಬಂದು ಹಣಕಾಸಿನ ವಹಿವಾಟು ಮಾಡುತ್ತಿದ್ದ. ನಮ್ಮ ಬ್ಯಾಂಕಿನಲ್ಲಿ ಕೆಲಸ ಮಾಡುತ್ತಿದ್ದ ಕಮಲಾ ಎಂಬ ದಕ್ಷಿಣ ಭಾರತೀಯ ಯುವತಿಯೊಡನೆ ಪ್ರಣಯ ವ್ಯವಹಾರವನ್ನು ಜೊತೆಗೆ ಮಾಡುತ್ತಿದ್ದ. ಯುವತಿ ಸುಂದರಳಲ್ಲದಿದ್ದರೂ, ಏಳೇ ವಯಸ್ಸಿನವಳಾಗಿದ್ದು, ಎಣ್ಣೆಗಪ್ಪಿನ ಬಣ್ಣ ಹೊಂದಿದ್ದು, ನೋಡಲು ಲಕ್ಷಣವಾಗಿದ್ದಳು. ದಿಲ್ಲೀಯಲ್ಲೇ ಹುಟ್ಟಿ ಬೆಳೆದಿದ್ದರಿಂದ ಹಿಂದೀ ಭಾಷೆಯನ್ನು ಹಿಂದೀಯವರಂತೆ ಅರಳು ಹುರಿದಂತೆ ಮಾತಾನಾಡುತ್ತಾ, ಲವಲವಿಕೆಯಿಂದಿದ್ದಳು. ತಮಿಳು ಮಾತೃ ಭಾಷೆಯಾದರೂ, ಎಂದೂ ಯಾರೊಡನೆಯೂ ಆ ಭಾಷೆಯ ಉಪಯೋಗ ಮಾಡಿರಲಿಲ್ಲ. ತಂದೆ ದಿಲ್ಲೀ ಸರಕಾರದ ಯಾವುದೋ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದುದರಿಂದ, ಸರಕಾರದ ವಸತಿ ಸೌಕರ್ಯ ಸುಲಭವಾಗಿ ದೊರಕಿತ್ತು.

ಕಪೂರ್, ಎಲ್ಲಾ ಪಂಜಾಬಿಗಳ ಹಾಗೆ ಬೆಳ್ಳಗೆ, ಗಟ್ಟಿಮುಟ್ಟಾದ ದೇಹಾರ್ಢ್ಯ ಹೊಂದಿದ್ದ ಯುವಕ. ಯಾವಾಗಲೂ ನಗುನಗುತ್ತಾ ಇನ್ನೊಬ್ಬರನ್ನು ನಗಿಸುತ್ತಾ, 'ನೆನ್ನೆ ಇಲ್ಲಿ, ನಾಳೆ ಏನಾಗುವುದೋ ? ಇರುವುದಾದರೇ ಇಂದೇ' ಎಂಬ ಘೋಷಣೆಗೆ ಮನಸೋತು, ಮಜದಲ್ಲಿ ಇದ್ದ.

ಯುವತಿಯಾದರೋ, ಯಾವಾಗಲೂ ಹಸನ್ಮುಖಿಳಾಗಿ, ಕೊಟ್ಟ ಕೆಲಸವನ್ನು ನಾಜೂಕಾಗಿ ಒಪ್ಪವಾಗಿ, ಓರಣವಾಗಿ ಮಾಡಿ ಮುಗಿಸುತ್ತಿದ್ದಳು. ಕಪೂರ್ ಬಂದರೆ, ತನ್ನ ಕೆಲಸದ ಒತ್ತಡದಲ್ಲೂ ಅವನೊಡನೆ, ಸರಸ ಸಲ್ಲಾಪ ಮಾಡಿಕೊಂಡು, ಬೇರೆಯವರಿಗೆ ತೊಂದರೆಯಾಗದಂತೆ, ಕೆಲಸ ನಿರ್ವಹಿಸುತ್ತಿದ್ದಳು.

ಕುಮಾರ್ ಕರ್ನಾಟಕ ಜೈನನಾಗಿದ್ದು , ಬಹಳ ಶಿಸ್ತಿನ ಮನುಷ್ಯನಾಗಿದ್ದ. ಬ್ಯಾಂಕಿನ ನಿಯಮಗಳನ್ನು ಚಾಚೂ ತಪ್ಪದೆ ನಿರ್ವಹಿಸಿ, ಇತರರೂ ತನ್ನಂತೆಯೇ ಇರಬೇಕು, ತನ್ನಂತೆಯೇ ಕಾರ್ಯ ನಿರ್ವಹಿಸಬೇಕು ಎಂದು ಬಹಳವಾಗಿ ಶ್ರಮಿಸುತ್ತಿದ್ದ. ಅವನಿಗೆ ಕಪೂರ್‌ನನ್ನು ಕಂಡರೆ ಅಷ್ಟಕಷ್ಟೆ ! ವಿನಾಕಾರಣ ಬ್ಯಾಂಕಿಗೆ ಬಂದು,

ಆ ಹುಡುಗಿಯೊಡನೆ ಚಕ್ಕಂದ ಹೊಡೆಯುತ್ತಾ ಕುಳಿತುಕೊಳ್ಳುವ ಕಪೂರ್‌ನನ್ನು ಕಂಡು ಸಿಡಿಮಿಡಿಗೊಳ್ಳುತ್ತಿದ್ದ.

ಒಂದೆರಡು ಸಲ ಅವನಿಗೆ ತನ್ನ ಅಸಮಾಧಾನವನ್ನು ಹೇಳಿಯೂ ಇದ್ದ. ಆದರೆ ಕಪೂರ್, ಅವನ ಮಾತುಗಳಿಗೆ ನಕ್ಕು, ಅವನನ್ನೇ ಲೇವಡಿ ಮಾಡಿ ನಗಿಸಿ, ವಿಷಯವನ್ನು ಹಗುರ ಮಾಡಿಬಿಟ್ಟಿದ್ದ.

ಏನಾದರಾಗಲೀ, ಈ ದಿನ, ಆ ಹುಡುಗಿಯನ್ನು ಕರೆದು ಸ್ವಲ್ಪ ಬುದ್ಧಿವಾದವನ್ನು ಹೇಳಬೇಕೆನಿಸಿತ್ತು. ಸಾಯಂಕಾಲ, ಮನೆಗೆ ಹೋಗಲು ಸಿದ್ಧಳಿದ್ದ ಕಮಲಳನ್ನು ನನ್ನ ಕ್ಯಾಬಿನ್‌ಗೆ ಕರೆಸಿದೆ. ಕುಳಿತುಕೊಳ್ಳುವಂತೆ ಹೇಳಿ, ಮಾತು ಶುರು ಮಾಡಿದೆ.

"ಎಂದಿನಿಂದ ನಿಮಗೆ ಕಪೂರ್‌ನ ಗೆಳತನ ?"

"ನೀವು ಈ ಬ್ರಾಂಚ್‌ಗೆ ಈ ಊರಿಗೆ ಬರುವ ಮೊದಲೇ !" ಎಂದಳು.

ನಾನು ತಲೆ ತುರಿಸಿಕೊಂಡೆ ! ಈ ಹುಡುಗಿಯ ಸಂಗಡ ಹುಶಾರಾಗಿ ಮಾತನಾಡಬೇಕು ಎಂದುಕೊಂಡೆ.

"ನಾವು ಬ್ಯಾಂಕಿನಲ್ಲಿ ಕೆಲಸ ಮಾಡುವಾಗ, ನಮ್ಮ ನಡೆತೆಯ ಬಗ್ಗೆ ಜಾಗರೂಕರಾಗಿರುವುದು ಒಳ್ಳೆಯದಲ್ಲವೆ ?"

"ಹೌದು !.... ಜಾಗರೂಕರಾಗಿರದಿದ್ದರೆ, ಹಣ ಕಳೆದುಕೊಳ್ಳುಬಿಡುತ್ತೇವೆ ! ಇದು ಬ್ಯಾಂಕಲ್ಲವೇ ? ಕಳೆಯಲು ಹೋಗಿ ಕೂಡಿಬಿಟ್ಟರೇ ; ಅಥವಾ ಕೂಡವ ಬದಲು ಕಳೆದು ಬಿಟ್ಟರೆ, ಜೇಬಿನಿಂದ ಹಣ ಕಳೆದುಕೊಂಡಂತೆಯೇ !"

ಪರವಾಗಿಲ್ಲ ! ಜಾಣೆ ಇವಳು ! ಹೇಗೆ ಇವಳಿಗೆ ನನ್ನ ಇಂಗಿತವನ್ನು ತಿಳಿಸುವುದು. ಸುತ್ತು ಬಳಸಿ ಮಾತನಾಡಿ ಪ್ರಯೋಜನವಿಲ್ಲವೆಂದು ನೇರವಾಗಿ ವಿಷಯಕ್ಕೆ ಬರೋಣವೆಂದು, ಸ್ವಲ್ಪ ಧ್ವನಿ ಏರಿಸಿ ಹೇಳಿದೆ,

"ನೋಡಿ ಮಿಸ್. ಕಮಲಾ ! ಆಫೀಸ್ ವೇಳೆಯಲ್ಲಿ ಆ ಕಪೂರ್‌ನ ಸಂಗಡ ನೀವು ಮಾತುಕತೆಯಾಡುವುದು ನನಗೆ ಸರಿಬರೋದಿಲ್ಲ. ಇದು ಆಫೀಸ್‌ನ decorum ಗೆ ಕಂದು ತರುವಂತಹದು."

"ನಾನೇನು ಅವರೊಂದಿಗೆ ಚಕ್ಕಂದ ಆಡುತ್ತಾ ಇಲ್ಲವಲ್ಲ ! ಅವರಾಗಿ ಬಂದು ಮಾತನಾಡಿಸುತ್ತಾ ಇದ್ದರೆ, ಬೇಡ ಅಂತ ಹೇಳಬೇಕೇನು ? ಅದೂ ಅಲ್ಲದೆ, ಅವರೊಡನೆ ಮಾತನಾಡುತ್ತಾ ಇದ್ದು, ನಾನು ನನ್ನ ಕೆಲಸ ಸರಿಮಾಡದೇ ನಿಮಗೆ ಅಥವಾ ಬ್ಯಾಂಕಿಗೆ ನಷ್ಟ ಮಾಡಿದನೇನು ?"

ಎಣ್ಣೆಗೆಂಪಿನ ಮುಖ ಮತ್ತಷ್ಟು ಕೆಂಪಾಗಿ, ಕಪ್ಪು ಬಣ್ಣಕ್ಕೆ ತಿರುಗತೊಡಗಿತ್ತು. ಇವಳನ್ನು ಹೇಗೆ ಸಂಭಾಳಿಸೋದು ?

" ಹಾಗಲ್ಲ ! ಮಿಸ್ ಕಮಲಾ ! ನೀವು ತಪ್ಪು ತಿಳಿದುಕೊಳ್ಳಬೇಡಿ ! ನಿಮ್ಮ ಒಳ್ಳೆಯದಕ್ಕೆ ಹೇಳುವುದು!....." ತಡವರಿಸುತ್ತಿದ್ದ ನನ್ನನ್ನು ಮಧ್ಯದಲ್ಲೇ ತಡೆದಳು.

"ನೀವೇನು ಹೇಳಬೇಕಾಗಿಲ್ಲ ! ಇದೆಲ್ಲಾ ಆ ಕುಮಾರ್‌ದೇ ಕುತಂತ್ರ ! ಅವರೇ ನಿಮಗೆ ಚಾಡಿ ಹೇಳಿರಬೇಕು!" ಎಣ್ಣೆಗೆಂಪಿನ ಕೆನ್ನೆಗಳನ್ನುಬ್ಬಿಸಿ, ಬುಸುಗುಟ್ಟಿದಳು ಲಲನೆ !

"ನೋಡಿ ಮಿಸ್ ! ಈ ಪಂಜಾಬಿಗಳ ಜೊತೆ ಸ್ವಲ್ಪ ಹುಶಾರಾಗಿರ ಬೇಕಲ್ಲವೆ?"

"ಪಂಜಾಬಿಗಳ ವಿಷಯ ನೀವೇನು ಹೇಳಬೇಕಾಗಿಲ್ಲ ! ನಾನು ಇಲ್ಲೇ ಹುಟ್ಟಿ, ಪಂಜಾಬಿಗಳ ಜೊತೆಯಲ್ಲೇ ಬೆಳೆದು ದೊಡ್ಡವಳಾಗಿದ್ದೇನೆ. ನಿಮಗಿಂತ ಹೆಚ್ಚು ತಿಳಿದ್ದಿದ್ದೇನೆ ಅವರು ಹೇಗೆ ಎಂದು !"

ನನ್ನ ಕೆನ್ನೆಗೆ ಹೊಡೆದ ಹಾಗೆ ಆಯಿತು. ಸಾಕಲ್ಲ ಮಂಗಳಾರತಿ ! ಇನ್ನು ಯಾಕೆ ಮುಂದುವರೆಸಬೇಕು ಮಾತು!

"ಸರಿ ! ನೀವು ಇನ್ನು ಹೊರಡಬಹುದು" ಕ್ಷೀಣವಾಗಿ ನುಡಿದೆ.

ಅವಳು ಎದ್ದು, ನನ್ನ ಕಡೆ ಕನಿಕರದಿಂದ ನೋಡಿ, ಬಾಗಿಲೆಳೆದು ಹೊರಟಳು. ಹೊರಕ್ಕೆ ಕಾಲಿಡುವ ಮೊದಲು, ಹೇಳಿದಳು,

"ನಾವಿಬ್ಬರೂ ಪ್ರೀತಿಸುತ್ತಾ ಇದ್ದೇವೆ ! ಮದುವೆ ಮಾಡಿಕೊಳ್ಳಬೇಕೆಂದಿದ್ದೇವೆ! ನಿಮ್ಮದೇನಾದರೂ ಅಭ್ಯಂತರವಿದ್ದರೆ ಈಗಲೇ ಹೇಳಿಬಿಡಿ!"

ಬಾಗಿಲು ಜೋರಾಗಿ ಎಳೆದು, ವೇಗವಾಗಿ ಹೊರಹಾರಿ, ಅಷ್ಟೇ ವೇಗವಾಗಿ ಬಾಗಿಲನ್ನು ನನ್ನ ಮುಖದ ಮೇಲೆ ಬಡಿದು, ಮಾಯವಾದಳು.

ತಲೆ ಮೇಲೆ ಕೈ ಹೊತ್ತು ಕುಳಿತ ನನ್ನನ್ನು ನೋಡಿ, ಕುಮಾರ್ ಒಳಬಂದು, ಕೇಳಿದ.

" ಏನು ಸಾರ್ ಸಮಾಚಾರ? ಏನು ಹೇಳಿದಳು ಅವಳು ?"

ಏನು ಹೇಳಿದಳು ನಿನ್ನ ಪಿಂಡ ! ನಿನ್ನ ಸಲುವಾಗಿ ನಾನು ನನ್ನ ಮಾನ ಕಳೆದುಕೊಂಡೆ ! ಎಂದು ಅವನನ್ನು ಬೈಯ್ಯುವ ಮನಸ್ಸಾಯಿತು.

"ಕುಮಾರ್ ! ಅವಳ ತಂಟೆಗೆ ಹೋಗಬೇಡಿ! ಕಪೂರ್ ಸಂಗಡ ಅವಳ ಮದುವೆಯಂತೆ ! ಇಬ್ಬರೂ ಪ್ರೀತಿಸುತ್ತಾರಂತೆ !"

"ಮದುವೆಯಂತಾ !"

ದಿಗ್‌ಭ್ರಮೆಯಾಗಿತ್ತು ಅವನಿಗೆ !

ಕುರ್ಚಿಯನ್ನು ಎಳೆದು ಕುಳಿತು, ಮುಖದ ಬೆವರು ಒರೆಸಿಕೊಂಡೆ. ದಿಲ್ಲೀ

ಬಿಸಿಲಿನ ಬೇಗೆಗಿಂತ, ಕಮಲಳ ಮದುವೆಯ ಸುದ್ದಿ ಅವನಿಗೆ ಬೆವರೊಡಿಸಿತ್ತು !

ಕಮಲಳ ಮದುವೆಯ ಸುದ್ದಿ ತಿಳಿದು ಇವನಿಗ್ಯಾಕೆ ಇಷ್ಟು ಆಶ್ಚರ್ಯ, ಆತಂಕ! ಇವನೇನಾದರೂ, ಗುಟ್ಟಿನಲ್ಲಿ ಅವಳನ್ನು ಪ್ರೀತಿಸುತ್ತಿದ್ದಾನೆಯೊ ? ನನ್ನ ಮನದಲ್ಲಿ ಅನುಮಾನದ ಹೊಗೆ ಹೊರಹೊಮ್ಮಿತು.

"ಛೆ ! ಎಂತಾ ಹುಡುಗಿ ? ತನ್ನ ಜೀವನವನ್ನೇ ಹಾಳು ಮಾಡಿಕೊಳ್ಳುತ್ತಾಳಲ್ಲಾ!"

ಉದ್ಗಾರ ತೆಗೆದ ಕುಮಾರ್ !

ಇವನಿಗೇನಾಗಿದೆ ಈ ದಿನ ! ಯಾಕೆ ಇಷ್ಟು ಸಂಕಟ ಪಡುತ್ತಿದ್ದಾನೆ? ನನಗೆ ತಡೆಯಲಾಗಲಿಲ್ಲ !

"ಅವಳು ಕಪೂರ್‌ನನ್ನು ಪ್ರೀತಿಸಿದರೆ ನಿಮ್ಮ ಗಂಟೇನು ಹೋಯಿತ್ರೀ ?"

'ನನ್ನ ಗಂಟೇನು ಹೋಗೋದಿಲ್ಲ ! ಆದರೆ, ಅವಳ ಜೀವನ ಹಾಳಾಗುತ್ತಲ್ಲಾ ಎಂದು ಬೇಸರವಾಯಿತು ! ಅಷ್ಟೆ !" ಎಂದ.

"ನೀವೇನಾದರೂ ಅವಳನ್ನು ಪ್ರೀತಿಸುತ್ತಾ ಇದ್ದೀರೇನ್ರೀ ?' ನಿಧಾನವಾಗಿ ಕೇಳಿದೆ.

"ಛೆ ! ಛೆ ! ನೀವೇನು ಹೇಳ್ತಾ ಇದ್ದೀರಾ ? ನನಗೆ ಮದುವೆ ಆಗಿ ಎರಡು ಮಕ್ಕಳಿವೆ ! ನಾನ್ಯಾಕೆ ಇವಳನ್ನು ಪ್ರೀತಿಸಲಿ ?"

ಕೋಪ ಬಂದಿತ್ತು ಕುಮಾರನಿಗೆ ! ಅವನಿಗೆ ಮದುವೆಯಾಗಿ ಮಕ್ಕಳಿರುವ ವಿಷಯ ನನಗೆ ಅರಿವಿತ್ತು. ಆದರೂ ಅವನನ್ನು ಕೆಣಕುವ ರೀತಿಯಲ್ಲಿ ಪ್ರಶ್ನೆ ಕೇಳಿದ್ದೆ.

"ಮತ್ತೆ ನಿಮಗೆ ಯಾಕೆ ಅವಳ ಉಸಾಬರಿ? ಅವಳು ಕಪೂರ್‌ನನ್ನು ಮದುವೆಯಾದ್ರೆ ನಿಮಗೇನು ನಷ್ಟ ?"

"ಸಾರ್ ! ನಿಮಗೆ ಗೊತ್ತಿಲ್ಲ ಅಂತ ಕಾಣುತ್ತೆ. ಕಪೂರ್‌ಗೆ ಆಗಲೇ ಒಂದು ಮದುವೆಯಾಗಿದೆ !"

ದಿಗ್‌ಭ್ರಮೆಯಾಗುವುದು ಈಗ ನನ್ನ ಸರದಿ !

ಮದುವೆಯಾದ ಕಪೂರ್‌ನ ಸಂಗಡ ಈ ಹುಡುಗಿಯ ಪ್ರೀತಿ - ಮದುವೆ ! ಇದೆಂತಹ ಹುಚ್ಚುತನ ! ಆದರೆ ಪ್ರೀತಿ- ಪ್ರೇಮ, ಕುರುಡು ಎಂದೇ ಹೇಳುತ್ತಾರಲ್ಲವೆ?

"ಈ ವಿಷಯ ಕಮಲಳಿಗೆ ತಿಳಿದಿದೆಯಾ ?"

"ತಿಳಿದಿದೆ ! ಅದಕ್ಕೇ ಎಲ್ಲರೂ ಇವರ ಚೆಲ್ಲಾಟವನ್ನು ಹಗುರವಾಗಿ ತೆಗೆದುಕೊಂಡಿದ್ದು. ಇದು ಇಷ್ಟು ದೂರ ಸಾಗುತ್ತದೆಯೆಂದು ಯಾರೂ ನೆನೆಸಿರಲಿಲ್ಲ." ಅವನು ಮೌನಿಯಾದ.

ನಾನು ಯೋಚಿಸತೊಡಗಿದೆ. ಮದುವೆಯಾದ ಕಪೂರ್‌ನಲ್ಲಿ ಈಕೆ ಯಾಕೆ ಆಕರ್ಷಿತಳಾದಳು ? ಅವನಲ್ಲಿ ಎಂತಹ ಒಳ್ಳೇ ಗುಣಗಳಿವೆ ಎಂದು ಅವನಲ್ಲಿ ಮನಸ್ಸಿಟ್ಟಳು ? ಸುಂದರ ಪುರುಷನೆಂಬ ಕಾರಣದಿಂದ ಆಕರ್ಷಿತಳಾದಳೆ ? ಕಪೂರ್‌ಗಾದರೂ ಬುದ್ಧಿ ಬೇಡವೆ? ವಿವಾಹಿತನಾಗಿ ಏಕೆ ಈ ಹವ್ಯಾಸ ಅಥವಾ ದುರ್ಬುದ್ಧಿ! ಇವಳಲ್ಲಿ ಯಾವ ತರಹದ ಆಕರ್ಷಣೆಯನ್ನು ಕಂಡನೀತ? ಪಂಜಾಬೀ ಹೆಂಗಳೆಯರು ಸುರದ್ರೂಪಿಗಳು ಸುಂದರ ಆಕರ್ಷಕ ವ್ಯಕ್ತಿತ್ವ ಉಳ್ಳವರು. ಈ ಕಮಲಳು ಅಂತಹ ಸುಂದರಿಯೇನೂ ಆಗಿರಲಿಲ್ಲ. ಹೇಳಿಕೊಳ್ಳುವಂತಹ ಆಕರ್ಷಕ ಸ್ತ್ರೀಯೂ ಅಲ್ಲ! ಹಾಗಿದ್ದ ಮೇಲೆ ತನ್ನ ಪಂಜಾಬೀ ಹೆಂಡತಿಯನ್ನು ಬಿಟ್ಟು ಏಕೆ ಈ ತಮಿಳು ಹುಡುಗಿಯ ಮೇಲೆ ಮೋಹ ? "ಎಂತಾ ನೀಚಾ ಈ ಕಪೂರಾ ?"

ಕುಮಾರ್‌ನ ಕಠೋರ ವಾಕ್ಯ ನನ್ನನ್ನು ಎಚ್ಚರಿಸಿತು. "ಯಾಕೆ ನೀಚಾ ಎಂದು ಬೈಯ್ಯುತ್ತೀರಾ ಅವನಿಗೆ ?"

ನನ್ನ ಧ್ವನಿಯಲ್ಲಿದ್ದ ಬೇಸರದ ಛಾಯೆಯನ್ನು ಗುರುತಿಸಿದ ಕುಮಾರ್ ಹೇಳಿದ.

"ಅಲ್ಲಾ ಸರ್ ! ಯಾಕೆ ಬೇಕಿತ್ತು ಈ ಹರಕತ್ತು ಇವನಿಗೆ ?"

"ನೋಡ್ರೀ ಕುಮಾರ್ ! ನಿಮ್ಮ ದೆಸೆಯಿಂದ ಕಮಲಳಿಂದ ನಾ ಬೈಸಿಕೊಂಡೆ. ಅವಳ ಕೆಲಸದಲ್ಲೇನಾದರೂ ಕುಂದು ಕೊರತೆಗಳಿದ್ದರೆ, ನ್ಯೂನತೆಗಳಿದ್ದರೆ, ಕ್ರಮ ಕೈಗೊಳ್ಳಬಹುದು. ಅವಳ ವೈಯುಕ್ತಿಕ ವಿಷಯದಲ್ಲಿ ನಾವು ಕೈ ಹಾಕಿ ನಮ್ಮ ತಲೆ ಕೆಡಿಸಿಕೊಳ್ಳುವುದು ಬೇಡ. ನಮಗೀಗಾಲೇ ಸಾಕಷ್ಟು ತಲೆನೋವುಗಳು ತರುವಂತಹ ಸಂಗತಿಗಳು ಇವೆ, ಈ ಬ್ಯಾಂಕಿನಲ್ಲಿ ! ನಮಗೆ ಸಂಬಂಧವಿಲ್ಲದ ವಿಷಯದಲ್ಲಿ ನಾವೇಕೆ ತಲೆ ಕೆಡಿಸಿಕೊಳ್ಳಬೇಕು ?"

ಅವನಿಗೆ ನನ್ನ ಬುದ್ಧಿವಾದ ಹಿಡಿಸಲಿಲ್ಲವೆಂಬುದಕ್ಕೆ, ನನಗೆ ಏನನ್ನೂ ಹೇಳದೆ, ಕುರ್ಚಿಯಿಂದ ಧಿಡೀರನೆ ಎದ್ದು ಹೊರಗೆ ಹೋದದ್ದು ಸಾಕ್ಷಿಯಾಗಿತ್ತು. ನಾನು ಮಾತು ಮುಂದುವರಿಸದೆ, ನನ್ನ ಕೆಲಸದಲ್ಲಿ ತೊಡಗಿದೆ.

ಫೋನ್ 'ಟ್ರಿನ್' ಎಂದು ಶಬ್ದ ಮಾಡಿತು. ಫೋನನ್ನು ಕೈಗೆ ಎತ್ತಿಕೊಂಡು ಕಿವಿಗೆ ಆನಿಸಿ 'ಹಲ್ಲೋ' ಎಂದೆ

"ಡಿಸಾಸಿಟ್ ಟಾರ್ಗೆಟ್ ಆಯಿತೇನ್ರೀ?"

ನನ್ನ ಮೇಲೆ ಸವಾರಿ ಮಾಡುತ್ತಿದ್ದ ನನ್ನ ಡಿವಿಶನಲ್ ಮೇನೇಜರ್ ಮಾತನಾಡುತ್ತಿದ್ದ.

"ಇನ್ನು ಆಗಿಲ್ಲ ಸಾರ್ !" ಎಂದೆ.

"ಇನ್ನು ಇಪ್ಪತ್ತೇ ದಿವಸಗಳಿದೆಯಲ್ರೀ ಹಾಫ್ - ಇಯರ್-ಎಂಡ್‌ಗೆ ? ಯಾವಾಗ ಮಾಡ್ತೀರಿ ?" ಕೂಗಿದ ಫೋನಿನಲ್ಲೇ ಆ ತುದಿಯಿಂದ.

"ನಾನು ಈ ಶಾಖೆಗೆ ಬಂದು ತಿಂಗಳೂ ಆಗಿಲ್ಲ ! ಹೇಗೆ ಟಾರ್ಗೆಟ್ ಮಾಡೋದು ?"

"ಮೂರು ತಿಂಗಳೋ ಮೂರು ವರ್ಷನೋ, ಟಾರ್ಗೆಟ್ ಮಾಡ್ಲೇಬೇಕ್ರೀ!"

ಜೋರು ಮಾಡಿದ ಡೀಎಮ್ ! ಇವನ ಬಳಿ ಮಾತನಾಡಿ ಪ್ರಯೋಜನ ವಿಲ್ಲವೆಂದು ಬಗೆದು,

"ಆಗಲೀ ಸಾರ್ !" ಎಂದೆ. ಇನ್ನೂ ೫೦ ಲಕ್ಷ ರೂಪಾಯಿಗಳೂ ಬೇಕಿದ್ದವು. ಟಾರ್ಗೆಟ್ ಪೂರೈಸುವುದಕ್ಕೆ ! ಇಪ್ಪತ್ತು ದಿನಗಳಲ್ಲಿ ಐವತ್ತು ಲಕ್ಷರೂಪಾಯಿ ಎಲ್ಲಿಯಾದರೂ ಕನ್ನ ಹಾಕಬೇಕು. ಅಷ್ಟೆ ?!

"ಹೇಗ್ರಿ ಮಾಡ್ತೀರಾ ?" ಮತ್ತೆ ಕೂಗಿದ. ಬೆಂಬಿಡದ ಭೂತನಾಗಿದ್ದ ಇವ !

"ಒಬ್ಬ ಕಸ್ಟಮರ್ ನನಗೆ ಭರವಸೆ ಕೊಟ್ಟಿದ್ದಾರೆ ಸಾರ್ !"

ಸುಳ್ಳು ಹೇಳಲಿಕ್ಕೆ ಕಾಸು ಕೊಡಬೇಕೆ ?

"ಯಾರ್‍ರೀ ಅದು ಆ ಕಸ್ಟಮರ್ ?"

ಇವನಿಂದ ಹೇಗಪ್ಪಾ ತಪ್ಪಿಸಿಕೊಳ್ಳೋದು ?

"ಡೆಲ್ಲಿ ಡೆವೆಲಪ್‌ಮೆಂಟ್ ಅಥಾರಿಟಿ !"

"ಥತ್ ! ಅವರ ಹತ್ತಿರ ಹಣಾನೇ ಇಲ್ಲ ! ನಿಮಗೆ ಹೇಗ್ರಿ ಡಿಪಾಸಿಟ್ ಕೊಡ್ತಾರೆ !"

ಸುಳ್ಳು ಹೇಳಿ ಸಿಕ್ಕಿಹಾಕಿಕೊಳ್ಳುವ ವ್ಯಾಪಾರವಾಯಿತಲ್ಲ !

"ಬೇರೆ ಬ್ಯಾಂಕಿನಲ್ಲಿಟ್ಟಿದ್ದಾರೆ ಸಾರ್ ಅವರು ಹಣ ! ಅಲ್ಲಿಂದ ತೆಗೆದು ಕೊಡುತ್ತಾರೆ ಅಂತ ಹೇಳಿದರು !" ಇನ್ನೊಂದು ಸುಳ್ಳು ಹೇಳಿದೆ !

ಫೋನ್ ಕಟ್ ಆದ ಶಬ್ದವಾಯಿತು. ಬದುಕಿದೆ ಎಂದು ನೆಮ್ಮದಿಯಿಂದ ಉಸಿರಾಡಿದೆ.

"ಯಾರು ಸಾರ್ ಫೋನ್‌ನಲ್ಲಿ !" ಕುಮಾರ್ ಒಳಗೆ ಬಂದು ನನ್ನನ್ನು ಕೇಳಿದ.

"ಡೀ. ಎಮ್ ! ಟಾರ್ಗೆಟ್ ಮಾಡ್ಬೇಕಂತೆ !"

"ಈ ವರ್ಷ ಹೇಗೆ ಮಾಡಕ್ಕಾಗುತ್ತೆ ಅಂತ ಹೇಳಬೇಕಿತ್ತು ?"

"ಹೇಳಿದೆ. ಕೇಳಬೇಕಲ್ಲಾ ಅವರು ?"

ಎಂದು ಉದಾಸೀನನಿಂದ ಉತ್ತರಿಸಿ, ಬಾಗಿಲೆಳೆದು ಹೊರ ನಡೆದೆ. ಮೋಟಾರ್ ಸಾಯಿಕಲ್ ಹತ್ತಿ, ಮನೆಗೆ ಹೊರಟೆ.

ಮಾರನೆಯದಿನ ಬೆಳಿಗ್ಗೆ ೯ ಗಂಟೆಗೆ, ಬ್ಯಾಂಕಿಗೆ ಬಂದಾಗ, ಆಪತ್ತು ಕಾದಿತ್ತು ನನಗೆ !

ಬೆಳ್ಳಂಬೆಳಿಗ್ಗೆ, ನಾನು ಬರುವ ಮುಂಚೆ, ಬಾಗಿಲಲ್ಲೇ ಕಾದಿದ್ದ ಡಿ.ಎಮ್ ! ಮೊದಲೇ ಕಪ್ಪಿಗಿದ್ದ ಅವನು ಇನ್ನೂ ಕಪ್ಪಾಗಿ ಕಂಡ ನನಗೆ !

ಬಾಗಿಲು ತೆಗೆದು ಒಳಗೆ ಹೋಗಿ, ನನ್ನ ಕ್ಯಾಬಿನ್‌ನಲ್ಲಿ ಕುರ್ಚಿಎಳೆದು ಕುಳಿತೆ. ನನ್ನ ಹಿಂದೆಯೇ ಬಂದ ಡಿ.ಎಮ್ ಒಂದು ಕುರ್ಚಿ ಎಳೆದುಕೊಂಡು ಕುಳಿತ.

ಡಿ.ಎಮ್ ನನ್ನ ದೂರದಿಂದಲೇ ನೋಡಿದ ಕುಮಾರ್ ಓಡೋಡಿ ಬಂದು, ಅವನಿಗೆ ಸಲಾಮ್ ಹೊಡೆದು ಕೈಕಟ್ಟಿ ನಿಂತ.

"ಹೇಗೆ ನಡೀತಾ ಇದೆ ಕೆಲಸ ?" ಡಿ.ಎಮ್‌ಕೇಳಿದ ಅವನನ್ನು.

"ಬಹಳ ಚೆನ್ನಾಗಿ ನಡೆಯುತ್ತಾ ಇದೆ ಸಾರ್ !"

"ಟಾರ್ಗೆಟ್ ಆಗುತ್ತದೇನ್ರೀ ಈ ವರ್ಷ ?"

ನನ್ನನ್ನು ಮರೆತ ಹಾಗಿತ್ತು ಡಿ.ಎಮ್ !

"ಆಗದೇ ಏನು ಸಾರ್ ? ಸ್ವಲ್ಪ ಕಷ್ಟಪಟ್ಟರೆ ಆಗುತ್ತದೆ !"

ಎಲಾ ಇವನಾ ! ನೆನ್ನೆ ತಾನೆ ನನ್ನ ಬಳಿ 'ಟಾರ್ಗೆಟ್ ಮಾಡಲಿಕ್ಕೆ ಆಗೋದಿಲ್ಲಾ ಅಂತ ಹೇಳಬೇಕಿತ್ತು ಡಿ.ಎಮ್‌ಗೆ ಎಂದು ಹೇಳಿದವ, ಈ ದಿನ 'ಆಗದೇನು ?' ಅಂತ ಹೇಳುತ್ತಿದ್ದಾನಲ್ಲಾ ! ಎಂತಹ ನೀಚ ಇವ !

"ನೀವು ಸ್ವಲ್ಪ ಪ್ರಯತ್ನ ಪಡಬೇಕ್ರಿ ಟಾರ್ಗೆಟ್ ಮಾಡಲಿಕ್ಕೆ !"

ಡಿ.ಎಮ್ ಕುಮಾರಿನಿಗೆ ಹೇಳಿದ.

"ಮಾಡುತ್ತಾ ಇದ್ದೇನೆ ಸಾರ್ ! ಇವರು ಈ ಬ್ರಾಂಚ್‌ಗೆ ಬರುವ ಮುಂಚಿ ನಿಂದಲೇ ಮಾಡುತ್ತಾ ಇದ್ದೇನೆ !" ಸುಳ್ಳಿನ ಕಂತೆ ಬಿಚ್ಚಿದ್ದ ಕುಮಾರ್ !

"ಎಷ್ಟು ಲಕ್ಷ ಡಿಪಿಸಿಟ್ ತಂದಿದ್ದೀರಿ ?"

"ಒಂದು ಐವತ್ತು ಲಕ್ಷನಾದರೂ ಇರಬಹುದು ಸಾರ್ !"

ಸುಳ್ಳಿನ ಕಂತೆಯಿಂದ ಒಂದೊಂದೇ ಎಳೆಯನ್ನೂ ಎಳೆ ಎಳೆಯಾಗಿ ಬಿಡಿಸಲು ತೊಡಗಿದ್ದ.

"ನನ್ನ ಗಮನಕ್ಕೆ ತಂದಿದ್ದೀರೇನ್ರೀ ?"

"ಇಲ್ಲ ಸಾರ್! ನಾನು ತುಂಬಾ ಬ್ಯೂಸೀ ಆಗಿದ್ದೆ ಸಾರ್ ! ಆಫೀಸ್‌ನಲ್ಲಿ ಕೆಲಸ ಜಾಸ್ತಿ. ಮರೆತು ಬಿಟ್ಟಿದ್ದೆ !"

ಖದೀಮ ! ಕೆಲಸ ಜಾಸ್ತಿ ಅಂತೆ ! ಮರೆತು ಬಿಟ್ಟಿದ್ದನಂತೆ ! ಎಷ್ಟು ನಾಜೂಕಾಗಿ ಸುಳ್ಳು ಹೇಳುತ್ತಾ ಇದ್ದಾನೆ.

"ನೋಡ್ರಿ! ಇಪ್ಪತ್ತೈದು ಲಕ್ಷ ನಾನು ಅರ್‍ಯೆಂಜ್ ಮಾಡುತ್ತೇನೆ. ಇನ್ನು ಇಪ್ಪತ್ತೈದು ಲಕ್ಷ ನೀವು ಮಾಡಬೇಕು!" ಇದ್ದಕ್ಕಿದ್ದಂತೆ, ನನ್ನನ್ನು ಟಾರ್ಗೆಟ್ ಮಾಡಿ, ಟಾರ್ಗೆಟ್ ಬಗ್ಗೆ ಡಿ.ಎಮ್. ಹೇಳಿದ.

"೨೫ ಲಕ್ಷ ೩೦ ದಿನಗಳಲ್ಲಿ ಯಾರು ಕೊಡುತ್ತಾರೆ ಸಾರ್!" ಎಂದೆ ಅಳುಕುತ್ತಾ.

"ಅದೆಲ್ಲಾ ನನಗೆ ಗೊತ್ತಿಲ್ಲ; ನೀವು ಮಾಡಬೇಕ್ರೀ !" ಗದರಿಸುವ ಧ್ವನಿಯಲ್ಲಿ ನುಡಿದ ಡಿ.ಎಮ್!

"ನೀವು ಕೊಡೋ ೨೫ ಲಕ್ಷ ಡಿಪಾಸಿಟ್ ಎಷ್ಟು ದಿನಗಳವರೆಗೆ ನಮ್ಮ ಬ್ರಾಂಚ್‌ನಲ್ಲಿರುತ್ತದೆ ಸಾರ್ ?"

"ಐದು ದಿವಸ"

ಐದು ದಿವಸ ! ಮುಂದಿನ ತಿಂಗಳು ಅಂದರೆ ಹೊಸವರ್ಷದ ಮೊದಲನೆಯ ದಿನ ವಾಪಸ್ಸು ಹೋಗುತ್ತದೆ ಆ ಡಿಪಾಸಿಟ್ !"

ಇವನು ಕೊಡುವ ಈ ಡಿಪಾಸಿಟ್‌ನಿಂದಾಗಿ ನನಗೆ ಕೇಡಾಗುವ ಸಂಭವವೇ ಜಾಸ್ತಿ! ಬರೀ ಐದು ದಿನಗಳ ಡಿಪಾಸಿಟ್ ತೆಗೆದುಕೊಂಡು, ಟಾರ್ಗೆಟ್ ಮಾಡಿ ಮುಗಿಸಿದರೆ, ಮುಂದಿನ ವರ್ಷದ ಟಾರ್ಗೆಟ್ ಇಮ್ಮಡಿಸುತ್ತಾರೆ. ಮತ್ತೆ ಟಾರ್ಗೆಟ್ ಮೊತ್ತ ಮುಂದಿನ ವರ್ಷದ ಮೊದಲನೆಯ ದಿನವೇ ಖೋತಾ ಆಗಿ, ಈಗಿದ್ದ ಮೊತ್ತಕ್ಕೆ ಇಳಿಯುವುದರಿಂದ, ಡಿಪಾಸಿಟ್ ಯಾಕೆ ಕಡಿಮೆಯಾಯಿತು ಅಂತ ನನಗೇ ಒಂದು ನೋಟೀಸ್ ಜಾರಿ ಮಾಡುತ್ತಾನೆ ಇದೇ ಡಿ.ಎಮ್! ಅದೂ ಅಲ್ಲದೆ, 'ವಿಂಡೋ ಡ್ರೆಸ್ಸಿಂಗ್' ಯಾಕೆ ಮಾಡಿದೆ ಎಂದು ಕೇಳಿ ನಿನ್ನ ಮೇಲೆ ಕ್ರಮ ಬೇರೆ ಜರಗಿಸುತ್ತೇನೆ ಎಂದು ಬೆದರಿಕೆ ಹಾಕುತ್ತಾನೆ ಇದೇ ಡೀ.ಎಮ್!

"ಈ ತರಹದ ಒಂದು ವಾರದ ಡಿಪಾಸಿಟ್ ತೆಗೆದುಕೊಂಡು ಡಿಪಾಸಿಟ್ ಟಾರ್ಗೆಟ್ ಮಾಡಲು ಇಷ್ಟವಿಲ್ಲ ಸಾರ್ !"

ನನ್ನ ಮಾತು ಕೇಳಿ ಡಿ.ಎಮ್‌ನ ಕಪ್ಪು ಮುಖ ಮತ್ತಷ್ಟು ಕಪ್ಪಾಯಿತು!

ಅಷ್ಟರಲ್ಲಿ ಬ್ಯಾಂಕ್ ಬಿಲ್ಡಿಂಗ್ ಮಾಲೀಕ ಒಳಗೆ ಬಂದು ಡಿ.ಎಮ್‌ಗೆ ಸಲಾಮ್ ಹೊಡೆದ.

"ಓಹೋ ಸಬ್ರವಾಲ್ ಸಾಬ್! ಏನು ಸಮಾಚಾರ?" ಬಹಳ ಆದರದಿಂದ ಮಾತನಾಡಿಸಿದ ನಮ್ಮ ಡಿ.ಎಮ್.. ಕಪ್ಪು ಮುಖ ಹಸನ್ಮುಖವಾಗಿತ್ತು !

"ನೀವು ಬಂದಿರುವ ಸಮಾಚಾರ ತಿಳಿಯಿತು. ಕಂಡು ಹೋಗೋಣ ಎಂದು ಬಂದೆ " ಉತ್ತರಿಸಿದ ಸಬ್ರವಾಲ್.

"ನಿಮ್ಮ ಮಹಡೀ ಮನೆ ನಮ್ಮ ಬ್ಯಾಂಕಿಗೆ ಬಾಡಿಗೆಗೆ ಕೊಡುವ ವಿಷಯ ಏನಾಯಿತು ?" ಡಿ.ಎಮ್ ಕೇಳಿದ.

"ಅದೇ ವಿಷಯ ಮಾತಾನಾಡೋಣವೆಂದೇ ಬಂದೆ"

ಕಳ್ಳ ಸಬ್ರವಾಲ್! ಡಿ. ಎಮ್‌ನನ್ನು ನೋಡಲಿಕ್ಕೆ ಎಂದು ಬಂದವ ಈಗ ಮನೆ ಬಾಡಿಗೆ ಕೊಡುವ ವಿಷಯದಲ್ಲಿ ಚರ್ಚಿಸಲಿಕ್ಕೆ ಬಂದೆ ಅಂತಿದ್ದಾನಲ್ಲಾ ! ಎಲ್ಲಾ ಆಷಾಢಭೂತಿಗಳೇ !

"ನೋಡಿ! ನಮಗೂ ಜಾಗ ಸಾಲುವುದಿಲ್ಲ. ನಿಮ್ಮ ಮಹಡೀ ಮನೆ ನಮಗೆ ಕೊಟ್ಟರೆ, ಬ್ಯಾಂಕಿಗೆ ಒಳ್ಳೆಯದು "

"ನಾನು ಕೊಡಲಿಕ್ಕೆ ತಯಾರಿದ್ದೇನೆ ಸಾಬ್ ! ಆದರೆ ಬಾಡಿಗೆ ದರದಲ್ಲಿ ಮಾತ್ರ ಸ್ವಲ್ಪ ರಿಯಾಯಿತಿ ತೋರಿಸಬೇಕು !"

"ಬಾಡಿಗೆ ರೇಟ್ ಈ ಏರಿಯಾದಲ್ಲಿ ಎಷ್ಟು ಇದೇ ರೀ ?"

ನನ್ನನ್ನು ಕೇಳಿದ ಡಿ.ಎಮ್.

"ಚದರಡಿಗೆ ೩ ರೂಪಾಯಿಯಿಂದ ೪ ರವರೆಗೆ ಇದೆ ಸಾರ್ !" ಎಂದೆ.

"ಹತ್ತು ರೂಪಾಯಿ ಇದೆ ಸಾರ್ !"

ಸಬ್ರವಾಲ್ ನನ್ನ ಮುಖ ನೋಡಿ ಹೇಳಿದ.

" ನಾನು ವಿಚಾರಿಸಿದ್ದೇನೆ. ಈ ಏರಿಯಾದಲ್ಲಿ ನಾಲ್ಕು ರೂಪಾಯಿಗಿಂತ ಜಾಸ್ತಿ ಇಲ್ಲ. ಬೇಕಾದರೆ ನೀವೇ ವಿಚಾರಿಸಿ ನೋಡಿ" ಎಂದು ಡಿ. ಎಮ್‌ಗೆ ಹೇಳಿದೆ.

"ನೀವು ಹೇಳಿದ ಮೇಲೆ ನಾನು ಯಾಕ್ರಿ ವಿಚಾರಿಸಲಿ. ನೀವು ನನಗೆ ಅಫಿಶಿಯಲ್ ಆಗಿ ಒಂದು ಪತ್ರ ಬರೀರಿ. ಮಾಲೀಕರ ಒಂದು ಪ್ರಪೋಸಲ್ ಕಳುಹಿಸಿರಿ. ನಾನು ಡಿಸಿಷನ್ ತೆಗೆದುಕೊಂಡು ಉತ್ತರ ಹಾಕುತ್ತೇನೆ."

ಡಿ.ಎಮ್ ಎದ್ದು ಹೊರ ಹೊರಟ. ಅವನ ಹಿಂದೆ ಸಾಲಾಗಿ, ಮನೆ ಮಾಲೀಕ, ಕುಮಾರ್ ಮತ್ತು ನಾನು ಹೊರಟೆವು. ಅವನು ಕಾರು ಹತ್ತಿ ಹೊರಡುವವರೆಗೂ ನಾವು ನಿಂತಿದ್ದು ಆಮೇಲೆ ವಾಪಸ್ಸಾದೆವು.

"ಕುಮಾರ್! ಟಾರ್ಗೆಟ್ ಮಾಡಬಹುದು ಎಂದು ಡೀ. ಎಮ್ ಹತ್ತಿರ ಹೇಳಿದಿರಲ್ಲ; ಸ್ವಲ್ಪ ವಿವರಣೆ ಕೊಡುತ್ತೀರಾ ಹೇಗೆ ಮಾಡುತ್ತೀರಾ ಎಂದು?" ಖಾರವಾಗಿ ಕೇಳಿದೆ.

"ಮತ್ತೆ ಡಿ.ಎಮ್‌ಗೆ ಟಾರ್ಗೆಟ್ ಆಗೋದಿಲ್ಲ ಅಂದರೆ, ಅವರಿಗೆ ಬೇಜಾರಾಗೋದಿಲ್ಲವೆ ಸಾರ್? ಆಗುತ್ತೆ ಅಂತ ಹೇಳಿದರೆ ಅವರಿಗೆ ಖುಶ್ ನಮಗೂ ಖುಶ್ ! ಟಾರ್ಗೆಟ್ ಆಗದೇ ಇದ್ದರೆ, ಬೇಕಾದಷ್ಟು ಸಮಜಾಯಿಸಿ ಹೇಳಬಹುದು!

ಈಗಲೇ ಯಾಕೆ ಅವರಿಗೆ ಆಗೋದಲ್ಲ ಅಂತ ಹೇಳಿ ಅವರಿಂದ ಬೈಸಿಕೊಳ್ಳಬೇಕು?"

ಬಹಳ ಶಾಣ್ಯಾ ಇದ್ದಾನಲ್ಲಾ ಈ ಕುಮಾರ್!

"ಅದೂ ಅಲ್ಲದೆ, ಈ ಡೀ.ಎಮ್‌ಗೆ ತುಂಬಾ ಇನ್‌ಫ್ಲೂಯನ್ಸ್ ಇದೆ ! ಮೇನೇಜ್‌ಮೆಂಟ್ ತುಂಬಾ ಇವನ ನೆಂಟರೇ. ಒದಲ್ಲಾ ಒಂದು ದಿನ ಇವ ಜನರಲ್ ಮೇನೇಜರ್ ಆಗ್ತಾನೆ ! ನಾವು ನಮ್ಮ ಹುಶಾರಿನಲ್ಲಿರಬೇಕು. ಅಲ್ಲವೇ ಸಾರ್ ?"

"ಅವನು ಜನರಲ್ ಮೇನೇಜರ್ ಆದರೆ ನಿಮಗೂ ಪ್ರಮೋಷನ್ ಸಿಗಬಹುದು, ಅಂತ ಅವನಿಗೆ ಈಗಿನಿಂದಲೇ ಬೆಣ್ಣೆ ಹಾಕ್ತಾ ಇದ್ದೀರಾ ?"

ನನ್ನ ಮಾತಿನಲ್ಲಿದ್ದ ವ್ಯಂಗ್ಯವನ್ನು ಗುರುತಿಸಿದ ಕುಮಾರ್ ಉತ್ತರಿಸಿದ

"ನನಗೆ ಪ್ರಮೋಷನ್ ಸಿಗತ್ತೋ ಇಲ್ಲವೋ; ಇವರು ನನಗೆ ತೊಂದರೆ ಕೊಡದೇ ಇದ್ದರೆ ಸಾಕು !"

"ನಮ್ಮ ಕೆಲಸ ನಾವು ಮಾಡಿಕೊಂಡಿದ್ದರೆ, ನಮಗೆ ಯಾಕೆ ತೊಂದರೆ ಕೊಡ್ತಾರೆ ಇವರು ?"

"ನೀಚ ಸಾರ್ ಇವನು ! ಎಷ್ಟು ಜನರಿಗೆ ಇವನು ತೊಂದರೆ ಕೊಟ್ಟಿದ್ದಾನೆ ಗೊತ್ತಿದೆಯೇ? ನಮ್ಮನ್ನು ಬಿಟ್ಟಾನೆಯೆ ? ನಮಗೆ ಈ ಬ್ಯಾಂಕಿನಲ್ಲಿ ಯಾವ ನೆಂಟರೂ ಇಲ್ಲ, ಇಷ್ಟರೂ ಇಲ್ಲ, ನಮ್ಮನ್ನು ಪ್ರೊಟೆಕ್ಟ್ ಮಾಡಲಿಕ್ಕೆ. ಹೇಗೆ ಉದ್ಧಾರವಾಗುವುದು?....".

ಬೆಣ್ಣೆ ಹಾಕಲೇಬೇಕು ! ಬೇರೆ ದಾರಿಯೇ ಇಲ್ಲ! ಇಲ್ಲದೆ ಹೋದರೆ ಚಟ್ನಿ ಮಾಡಿಬಿಡುತ್ತಾರೆ ನಮ್ಮನ್ನು !"

ಅವನು ಹೇಳಿದುದರಲ್ಲಿ ಅತಿಶಯೋಕ್ತಿ ಇರಲಿಲ್ಲ! ಬ್ಯಾಂಕಿನಲ್ಲಿ ನೌಕರಿ ಮಾಡಿದವರಿಗೆಲ್ಲಾ ಈ ವಿಷಯದಲ್ಲಿ ಅಪಾರ ಅನುಭವವಿತ್ತು. ನನಗೂ ಅನುಭವ ಸಾಕಷ್ಟು ಆಗಿತ್ತು; ಮುಂದೆ ಆಗುವ ಸಂಭವವೂ ಇದೆ ಎನ್ನುವ ಲಕ್ಷಣಗಳೂ ಸಾಕಷ್ಟು ಇತ್ತು.

ಈ ಡಿ.ಎಮ್. ಓದಿ ಡಿಗ್ರೀ ಪಡೆದಿದ್ದ. ಆದರೆ, ಬ್ಯಾಂಕ್‌ನ ಕೆಲಸ, ಬ್ಯಾಂಕ್‌ಸ ಮೆಮೊ, ಸರ್ಕ್ಯುಲರ್‌ಗಳು, ಲೆಟರ್‌ಗಳು ಬೇರೆ ಕಾಗದಪತ್ರಗಳನ್ನು ಬಿಟ್ಟರೆ, ಬೇರೆ ಪುಸ್ತಕಗಳು, ಹೊಸ ಯೋಚನೆಗಳು, ಹೊಸ ಯುಕ್ತಿಗಳು, ಸಾಮಾಜಿಕವಾಗಿ ತಿಳಿಯಬಹುದಾದಂತ ವಿಷಯಗಳು, ತಿಳಿದುಕೊಳ್ಳಬೇಕೆಂಬ ಚಟ, ಆಸೆ ಆಕಾಂಕ್ಷೆ ಇದ್ದ ಹಾಗೆ ಕಾಣಲಿಲ್ಲ. ಅವನ ಶಿಕ್ಷಣ ಅಲ್ಲಿಗೇ ಮುಗಿದಿತ್ತು.

"ನಮಸ್ಕಾರ!"

ಬಾಗಿಲ ಬಳಿ ಕಪೂರ್ ನಿಂತಿದ್ದ. ತಮಿಳು ಹುಡುಗಿ ಕಮಲಳ ಸ್ನೇಹಿತ.

ನೀಳದೇಹಿ, ಬಿಳಿಬಣ್ಣದ ಸುಂದರ ಪಂಜಾಬಿ ಹುಡುಗ. ಇವನನ್ನು ಮೋಹಿಸಿದರಲ್ಲಿ ಯಾವ ಸಂದೇಹವೇ ಇಲ್ಲವೆನ್ನಿಸಿತು.

"ಬನ್ನಿ; ಕುಳಿತುಕೊಳ್ಳಿ!"

ನನ್ನ ಆಹ್ವಾನವನ್ನು ಸ್ವೀಕರಿಸಿ, ಎದುರಿಗೆ ಇದ್ದ ಕುರ್ಚಿಯಲ್ಲಿ ಕುಳಿತ ಕಪೂರ್. ಕಪೂರ್ ಒಳಗೆ ಬಂದೊಡನೆ ಕುಮಾರ್ ಹೊರಗೆ ಹೋಗಲು ಹವಣಿಸಿದ.

"ನೀವೂ ಕುಳಿತುಕೊಳ್ಳಿ ಕುಮಾರ್ ಸಾಬ್! ಯಾಕೆ ಹೋಗ್ತೀರಿ? ನನ್ನ ಕಂಡರೆ ಕೋಪವಾ?" ನಗುತ್ತಾ ಕಪೂರ್ ಅವನನ್ನು ಕರೆದು ಹೇಳಿದ.

"ನನಗೆ ಕೆಲಸ ಇದೆ; ನಿಮ್ಮ ಹತ್ತಿರ ಕುಳಿತು ಹರಟೆ ಹೊಡೆಯೋಕ್ಕೆ ಸಮಯ ವಿಲ್ಲ ನನಗೆ" ಎಂದು ಮುಖ ಗಂಟು ಹಾಕಿ ಹೊರಟುಹೋದ ಕುಮಾರ್!

ಇಷ್ಟು ಹೊತ್ತು ನನ್ನ ಹತ್ತಿರ ಹರಟೆ ಹೊಡೆದ ಕುಮಾರ್‌ಗೆ ತನ್ನ ಕೆಲಸದ ಬಗ್ಗೆ ಕಾಳಜಿ ಬಂದಿತ್ತು!

"ಏನು ಕಪೂರ್ ಸಾಬ್? ಏನು ಸಮಾಚಾರ?" ನಮ್ರನಾಗಿ ಕೇಳಿದೆ ನಾನು.

"ಓ.ಡಿ. ಲಿಮಿಟ್ ಸಾಕಾಗೋದಿಲ್ಲ. ಸ್ವಲ್ಪ ಜಾಸ್ತಿ ಬೇಕಾಗಿತ್ತು. ತಾತ್ಕಾಲಿಕ ವಾಗಿ ಒಂದು ಲಕ್ಷ ಜಾಸ್ತಿ ಬೇಕಾಗಿತ್ತು!"

ಒಂದು ಲಕ್ಷ ಜಾಸ್ತಿ ಬೇಕಂತೆ! ಅವನಿಗೆ ಇರುವ ಒಂದು ಲಕ್ಷ ಓವರ್ ಡ್ರಾಫ್ಟ್ ಲಿಮಿಟ್ ಮೇಲೆ ಇನ್ನೂ ಒಂದು ಲಕ್ಷ ಜಾಸ್ತಿ!

"ನನಗೆ ಅಧಿಕಾರವಿಲ್ಲವೇ ಅಷ್ಟು ಕೊಡೋದಿಕ್ಕೆ!"

"ನೀವು ಮನಸ್ಸು ಮಾಡಿದರೆ, ಎಲ್ಲಾ ಆಗುತ್ತೆ!"

"ಯಾಕೆ ಬೇಕು ಓ.ಡಿ?"

"ಬೇಡಾ ಅಂದರೂ ಕಚ್ಚಾಸಾಮಗ್ರಿ ಒಂದು ಬಿದ್ದಿದೆ. 'ದುಡ್ಡು ಕೊಡಿ, ಇಲ್ಲದೇ ಹೋದರೆ, ರೇಟ್ ಜಾಸ್ತಿ ಆಗುವ ಸಂಭವವಿದೆ' ಎಂದು ಹೆದರಿಸುತ್ತಾ ಇದ್ದಾನೆ, ಸಪ್ಲೈಯರ್! ಏನು ಮಾಡುವುದು?"

ನಾನು ಯೋಚಿಸತೊಡಗಿದೆ. ಈಗ ತಾನೇ ಡಿ.ಎಮ್. ಬಂದು ಮುಖ ಕಪ್ಪು ಮಾಡಿಕೊಂಡು ಹೋಗಿದ್ದಾನೆ. ಈಗ ಅವರಿಗೆ ಫೋನ್ ಮಾಡಿದರೆ, ನನ್ನನ್ನು ಕೊಂದೇ ಬಿಡುತ್ತಾರೆ. ಟಾರ್ಗೆಟ್ ಬೇರೆ ಮಾಡಲಿಕ್ಕೆ ಆಗೋದಿಲ್ಲಾ ಎಂದು ಹೇಳಿಬಿಟ್ಟಿದ್ದೇನೆ.

"ಯಾವಾಗ ಬೇಕು ಹಣ?" ಕೇಳಿದೆ.

"ಎರಡು-ಮೂರು ದಿನಗಳಲ್ಲಿ."

"ನೀವು ಒಂದು ಅಪೇಕ್ಷಾ ಪತ್ರ ಕೊಡಿ. ಶಿಫಾರಸ್ ಮಾಡಿ ಕಳುಹಿಸುತ್ತೇನೆ, ನೋಡೋಣ!" ಎಂದೆ.

"ತುಂಬಾ ಥ್ಯಾಂಕ್ಸ್ ಸಾಬ್" ಎಂದು ಅವನು ಎದ್ದು ಹೊರಗೆ ಹೋಗಿ, ತಮಿಳು ಹುಡುಗಿ ಕಮಲಳ ಬಳಿ ನಿಂತು ಮಾತನಾಡತೊಡಗಿದ. ನಾನು ಕುಮಾರ್‌ನ ಮುಖ ನೋಡಿದೆ. ಆತನ ಮುಖ ಗಂಟಿಕ್ಕಿತು. ಆತನಿಗೆ ರೇಗಿಸಲಿಕ್ಕೆಂದೇ ಅವರು ನಗು ನಗುತ್ತಾ, ತಮ್ಮ ಸಂವಾದ ಶುರು ಮಾಡಿದರು.

ಈ ಕಪೂರ್‌ಗಾದರೂ ಏಕೆ ಈ ದುರ್ಬುದ್ಧಿ? ನನ್ನ ಮನಸ್ಸಿನಲ್ಲಿ ಪ್ರಶ್ನೆ ಪುನಃ ಉದ್ಭವಿಸಿತು. ಒಂದು ಲಗ್ನವಾಗಿ, ಇನ್ನೊಂದು ಲಗ್ನಕ್ಕೆ ಹಾತೊರೆಯುತ್ತಿದ್ದಾನಲ್ಲಾ ಈತ! ಇವನ ಹೆಂಡತಿ ಸುಂದರಳಾಗಿದ್ದಾಳೋ ಇಲ್ಲವೋ? ಪಂಜಾಬೀ ಯುವತಿಯರು ಸುಂದರರಾಗಿರುತ್ತಾರಲ್ಲವೆ? ಬೇರೆ ಯಾವ ಕಾರಣಕ್ಕೆ ಈತ ಈ ಕಾಯಕ ಕೈಗೊಂಡಿರ ಬೇಕು? ಹಣಕಾಸಿನ ವ್ಯವಹಾರ ಅಥವಾ ವರದಕ್ಷಿಣೆಯ ದೆಸೆಯಿಂದ ಇಬ್ಬರಲ್ಲಿ ಮನಸ್ತಾಪ ಉಂಟಾಗಿದೆಯೇ? ಅಥವಾ ಮಕ್ಕಳಾಗದೇ ಇರುವ ಕಾರಣಕ್ಕೇನಾದರೂ ಇಬ್ಬರಲ್ಲಿ ಒಡಕುಂಟಾಗಿದೆಯೋ?

"ನನಗೆ ಹೊಸ ನೋಟ್ಟು ಬೇಕು ಸಾರ್!"

ನನ್ನ ಯೋಚನೆಗಳಿಗೆ ಅಡ್ಡ ಹಾಕಿದ ವ್ಯಕ್ತಿಯನ್ನು ನೋಡಿದೆ. ಧಡಿಯ ಅಗ್ರವಾಲ್ ನಿಂತಿದ್ದ. ಅಗ್ರವಾಲ್‌ನ ತೂಕ ಕಮ್ಮಿ ಎಂದರೂ ನೂರ ಐವತ್ತು ಕಿಲೋ ಇರಬಹುದೆಂದು ಎಣಿಸಿದೆ. ವಯಸ್ಸು ಇನ್ನೂ ೨೨-೨೩ ಇರಬಹುದು. ಕೆನ್ನೆಯಲ್ಲಿನ ಗಡ್ಡ ಬಲಿತಿರಲಿಲ್ಲ. ದಿನಸೀ ಅಂಗಡಿ ಇಟ್ಟಿದ್ದ. ವ್ಯಾಪಾರ ಚೆನ್ನಾಗಿ ನಡೆಯುತ್ತಿತ್ತು. ಹಣ ಹೇರಳವಾಗಿ ಗಳಿಸಿದ್ದ.

"ಹೊಸ ನೋಟು ಏಕೆ ಬೇಕು?"

"ನನ್ನ ಮದುವೆ ಸಾಬ್!"

"ಹ್ಞಾಂ!" ಆಶ್ಚರ್ಯವಾಗಿತ್ತು ನನಗೆ!

ಇಷ್ಟು ಸಣ್ಣ ವಯಸ್ಸಿನಲ್ಲೇ ಮದುವೆಯೊ? ಈ ಧಡೂತಿ ಯುವಕನಿಗೆ ಎಂತಹ ವಧು ಹುಡುಕಿದ್ದಾರೆ?

"ಒಂದು ರೂಪಾಯಿ ನೋಟು ಮತ್ತು ಐದು ರೂಪಾಯಿ ನೋಟುಗಳು ಬೇಕು! ಹೊಸಾ ನೋಟುಗಳು!" ಅಗ್ರವಾಲ್ ಪುನಃ ಉಚ್ಚರಿಸಿದ ತನ್ನ ಬೇಡಿಕೆಯನ್ನು!

ಉತ್ತರ ಹಿಂದೂಸ್ಥಾನದಲ್ಲಿ ಮದುವೆ ಗಂಡಿಗೆ ಹೊಸ ನೋಟಿನ ಹಾರ ಹಾಕಿ, ಹೆಣ್ಣು ಕುದುರೆ ಮೇಲೆ ಕುಳ್ಳಿರಿಸಿ, ಮೆರವಣಿಗೆ ಮಾಡಿಸಿ, ಮದುವೆ ಮಂಟಪಕ್ಕೆ ಕರೆದೊಯ್ದು, ಲಗ್ನಕಾರ್ಯ ನಡೆಸುವ ವಿಧಿಯನ್ನು ನಾನು ಅರಿತಿದ್ದೆ.

"ಒಂದು ರೂಪಾಯಿ ನೋಟಿನ ಒಂದು ಕಟ್ಟನ್ನು ಕೊಡುತ್ತೇನೆ. ಜಾಸ್ತಿ ಸಿಗುವುದಿಲ್ಲ" ಎಂದೆ.

"ಸಾಬ್! ಐದು ಕಟ್ಟು ಕೊಡಿ! ಮದುವೆಯ ಕಾರ್ಯ ಇದು. ಅದರಲ್ಲೂ ನನ್ನ ಮದುವೆ! ಹೊಸ ನೋಟಿಲ್ಲದಿದ್ದರೆ ಮದುವೆ ನಿಂತು ಹೋಗುತ್ತದೆ!"

ಹಲ್ಲು ಗಿಂಜಿದ ಅಗ್ರವಾಲ್!

"ಈಗ ನಮ್ಮ ಬಳಿ ಇಲ್ಲ. ರಿಸರ್ವ್ ಬ್ಯಾಂಕಿನಿಂದ ತರಿಸಿಕೊಡಬೇಕು. ಮದುವೆ ಎಂದು?"

"ಇನ್ನೊಂದು ವಾರವಿದೆ. ನಿಮಗೆ ಆಹ್ವಾನ ಪತ್ರಿಕೆ ಕೊಡುತ್ತೇನೆ. ನೀವು ಬರಲೇಬೇಕು ಮದುವೆಗೆ"

"ಹೊಸ ನೋಟು ಕೊಡದೇ ಇದ್ದರೆ, ಮದುವೆಗೆ ಕರೆಯುವುದಿಲ್ಲ, ಅಲ್ಲವೆ?" ನಕ್ಕು ನುಡಿದೆ ನಾನು.

"ಛೆ! ಛೆ! ಹಾಗೇನಿಲ್ಲ! ಬ್ಯಾಂಕ್ ಮೇನೇಜರ್ ಮದುವೆಗೆ ಬರಲಿಲ್ಲವೆಂದರೆ, ನನ್ನ ಮದುವೆಯಾದರೂ ಹೇಗೆ ನಡೆಯಬೇಕು?"

"ಬ್ಯಾಂಕ್ ಮೇನೇಜರ್ ಬರದೇ ಹೋದರೇ, ಮದುವೆ ನಿಂತು ಹೋಗುತ್ತದೆಯೇ?"

"ಹೌದು! ಹೋದ ವಾರ ನಿಮ್ಮಿಂದ ಸಾಲ Sanction ಆಗಿದೆಯಲ್ಲಾ! ಅದನ್ನು ನೀವು cancel ಮಾಡಿಬಿಟ್ಟರೆ ಏನು ಗತಿ? ನಾನು ಮದುವೆ ಮಾಡಿಕೊಳ್ಳುವ ಹಾಗೇ ಇಲ್ಲ!"

ಹಾಗಾದರೆ ತನ್ನ ಮದುವೆಯ ಖರ್ಚಿಗೆ ಬ್ಯಾಂಕಿನಿಂದ ಸಾಲ ಮಾಡಿದ್ದಾನೆ, ತನ್ನ ವ್ಯಾಪಾರಕ್ಕೋಸ್ಕರ ಅಲ್ಲ! ಎಂತಹ ಮೋಸ! ಆದರೆ, ಎಷ್ಟು ಜನ ನಿಜ ಹೇಳಿ ಬ್ಯಾಂಕಿನಿಂದ ಸಾಲ ಪಡೆದುಕೊಳ್ಳುತ್ತಾರೆ? ನಿಜ ಹೇಳಿದರೆ ಎಷ್ಟು ಜನಕ್ಕೆ ಸಾಲವಾದರೂ ಸಿಗುತ್ತದೆ? ಸುಳ್ಳಿನ ಕಂತೆ ಬಿಚ್ಚಿ, ನೋಟಿನ ಕಂತೆ ಹಿಡಿದು ಕೊಂಡು ಹೋಗುತ್ತಾರೆ! ವಾಪಸ್ಸು ಕೊಡುವಾಗ, ನೋಟಿನ ಕಂತೆ ಬದಲು ಸುಳ್ಳಿನ ಕಂತೆ ನೀಡುತ್ತಾರೆ!

"ಸಾಬ್! ಹೊಸಾ ನೋಟ್?"

"ಹಾಂ!" ಎಚ್ಚರಗೊಂಡೆ ನಾನು.

"ನಾಳೆ ಬನ್ನಿ, ಕೊಡೋಣ!"

ಅಗ್ರವಾಲ್ ಕುರ್ಚಿಯಿಂದ ನಿಧಾನವಾಗಿ ತನ್ನ ದೇಹವನ್ನು ಎಬ್ಬಿಸಿಕೊಂಡು ಬಾಗಿಲ ಕಡೆ ಹೊರಟ. ಅವನು ಹೋಗುವುದನ್ನೇ ನೋಡುತ್ತಾ ನಾನು ಕುಳಿತೆ.

ಈ ನೋಟಿನ ಸರಕ್ಕೆ ಎಷ್ಟು ಮಹತ್ವ ಇದೆ ಇವರ ಜೀವನದಲ್ಲಿ! ಅದೂ ಹೊಸಾ ನೋಟಿನ ಸರಕ್ಕೆ! ಮದುವೆಯ ಸಮಯದಲ್ಲಿ ಇದಕ್ಕೆ ಇರುವ ಮಹತ್ವ, ಚಿನ್ನದ ಸರಕ್ಕೂ ಇರುವುದಿಲ್ಲ! ಇದೆಂತಹ ರೀತಿ-ರಿವಾಜು!

"ಬಸ್‌ನಲ್ಲಿ ಬಾಂಬ್ ಸಿಡಿದು ೩೦ ಜನರ ಮರಣ. ಆತಂಕವಾದಿಗಳ ಕೈವಾಡವಿದೆಯಂತೆ" ಕುಮಾರ್ ಒಳಗೆ ಬಂದು ಗಾಬರಿಯಿಂದ ಉಸರಿದ.

ಪಂಜಾಬ್‌ನಲ್ಲಿ ಪ್ರತ್ಯೇಕವಾದಿಗಳ ಹೋರಾಟ ತೀವ್ರವಾಗಿ, ಹಿಂಸಾತ್ಮಕ ಕಾರ್ಯಗಳು ತ್ವರಿತಗೊಂಡಿದ್ದವು.

"ಈ ನೀಚರು ನಮ್ಮನ್ನೂ ಬಿಡೋದಿಲ್ಲ ಅಂತ ಕಾಣುತ್ತೆ! ದಿಲ್ಲೀಯಿಂದ ವಾಪಸ್ಸು ಜೀವ ಸಹಿತ ಹೋಗುತ್ತೇವೊ ಇಲ್ಲವೋ?"

ಕುಮಾರ್‌ನ ಅಳುಕುವ ಶಂಕೆ ನನಗೆ ನಗು ತರಿಸಿತು. ಇವ ಯಾಕೆ ಇಷ್ಟು ಪುಕ್ಕಲಾದ? ಎಲ್ಲೋ ಪಂಜಾಬ್‌ನಲ್ಲಿ ಭಯೋತ್ಪಾದಕರು ಚಟುವಟಿಕೆಯಿಂದಿದ್ದರೆ, ಇವರಿಗೇನು ನಷ್ಟ? ಇವ ಯಾಕೆ ಇಲ್ಲಿ ಅಂಜಿಕೆ ಪಡಬೇಕು?

"ಸಾರ್! ನನಗೆ ಒಂದು ವಾರ ರಜೆ ಬೇಕು!"

"ಯಾಕೆ? ಊರಿಗೆ ಹೋಗುತ್ತೀರಾ?"

"ಹೌದು!" ಎಂದ.

"ಬೆಳಗಾವಿಗೇನು?"

"ಇಲ್ಲ! ಶಿಕರ್ಜಿಗೆ"

"ಶಿಕರ್ಜಿ? ಎಲ್ಲಿದೆ ಅದು?"

"ಪಾಟ್ನಾ-ಬಿಹಾರ್‌ದಲ್ಲಿದೆ. ಅದು ಜೈನರ ಯಾತ್ರಾ ಸ್ಥಳ. ನಿಮ್ಮ ಕಾಶಿ ಇದ್ದಂಗೆ?"

"ಇಲ್ಲಿಗೆ ಬಂದು ವರ್ಷ ಆಗಿಲ್ಲ! ಈಗಲೇ ಯಾಕೆ ಅಲ್ಲಿಗೆ ಹೋಗಬೇಕು? ಇನ್ನೂ ಸ್ವಲ್ಪ ದಿವಸ ತಡೀರಲ್ಲಾ!" ಎಂದ್ಯೆ.

"ವಾಪಸ್ಸು ನಮ್ಮೂರಿಗೆ ಹೋಗೋ ಮುಂದೆ ಶಿಕರ್ಜಿ ನೋಡಿ ಹೋಗ್ಬೇಕ್ರೀ. ಇಲ್ಲಾಂದ್ರೆ ಈ ನೀಚರು ನಮ್ಮನ್ನು ಉಳಿಸಾಕೆ ಬಿಡೋದಿಲ್ರೀ!"

ಬಡಬಡಿಸಿದ ಕುಮಾರ್.

"ಯಾರ್ರೀ ನಿಮ್ಮನ್ನು ಉಳಿಸೋದಿಲ್ಲ?" ನನಗೆ ಅವನ ಮಾತು ಅರ್ಥವಾಗದೆ ಕೇಳಿದ್ದೆ.

"ಇನ್ಯಾರ್ರೀ? ಈ ಪಂಜಾಬೀ ಜನ ನಮ್ಮನ್ನು ಬಿಟ್ಟಾರೇ? ಇವರು ಜೀವ ತೆಗೆಯದೊರಳಗೆ ಶಿಕರ್ಜಿ ಒಂದು ನೋಡಿ ಬರಬೇಕ್ರೀ!"

"ಶಿಕರ್ಜಿ ನೋಡಲೇ ಬೇಕೇ?"

"ನೋಡದೇ ಇದ್ದರೆ ಹ್ಯಾಂಗ್ರೀ? ಸಾಯುವ ಮುನ್ನ ನೀವು ಕಾಶೀ ನೋಡ್ತೀರೀ? ಹೌದೋ ಅಲ್ಲವ್ರೋ? ಹಾಂಗೇ ಶಿಕರ್ಜಿ ನೋಡಲಿಕ್ಕೇ ಬೇಕ್ರೀ!"

ಎಲ್ಲಾ ಧರ್ಮೀಯರಿಗೂ ಒಂದಲ್ಲಾ ಒಂದು ಪವಿತ್ರ ತೀರ್ಥಸ್ಥಳ ಇದ್ದೇ ಇರುವುದು ಸರ್ವವಿದಿತ. ಆದರೆ ಜೈನರಿಗೆ ಶಿಕರ್ಜಿ ಎಂಬ ಯಾತ್ರಾಸ್ಥಳವಿರುವ ವಿಷಯ ನನಗೆ ತಿಳಿದಿದ್ದು ಇದೀಗಲೇ! ಈ ಕುಮಾರ್‌ನ ವಯಸ್ಸು ಇನ್ನೂ ನಲವತ್ತು ದಾಟಿರಲಿಕ್ಕಿಲ್ಲವೆನಿಸಿತು. ಆದರೂ ಇವನಿಗೇಕೆ ಶಿಕರ್ಜಿಯನ್ನು ನೋಡುವ ಹಂಬಲ?

"ಇಷ್ಟು ಸಣ್ಣ ವಯಸ್ಸಿಗೆ ಯಾಕೆ ಶಿಕರ್ಜಿ ನೋಡಲಿಕ್ಕೆ ಹೊರಟೀದ್ದೀರಾ?"

"ಹೇಳಿದೆನಲ್ಲಾ ಆವಾಗಲೇ! ಸಾಯವುದಕ್ಕೆ ಮೊದಲೇ ಶಿಕರ್ಜಿ ನೋಡ ಬೇಕ್ರೀ! ಈ ಶಹರದೊಳಗೆ ಇದ್ದರೆ, ಬದುಕಿ ಉಳಿದು ನಮ್ಮ ಊರು ನೋಡೋದು ಕಷ್ಟರೀ! ಆದರೆ ಶಿಕರ್ಜೀನ ಈಗಲೇ ನೋಡಿ ಬಂದ್‌ಬಿಡ್ತೀನ್ರಿ!"

ಕುಮಾರ್ ರಜೆಯ ಅಪೇಕ್ಷಾ ಪತ್ರವನ್ನು ನನ್ನ ಮೇಜಿನ ಮೇಲಿಟ್ಟು ಹೊರಟು ಹೋದ. ಶಿಕರ್ಜಿಯನ್ನು ನೋಡಲು ಕುಮಾರ್‌ಗೆ ಎಷ್ಟು ತವಕ, ಹಂಬಲ! ನಾನೂ ಏಕೆ ಕಾಶಿಯನ್ನು ನೋಡಿಬರಬಾರದು? ಆದರೆ ಕಾಶಿಯನ್ನು ಕಂಡವರು, ಅದರ ಬಗ್ಗೆ, ಅಲ್ಲಿನ ಪಂಡರ ಬಗ್ಗೆ, ಪವಿತ್ರ ಗಂಗಾನದಿಯನ್ನು ದೊಡ್ಡ ಗಟಾರವನ್ನಾಗಿ ಮಾಡಿ ಅಪವಿತ್ರವನ್ನಾಗಿ ಮಾಡಿದರ ಬಗ್ಗೆ ಸಾಕಷ್ಟು ವಿಷಯಗಳನ್ನು ನನಗೆ ಮನದಟ್ಟು ಮಾಡಿದ್ದರಿಂದ, ಏಕೋ ಕಾಶೀಯಾತ್ರೆಯ ಬಗ್ಗೆ ನನ್ನ ಮನಸ್ಸು ಮುರಿದುಹೋಗಿತ್ತು.

ಆಗಲೇ ಐದು ಗಂಟೆಯಾಗಿತ್ತು. ಬ್ಯಾಂಕ್ ಮುಚ್ಚುವ ಸಮಯ. ಸಿಬ್ಬಂದಿ ಗಳೆಲ್ಲಾ ತಮ್ಮ ಬ್ಯಾಗ್‌ಗಳನ್ನು ಹಿಡಿದು ಮನೆಗೆ ಹೊರಟಿದ್ದರು. ಒಬ್ಬೊಬ್ಬರಾಗಿ, ಸಾಲಾಗಿ, ನನ್ನ ಕ್ಯಾಬಿನ್ ಮುಂದೆಯೇ ಶಿಸ್ತಿನ ಸಿಪಾಯಿಗಳ ಹಾಗೆ, ಹೊರಬಾಗಿಲ ಕಡೆ ಹೊರಟಿದ್ದರು. ಕೊನೆಯಲ್ಲಿದ್ದವಳು ತಮಿಳು ಕುಮಾರಿ ಕಮಲ! ಅವಳು ನನ್ನನ್ನು ನೋಡಿ, ನಕ್ಕು, ಒಳಗೆ ಬಂದು, ನನಗೆ ನಮಸ್ಕಾರ ಅರ್ಪಿಸಿದಳು. ಇವಳು, ಕರೆಯದೇ ಒಳಗೆ ಯಾಕೆ ಬಂದಳು ಎಂದು ಯೋಚಿಸುತ್ತಾ ಇರುವಾಗಲೇ,

"ಸಾರ್! ನಿನ್ನೆ ದಿನ ನಾ ಆಡಿದ ಮಾತಿನಿಂದ ನಿಮಗೆ ಬೇಸರವಾಯಿತಾ?" ಎಂದು ಕೇಳಿದಳು.

"ಇಲ್ಲವಲ್ಲಾ!" ತಡವರಿಸುತ್ತಾ ಹೇಳಿದೆ.

"ನಾನು ನಿಮಗೆ ಸುಳ್ಳು ಹೇಳಿದೆ. ನಾನು ಕಪೂರ್‌ನನ್ನು ಮದುವೆ ಯಾಗುವುದಿಲ್ಲ! ಅವರಿಗೆ ಆಗಲೇ ಮದುವೆಯಾಗಿದೆ!"

# 3

"ನಂ. ೫೫, ಸೌತ್ ಅವೆನ್ಯೂ, ನವದೆಹಲಿ" ಎಲ್ಲಿದೆ ಎಂದು ಹುಡುಕುತ್ತಾ ಹೊರಟೆದ್ದೆ. ಅಗಲ ರಸ್ತೆ, ಪ್ರತೀ ವರ್ಷ ಡಾಂಬರು ಹಾಕಿದ ರಸ್ತೆ, ಹೊಸ ರಸ್ತೆ. ಆಗ ತಾನೇ ನೀರು ಹಾಕಿ ತಳೆದು ಶುಭ್ರವಾಗಿರಿಸಿದ ರಸ್ತೆ, ಹೆಸರಿಗೆ ತಕ್ಕ ಹಾಗೆ ಇಕ್ಕೆಡೆಗಳಲ್ಲಿಯೂ ಮರಗಳ ಸಾಲನ್ನು ಹೊಂದಿರುವ ರಸ್ತೆ, ನಾನು ಯೂರೋಪ್ ಖಂಡದ ಯಾವುದೋ ದೇಶದ ರಾಜಧಾನಿಯ ರಾಜಬೀದಿಯಲ್ಲಿ ಸಾಗುತ್ತಿರುವ ಹಾಗೆ ಭಾಸವಾಯಿತು. ಮೋಟರ್‌ಸೈಕಲ್‌ನ್ನು ಬದಿಯಲ್ಲಿರಿಸಿ, ಕಾಲು ನಡಿಗೆಯಲ್ಲೇ ಸಾಗಿದೆ. ಒಂದೇ ತರಹ ಮನೆಗಳು ರಸ್ತೆಯ ಎರಡು ಬದಿಯಲ್ಲಿ ಕಂಡು ಬಂದವು. ಇಂಗ್ಲಿಷ್‌ನವರು ತಮ್ಮ ಸುಖಕ್ಕಾಗಿ ವೈಭವವನ್ನು ಮೆರೆಸುವುದಕ್ಕಾಗಿ ಸರಕಾರೀ ಭವನಗಳನ್ನು ನಿರ್ಮಿಸಿ ಅದನ್ನು ನಮಗೆ ಬಳುವಳಿಯಾಗಿ ಕೊಟ್ಟು ಹೋದರಷ್ಟೆ! ನಮ್ಮನ್ನಾಳಿದ ಅವರು, ಅವರ ಭಾಷೆಯ ಜೊತೆಗೆ, ಬಹಳ ಉಪಯುಕ್ತವಾದ ರೈಲು, ರಸ್ತೆ ಸಾರಿಗೆ, ನೀರಾವರೀ ಅಣೆಕಟ್ಟುಗಳು ಮತ್ತು ಈ ಮಹಲ್‌ಗಳನ್ನು ಬಳುವಳಿಯಾಗಿ ಕೊಟ್ಟು ಪುಣ್ಯ ಪಡೆದ ಪುಣ್ಯಾತ್ಮರು. ನಮ್ಮನ್ನಾಳಿದ ಎಲ್ಲಾ ವಿದೇಶಿಯರ ಪೈಕಿ ಇಂಗ್ಲಿಷ್‌ನವರು ಸಾರ್ವಜನಿಕ ಹಿತಕ್ಕಾಗಿ, ತಮ್ಮ ತನು, ಮನ, ಧನ ಉಪಯೋಗಿಸಿ ಕೃತಾರ್ಥರಾಗಿದ್ದಾರೆ. ನಮ್ಮ ಧನವನ್ನು ಉಪಯೋಗಿಸಿ, ದೇಶದ ಸಂಪತ್ತನ್ನು ಕೊಳ್ಳೇ ಹೊಡೆದರೂ ಲೋಕೋಪಯೋಗಿ ಕಾರ್ಯಗಳನ್ನು ಮಾಡಿ, ಜನರ ಪ್ರೀತಿ ಆದರ ಗಳಿಸಿದ್ದರಲ್ಲಿ ಸಂಶಯವೇ ಇಲ್ಲ. ಇಂತಹ ಒಂದು ಕಾರ್ಯಗಳಲ್ಲಿ ಪಾರ್ಲಿಮೆಂಟ್ ಭವನ, ಪ್ರೆಸಿಡೆಂಟ್ ಅರಮನೆ, ಪಾರ್ಲಿಮೆಂಟ್‌ನ ಸದಸ್ಯರ ಮನೆಗಳು ಮುಖ್ಯವಾಗಿದ್ದವು. ಕೇವಲ ತಮ್ಮ ಸುಖಕ್ಕಾಗಿಯೇ ಅರಮನೆಗಳನ್ನು ಕಟ್ಟಿ, ಸತ್ತಮೇಲೆ, ಲಕ್ಷಾಂತರ ರೂಪಾಯಿ ಖರ್ಚು ಮಾಡಿ, ಗೋರಿಗಳನ್ನು ಕಟ್ಟಿ, ಅಥವಾ ತಮ್ಮ ಅಧಿಕಾರ ಭದ್ರಪಡಿಸುವುದಕ್ಕೋಸ್ಕರ, ಬಲವಾದ ಕೋಟೆಗಳನ್ನು ಅದರಲ್ಲಿ ಅರಮನೆಗಳನ್ನು ಕಟ್ಟಿ, ಜನತೆಯ ಮೇಲೆ ಹಲವಾರು ಕರಗಳನ್ನು ಹೇರಿ, ಯಾವುದೇ ಒಂದು ಲೋಕೋಪಯೋಗಿ ಕಾರ್ಯ ಎಸಗಿದ ರಾಜ-ಮಹಾರಾಜ, ಸುಲ್ತಾನ್ - ಬಾದ್‌ಶಾಹಾರಿಗಿಂತ ಈ ಇಂಗ್ಲಿಷ್ ಆಡಳಿತಗಾರರು ಎಷ್ಟೋ ಮೇಲು!

ಮನೆ ಹುಡುಕುತ್ತಾ ಸಾಗಿ, ನಂಬರ್ ೫೫ರ ಮುಂದೆ ನಿಂತೆ. ಸಾಲ ತೆಗೆದು ಕೊಂಡು ಐದು ವರ್ಷವಾದರೂ, ಒಂದು ಪೈಸೇ ವಾಪಸ್ಸು ಹಿಂದಿರುಗಿಸದ ಈ ರಸ್ತೋಗಿ ತನ್ನ ಮನೆಯ ವಿಳಾಸವನ್ನು ೫೫, ಸೌತ್ ಅವೆನ್ಯೂ ನವದೆಹಲಿ ಎಂದು

ಕೊಟ್ಟಿದ್ದು, ನನಗೆ ಆಶ್ಚರ್ಯ ತಂದಿತ್ತು. ಕೇವಲ ಪಾರ್ಲಿಮೆಂಟ್ ಸದಸ್ಯರಿಗೆ ನೀಡಲಾದ ಈ ಭವನದಲ್ಲಿ ರಸ್ತೋಗಿ ಯಾಕೆ ವಾಸವಾಗಿದ್ದಾನೆ? ಅದೂ ಐದು ವರ್ಷದಿಂದ ಒಂದೇ ಮನೆಯಲ್ಲಿ ?

ಮನೆ ಬಾಗಿಲು ಬಡಿದೆ. ಒಂದು ಮಧ್ಯ ವಯಸ್ಸಿನ ಹೆಂಗಸು ಬಾಗಿಲು ತೆರೆದು ನನ್ನ ಮುಖವನ್ನು ಪ್ರಶ್ನಾರ್ಥಕವಾಗಿ ನೋಡಿದಳು.

"ರಸ್ತೋಗಿ ಸಾಬ್ ಇದ್ದಾರೆಯೆ ?" ಕೇಳಿದೆ.

"ಊರಲ್ಲಿಲ್ಲ !"

"ಎಲ್ಲಿ ಹೋಗಿದ್ದಾರೆ ?"

"ನೀವ್ಯಾರು ?"

"ಬ್ಯಾಂಕ್ ಮೇನೇಜರ್. ರಸ್ತೋಗಿ ಸಾಬ್ ಸಾಲತೆಗೆದುಕೊಂಡಿದ್ದರು ನಮ್ಮ ಬ್ಯಾಂಕಿನಲ್ಲಿ."

ಮಾತುಕತೆ ಬಾಗಿಲ ಬಳಿಯಲ್ಲೇ ನಡೆಯುತ್ತಿತ್ತು. ಒಳಗೆ ಕರೆದು ಕುಳ್ಳಿರಿಸುವ ಸೌಜನ್ಯ ತೋರಿಸಲಿಲ್ಲ ಹೆಂಗಸು. ಪ್ರಾಯಶಃ ಭಯೋತ್ಪಾದಕರ ಭಯವಿರಬೇಕು.

"ಅವರು ಬಂದ ಕೂಡಲೆ ವಿಷಯ ತಿಳಿಸುತ್ತೇನೆ."

"ಯಾವಾಗ ಬರುತ್ತಾರೆ ಅವರು ?"

"ಅವರು ಬಂದಾಗ, ನಿಮ್ಮ ಬಳಿ ಕಳುಹಿಸುತ್ತೇನೆ."

"ಅವರು ಯಾವಾಗ ಬರುತ್ತಾರೆಂದು ಹೇಳಿದರೆ, ಆ ದಿನ ನಾನೇ ಬರುತ್ತೇನೆ."

"ನೀವೇನು ಬರಬೇಕಾದ್ದಿಲ್ಲ ! ಅವರನ್ನೂ ನಿಮ್ಮ ಬಳಿ ಕಳುಹಿಸುತ್ತೇನೆಂದು ಹೇಳಿದೆನಲ್ಲಾ !"

ಅವಳ ಮುಖವನ್ನೇ ದಿಟ್ಟಿಸಿ ನೋಡಿದೆ. ಅವಳಿಗೆ ನನ್ನ ಪ್ರಶ್ನೆಗಳು ಅನಾವಶ್ಯಕ ವಾಗಿದ್ದವೆಂದು ತನ್ನ ಮುಖದಲ್ಲಿ ತೋರಿಸುತ್ತಿದ್ದಳು.

"ಈ ಮನೆ ಪಾರ್ಲಿಮೆಂಟ್ ಸದಸ್ಯರದಲ್ಲವೆ ?"

"ಹೌದು !" ಎಂದಳು ನೀರಸವಾಗಿ. ಬೇಸರವಾಗಿತ್ತು ಅವಳಿಗೆ.

"ಮತ್ತೆ ನೀವು ಈ ಮನೆಯಲ್ಲಿ ವಾಸ ?"

"ಬಾಡಿಗೆ ಕೊಡುತ್ತಿದ್ದೇವೆ !"

ಮರುಮಾತಿಲ್ಲದೆ, ನಾನು ವಾಪಸ್ಸು ಹೊರಟೆ.

ಸರಕಾರದವರು ಪುಕ್ಕಟೆಯಾಗಿ ನೀಡಿದ ವಾಸಗೃಹವನ್ನು ಎಮ್.ಪಿ.ಗಳು ಬೇರೆಯವರಿಗೆ ಬಾಡಿಗೆಗೆ ಕೊಡುವ ಪದ್ಧತಿ ನನಗೆ ಕೇಳಿಪಟ್ಟಿದ್ದೆ, ಪ್ರತ್ಯಕ್ಷ ಅನುಭವ ಆಗಿರಲಿಲ್ಲ. ತಮ್ಮ ಐದು ವರ್ಷದ ಅವಧಿಯಲ್ಲಿ, ಸರಕಾರರ ವಾಸಗೃಹವನ್ನು,

ಬಾಡಿಗೆಗೆ ಕೊಟ್ಟು, ಹಣ ಸಂಪಾದಿಸುವ ರೀತಿ, ನಮ್ಮ ದೇಶದಲ್ಲಿ ಮಾತ್ರ ಕಾಣಬಹುದೇನೋ ಎಂದೆನಿಸಿತು. ಪ್ರಜಪ್ರತಿನಿಧಿಗಳಾಗಿ, ತಮ್ಮ ದೇ ಸರಕಾರ ನಡೆಸಿ, ತಮ್ಮದೇ ಸರಕಾರ ನೀಡಿದ ಉಚಿತ ವಾಸಗೃಹಗಳನ್ನು, ಬಾಡಿಗೆಗೆ ಕೊಟ್ಟು, ಅದರಿಂದ ಹಣ ಸಂಪಾದಿಸುವ ಈ ದಂಧೆಗೆ ಯಾವ ಲೈಸನ್ಸೂ ಬೇಡ !

ಮೋಟರ್ ಸೈಕಲ್ ಹತ್ತಿ, ಅದಕ್ಕೆ ಜೀವ ಕೊಟ್ಟು, ಹೊರಟೆ ಅಲ್ಲಿಂದ. ಮುನೀರ್ಕಾ ಬಳಿ ಬರುವ ಹೊತ್ತಿಗೇ 'ಫುಸ್' ಎಂದು ಟಾಯರ್‌ನ ಗಾಳಿ ಹೋಗಿ, ಚಳಿಗಾಲದ ಛಳಿ ಬಂದು ನಡುಗುವ ಹಾಗೆ ಈ ಬೇಸಿಗೆಯ ಬಿಸಿಲಿನಲ್ಲಿ, ಅದುರುತ್ತಾ ಗಾಡಿ ನಿಂತಿತು. ಹತ್ತಿರದಲ್ಲೇ, ರಸ್ತೆ ಬದಿಯಲ್ಲೇ ಒಬ್ಬ ಪಂಕ್ಚರ್ ರಿಪೇರಿ ಮಾಡುವನ ಕಣ್ಣಿಗೆ ಬಿದ್ದ. ದೂಡಿಕೊಂಡು ಹೊರಟೆ. ಎಷ್ಟೇ ಹತ್ತಿರವೆಂದರೂ ಅರ್ಧ ಕಿಲೋ ಮೀಟರ್ ದೂರವಾದರೂ ಇದ್ದಿರಬಹುದು ಆ ವರ್ಕ್ ಶಾಪ್ ! ದೂಡಿ ದೂಡಿ, ಮೈಬೆವರೊಡೆದು, ಹಣ್ಣು ಗಾಯಿ ನೀರಾಯಿತು! ನನ್ನ ಸ್ಥಿತಿಯನ್ನು ನೋಡಿ, ಮರುಕಗೊಂಡ ವರ್ಕ್‌ಶಾಪ್ ಮಾಲೀಕನಾದ ಸರದಾರ್‌ಜೀ, ಮೊದಲು ನನ್ನನ್ನು ವಿಚಾರಿಸಿದ, ನನ್ನ ಗಾಡಿಯನ್ನು ಮರೆತು ಕೈಗೆ ಒಂದು ಲೋಟ ತಣ್ಣಗಿನ ನೀರು ನೀಡಿದ. ಕುಡಿದಾದ ಮೇಲೆ 'ಇನ್ನು ಬೇಕಾ?' ಎಂದು ಕೇಳಿ ಉಪಚರಿಸಿದ. ಗಾಡಿಯನ್ನು ಒಂದು ಕಡೆ ತಳ್ಳಿ, ಅದರ ಚಕ್ರ ಕಳಚಿ, ರಿಪೇರಿಗೆ ತೊಡಗಿದ. ಅಲ್ಲೇ ಬಿದ್ದಿದ್ದ ಒಂದು ಚಿಕ್ಕ ಪೆಟ್ಟಿಗೆಯನ್ನು ತೋರಿಸಿ, ಕುಳಿತುಕೊಳ್ಳುವಂತೆ ಸನ್ನೆ ಮಾಡಿದ. ಪೆಟ್ಟಿಗೆಯ ಮೇಲಿದ್ದ ಕೊಳೆ ನೋಡಿ ನಾನು ಅವನ ಆಹ್ವಾನವನ್ನು ನಿರಾಕರಿಸಿ, ಅಲ್ಲೇ ಅತ್ತ- ಇತ್ತ ನೋಡತೊಡಗಿದೆ. ಸ್ವಲ್ಪ ಸಮಯದಲ್ಲೇ ಒಬ್ಬ ಸವಾರ ಬರ್‌ನೇ ಬಂದು ನನ್ನ ಪಕ್ಕದಲ್ಲೇ ತನ್ನ ಮೋಟರ್‌ಸೈಕಲ್‌ನ್ನು ನನಗೆ ತಾಗುವಂತೆ ನಿಲ್ಲಿಸಿ, 'ಸಾರಿ' ಎಂದು ಹೇಳಿ, ಹಲ್ಲು ಕಿಸಿದ. ಅವ ಬಿಳಿಯನಾಗಿದ್ದ. ದಿಲ್ಲೀ ಬಿಸಿಲಿನ ಕಾವಿಗೆ, ಕಾದ ಹೆಂಚಿನ ತರಹ ಅವನ ಮುಖ ಸುಟ್ಟು ಕೆಂಪಾಗಿತ್ತು. ಗಡ್ಡ ಕೆಂಚಗಿದ್ದು, ಬೋಳಿಸಲು ಮರೆತಂತ್ತಿತ್ತು. ತಲೆಗೆ ಮಾತ್ರ ಒಂದು ಟೋಪಿ ಹಾಕಿಕೊಂಡಿದ್ದು, ಉಳಿದ ಪೋಷಾಕು ಭಾರತೀಯರು ಧರಿಸುವ ರೀತಿಯಲ್ಲೇ ಧರಿಸಿದ್ದ.

"ನೋ ಬ್ರೇಕ್ !" ಎಂದ ನನ್ನನ್ನು ನೋಡಿ.

ಅದಕ್ಕೇ ನನ್ನ ಮೇಲೆ ಬೀಳುವ ರೀತಿಯಲ್ಲಿ ಗಾಡಿಯನ್ನು ಓಡಿಸಿದ್ದು ! ಅವನ ಮೋಟರ್ ಸೈಕಲ್‌ನ್ನು ನೋಡಿದೆ. ಇಂಗ್ಲೆಂಡ್‌ನಲ್ಲಿ ತಯಾರಾದ ಹಳೇ 'ಟ್ರಾಯಂಫ್' ಮೋಟರ್ ಸೈಕಲ್ಲಾಗಿತ್ತು ಅದು !".

"ಸ್ವಲ್ಪ ಸರಿ ಮಾಡಿಕೊಡುತ್ತೀರಾ?" ಪುನಃ ನನ್ನನ್ನು ಉದ್ದೇಶಿಸಿ ಮಾತನಾಡಿದ.

ಸರದಾರ್‌ಜೀ ಕಡೆ ಕೈ ಮಾಡಿ 'ಅವನಿಗೆ ಹೇಳು' ಎಂದೆ ನಾನು ನಗುತ್ತಾ.

'ಸಾರಿ!" ಎಂದು ಸರದಾರಜೀ ಬಳಿ ಸಾಗಿ, 'ನೋ ಬ್ರೇಕ್ !' ಎಂದ ಬಿಳಿಯ.

ಸರದಾರಜೀ ಉತ್ತರ ನೀಡಲಿಲ್ಲ. ತನ್ನ ಕೆಲಸ ತಾನು ಮಾಡುತ್ತಲೇ ಇದ್ದ. ನನ್ನ ಬಳಿ ಬಂದು ನಿಂತ

"ದಿಲ್ಲೀಯಲ್ಲಿ ಏನು ಮಾಡುತ್ತಿದ್ದೀಯಾ ?"

ನನ್ನ ಪ್ರಶ್ನೆಗೆ ಆತ ಮರುಪ್ರಶ್ನೆ ಹಾಕಿದ.

"ನೀನೇನು ಮಾಡುತ್ತಿದ್ದೀಯಾ ?"

"ನಾನೊಬ್ಬ ಬ್ಯಾಂಕ್ ಮೇನೇಜರ್" ಎಂದೆ.

"ನಾನೊಬ್ಬ ಪತ್ರಕರ್ತ! ಜರ್ಮನ್ ಪತ್ರಿಕೆಗೆ ಪತ್ರಕರ್ತನಾಗಿದ್ದೇನೆ."

"ಎಷ್ಟು ಸಮಯವಾಯಿತು ಇಲ್ಲಿಗೆ ಬಂದು ?"

" ಸುಮಾರು ೨ ವರ್ಷವಾಯಿತು !"

"ಹಿಂದೀ ಕಲಿತಿದ್ದೀಯಾ ?"

"ಓಹೋ! ಥೋಡಾ, ಥೋಡಾ!" ಎಂದು ನಗಲಿಕ್ಕೆ ಶುರುಮಾಡಿದ. ಅವನ ನಗು ಆಕರ್ಷಕವಾಗಿತ್ತು. ನಗು ಸಾಂಕ್ರಾಮಿಕವಲ್ಲವೆ? ಸರದಾರಜೀ ಕೆಲಸ ಮಾಡುವು ದನ್ನು ಬಿಟ್ಟು, ನಗಲಿಕ್ಕೆ ಶುರು ಹಚ್ಚಿದ !

"ದಿಲ್ಲೀ ಜೀವನ ನಿನಗೆ ಹೇಗನ್ನಿಸುತ್ತದೆ ?"

"ಮಜಾ ಇದೆ. ಆದರೆ ಇಲ್ಲಿ ಕ್ಷೇಮ ಇಲ್ಲ ಹಿಂಸಾತ್ಮಕ ಘಟನೆಗಳು ಜಾಸ್ತಿ ಯಾಗಿದೆ. ಇದರಿಂದ ನಮ್ಮ ಜೀವನವೂ ಸ್ವಲ್ಪ ಕಷ್ಟವೇ ?"

"ಹಿಂಸಾತ್ಮಕ ಘಟನೆಗಳು ಎಂದರೆ ಪಂಜಾಬೀ ಭಯೋತ್ಪಾದಕರಿಂದ ಜರಗುತ್ತಿ ರುವ ಚಳುವಳಿಗಳಾ?"

"ಅದೊಂದೇ ಅಲ್ಲ! ಬೇರೆ ತರಹ ತರಹ ಘಟನೆಗಳು ಜರಗುತ್ತಲೇ ಇವೆಯಲ್ಲ! ಸಾಮಾಜಿಕ, ಧಾರ್ಮಿಕ, ಆರ್ಥಿಕ ಕಾರಣಗಳಿಂದ ಹಿಂಸೆ ತಾಂಡವ ವಾಡುತ್ತಾ ಇವೆ ಇಲ್ಲಿ !" ಅವನ ಧ್ವನಿಯಲ್ಲಿ ದೂರಿನ ಛಾಯೆ ಇಣಕಿತ್ತು.

"ನಿಮಗೆ - ಪತ್ರಕರ್ತರಿಗೆ - ಇದರಿಂದ ಒಳ್ಳೆಯದೇ ಆಯಿತಲ್ಲಾ! ನಿಮ್ಮ ಪತ್ರಿಕೆಗಳಲ್ಲಿ ಅಚ್ಚು ಹಾಕಿಸುವುದಕ್ಕೆ ಸಾಕಷ್ಟು ಸುದ್ದಿಯ ಸಂಗ್ರಹ ಮಾಡಬಹುದಲ್ಲಾ, ಅನಾಯಾಸವಾಗಿ!

"ಹೌದೌದು!" ಒಪ್ಪಿಕೊಂಡ ಜರ್ಮನ್, "ಆದರೆ, ವೈಯುಕ್ತಿಕವಾಗಿ, ಈ ಜೀವನ ನನಗೆ ಹಿಡಿಸುವುದಿಲ್ಲ. ಯಾವಾಗಲೂ 'ಹಿಂಸೆಯ ನೆರಳಿನಲ್ಲಿ, ಅದೇ ಭಯ ದಲ್ಲಿ ಜೀವನ ಸಾಗಿಸವುದು ಅಷ್ಟು ಒಳ್ಳೆಯದಾಗಿ ಕಾಣುವುದಿಲ್ಲ."

ನನಗೆ ಅವನ ಮಾತು ಕೇಳಿ ಅಚ್ಚರಿಯಾಯಿತು.

ಜರ್ಮನ್‌ರು, ಹೇಳಿ ಕೇಳಿ, ಶಾಂತಿಪ್ರಿಯರಲ್ಲ. ಹಿಂಸಾಪ್ರವೃತ್ತಿ ಅವರ ಇತಿಹಾಸದಲ್ಲಿ, ಜನಜೀವನದಲ್ಲಿ ಬೇರೂರಿಬಿಟ್ಟಿದ್ದು ತಿಳಿದ ವಿಷಯವೇ ಆಗಿತ್ತು.

"ಬಾಯಿಯಲ್ಲಿ ಶಾಂತಿ, ಶಾಂತಿ ಎಂದು ಯಾವಾಗಲೂ ಪಠಿಸುತ್ತಾ, ಕೈಯಲ್ಲಿ ಕತ್ತಿ, ಬಾಂಬು ಹಿಡಿದು, ಹೊಡೆದಾಟ, ಬಡಿದಾಟ, ಹಿಂಸೆಯಲ್ಲಿ ತೊಡಗುವ ಜನರು ನೀವು ! ಕಲಹ, ಕದನ, ದೊಂಬಿ ನಿಮ್ಮ ಜೀವನದ ಒಂದು ಭಾಗವಾಗಿಬಿಟ್ಟಿದೆ !"

ದಿಲ್ಲೀ ಬಿಸಿಲಿನ ಬೇಗೆಗಿಂತಲೂ ಜರ್ಮನ್‌ನ ಮಾತಿನ ಬೇಗೆ ನನ್ನನ್ನು ಸುಡಲು ಶುರುಮಾಡಿತ್ತು !

"ಜರ್ಮನರೆಲ್ಲರೂ ಶಾಂತಿ ಪ್ರಿಯರೆ ?" ಖಾರವಾಗಿ ಕೇಳಿದೆ.

"ನಿಸ್ಸಂಶಯವಾಗಿ ! ನಿಮ್ಮಲ್ಲಿಯ ಹಾಗೆ, ದೊಂಬಿ, ಕಲಹ, ಕೊಲೆ, ರಕ್ತಪಾತ ಅಲ್ಲಿ ನಡೆಯುವುದೇ ಇಲ್ಲ. ನಾವು ಶಿಸ್ತಿನ ಜನ, ಜಗಳ ಪರಿಹರಿಸಿಕೊಳ್ಳಬೇಕಾದಾಗ, ಹಿಂಸಾ ಮಾರ್ಗ ನಾವು ತೆಗೆದುಕೊಳ್ಳುವುದಿಲ್ಲ! ಇಲ್ಲಿಯ ಹಾಗೆ ಜನರ ಹತ್ಯೆ ಮಾಡತೊಡಗುವುದಿಲ್ಲ...

ನನಗೆ ಇನ್ನು ತಡೆಯಲಾಗಲಿಲ್ಲ! ಅವನ ಮಾತನ್ನು ಮಧ್ಯದಲ್ಲೇ ತಡೆದು, ಗುಡುಗಿದೆ: "ನಿಮ್ಮ ಜರ್ಮನ್ ದೇಶ, ಮನು ಕುಲದ ಇತಿಹಾಸದಲ್ಲೇ ಎರಡು ಭೀಕರ ಮಹಾಯುದ್ಧಗಳನ್ನೂ ಶುರು ಮಾಡಿ, ಲಕ್ಷಾಂತರ ಮನುಷ್ಯರ ಹತ್ಯೆ ಮಾಡಲಿಲ್ಲವೆ? ಪಾಪದ ಯಹೂದೀಯರ ಹತ್ಯಾಕಾಂಡ ಜರುಗಿಸಲಿಲ್ಲವೆ ? ಏನು ಹೇಳುತ್ತೀರಾ ಇದಕ್ಕೆ ?"

ಜರ್ಮನ್ ಅವಾಕ್ಕಾಗಿ ನಿಂತ. ಮಾತೇ ಹೊರಡಲಿಲ್ಲ ಅವನ ಬಾಯಿಂದ ! ಕೆಲವು ಕ್ಷಣ ಮೂಕನಾಗಿ ನಿಂತಿದ್ದು, ನಿಲ್ಲಿಸಿದ್ದ ತನ್ನ ಮೋಟರ್ ಸೈಕಲ್ ಹತ್ತಿ, ನನಗೆ ವಿದಾಯ ಕೂಡ ಹೇಳದೇ ಓಡಿದ ! ಮೋಟರ್ ಸೈಕಲ್ ಬ್ರೇಕ್ ಇನ್ನು ಸರಿ ಮಾಡೇ ಇರಲಿಲ್ಲ ಸರದಾರಜೀ !

"ಅವ ಯಾಕೆ ಹಾಗೇ ಓಡಿದ ?"

ಸರದಾರ್‌ಜೀ ಕೇಳಿದ ನನ್ನನ್ನು. ನಾನು ವಿವರಿಸಿದೆ. ಸರದಾರಜೀ ಮಾತ ನಾಡದೇ ನನ್ನ ಮುಖವನ್ನು ನೋಡಿ, ಏನೋ ಹೇಳ ಬಯಸಿ, ಸುಮ್ಮನಾದ.

ಸತ್ಯ ಎಷ್ಟು ಕಟುವಾಗಿರುತ್ತದೆ ಎಂದು ಅರಿತಿದ್ದ ನಾನು ಆ ಜರ್ಮನ್ ಪತ್ರಕರ್ತ ತನ್ನ ವರ್ತನೆಯ ಪ್ರದರ್ಶನದಿಂದ ಮತ್ತೊಮ್ಮೆ ಅದು ನನಗೆ ಮನವರಿಕೆ ಯಾಯಿತು. ಜರ್ಮನ್‌ರು ಸ್ವಭಾವತಃ ಹಿಂಸಾ ಪ್ರವೃತ್ತಿಯುಳ್ಳ ಜನಾಂಗಕ್ಕೆ ಸೇರಿದವರು ಎಂದು ಎಲ್ಲರಿಗೂ ತಿಳಿದಿದ್ದೆ. ಅವರನ್ನು ಕಂಡರೆ, ಯೂರೋಪಿನ

ಇತರ ದೇಶದವರು ಇಂದಿಗೂ, ಸಂಶಯ, ಭಯ, ಭೀತಿ, ಕಳವಳ, ಇರಿಸಿಕೊಂಡಿದ್ದಾರೆ. ಜರ್ಮನ್‌ರ ಉಲ್ಲಾಸ, ಹುರುಪು, ಅಚ್ಚುಕಟ್ಟುತನ, ದಿಟ್ಟತನ, ಉದ್ಯೋಗಶೀಲತೆ, ಕ್ರಿಯಾಶೀಲತೆ ಕರ್ತವ್ಯನಿಷ್ಠೆ, ಶ್ರದ್ಧೆ ಬೆರಗುಗೊಳಿಸುವಂತಹವ ದಾದರೂ, ಅವರ ಬಗ್ಗೆ ಜಾಗ್ರತೆ, ಮುನ್ನೆಚ್ಚರಿಕೆ ಸದಾ ಇಡುವ ಪರಿಪಾಠ ಇಟ್ಟುಕೊಂಡಿರುವುದು ಇತರ ಯೂರೋಪಿನ ರಾಷ್ಟ್ರಗಳ ಮನೋಭಾವ ಸತ್ಯವಾಗಿದೆ. ಜರ್ಮನರ ಉದ್ಯೋಗಶೀಲತೆ ಹಾಗೂ ಕ್ರಿಯಾಶೀಲತೆಗಳ ಸ್ವಭಾವಕ್ಕೆ ಆ ದೇಶದ ಹವಾಗುಣವೇ ಕಾರಣವೆಂದು ಹೇಳಲಾಗಿದೆ. ಸಮಶೀತೋಷ್ಣ ವಲಯದಲ್ಲಿರುವ ಆ ದೇಶದ ಹವಾ ಜನರಿಗೆ ಸೋಂಬೇರಿಗಳನ್ನಾಗಿ ಮಾಡಲು ಬಿಡುವುದಿಲ್ಲ. ಕೆಲಸ ಎಷ್ಟು ಮಾಡಿದರೂ ಸುಸ್ತಾಗಿ ಮೈ ಜಡ್ಡಾಗುವ ಸಂಭವವೇ ಇಲ್ಲ! ಬಿಸಿಲಿನ ಬೇಗೆ ಯಿಂದ ಬಳಲುವ ಪ್ರಶ್ನೆಯೇ ಉದ್ಭವಿಸುವುದಿಲ್ಲ! ಇಂತಹ ದೇಶದಲ್ಲಿ, ಸೊಂಬೇರಿ ತನಕ್ಕೆ ಸ್ಥಾನವೇ ಇಲ್ಲ! ಇಪ್ಪತ್ತುನಾಲ್ಕು ಗಂಟೆಗಳ ಅವಧಿ ಇವರ ಕ್ರಿಯಾಶೀಲತೆಗೆ ಸಾಕಾಗುವುದಿಲ್ಲವೆಂದೇ ಇವರ ಕೊರಗು.

ತಾವು ಬಲು ಶ್ರೇಷ್ಠ. 'ಆರ್ಯ' ಜನಾಂಗಕ್ಕೆ ಸೇರಿದವರೆಂದೂ, ಪ್ರಪಂಚದ ಇತರ ಎಲ್ಲಾ ಜನಾಂಗದವರು ಕೀಳು ಎನ್ನುವ ಮನೋಭಾವವುಳ್ಳ ಇವರು, ಪ್ರಪಂಚವನ್ನಾಳುವ ಹಕ್ಕು ತಮ್ಮದೆಂದು ಇಂದಿಗೂ ಇರಿಸಿಕೊಂಡಿದ್ದಾರೆ. ಇದಕ್ಕಾಗಿ ಎರಡು ಮಹಾಯುದ್ಧಗಳನ್ನು ಶುರು ಮಾಡಿ, ತಮ್ಮ ಶ್ರಮ, ಕೆಚ್ಚು, ಬುದ್ಧಿಶಕ್ತಿಗಳಿಂದ ಹೋರಾಡಿದರೂ ಪ್ರಪಂಚದ ಇತರ ಶಕ್ತಿಗಳ ಒಕ್ಕೂಟದ ಮುಂದೆ ತಲೆಬಾಗ ಬೇಕಾಯಿತು. ಸೋತರೂ, ಕೇವಲ ಹತ್ತೇ ವರ್ಷಗಳಲ್ಲಿ, ತಮ್ಮ ಸ್ವಭಾವಕ್ಕನುಗುಣ ವಾಗಿ, ಮತ್ತೊಮ್ಮೆ ತಲೆ ಎತ್ತಿ ನಿಂತು, ಪ್ರಪಂಚದ ಒಂದು ಪ್ರಮುಖ, ಆರ್ಥಿಕ, ಸಾಮಾಜಿಕ, ಬಲಿಷ್ಠ ರಾಷ್ಟ್ರಗಳನ್ನಾಗಿಸಿದರು. ಇಷ್ಟೆಲ್ಲಾ ಪ್ರಗತಿ ಸಾಧಿಸಿದ್ದರೂ, ಹಿಂಸಾಪ್ರವೃತ್ತಿಯನ್ನು ಇನ್ನೂ ಯಾಕೆ ತ್ಯಜಿಸಿಲ್ಲಾ ?

"ನಿಮ್ಮ ಮೋಟರ್‌ಸೈಕಲ್ ಸರಿಯಾಯಿತು ನೋಡಿ !"

ಸರದಾರ್‌ಜೀ ಒದರಿದ. ಅವನ ಒದರಿಕೆಗೆ ಬೆಚ್ಚಿಬಿದ್ದೆ. ಯಾವುದೋ ಲೋಕ ದಲ್ಲಿದ್ದ ನನ್ನನ್ನು ಸರದಾರಜೀ ತನ್ನ ಒರಟಾದ ಧ್ವನಿಯಿಂದ ಎಚ್ಚರಿಸಿದ್ದ. ಅವನು ಕೇಳಿದ ಹಣ ಕೊಟ್ಟು, ಮೋಟರ್ ಸೈಕಲ್ ಏರಿ ಹೊರಟೆ. ಈ ಸರದಾರಜೀ ನನ್ನ ಮೇಲೆ ಯಾಕೆ ಹರಿಹಾಯ್ದ? ಅವನ ಗಡಸುತನಕ್ಕೆ ಕಾರಣವಾದರೂ ಏನು? ಆ ಜರ್ಮನ್ ಪತ್ರಕರ್ತನನ್ನು ನಾನು ಓಡಿಸಿದ್ದುದಕ್ಕೆ ಅವನಿಗೆ ತನ್ನ ಗಿರಾಕಿ ತಪ್ಪಿ ಹೋಯಿತಲ್ಲವೆಂಬ ಕಾರಣಕ್ಕಾಗಿರಬಹುದೆ ?

ಬ್ಯಾಂಕಿಗೆ ತಲುಪಿ, ನನ್ನ ಕ್ಯಾಬಿನ್ ಒಳಗೆ ಬಂದು ಕುರ್ಚಿಯಲ್ಲಿ 'ಉಸ್ಸಪ್ಪಾ'

ಎಂದು ಕುಳಿತು, ಕರೆಗಂಟೆ ಒತ್ತಿದೆ. ಜವಾನ ಒಳಬರಲಿಕ್ಕೆ ಐದು ನಿಮಿಷ ತೆಗೆದುಕೊಂಡ. ಒಂದು ಲೋಟ ತಣ್ಣಗಿನ ನೀರು ತರಲಿಕ್ಕೆ ಹೇಳಿದೆ. ಅವನು ತಂದ ನೀರನ್ನು ಕುಡಿದು, ಕೈಗಡಿಯಾರ ನೋಡಿದೆ. ಆಗಲೇ ಒಂದು ಗಂಟೆ ಹೊಡೆದಿತ್ತು.

'ಸಾಬ್ ! ಹೊಸಾ ನೋಟ್ಸ್ !?"

ಅಗ್ರವಾಲ್, ತನ್ನ ದಪ್ಪ ಹೊಟ್ಟೆ ಮುಂದೆ ಮಾಡಿ, ನನ್ನ ಮುಂದೆ ನಿಂತು ಕೇಳುತ್ತಿದ್ದ.

ಕುಮಾರ್‌ನನ್ನು ಕರೆದೆ. ಅವನು ಬಂದೊಡನೆ, ಹೇಳಿದೆ,

"ಇವರಿಗೆ ಒಂದು ಕಟ್ಟು, ಒಂದು ರೂಪಾಯಿ ಹೊಸ ನೋಟ್ಸ್ ಕೊಡ್ರೀ !"

ಕುಮಾರ್, ಅಗ್ರವಾಲ್‌ನ ಕಡೆ ಒಂದು ಸಲ ಕೆಂಗಣ್ಣು ಬಿಟ್ಟು, ನೋಡಿ, ಹೊರಗೆ ಹೋದ.

"ನನ್ನ ಮದುವೆಗೆ ಬರಬೇಕು ಸಾಬ್!"

ಮೇಜಿನ ಮೇಲೆ ಮದುವೆಯ ಆಹ್ವಾನ ಪತ್ರಿಕೆ ಇರಿಸಿದ. ಚಿತ್ರವಿಚಿತ್ರವಾದ ಅಲಂಕಾರ ಹೊಂದಿದ ಪತ್ರಿಕೆ ಅದು. ಬಹಳ ದುಬಾರಿ ಕಾಗದ ಉಪಯೋಗಿಸಿದ್ದಿರಬೇಕು ಎಂದು ತೋರಿತು. ಈ ಆಹ್ವಾನ ಪತ್ರಿಕೆಯ ಬೆಲೆಯಿಂದ ಒಂದು ಬೆಲೆಬಾಳುವ ಒಳ್ಳೇ ಪುಸ್ತಕವನ್ನು ನೀಡಬಹುದಾಗಿತ್ತಲ್ಲಾ ಈತ ಎಂದು ಮನಸ್ಸಿನಲ್ಲಿ ಎಣಿಕೆ ಹಾಕಿದೆ. ಪುಸ್ತಕ ಓದಲಿ ಬಿಡಲಿ, ಪುಸ್ತಕದ ಚಲಾವಣೆ ಆಗುತ್ತಿತ್ತಲ್ಲಾ !

ಒಂದು ವಾರದ ಬಳಿಕ, ಕುಮಾರ್ ಜೊತೆಗೂಡಿ, ಅಗ್ರವಾಲ್‌ನ ಮದುವೆಗೆ, ಸಾಯಂಕಾಲ ಹೊರಟೆ. ಅಗ್ರವಾಲ್‌ನ ಮನೆ ಮುಂದೆ ರಸ್ತೆಯ ಉದ್ದಕ್ಕೂ ಶಾಮಿಯಾನಾ ಹಾಕಿ, ವಿವಿಧ ಬಣ್ಣದ ವಿದ್ಯುತ್ ಬಲ್ಪ್‌ಗಳಿಂದ ಸಿಂಗರಿಸಿ, ಇಡಿ ರಸ್ತೆಯನ್ನಾಕ್ರಮಿಸಿ, ಅದನ್ನು ಎಲ್ಲಾ ಕಡೆಯಿಂದಲ್ಲೂ ಬಂದ್ ಮಾಡಿಬಿಟ್ಟಿದ್ದರು. ವಾಹನಗಳ ಸಂಚಾರ ಬಂದಾಗಿತ್ತು. ನಾವು ಬಾರಾತ್ ಬರುವುದನ್ನೇ ಕಾಯುತ್ತಾ ಅಲ್ಲೇ ಇರಿಸಿದ್ದ ಕುರ್ಚಿಯಲ್ಲಿ ಕುಳಿತೆವು. ರಾತ್ರಿ ಎಂಟು ಗಂಟೆಯಾದರೂ ಕುದುರೆ ಏರಿ, ಮದುಮಗ ಇನ್ನೂ ಬಂದಿರಲಿಲ್ಲ. ಉತ್ತರ ಭಾರತದಲ್ಲಿ, ರಾತ್ರಿ ಸಮಯದಲ್ಲೇ ಲಗ್ನ ಕಾರ್ಯಗಳು ನಡೆಯವುದು ಸಾಮಾನ್ಯ. ಮದುವೆ ವಿಧಿಗಳು ಮಾತ್ರ ಆರತಾಕ್ಷತೆ ಅಥವಾ ರಿಸೆಪ್ಷನ್ ಮುಗಿದ ನಂತರ ವಧುವಿನ ಗೃಹದಲ್ಲಿ ಜಗುಗಿಸುವ ಕ್ರಮ ಇಟ್ಟುಕೊಂಡಿರುತ್ತಾರೆ.

"ಎಂಟು ಗಂಟೆ ಆಯಿತು. ಇವ ಯಾವಾಗ ಕುದುರೆ ಹತ್ತಿ ಬರುತ್ತಾನೋ ಗೊತ್ತಿಲ್ಲ. ನನಗಂತೂ ಹೊಟ್ಟೆ ಹಸಿದುಹೋಗಿದೆ. ಏನಾದರೂ ತಿಂದು ಬರೋಣವೆ?" ಕುಮಾರ್ ಕೇಳಿದ.

"ತಾಳ್ರೀ ! ಇನ್ನೊಂದೈದು - ಹತ್ತು ನಿಮಿಷ ಕಾಯೋಣ. ಆಮೇಲೆ ಏನಾದರೂ ಏರ್ಪಾಡು ಮಾಡೋಣ ನಿಮ್ಮ ಹಸಿವಿಗೆ."

ಎಂದು ಹೇಳಿ ಅವನನ್ನು ಸಮಾಧಾನ ಮಾಡಿದೆ.

"ಹೌದ್ರೀ ಕುಮಾರ್ ! ಈ ಮದುವೆ ಗಂಡು, ಹೆಣ್ಣು ಕುದುರೆ ಏರಿ ಯಾಕೆ ಬರಬೇಕು, ಲಗ್ನ ಮಾಡಿಕೊಳ್ಳೋದಕ್ಕೆ"?

" ಹಿಂದಿನ ಕಾಲದಲ್ಲಿ ಕುದುರೆಗಳಿಲ್ಲದೆ ಬೇರೆ ಯಾವ ಸಾರಿಗೆಗಳಿದ್ದವು, ಜನರನ್ನು ಒಯ್ಯುವುದಕ್ಕೆ ?"

"ಕುದುರೆ ಗಾಡಿಯಲ್ಲಿ ಕುಳಿತು ಬರಬಹುದಲ್ಲ !"

"ಬಹಳ ಹಿಂದೆ, ಕುದುರೆ ಗಾಡಿ ಇರಲಿಲ್ಲ. ಅಂತ ಕಾಣುತ್ತದೆ ! ಅದಕ್ಕೆ ಇವರು ಕುದುರೆ ಏರಿ ಬರುತ್ತಿರಬೇಕು."

"ಅದು ಸರಿ ! ಬಹಳ ಪುರಾತನ ಕಾಲದ ಪದ್ಧತಿ ಇರಬಹುದು. ಈಗ ಕಾಲಕ್ಕೆ ಸರಿಯಾಗಿ, ಕುದುರೆ ಬಿಟ್ಟು ಕಾರ್‌ನಲ್ಲೋ ಬಸ್ಸನಲ್ಲೋ ಬರಬಹುದಲ್ಲ !" ಎಂದೆ.

" ಬರಬಹುದು ! ಆದರೆ ಹಳೇ ಕಾಲದ ರೀತಿ ಪದ್ಧತಿ ಯಾಕೆ ಬಿಡಬೇಕು?"

ಕುಮಾರ್ ಸಮರ್ಥಿಸಿದ, ಕುದುರೆ ಏರಿ ಬರುವುದನ್ನು.

"ಹೋಗಲಿ ಬಿಡಿ ! ಮದುವೆಗೆ ಏಕೆ ನೋಟಿನ ಸರ ಹಾಕಿಕೊಳ್ಳಬೇಕು ?"

"ಹಳೇ ಕಾಲದಲ್ಲಿ ಚಿನ್ನದ ಕಾಸಿನ ಸರ ಹಾಕಿಕೊಳ್ಳುತ್ತಿದ್ದರು. ಈಗ ಚಿನ್ನದ-ಬೆಳ್ಳಿಯ ಕಾಸುಗಳು ಕಾಣೆಯಾಗಿವೆಯಲ್ಲಾ! ಅವುಗಳ ಬದಲು ಕಾಗದದ ನೋಟುಗಳು !

ಹುರಿದ ಗೋಡಂಬಿ, ಕಡಲೆಕಾಯಿ ಬೀಜದ ತಟ್ಟೆ ಹಿಡಿದು ಒಬ್ಬ ನಮ್ಮ ಮುಂದೆ ನಿಂತ. ಕುಮಾರ್ ಒಂದು ಮುಷ್ಟಿ ಗೋಡಂಬಿಯನ್ನು ಬಾಚಿಕೊಂಡ! ಇನ್ನೊಂದು ಮುಷ್ಟಿಯಲ್ಲಿ, ಕಡಲೆಕಾಯಿ ಬೀಜಗಳನ್ನು ಬಾಚಿ ನನಗೆ ತೆಗೆದುಕೊಳ್ಳಿ ಎಂದು ಸನ್ನೆ ಮಾಡಿದ. ನಾನು ಎರಡು ಗೋಡಂಬಿ ಚೂರನ್ನು ಬಾಯಿಗೆ ಹಾಕಿಕೊಂಡೆ.

"ನಿನ್ನ ಹೊಟ್ಟೆ ಹಸಿವು ಸ್ವಲ್ಪ ಕಡಿಮೆಯಾಗಬಹುದು, ಅಲ್ಲವಾ?" ಎಂದು ಕೇಳಿದರೆ,

"ಗೋಡಂಬಿ ಬಹಳ ರುಚಿ, ಅಲ್ಲವಾ ?" ಒಂದೊಂದೇ ಗೋಡಂಬಿ ಚೂರನ್ನು ಬಾಯಿಗೆ ಹಾಕಿಕೊಂಡು ನುಡಿದ, ಕುಮಾರ್.

"ಯಾವುದು ಜಾಸ್ತಿ ರುಚಿಯೋ ಅದು ದೇಹಕ್ಕೆ ಕೆಟ್ಟದ್ದು ಅಲ್ಲವಾ ?"

"ಸಾರ್ ! ಹೊಟ್ಟೆ ಹಸಿದಿರುವಾಗ, ಗೋಡಂಬಿ ರುಚಿಯಾಗಿರುವಾಗ, ಮನಸ್ಸು ಖುಷಿಯಾಗಿರುವಾಗ, ಯಾಕೆ ದೇಹದ ಆರೋಗ್ಯದ ಬಗ್ಗೆ ಚಿಂತೆ?" ಐವತ್ತು

ವರ್ಷ ದಾಟಿದ ನಂತರ, ಓಟದ ಆಟ ಚಾಂಪಿಯನ್ ಆಗಲು ಪ್ರಯತ್ನಿಸಬಾರದಂತೆ. ಪ್ರಯತ್ನಿಸಿದರೆ, ಸ್ಮಶಾನಕ್ಕೆ ಸೇರುತ್ತೇವಂತೆ. ಇವ ಗೋಡಂಬಿ ತಿಂದು ರಕ್ತ ಹೊಟ್ಟೆ ಬೇಧಿಯಾಗಿ, ಎಲ್ಲಿ ನಿಗಂಭೋದ್‌ಘಾಟ್ ಸೇರುತ್ತಾನೋ ಎಂಬ ಭಯ ಉಂಟಾಯಿತು.

ಆಹ್ವಾನಿತರು, ಅಧಿಕ ಸಂಖ್ಯೆಯಲ್ಲಿ ಈಗಾಗಲೇ ಘೇರಾಯಿಸಿದ್ದರು; ಕುರ್ಚಿಗಳೆಲ್ಲಾ ತುಂಬಿ, ನಿಲ್ಲುವುದಕ್ಕೆ ಜಾಗ ಸಾಲದಾರದಷ್ಟಾಯಿತು. ವರಮಹಾಶಯನ ಬಾರಾತ್‌ದ ಸದ್ದು ಮಾತ್ರ ಕೇಳಿಸಲಿಲ್ಲ. ಎಲ್ಲಿ ಹೋದ ಈ ಧಡೂತಿ ಅಗ್ರವಾಲ್?

ಅವನು ಮದುವೆ ಮಂಟಪಕ್ಕೆ ಬರುವ ಸೂಚನೆಯೇ ಕಾಣಲಿಲ್ಲ.

ಹೊಟ್ಟೆ ಹಸಿದ ಕುಮಾರ್ ಗೋಡಂಬಿ - ಕಡಲೆ ಬೀಜ ನುಂಗುತ್ತಲೇ ಇದ್ದ. ಧಡೂತಿ ಹೊಟ್ಟೆ ಹೊತ್ತ ಅಗ್ರವಾಲ್ ಪತ್ತೆಯೇ ಇರಲಿಲ್ಲ !

"ಹಲ್ಲೋ !"

ಎದುರಿಗೆ ಒಬ್ಬ ಸರದಾರ್‌ಜೀ ನಿಂತು ನನಗೆ 'ಹಲೋ' ಅಂತ ಹೇಳುತ್ತಿದ್ದ. ಯಾರಿವನು ? ತಲೆ ತುರಿಸಿಕೊಂಡೆ. ಮತ್ತೆ ಆತ 'ಹಲ್ಲೋ !" ಅಂದ.

"ಗುರುತು ಸಿಗಲಿಲ್ಲವೆ ?" ಕೇಳಿದ ಅವ.

ಸರದಾರ್‌ಜೀಗಳೆಲ್ಲಾ ಒಂದೇ ತರಹ ಕಾಣುವುದರಿಂದ ಹೇಗಾದರೂ ಅವನ ಗುರುತು ನನಗೆ ಸಿಗಬೇಕು? ತಲೆಗೆ ನೀಲೀ ಪೇಟ ಸಿಕ್ಕಿಸಿಕೊಂಡಿದ್ದ. ಭರ್ಜರಿ ಸೂಟ್ ಹಾಕಿ ಮದುವೆ ಗಂಡಿನ ಹಾಗೆ ನಿಂತಿದ್ದ ಸರದಾರ್‌ಜೀ! ಇವನನ್ನು ಮೊದಲು ನೋಡಿದ ನೆನಪೇ ಇರಲಿಲ್ಲ. ನೆನಪಿನ ಬುಟ್ಟಿಯನ್ನೂ ತಲೆಕೆಳಗೆ ಮಾಡಿ ಹುಡುಕಾಡಿದೆ. ನೆನಪೇ ಆಗಲೊಲ್ಲದು ! ಯಾರ್ ಇವ ?

"ಸೀಸ್‌ಗಂಜ್ ಗುರುದ್ವಾರದಲ್ಲಿ ನಮ್ಮ ಭೇಟಿಯಾಗಿತ್ತಲ್ಲ! ಮರೆತುಬಿಟ್ಟಿರೇನು ?"

ಥಕ್ಕನೇ ನೆನೆಪಿಗೆ ಬಂತು !

ಚಾಕ್‌ಲೇಟ್ ಕಂಪನಿಯಲ್ಲಿ ಅಕೌಂಟೆಂಟ್ ಆಗಿ ಕೆಲಸಮಾಡುತ್ತಿರುವ ಸರದಾರಜೀ! ಸೈನಿಕನಾಗುವ ಆಸೆ ಇಟ್ಟುಕೊಂಡು, ವಿಫಲನಾದ ಸರದಾರ್‌ಜೀ !

"ಜ್ಞಾಪಕಕ್ಕೆ ಬಂತು ಬಿಡಿ ಈಗ ! ನೀವು ಚಾಕ್‌ಲೇಟ್ ಕಂಪನಿಯಲ್ಲಿ ಕೆಲಸ ಮಾಡುತ್ತೀರಾ ಅಲ್ಲವೆ ?"

"ಹೌದು ! ಚಾಕ್‌ಲೇಟ್ ಕಂಪನೀಲಿ ಇದ್ದೇನೆ ! ನೀವು ಏನು ಇಲ್ಲಿ ?"

"ಅಗ್ರವಾಲ್ ಸಾಬ್ ನಮ್ಮ ಬ್ಯಾಂಕಿನ ಕಸ್ಟಮರ್. ಆಹ್ವಾನ ನೀಡಿದ್ದರು ಮದುವೆಗೆ."

"ಆದರೆ ಅವರೇ ಇನ್ನೂ ಬಂದಿಲ್ಲ, ಅಲ್ಲವೆ ?"

" ನಿಮಗೆ ಹೇಗೆ ಗೊತ್ತು ಈ ಅಗ್ರವಾಲ್ ?"

"ನಿಮ್ಮ ಹಾಗೇ ಆತ ನಮ್ಮ ಕಂಪನಿಯ ಕಸ್ಟಮರ್. ಅವರಿಗೆ ನಾವು ಚಾಕೊಲೆಟ್ ಸರಬರಾಜು ಮಾಡುತ್ತೇವೆ. ಅವರು ದಿಲ್ಲೀ ಶಹರಿಗೆ ಏಕೈಕ ವಿತರಣಗಾರರು"

"ನಿಮ್ಮ ಚಾಕೊಲೇಟ್ ತಿಂದು ಅವರು ಅಷ್ಟು ದಪ್ಪ ಆಗಿರಬೇಕು ?"

ಸರದಾರ್‌ಜೀ ನಕ್ಕು "ನೀವೂ ದಪ್ಪಗಿದ್ದೀರಲ್ಲಾ! ಆದರೆ ನಮ್ಮ ಚಾಕೊಲೇಟ್ ನೀವು ತಿಂದ ಹಾಗಿಲ್ಲ!"ಎಂದ.

"ನಿಮ್ಮ ಚಾಕೊಲೆಟ್ ಹೆಸರೇ ಕೇಳಿಲ್ಲ ನಾನು. ಇನ್ನು ತಿನ್ನುವುದು ಹೇಗೆ?"

"ದಿಲ್ಲಿಯಲ್ಲಿ ನಮ್ಮ ಚಾಕೊಲೆಟ್ ಪ್ರಸಿದ್ಧಿಯಾಗಿಲ್ಲ. ಗ್ರಾಮೀಣ ಪ್ರದೇಶ ದಲ್ಲಿ ಪ್ರಸಿದ್ಧಿಯಾಗಿದೆ. ನಮಗೆ ಅಷ್ಟು ಸಾಕು. ಹಾಕಿದ ಬಂಡವಾಳಕ್ಕೆ ಸಾಕಷ್ಟು ಲಾಭ ಬರುತ್ತಿದೆ. ಲಾಭ ಇಲ್ಲದೆ ಹೋಗಿದ್ದರೆ ಪಂಚತಾರಾ ಹೋಟೆಲ್‌ನ ಎರಡು ರೂಮಿನಲ್ಲಿ ನಮ್ಮ ಆಫೀಸ್ ನಡೆಸುತ್ತಿದ್ದನೆ ನಮ್ಮ ಬಾಸ್ !"

ಪಂಚತಾರಾ ಹೋಟ್‌ಲ್‌ನಲ್ಲಿ ಆಫೀಸ್! ನಂಬಲಾಸಾಧ್ಯವಾಗಿತ್ತು ?

"ಹಾಗಾದರೆ ಫ್ಯಾಕ್ಟರೀ ಎಲ್ಲಿದೆ ?"

"ಕುತಬ್ ಮಿನಾರ್ ಹತ್ತಿರ ಇರುವ ಒಂದು ಹಳ್ಳಿಯಲ್ಲಿ !"

ಇದುವರೆಗೆ ಎಲ್ಲೋ ಹೋಗಿದ್ದ ಕುಮಾರ್ ಬಳಿಗೆ ಬಂದು ಸರದಾಜೀಯ ಮುಖ ನೋಡಿ ತನ್ನ ಮುಖವನ್ನು ಗಂಟಿಕ್ಕಿ ನನ್ನ ಮುಖವನ್ನು ನೋಡಿದ ಪ್ರಶ್ನಾ ರ್ಥಕವಾಗಿ. ಸರದಾರ್‌ಜೀಯನ್ನು ಪರಿಚಯಿಸಿದೆ ಅವನಿಗೆ.

"ಎಲ್ಲಿ ಹೋಗಿದ್ದಿರಿ ಇಷ್ಟು ಹೊತ್ತು ?"

"ಗೋಡಂಬಿ ತಂದು ಕೊಡುತ್ತಿದ್ದ ಮನುಷ್ಯ ಪತ್ತೆ ಇರಲಿಲ್ಲ. ಅವನನ್ನು ಹುಡುಕಿ ಹೋದೆ"

"ಮುಷ್ಠಿ ಗೋಡಂಬಿ ಬಾಚಿದರೆ, ಅವನು ಹೆದರಿ ನಮ್ಮ ಕಡೆ ಬರಲಿಲ್ಲ ಅಂತ ಕಾಣುತ್ತೆ. ನೀವು ಮತ್ತೆ ಅವನನ್ನು ಹುಡುಕಿ ಕಂಡಾಗ, ಬೈಯ್ಯಲಿಲ್ಲವಾ ?

ಕುಚೋದ್ಯ ಮಾಡಿದೆ ಕುಮಾರ್‌ನನ್ನು.

"ಈ ಅಗ್ರವಾಲ್‌ನಿಗೆ ಒಂದು ಮುಷ್ಠಿ ಗೋಡಂಬಿಯಿಂದ ಏನು ನಷ್ಟ?"

ಅವರು ಮಾತು ಮುಗಿಸುವಷ್ಟರಲ್ಲೇ, ನೆರೆದ ಜನರು ಹೆಬ್ಬಾಗಿಲ ಕಡೆ ಓಡ ತೊಡಗಿದ್ದು ಕಂಡುಬಂತು.

'ಏನಾಯಿತು ಎಂದು ವಿಚಾರಿಸಲು ನಾವು ಕೂಡ ಹೊರಬಾಗಿಲ ಕಡೆ ಹೆಜ್ಜೆ

ಹಾಕಿದವು. ಕಷ್ಟಪಟ್ಟು, ಜನರ ಗುಂಪಿನೊಳಗೆ ನುಸುಳಿ, ಕೈಕಾಲಿಗೆ ಸಿಕ್ಕ, ಕುರ್ಚಿ ಮತ್ತಿತರ ಅಡಚಣೆಗಳನ್ನು ದಾಟಿ, ಹೊರಬಂದಾಗ, ಕಂಡಿದ್ದು ಕಾರಿನಿಂದ ನಿಧಾನ ವಾಗಿ ಇಳಿಯುತ್ತಿದ್ದ ವರ ಮಹಾಶಯ ! ಅವನ ಎರಡು ಕಂಕುಳವನ್ನು, ಇಬ್ಬಿಬ್ಬರು ಹಿಡಿದೆತ್ತಿ, ಬಹಳ ಕಷ್ಟ ಪಟ್ಟು ನಡೆಸಿಕೊಂಡು ಬರುತ್ತಿದ್ದರು.

"ಜಾಗಬಿಡಿ ! ಜಾಗಬಿಡಿ !" ಕಿರಿಚಿದರು ಯಾರೋ. ಅವನನ್ನು ಸುತ್ತವರೆದ ಜನರು ಸ್ವಲ್ಪ ಸ್ವಲ್ಪವೇ ಜಾಗ ಬಿಟ್ಟರು, ವರನಿಗೆ ನಡೆದು ಬರಲು. ಹೇಗೋ ಸಾವರಿಸಿಕೊಂಡು ವರ ಅಗ್ರವಾಲ್ ಹೆಜ್ಜೆ ಮೇಲೆ ಹೆಜ್ಜೆ ಇಟ್ಟು ಬರುತ್ತಿದ್ದ.

"ಕುದುರೆಯಿಂದ ಬಿದ್ದು ಬಿಟ್ಟನಂತೆ !"

ನನ್ನ ಪಕ್ಕದಲ್ಲಿ ನಿಂತಿದ್ದ ಯುವಕ ಅವನ ಸ್ನೇಹಿತನಿಗೆ ಹೇಳುತ್ತಿದ್ದ.

"ಇವನ ಭಾರ ತಾಳಲಾರದೆ, ಕುದುರೆ ಕುಸಿದುಬಿದ್ದುಬಿಟ್ಟಿತಂತೆ !"

"ಇಲ್ಲ!ಇಲ್ಲ! ಬಾರಾತ್ ಜೊತೆ ಬಂದ ಗಂಡಿನವರು ಮತ್ತು ಅವರ ಸಂಗಡಿಗರ ಹಾಡು, ಕುಣಿತಗಳಿಗೆ ಮನಸೋತು ಕುದುರೆಯೂ ಕುಣಿಯ ತೊಡಗಿತಂತೆ! ಕುದುರೆಗೆ ಇದೆಂತಹ ಭಾರ!"

"ಬಾರಾತ್‌ನವರು ಕುಡಿದಿದ್ದರಂತೆ. ಕುಡಿದು ಕುಣಿಯುತ್ತಿದ್ದರಂತೆ. ಕುದುರೆಗೂ ಕುಡಿಸಿರಬೇಕು !" ಜೋರಾಗಿ ನಕ್ಕ ಆ ಯುವಕ!

"ಸಾರ್ ? ನೀವೆಲ್ಲಿಗೆ ಹೋಗಿದ್ದಿರಿ ? ನಿಮ್ಮನ್ನೇ ಹುಡುಕುತ್ತಾ ಇದ್ದೆ !"

ಕುಮಾರ್ ನನ್ನ ಬಳಿ ಬಂದು ಹೇಳಿದ.

"ಹೊಟ್ಟೆ ಅಗ್ರವಾಲ್ ಕುದುರೆಯಿಂದ ಬಿದ್ದು ಬಿಟ್ಟನುತೆ ! ಹೌದಾ?" ಕೇಳಿದೆ ನಾನು.

"ಹೌದು ! ಅಗ್ರವಾಲ್‌ನಿಗೆ ಏನೂ ಪೆಟ್ಟಾಗಲಿಲ್ಲವಂತೆ! ಆದರೆ ಕುದುರೆ ಕಾಲು ಮುರಿದು ಹೋಯಿತಂತೆ ! ಕುದುರೆ ಮಾಲೀಕ ಕೋಪಗೊಂಡು 'ನಿನ್ನ ಕಾಲು ಮುರಿತೀನಿ' ಅಂತ ಅಗ್ರವಾಲ್‌ನ ಮೇಲೆ ಏರಿ ಹೋದನಂತೆ ! ಕೊನೆಗೆ ಅವನಿಗೆ ಸಮಾಧಾನ ಪಡಿಸಿ, ಹೊಸ ಕುದುರೆ ಕೊಡಿಸ್ತೀವೆ ಎಂದು ಹೇಳಿದ ಮೇಲೆ, ಅವನನ್ನು ಬಿಟ್ಟನಂತೆ !"

"ಈಗ ಮದುವೆ ಗತಿ?" ನನಗೆ ಸಂಶಯವಾಗಿತ್ತು.

"ಮದುವೆ ನಿಂತ ಹಾಗೆ ! ಕುದುರೆಯಿಂದ ಬಿದ್ದರೆ ಶಕುನ ಸರಿಯಿಲ್ಲ ಎಂದು ಹೇಳುತ್ತಾರೆ. ಅದರಲ್ಲೂ ಮದುವೆಯ ಮುನ್ನ ಬಿದ್ದರೆ ಬಹಳ ಕೆಟ್ಟದು. ಬನ್ನಿ ಹೋಗೋಣ!" ಮಾತನಾಡಿದವ, ನಾಪತ್ತೆ ಆಗಿದ್ದ ಸರದಾರ್‌ಜೀ ನನ್ನ ಭುಜ ಹಿಡಿದು, ಹೊರಕ್ಕೆ ಹೆಜ್ಜೆಹಾಕತೊಡಗಿದ. ಅವನನ್ನು ನಾನು ಹಿಂಬಾಲಿಸಿದೆ.

ಹೊಟ್ಟೆ ಹಸಿಯತೊಡಗಿತ್ತು. ಹೊಟ್ಟೆ ಅಗ್ರವಾಲ್‌ನ ಲಗ್ನ ಈ ರೀತಿ ಕ
ಗೊಂಡಿದ್ದು ಮನಸ್ಸಿಗೆ ಬೇಸರ ತಂದಿತ್ತು. ಇಷ್ಟು ದಪ್ಪ, ಧಡಿಯ ಅಗ್ರವಾಲ್‌
ಕುದುರೆಯ ಮೇಲೆ ಕುಳ್ಳಿರಿಸಿ ಯಾಕಾದರು, ಅವನಿಗೆ ಲಗ್ನ ಮಾಡಬೇಕು ? ಇದು
ಎಷ್ಟು ಮಂದಿಗೆ ಹಿಂಸೆ ? ಲಗ್ನ ನೋಡಿ ಆನಂದಿಸಿ, ಚೆನ್ನಾಗಿ ತಿಂದು ಮಜಾ ಮಾ
ಬಂದ ನೆಂಟರು ಇಷ್ಟರಿಗೆ ಎಂಥ ನಿರಾಶೆ ! ವಧೂವಿಗೆ ಮತ್ತು ಅವಳ ನೆಂ
ಎಂತಹ ಹಿಂಸೆ ! ತನ್ನನ್ನು ವರಿಸಲು ಬಂದ ವರ ಕುದುರೆಯಿಂದ ಬಿದ್ದ ಎ
ತಿಳಿದು ಅವಳು ಎಷ್ಟು ನೊಂದು ಹಿಂಸೆ ಪಟ್ಟಿರಬಹುದು !

"ಏನು ಆಲೋಚಿಸಿತ್ತೀದ್ದೀರಾ ?" ಸರದಾರಜೀ ಕೇಳಿದ.

ನಾನು ನನ್ನ ಅನಿಸಿಕೆಗಳನ್ನು ಹೇಳಿದೆ.

ಸರದಾರಜೀ ನಗತೊಡಗಿದ. ನನಗೆ ಅವನ ನಗು ಅರ್ಥವಾಗಲಿಲ್ಲ.
ಎಂದು ಅವನ ಮುಖವನ್ನ ದುರುಗುಟ್ಟಿನೋಡಿದೆ.

"ನೀವು ಅಗ್ರವಾಲ್ ಮತ್ತು ಆ ಹುಡುಗಿಯ ಬಗ್ಗೆ ಚಿಂತಿಸುತ್ತಾ ಇದ್ದೀರ
ಅವರಿಗೆ ಹಿಂಸೆಯಾಯಿತಲ್ಲಾ ಎಂದು ! ನೀವು ಕುದುರೆ ಬಗ್ಗೆ ಚಿಂತಿಸ
ಇಲ್ಲವಲ್ಲಾ?"

"ಆ ಬಡಪಾಯಿ ಕುದುರೆ, ಈ ಧಡಿಯ ಅಗ್ರವಾಲ್‌ನನ್ನು ತನ್ನ ಬೆನ್ನಮೇ
ಕುಳ್ಳಿರಿಸಿಕೊಂಡು, ಹೇಗೆ ನಡೆಯಬೇಕು ? ಅದಕ್ಕೆ ಎಷ್ಟು ಹಿಂಸೆಯಾಗಿರಬೇಡ
ಅದರ ಬಗ್ಗೆ ಯಾರಾದರೂ ಯೋಚಿಸಿದ್ದೀರಾ ? ಅಗ್ರವಾಲನ ಭಾರ ತಡೆಯಲಾರ
ಕೆಳಗೆ ಬಿದ್ದು ಕಾಲು ಮುರಿದುಕೊಂಡಿತಲ್ಲಾ ? ಆ ಕುದುರೆ - ಅದಕ್ಕೆ ಪರಿಹಾ
ವೇನಾದರೂ ಇದೆಯಾ ?"

"ಅದರ ಮಾಲೀಕನಿಗೆ ಹಣದ ಪರಿಹಾರ ಸಿಕ್ಕಿತಲ್ಲಾ ! ಇನ್ನೇನು ಬೇಕು ?
ಕುಮಾರ್ ನುಡಿದ.

"ಹೌದು ಮಾಲೀಕನಿಗೆ ಪರಿಹಾರ ಸಿಕ್ಕಿತು. ಹಿಂಸೆಯಿಂದ ನರಳಿದ ಆ ಕುದು
ಪರಿಹಾರ, ಗೊತ್ತೇನು ನಿಮಗೆ ?"

" ಏನು ?" ಕೇಳಿದೆ ನಾನು.

"ಅದಕ್ಕೆ ಗುಂಡೇಟು ! ಗುಂಡಿನಿಂದ ಹೊಡೆದು ಅದನ್ನು ಹಿಂಸೆಯಿಂದ ಪಾ
ಮಾಡುತ್ತಾರೆ !"

# 4

"ಇಲ್ಲೇ ನೋಡಿ, ಮೂರನೇ ಪಾನೀಪತ್ ಯುದ್ಧ ಜರುಗಿದ ಸ್ಥಳ. ಮರಾಠಾ ಸರದಾರ್ ಸದಾಶಿವರಾವ್ ಭಾವು ಇಲ್ಲೇ ಹತನಾದದ್ದು. ಇದೇ ಮಾವಿನ ಮರದ ಬುಡದಲ್ಲೇ ಅವನ ಶರೀರವನ್ನು ಹೂತರಂತೆ !"

ಕಪೂರ್ ವರ್ಣಿಸುತ್ತಿದ್ದ. ನಾನು ಮತ್ತು ಕುಮಾರ್ ಅವನ ಮಾತುಗಳನ್ನು ಆಲೈಸುತ್ತಾ ಅವನು ತೋರಿದ ಸ್ಥಳವನ್ನು ವೀಕ್ಷಿಸತೊಡಗಿದ್ದೆವು.

ಹೌದು! ಭಾರತದ ಚರಿತ್ರೆಯನ್ನೇ ಬದಲಿಸಿದ ಮೂರು ನಿರ್ಣಾಯಕ ಯುದ್ಧಗಳು ಜರುಗಿದ ಜಾಗ ಇದು. ಇಲ್ಲಿ ಮೂರು ಭೀಕರ ಯುದ್ಧಗಳು ಜರುಗಿ ಸಾವಿರಾರು ಜನಗಳ ಹತ್ಯೆ ನಡೆದು ರಕ್ತದ ಕೋಡಿ ಹರಿಯಿತೆಂಬ ಸಂಗತಿ ಚರಿತ್ರೆಯ ಪುಸ್ತಕಗಳಲ್ಲಿ ಓದಿದ ನನೆಪು ಇನ್ನು ಮಾಸಿರಲಿಲ್ಲ. ಮೊದಲನೆಯ ಪಾನೀಪಾತ್ ಯುದ್ಧದಲ್ಲಿ ದಿಲ್ಲೀ ಸುಲ್ತಾನ್‌ನಾಗಿ ಮೆರೆದ ಆಫ್ಘನ್ ದೊರೆ ಇಬ್ರಾಹಿಮ್ ಲೋಡಿಯ ಎದುರು, ಮೊಘಲ್ ಬಾಬರ್ ಯುದ್ಧ ಆಡಿ, ಲೋಡಿಯ ಹತ್ಯೆ ಆಗಿ, ಬಾಬರ್ ಜಯ ಗಳಿಸಿ, ಮುಂದೆ ಅವನ ವಂಶ ಮೂನ್ನೂರು ವರ್ಷ ದಿಲ್ಲೀ ಚಕ್ರಾಧಿಪತ್ಯವನ್ನಾಳಿತ್ತು.

ಬಾಬರ್‌ನ ಮೊಮ್ಮಗ ಅಕ್ಬರ್, ಹಿಂದೂ ಸರದಾರ ಹೇಮೂ ಭಾರ್ಗವನ ಎದುರು ಹೋರಾಡಿ, ಇದೇ ಪಾನೀಪತ್‌ನ ಮೈದಾನದಲ್ಲಿ, ಅವನನ್ನು ಸೋಲಿಸಿ ಅವನ ಹತ್ಯೆ ಮಾಡಿ, ದಿಲ್ಲೀ ಸಿಂಹಾಸನವನ್ನು ಏರಿದ್ದನು.

ದಿಲ್ಲೀ ಮೇಲೆ ದಂಡೆತ್ತಿ ಬಂದ ಆಫ್ಘನ್ ಸುಲ್ತಾನ್ ಅಹ್ಮದ್ ಶಾ ಅಬ್ದಾಲಿ, ಮರಾಠ ಸರದಾರ್ ಸದಾಶಿವರಾವ್ ಭಾವುನನ್ನು ಈ ಪಾನೀಪಾತ್‌ದಲ್ಲಿ ಸೋಲಿಸಿ, ಅವನ ಸಾವನ್ನುಂಟುಮಾಡಿ, ದಿಲ್ಲೀ ಸಾಮ್ರಾಜ್ಯವನ್ನಾಳದಿದ್ದರೂ, ಮರಾಠರು ದಿಲ್ಲೀ ಸಾಮ್ರಾಟರಾಗುವುದನ್ನು ತಪ್ಪಿಸಿದ್ದರು.

"ಇಷ್ಟೆಲ್ಲಾ ಯುದ್ಧಗಳು ಜರುಗಿ, ರಕ್ತಪಾತವಾಗಿ, ಅಸಂಖ್ಯ ಜನರ ಹತ್ಯ ವಾಗಿ ಹಿಂಸಾಚಾರ ನಡೆದರೂ, ಸಂಪೂರ್ಣವಾಗಿ ಭಾರತವನ್ನಾಳಲು ಒಂದೇ ಒಂದು ಸಾಮ್ರಾಟನಿಗೂ ಆಗಲಿಲ್ಲ ಅಲ್ಲವೆ ?" ಕುಮಾರ್ ಕೇಳಿದ.

"ಇನ್ನೊಬ್ಬರ ಮೇಲೆ ತನ್ನ ಪ್ರಭುತ್ವ ಹೇರಿ ಅವನನ್ನು ಆಳುವುದು ಮನುಷ್ಯನ ಸ್ವಾಭಾವಿಕ ಗುಣ. ತನ್ನ ಮಾತು, ನಡತೆ, ಆಸೆ, ಆಕಾಂಕ್ಷೆ ಇವುಗಳೆಲ್ಲಕ್ಕೂ ಮತ್ತೊಬ್ಬ ರಿಂದ ಮನ್ನಣೆ ದೊರೆತು, ಅವರು ತನ್ನಂತೆ ನಡೆಯಬೇಕು, ಅವರ ಮೇಲೆ ತನ್ನ ಅಧಿಕಾರ ಚಲಾಯಿಸಬೇಕು ಎನ್ನುವುದೇ ಮನುಷ್ಯನ ಗುರಿ. ಅದನ್ನು ಈಡೇರಿಸಲಿಕ್ಕೆ

ಅವನು ನಾನಾ ಬಗೆಯ ವಿಧಾನವನ್ನು ಅನುಸರಿಸುತ್ತಾನೆ. ಅಂತಹ ವಿಧಾನಗಳಲ್ಲಿ, ತನ್ನ ತೋಳ್ಬಲವು ಒಂದು ಉತ್ತಮವಾದ ವಿಧಾನವಾಗಿತ್ತು ಅವನಿಗೆ......"

"ಕಪೂರ್! ಬಲದಿಂದಲೇ ಎಲ್ಲವೂ ಆಗಿದ್ದರೆ, ಮನುಷ್ಯ, ಮನುಷ್ಯ ನಾಗುತ್ತಿರಲಿಲ್ಲ. ಪ್ರಾಣಿಯಾಗುತ್ತಿದ್ದ. ಮನುಷ್ಯತ್ವಕ್ಕೆ ಬೆಲೆಯೇ ಇರುತ್ತಿರಲಿಲ್ಲ!"

ಕುಮಾರ್‌ನ ಧ್ವನಿ ಏರಿತ್ತು. "ಬಾಬರ್ ತನ್ನ ತೋಳ್ಬಲ, ಮಧ್ಯಪ್ರಾಚ್ಯದ ಯುದ್ಧ ಕುಶಲತೆ ಮತ್ತು ಯೂರೋಪಿನ ಮದ್ದು, ಗುಂಡು, ತೋಪಿನ ನೆರವಿನಿಂದ ಇಬ್ರಾಹಿಮ್ ಲೋದಿಯನ್ನು ಸೋಲಿಸಿದ. ಅವನು ಬಲಿಷ್ಠನಾದ್ದರಿಂದಲೇ ಲೋದಿಯ ಸೋಲುಂಟಾಯಿತು. ನಿಮಗೆ ವಿಷಯ ಗೊತ್ತಿಲ್ಲದಿದ್ದರೆ, ಮಾತನಾಡ ಬೇಡಿ!"

ನವಿರಾಗಿ ರೇಗಿದ ಕಪೂರ್ !

"ಬರೀ ಯುದ್ಧ, ಬಲಪ್ರದರ್ಶನ, ತೋಳ್ಬಲ ಇಷ್ಟರಲ್ಲೇ ಆಗಿಹೋಯಿತು ನಿಮ್ಮ ಮಾತು. ಇಲ್ಲಿ ಬೇರೆ ಏನಾದರೂ ಇದೆಯೇ ನೋಡುವುದಕ್ಕೆ?"

"ಜೈನ್ ಬಸದಿ, ಬುದ್ಧ ಮಂದಿರ ಖಂಡಿತ ಇಲ್ಲ ಇಲ್ಲಿ!"

ಕಪೂರ್ ನುಡಿದ ನಸುನಗುತ್ತ. ಅವನ ಧ್ವನಿಯಲ್ಲಿ ಕುಚೋದ್ಯ ಕುರುಹು ಇಣುಕುತ್ತಿತ್ತು.

ಕುಮಾರ್ ಜೈನ್ ಧರ್ಮೀಯನೆಂದು ಅವನಿಗೆ ಅರಿವಿತ್ತು.

"ನೋಡಿ ಕಪೂರ್! ಜೈನ ಧರ್ಮ ಶ್ರೇಷ್ಠ ಧರ್ಮ. ಅಹಿಂಸೆಯನ್ನು ಪ್ರತಿಪಾದಿಸಿ ಅದಕ್ಕಾಗಿ ತಮ್ಮ ಸರ್ವಸ್ವವನ್ನೂ ತ್ಯಾಗ ಮಾಡಿದ ಪುಣ್ಯಪುರುಷರ ಧರ್ಮವಿದು."

"ನೀವು ಹೇಳುವುದು ನೂರಕ್ಕೆ ನೂರು ನಿಜ. ಅಹಿಂಸೆಯನ್ನು ಪ್ರತಿಪಾದಿಸಿ, ತಮ್ಮ ಸರ್ವಸ್ವವನ್ನೂ ಕಳೆದುಕೊಂಡುದ್ದು ಮಾತ್ರವಲ್ಲ, ತಮ್ಮ ದೇಶದ ಸ್ವಾತಂತ್ರ್ಯ ವನ್ನೂ ಕಳೆದುಕೊಂಡಿತು!" ಎಂದು ಕಪೂರ್ ನಗಾಡಿದ.

ಕುಮಾರ್‌ನ ಕೋಪ ಹೊಗೆಯಾಡಿತು.

"ನೀವು ಬಾಯಿಗೆ ಬಂದ ಹಾಗೆ ಮಾತನಾಡುತ್ತಾ ಇದ್ದೀರಾ. ಜೈನರಿಂದ ದೇಶದ ಸ್ವಾತಂತ್ರ್ಯ ನಾಶವಾಯಿತು ಅಂದರೆ ಬುದ್ಧಿಯಿಲ್ಲದ ಮಾತು!"

"ನಮ್ಮ ಕಡೆ ಒಂದು ದಂತ ಕಥೆ ಇದೆ. ಹೇಳಲೆ?" ಕಪೂರ್ ಕೇಳಿದ. ಉತ್ತರಕ್ಕೆ ಕಾಯದೆ, ಅವನು ಕಥೆ ಹೇಳಲು ಪ್ರಾರಂಭಿಸಿದ.

"ಅಲ್ಲಾವುದ್ದೀನ್ ಖಿಲ್ಜೀ ತನ್ನ ದಂಡಯಾತ್ರೆಯಲ್ಲಿ ಒಂದು ಜೈನರ ಮಠ ಆಕ್ರಮಿಸಿದನಂತೆ. ನೂರು-ಇನ್ನೂರು ಜೈನರ ಸನ್ಯಾಸಿಗಳು ಅದರಲ್ಲಿ ವಾಸಿಸಿ ವ್ಯಾಸಂಗ ಮಾಡಿಕೊಂಡಿದ್ದರಂತೆ. ಒಳ್ಳೇ ತಿಂದು ಉಂಡು ಗಟ್ಟಿಮುಟ್ಟಾಗಿದ್ದರಂತೆ ಸನ್ಯಾಸಿಗಳು.

ಅವರನ್ನೆಲ್ಲಾ ಸೆರೆ ಹಿಡಿದು ಸಾಲಾಗಿ ನಿಲ್ಲಿಸಿದನಂತೆ ಖಿಲ್ಜೀ. ಮತ್ತೆ ಅವರಿಗೆ ಹೇಳಿದನಂತೆ- 'ಇಸ್ಲಾಂ ಸ್ವೀಕರಿಸಿ, ಇಲ್ಲ ತಲೆ ತೆಗಿತೀನಿ' 'ತೆಗೀ ತಲೆ! ನಮ್ಮ ಧರ್ಮ ಮಾತ್ರ ಬಿಡೋದಿಲ್ಲ!' ಅಂದರಂತೆ ಸನ್ಯಾಸಿಗಳು! ಎಂತಹ ಹೇಡಿಗಳು ಆ ಸನ್ಯಾಸಿಗಳು!"

ಥತ್ ಎಂದು ಉಗಿದ ಕಪೂರ್!

ಕುಮಾರ್‌ನ ಕೋಪ ಇಮ್ಮಡಿಸಿತು.

"ಯಾಕೆ ಅವರನ್ನು ಹೇಡಿಗಳು ಅಂತ ಕರೆಯುತ್ತೀರಾ? ಧರ್ಮಕ್ಕೋಸ್ಕರ ಪ್ರಾಣತ್ಯಾಗ ಮಾಡಿದೋರನ್ನ ಹೇಡಿಗಳು ಅಂತ ಕರೆಯುತ್ತೀರಾ?"

"ಗಟ್ಟಿಮುಟ್ಟಾಗಿ ದೇಹ ಬೆಳೆಸಿದ ಈ ಸನ್ಯಾಸಿಗಳು ಕೈಯಲ್ಲಿ ಕತ್ತಿ ಹಿಡಿದು ಖಿಲ್ಜೀ ಸೈನಿಕರ ಎದರು ಕಾದಾಡಿದ್ದರೆ ತಾವೂ ಉಳಿದು ತಮ್ಮ ಧರ್ಮವೂ ಉಳಿಯುತ್ತಿತ್ತು!"

ಕಪೂರ್‌ನ ಕೆಂಪುಮುಖ ಕೆಂಪಗೆ ಉರಿಯುತ್ತಿತ್ತು! ಬಿಸಿಲಿನ ಬೇಗೆಗೋ, ಬಳಲಿಕೆಗೋ, ಅಥವಾ ಜೈನ ಸನ್ಯಾಸಿಗಳು ವಿನಾಕಾರಣ ಸತ್ತಿದ್ದಕ್ಕೋ ಅರ್ಥವಾಗಲಿಲ್ಲ.

"ಅಹಿಂಸೆ, ಅಹಿಂಸೆ ಎಂದು ಪ್ರತಿವಾದಿಸಿ ಹಿಂಸೆಯಿಂದ ಒದ್ದಾಡಿ ಸತ್ತರಲ್ಲಾ, ಎಂಥಹ ಗಂಡು ಸನ್ಯಾಸಿಗಳು ಅವರು!" ಕಪೂರ್ ತಿರಸ್ಕಾರದಿಂದ ನುಡಿದ.

"ಹೋಗಲಿ ಬಿಡಿ! ಈ ಕಥೆ ಮುಂದುವರಿಸಿ" ಕೇಳಿಕೊಂಡೆ ನಾನು.

"ಇನ್ನೇನು ಉಳಿದಿದೆ ಕಥೆಯಲ್ಲಿ! ಖಿಲ್ಜೀಯ ಒಬ್ಬನೇ ಒಬ್ಬ ಸೈನಿಕ ತನ್ನ ಖಡ್ಗದಿಂದ ಎಲ್ಲಾ ಸನ್ಯಾಸಿಗಳ ಕತ್ತು ಕಡಿದ. ರಕ್ತದ ಹೊಳೆ ಹರಿಯಿತು. ತಾನು ಮಾಡಿದ ಕಾರ್ಯಕ್ಕೆ ತಾನೇ ಹೇಸಿಕೊಂಡೋ ಅಥವಾ ಸುಸ್ತಾಗಿಯೋ ಅವನು ಸತ್ತು ಬಿದ್ದನಂತೆ!"

ಕಥೆ ಹೇಳಿ ಮುಗಿಸಿದ ಕಪೂರ್! ನಮಗೂ ಸುಸ್ತಾಗಿತ್ತು ಅವನ ಕಥೆ ಕೇಳಿ ಮತ್ತು ಬಿಸಿಲಲ್ಲಿ ಸುತ್ತಿದ್ದಕ್ಕೆ! ದೂರದಲ್ಲಿ ಒಂದು ಹಳೇ ಮಸೀದಿ ಕಾಣಿಸುತ್ತಿತ್ತು. ಅದನ್ನು ನೋಡಿ ಬರೋಣವೆಂದು ಅದನ್ನರುಸುತ್ತಾ ಹೊರಟೆವು.

ಸುತ್ತಲೂ ಕಣ್ಣಾಡಿಸುತ್ತಾ ನಡೆದೆ. ಕಣ್ಣು ಹಾಯಿಸುವವರೆಗೂ ಸಮತಟ್ಟವಾದ ಮೈದಾನ ಪ್ರದೇಶದಲ್ಲಿ, ಗುಡ್ಡ-ಬೆಟ್ಟಗಳ ನೋಟ ಕಾಣಸಿಗಲಿಲ್ಲ. ಬಹಳ ಪ್ರಶಸ್ತವಾಗಿತ್ತು ಈ ಸ್ಥಳ ಕಾದಾಟಕ್ಕೆ, ರಕ್ತದೋಕಳಿಯಾಟಕ್ಕೆ! ಲಕ್ಷಾಂತರ ಜನರ ಹತ್ಯೆ ನಡೆದು ರಕ್ತದ ಕಾಲುವೆ ಹರಿದು, ದೇಶದ ಚರಿತ್ರೆಯನ್ನೇ ಬದಲಿಸಿದ ಈ ನೆಲ ಇಂದು ಫಲವತ್ತಾದ ಭೂಮಿ! ಗೋಧಿ, ಜೋಳ, ಸಾಸುವೆ, ಬಹಳ ಹುಲುಸಾಗಿ

ಬೆಳೆಯುತ್ತವೆ. ಕತ್ತಿ-ಗುರಾಣಿಗಳ ಝೇಂಕಾರ, ತುಪಾಕಿ-ತೋಪುಗಳ ಆರ್ಭ
ಸೈನಿಕರ ಕೂಗು, ಬೊಬ್ಬೆ, ಏಟು ತಿಂದು ಬಿದ್ದು ನರಳುವ ಆರ್ತನಾದ, ಕುದುರೆ
ಖುರಪುಟ, ಅವುಗಳ ಕೆನೆಯುವಿಕೆ, ರಕ್ತದ ಮಡುವಿನಲ್ಲಿ ಮಲಗಿ ಸಾವಿನಂಚಿನಲ್ಲಿ
ಯೋಧರ ಆಕ್ರಂಧ, ಇಂದು ಕೇಳಿಸುತ್ತಿರಲಿಲ್ಲ. ಎಲ್ಲೆಲ್ಲೂ ಅಗಾಧ ಶೂನ್ಯ
ಶಾಂತತೆ! ಎಲ್ಲೋ ದೂರದ ಮರದಲ್ಲಿ ಕೇಳಿಸುವ ಕಾಗೆಯ ಕೂಗು ಬಿಟ್ಟ
ಎಲ್ಲೆಲ್ಲೂ ನೀರವತೆಯ ಸೊಬಗನ್ನು ಅನುಭವಿಸುತ್ತಿದ್ದೆವು. ಸುಂದರ ಭೂಪ್ರದೇ
ವನ್ನು ಅತಿ ಮಧುರ ಸಂಗೀತವೆಂದು ವರ್ಣಿಸಿದ್ದಾರಲ್ಲವೇ ಕವಿಗಳು. ಇಷ್ಟು ಪ್ರಶಾ
ವಾದ ಪ್ರದೇಶದಲ್ಲಿ ಮೂರು ಘೋರ ಯುದ್ಧ ನಡೆದು ಹಿಂಸಾಚಾರ ತಾಂಡ
ನೃತ್ಯವಾಡಿದುದು ನಂಬಲಸಾಧ್ಯವಾಗಿತ್ತು.

"ಇದೇ ನೋಡಿ ಬಾಬರ್ ಕಟ್ಟಿಸಿದ ಮಸೀದಿ. ಐನೂರು ವರ್ಷ ಹಳೆ
ಮಸೀದಿ. ಯುದ್ಧದಲ್ಲಿ ಜಯಗಳಿಸಿದ ಮೇಲೆ, ಅದರ ನೆನಪಿನ ಮೇಲೆ ಈ ಮಸೀ
ಕಟ್ಟಿದನೆಂದು ಊಹೆ. ಇದನ್ನು ಬಾಬರೀ ಮಸ್ಜಿದ್ ಎಂದೂ ಕರೆಯುತ್ತಾರೆ."

ಕಪೂರ್ ವಿವರಿಸಿದ. ಕುಮಾರ್ ಉದಾಸೀನತೆಯಿಂದ ಮಸೀದಿಯ
ವೀಕ್ಷಿಸುತ್ತಿದ್ದ. ನಾನು ಮಸೀದಿಯ ಒಳಹೊಕ್ಕಾಗ ಮಹಡಿಯ ಮೆಟ್ಟಿಲನ್ನು ಕ
ಏರಿ ಹೋದೆ. ಛಾವಣಿಯ ಮೇಲೆ ನಿಂತು ಸುತ್ತಲೂ ಕಣ್ಣು ಹಾಯಿಸಿದೆ. ಮಸೀದಿ
ಗೊಮ್ಮಟಗಳ ಮೆಟ್ಟಿಲುಗಳ ಸಮೂಹವೇ ಕಣ್ಣಿಗೆ ಬಿತ್ತು. ಮುಸ್ಲಿಮ್ ಶೈಲಿ
ಅದ್ಭುತ ಗೊಮ್ಮಟಗಳು ಅವು. ಅವುಗಳ ಮೇಲೆಲ್ಲಾ ತಮ್ಮ ತಮ್ಮ ಹೆಸರು ಮತ್ತು
ಚಿತ್ರಗಳನ್ನು ಕೆತ್ತಿ ಅವುಗಳ ಅಂದವನ್ನು ಕೆಡಿಸಲು ಸಾಕಷ್ಟು ಶ್ರಮಿಸಿದ್ದ
ಪ್ರವಾಸಿಗರು.

"ಬಾಬರ್ ತನ್ನ ಸೈನಿಕರಿಗೆ ಈ ರೀತಿ ಹುರಿದುಂಬಿಸಿದನಂತೆ- 'ಹೋ
ಜಯಗಳಿಸಿರಿ. ಜಯಗಳಿಸಿದರೆ ರಾಜ್ಯಪಟ್ಟ! ಸತ್ತರೆ ವೀರಸ್ವರ್ಗ!' ಅವನ ಸೈನಿ
ವೀರಾವೇಶದಿಂದ ಹೋರಾಡಿ ಬಾಬರ್‌ನಿಗೆ ಜಯ ಕೊಡಿಸಿ, ಅವನಿಗೆ ದಿಲ್ಲೀ ಚಕ್ರ
ಪತ್ಯ ಕೊಡಿಸಿದರು!"

ಅರೆ! ಇದೇನು ಭಗವದ್ಗೀತೆಯ ಕೃಷ್ಣನ ಉಪದೇಶಗಳ ನುಡಿಗಳನ್ನು ಇ
ನುಡಿಯುತ್ತಾ ಇದ್ದಾನೆ? ಇದು ನಿಜವೇ? ಬಾಬರ್‌ನ ಉವಾಚವೇ ಇದು? ಭ
ಯುದ್ಧದಲ್ಲಿ ಯುದ್ಧವಾಡಲು ಹಿಂಜರಿಯುತ್ತಿದ್ದ ಅರ್ಜುನನಿಗೆ ಉಪದೇಶ
ಶ್ರೀಕೃಷ್ಣನ ಉವಾಚವಿದು!

"ಕಪೂರ್‌ಜೀ! ಯಾಕೋ ಇದು ಅತಿಯಾಯಿತು. ಬಾಬರ್ ಹೇಳಿದ್ದ
ಬೊಗಳೆ ಬಿಡಬೇಡಿ."

ಕುಮಾರ್‌ನಿಗೆ ಈಗ ನಿಜವಾಗಲೂ ಕೋಪ ಬಂದಿತ್ತು.

"ಚರಿತ್ರೆಯ ಪುಟಗಳನ್ನು ತಿರುವಿ ಓದಿ ನೋಡಿ. ಆಗ ತಿಳಿಯುತ್ತದೆ ನಾನು ಬೊಗಳೆ ಬಿಡುತ್ತಿದ್ದೇನೆಯೋ ಅಥವಾ ನಿಜ ಹೇಳುತ್ತಿದ್ದೇನೆಯೋ ಎಂದು!"

ಕಪೂರ್ ಮಾರುತ್ತರ ಕೊಟ್ಟ.

ಇದೇ ಸಮಯಕ್ಕೆ ಯಾರೋ ನಮ್ಮನ್ನು ಕರೆಯುವ ಧ್ವನಿ ಕೇಳಿಸಿತು. ಅದು ನಮ್ಮ ಕಾರಿನ ಚಾಲಕನ ಧ್ವನಿಯಾಗಿತ್ತು. ಅವನನ್ನು ಮರೆತೇಬಿಟ್ಟಿದ್ದೆವು ನಾವು. ಲಗುಬಗೆಯಿಂದ ನಾವು ಅವನೆಡೆಗೆ ಹೊರಟೆವು. ವಾಪಸ್ಸು ಯುದ್ಧಭೂಮಿಯೆಡೆಗೆ ನಡೆದು ಕಾರು ಬಿಟ್ಟ ಸ್ಥಳ ಸೇರಿ, ಕಾರಿನೊಳಗೆ ಕುಳಿತು ವಾಪಸ್ಸು ದಿಲ್ಲೀ ಕಡೆ ಪ್ರಯಾಣ ಬೆಳೆಸಿದೆವು. ಹೊಟ್ಟೆ ಹಸಿದು ಯಾರೂ ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. 'ಹೊಟ್ಟೆ ನಿನ್ನಿಂಧ ನಾ ಕೆಟ್ಟೆ' ಎನ್ನುತ್ತ ಜಪ ಹೇಳಿ ಕುಳಿತೆ. ಪಾನೀಪಟ್ ಕೋಟೆಗೆ ಬಂದಾಗ ಗಂಟೆ ೨ ಆಗಿತ್ತು. ಅಲ್ಲೇ ದಾರಿಯ ಬದಿಯಲ್ಲಿ ಕಂಡ ಧಾಭಾದ ಬಳಿ ಕಾರು ನಿಲ್ಲಿಸಿ ಉಪಾಹಾರ ತಿಂದೆವು. ಉಪಾಹಾರ ಮುಗಿಸಿದೊಡನೆ ಬತ್ತಿದ್ದ ಉತ್ಸಾಹ ಮತ್ತೆ ತಲೆದೋರಿತು.

ಕಪೂರ್ ಕವಿತೆಯೊಂದನ್ನು ಗುಣಗುಣಿಸುತ್ತಿದ್ದ. ಅವನ ಮುಖದಲ್ಲಿ ಮಂದಹಾಸವಿತ್ತು.

"ಹೊಟ್ಟೆಯೊಂದು ತುಂಬಿದರೆ, ಏನು ಬೇಕಾದರೂ ಮಾಡಬಹುದು. ಯುದ್ಧ ಕೂಡ ಮಾಡಬಹುದು. ಅಲ್ಲವೆ?"

" 'ಹೊಟ್ಟೇ, ನಿನ್ನಿಂದ ನಾ ಕೆಟ್ಟೆ' ಎಂಬ ಗಾದೆ ಇದೆ ನಮ್ಮ ಕನ್ನಡದಲ್ಲಿ. ಈ ಹೊಟ್ಟೆಯಿಂದಲೇ ಎಲ್ಲ ಕಷ್ಟ-ಕಾರ್ಪಣ್ಯಗಳು ಅಲ್ಲವೆ?"

"ಹೊಟ್ಟೇಗೋಸ್ಕರ ಜನ ಏನೆಲ್ಲಾ ಮಾಡುತ್ತಾರೆ. ಆದರೆ ಹೊಟ್ಟೇಗೋಸ್ಕರ ಯುದ್ಧ ಮಾಡುವುದಿಲ್ಲ! ಅಧಿಕಾರ, ರಾಜ್ಯದಾಹ, ಪದವಿ, ದುರಾಸೆ ಇನ್ನೂ ಅನೇಕ ಕಾರಣಗಳಿಗೆ ಯುದ್ಧ ಜರುಗಿಸುತ್ತಾರೆ!"

ಕುಮಾರ್ ಹೇಳಿದ.

"ಹೊಟ್ಟೇಗೋಸ್ಕರ ಯುದ್ಧ ಮಾಡುವುದಿಲ್ಲ! ಆದರೆ ಹೊಟ್ಟೆ ತುಂಬದಿದ್ದರೆ ಯುದ್ಧ ಕೂಡ ಮಾಡೋದಿಲ್ಲ"

"ಈಗ ಹೊಟ್ಟೆ ತುಂಬಿತಲ್ಲ! ವಾಪಸ್ಸು ದಿಲ್ಲೀಗೆ ಹೋಗೋಣವೆ. ಬೇಗ ಹೋದರೆ ಮನೆಯಲ್ಲಿ ಸ್ವಲ್ಪ ರೆಸ್ಟ್ ತಗೋಬಹುದು. ಭಾನುವಾರ ಆದರೂ ಈ ದಿನ ಕೆಲಸ ಮಾಡಿದಷ್ಟೇ ಕಷ್ಟವಾಯಿತು, ಈ ಪಾನೀಪತ್ ಪ್ರವಾಸ" ಸುಸ್ತಾಗಿದ್ದ ನಾನು ಹೇಳಿದೆ.

"ನೀವು ಹೇಳಿದ್ದು ನಿಜ. ಒಂದು ಉರ್ದು ಗೀತೆ ನೆನಪಿಗೆ ಬರ್ತಾ ಇದೆ –

'ಖಡ್ಗ ಹಿಡಿದ ಕೈಗೆ ತೊಡಿಸು ಬಂಗಾರದ ತೋಡ
ಸಾಯುವನು ನಿನಗಾಗಿ ನೋಡ !
ಬಡಿಸು ಹೊಟ್ಟೆ ತುಂಬ ಅನ್ನ
ಹೋರಾಡುವನು ಮನದನ್ನ !'

"ಹೌದು! ಬೇಗ ಹೋಗೋಣ. ನಾಳೆಯಿಂದ ನಾನು ರಜೆ ಹಾಕಿದ್ದೇನೆ. ಶಿಕರ್ಜಿಗೆ ಹೋಗಬೇಕಾಗಿದೆ" ಕುಮಾರ್ ಹೇಳಿದ.

"ಶಿಕರ್ಜಿ ಬೆಟ್ಟದ ಮೇಲೆ ಹೋಗಲಿಕ್ಕೆ ಬಹಳ ಕಷ್ಟ ಅಂತ ಕೇಳಿದ್ದೇನೆ. ಹೌದಾ?"

"ಹೌದು! ಕಡಿದಾಗಿದೆ ಬೆಟ್ಟ. ಹತ್ತುವುದು ಕಷ್ಟ."

"ಹತ್ತಲಿಕ್ಕೆ ಕಷ್ಟ ಆಗೋದಿಲ್ಲವಂತೆ! ಕಷ್ಟ ಅಂದರೆ ಅಲ್ಲಿ ಅಪಾಯ ಅಂತಾರೆ!"

"ಏನು ಅಪಾಯ? ಬಿದ್ದು ಸೊಂಟ ಮುರಿದು ಪ್ರಾಣ ಕಳೆದುಕೊಳ್ಳುವ ಭಯವೆ?" ಕೇಳಿದೆ ನಾನು.

"ಬೆಟ್ಟ ಹತ್ತಿ ಜಾರಿ ಬೀಳಿ ಪ್ರಾಣ ಕಳೆದು ಕೊಳ್ಳುವ ಅಪಾಯವಲ್ಲ ಅದು! ಬೆಟ್ಟದ ತುಂಬಾ ಡಕಾಯಿತರ, ಕಳ್ಳಕಾಕರ ಭಯ. ಅವರು ಪ್ರವಾಸಿಗಳ ಸೊಂಟ ಮುರಿದು, ಪ್ರಾಣ ತೆಗೆದು ಅವರ ಬಳಿ ಇದ್ದ ಎಲ್ಲಾ ಒಡವೆ, ಹಣ ದೋಚಿಕೊಂಡು ಹೋಗುವ ಭಯ?"

ನನಗೆ ಆಶ್ಚರ್ಯವಾಯಿತು ಕಪೂರ್‌ನ ಮಾತು ಕೇಳಿ. ಅಹಿಂಸಾ ಧರ್ಮ ಪಾಲಿಸುವವನಿಗೆ ಎಂತಹ ಗತಿಯಪ್ಪಾ ಇದು! ಕಪೂರ್ ತಮಾಷೆ ಮಾಡುತ್ತಿಲ್ಲವಷ್ಟೆ!

"ಪೊಲೀಸ್ ಬಂದೋಬಸ್ತ್ ಇಟ್ಟಿದ್ದಾರೆ. ಅಲ್ಲಿ ಈಗ ಭಯವೇನು ಇಲ್ಲ!"

ಕಾರು ತ್ವರಿತಗತಿಯಲ್ಲಿ ಸಾಗುತ್ತಿತ್ತು. ರಸ್ತೆ ನೇರವಾಗಿ, ಸಮತಟ್ಟಾಗಿದ್ದರಿಂದ, ಚಾಲಕನಿಗೆ ಗಾಡಿ ನಡೆಸುವುದು ಕಷ್ಟವಾಗಿರಲಿಲ್ಲ. ರಸ್ತೆಯ ಇಕ್ಕೆಡೆಯಲ್ಲಿ ನೀಲಗಿರಿ ಮರಗಳನ್ನ ನೆಟ್ಟಿದ್ದರು. ದಿಲ್ಲೀ ಬಾದಶಹ ಶೇರ್‌ಶಹ ಸೂರಿ ಕಟ್ಟಿಸಿದನೆಂದು ಹೇಳಲಾದ ಈ ಗ್ರಾಂಡ್ ಟ್ರಂಕ್ ರಸ್ತೆ-ಪಾಕಿಸ್ಥಾನದ ಪೆಶಾವರ್‌ನಿಂದ ಭಾರತದ ಕಲ್ಕತ್ತಾ ಶಹರಿನವರೆಗೆ, ಸಾಗುವ ಈ ರಾಜರಸ್ತೆ, ಆಗಿನ ಕಾಲಕ್ಕೆ, ಮುಖ್ಯ ರಸ್ತೆಯಾಗಿ, ಅಸಂಖ್ಯಾತ ಜನರಿಗೆ ಜೀವನಾಡಿಯಾಗಿತ್ತು; ಪಶ್ಚಿಮದಿಂದ ದಂಡೆತ್ತಿ ಬಂದ ಧಾಳಿ ಕೋರರಿಗೆ ವರದಾನವಾಗಿತ್ತು; ಪ್ರಯಾಣಿಕರ ಮೇಲೆ ಹಿಂಸಾಚಾರವೆಸಗಿ ಲೂಟಿ ಮಾಡುತ್ತಿದ್ದ ಡಕಾಯಿತರಿಗೆ, ಹಿಂಸಾಮಾರ್ಗವಾಗಿತ್ತು!

ಕುಮಾರ್ ಕಾರ್‌ನ ಕಿಟಕಿಯ ಹೊರಗೆ ತನ್ನ ನೋಟ ತಿರುಗಿಸಿ, ತನ್ನ ಮನಸ್ಸನ್ನು ಯಾವುದೋ ವಿಷಯದಲ್ಲಿ ಹರಿಯಗೊಟ್ಟಿದ್ದ. ಅವನ ಮನಸ್ಸಿನಲ್ಲಿ ಎಂತಹ ಹೊಯ್ದಾಟ ಏರ್ಪಟ್ಟಿರಬಹುದು?

"ನೋಡಿ ಕಪೂರ್! ಹಿಂಸೆ ಪ್ರಪಂಚದ ಎಲ್ಲಾ ಭಾಗದಲ್ಲಿ ತಾಂಡವವಾಡುತ್ತಲೇ ಇದೆ. ರೋಮನ್ ಪೋಪ್ ಗುರುಗಳ ಮೇಲೆ ಹತ್ಯೆಯ ಪ್ರಯತ್ನ ನಡೆಯಿತಲ್ಲ ಇತ್ತೀಚೆಗೆ! ಅಲ್ಲಿ ಈಗ ಬಲವಾದ ಕಾವಲಿದೆ. ಮೆಕ್ಕಾ ಮಸೀದಿಯಲ್ಲಿ ಘೋರ ಹತ್ಯಾಕಾಂಡವೇ ಜರುಗಿತು. ಕ್ರೈಸ್ತರಿಗೆ, ಯಹೂದಿಗಳಿಗೆ ಮತ್ತು ಇಸ್ಲಾಂ ಧರ್ಮೀಯರಿಗೆ ಪವಿತ್ರ ಯಾತ್ರಾ ಸ್ಥಳವಾದ ಜರೂಸೆಲಂನಲ್ಲಿ ಕೂಡ ಹಿಂಸಾಚಾರ ಜರಗುತ್ತಲೇ ಇದೆ. ಅಲ್ಲೆಲ್ಲಾ ಭದ್ರವಾದ ಕಾವಲು ಪಡೆ ಇಟ್ಟಿದ್ದಾರೆ........"

ನಾನು ಮಾತು ಮುಗಿಸುವ ಮುನ್ನ ಕಪೂರ್ ಮಧ್ಯೆ ಬಾಯಿ ಹಾಕಿದ:

"ಅದಕ್ಕೇ ನಾನು ಹೇಳುವುದು- ಧರ್ಮ ಮುಖ್ಯವಲ್ಲ. ಯಾವ ಧರ್ಮವನ್ನು ಪಾಲಿಸುವುದೂ ಬೇಕಾಗಿಲ್ಲ. ಧರ್ಮಗಳಿಂದ ಹಿಂಸೆ ಜಾಸ್ತಿಯಾಗಿವೆ ಹೊರತು ಕಡಿಮೆಯಾಗಿಲ್ಲ."

"ಧರ್ಮಗಳಿಲ್ಲದೇ ಹೋಗಿದ್ದರೆ ಹಿಂಸೆ ತಾಂಡವವಾಡಿ ಮನುಕುಲವೇ ಹೇಳ ಹೆಸರಿಲ್ಲದಂತಾಗುತ್ತಿದ್ದವು!"

ಇದುವರೆಗೆ ಸುಮ್ಮನಿದ್ದ ಕುಮಾರ್ ಬಾಯಿ ತೆಗೆದಿದ್ದ!

"ಧರ್ಮಗಳಿಲ್ಲದೇ ಇದ್ದಿದ್ದರೆ, ವಿವಿಧ ಧರ್ಮೀಯರು ತಮ್ಮ ತಮ್ಮ ಧರ್ಮ ಹೆಚ್ಚು, ಒಳ್ಳೆಯದು ಎಂದು ಕಾದಾಡಿ, ಅಸಂಖ್ಯಾತ ಯುದ್ಧ, ಕಾದಾಟ, ಹಿಂಸಾಚಾರ, ಧರ್ಮಯುದ್ಧ, ಜರುಗಿಸುತ್ತಿರಲಿಲ್ಲ! ಧರ್ಮಗಳಿಂದಲೇ ಶುರುವಾಯಿತು ಧರ್ಮಯುದ್ಧ ನನ್ನ ಧರ್ಮವೇ ಪವಿತ್ರ ಎಂದು ಇನ್ನೊಬ್ಬ ಧರ್ಮೀಯನ ಕತ್ತು ಕಡಿಯುತ್ತಿರಲಿಲ್ಲ. ಮಾನವರಲ್ಲಿ ದ್ವೇಷಬೀಜ, ಹಿಂಸೆಯ ಆಸೆ ಹುಟ್ಟಿದ್ದೇ ಧರ್ಮಪಾಲನೆಯಿಂದ!"

"ಛೆ! ಛೆ! ಎಂತಹ ಹುಚ್ಚು ಮಾತಿದು! ಮಾನವನ ದೌರ್ಬಲ್ಯವನ್ನು ಹಳಿಯುವುದನ್ನು ಬಿಟ್ಟು, ಧರ್ಮವನ್ನೇ ಹಳಿಯತೊಡಗಿದ್ದೀಯಲ್ಲ! ಯಾವ ಧರ್ಮವೂ ಹಿಂಸೆಗೆ ಅವಕಾಶ ಅಥವಾ ಪ್ರತಿವಾದಿಸುವುದಿಲ್ಲ. ಮಾನವನ ತಪ್ಪಿಗೆ ಧರ್ಮವನ್ನು ಯಾಕೆ ದೂಷಿಸಬೇಕು?"

ಕುಮಾರ್‌ನ ಆತಂಕ ಧ್ವನಿಯನ್ನು ಕೇಳಿ ನನಗೂ ಆತಂಕವಾಯಿತು. ಇವರಿಬ್ಬರೂ ತಮ್ಮ ತಮ್ಮ ವಾದವಿವಾದದ ತೀಕ್ಷ್ಣತೆಯನ್ನು ಹಿಂಸೆಯಲ್ಲಿ ಕೊನೆಗೊಳಿಸಲು ಪ್ರಯತ್ನಿಸಿದರೆ ಹೇಗೆ?

ಕಾರಿನ ಗತಿ ಕಡಿಮೆಯಾಗಿತ್ತು. ಬಿಸಿಲಿನ ಕಾವು ಕಡಿಮೆಯಾಗತೊಡಗಿತ್ತು. ಗಂಟೆ ನಾಲ್ಕಾಗಿತ್ತು. ದಿಲ್ಲೀ ಸಮೀಪ ಬಂದಿದ್ದವು.

"ನೆಗಡಿ ಬಂದಿತೆಂದು ಮೂಗನ್ನು ಬೈದರೆ ಹೇಗೆ?"

ನಾನು ನನ್ನ ಒಗ್ಗರಣೆ ಸೇರಿಸಿದೆ.

ಕಪೂರ್ ಒಮ್ಮೆ ನನ್ನ ಮುಖ ನೋಡಿ, ಗುಡುಗಿದ.

"ನೆಗಡಿ ಧರ್ಮವೋ ಅಥವಾ ಮೂಗು ಧರ್ಮವೋ, ನಿಮ್ಮ ದೃಷ್ಟಿಯಲ್ಲಿ?"

ಬೀಜವೃಕ್ಷ ನ್ಯಾಯದಂತಿತ್ತು ಅವನ ಪ್ರಶ್ನೆ. ಹೌದು! ನೆಗಡಿ ಧರ್ಮವೋ? ಮೂಗು ಧರ್ಮವೋ?

ಈ ಧರ್ಮ ಮನುಷ್ಯನಿಂದಲೇ ಹುಟ್ಟಿತೇ ಅಥವಾ ದೇವರು ತನ್ನ ದೇವದೂತರಿಂದ ಹುಟ್ಟಿ ಹಾಕಿಸಿದನೆ?

ಈ ಪ್ರಶ್ನೆಗೆ ಉತ್ತರವೇನು?

ಕೆಲವರು ಈ ಪ್ರಶ್ನೆಗೆ ಧರ್ಮ-ಯಾವುದೇ ಧರ್ಮವಾಗಲೀ, ಅದರ ಬಗ್ಗೆ ವಿಶ್ವಾಸವಿಡಬೇಕು. ಅದು ಹೇಗೆ ಹುಟ್ಟಿತು? ಯಾರಿಂದ ಹುಟ್ಟಿತು? ಯಾಕೆ ಹುಟ್ಟಿತು? ಈ ಪ್ರಶ್ನೆಗಳು ಉದ್ಭವಿಸುವುದೇ ಇಲ್ಲ! ದೇವರಲ್ಲಿ ಶ್ರದ್ಧೆ ಇಟ್ಟರೇ ಸಾಕು! ಧರ್ಮ ಯಾವುದಾದರೇನು? ದೇವರಲ್ಲಿ ನಂಬಿಕೆಯೊಂದಿದ್ದರೆ ಸಾಕು ಎನ್ನುತ್ತಾರೆ.

ನನ್ನ ಮನಸ್ಸಿನಲ್ಲಿದ್ದ ಹೊಯ್ದಾಟವನ್ನು ನಿಲ್ಲಿಸಿ ಮೆಲ್ಲನೆ ನುಡಿದೆ.

"ಕಪೂರ್‌ಜೀ! ಧರ್ಮ ಯಾವುದಾದರೇನು? ದೇವರಲ್ಲಿ ನಂಬಿಕೆಯಿಡುವುದರಲ್ಲಿ ತಪ್ಪೇನು?"

"ನಾವು ಧರ್ಮದ ಬಗ್ಗೆ ಮಾತನಾಡುತ್ತಾ ಇದ್ದೇವೆ, ದೇವರ ಬಗ್ಗೆ ಅಲ್ಲ. ದೇವರು ಇದ್ದಾನೆಯೇ ಇಲ್ಲವೇ ಎನ್ನುವ ಬಗ್ಗೆ ಇಲ್ಲಿ ಚರ್ಚಿಸುತ್ತಾ ಇಲ್ಲ! ದೇವರ ಹೆಸರಿನಲ್ಲಿ ಅವನ ಮೇಲಿನ ಅಂಧಶ್ರದ್ಧೆಯಿಂದ, ನಂಬಿಕೆಯಿಂದ, ಮಾನವ ತನ್ನ ಸಹಚರರೊಡನೆ ಅನಾದಿಕಾಲದಿಂದಲೂ ಕಾದಾಡುತ್ತಲೇ ಇದ್ದಾನೆ, ಮುಂದೆಯೂ ಹಿಂಸಾಚಾರದಲ್ಲಿ ತೊಡಗುತ್ತಲೇ ಇರುತ್ತಾನೆ!"

"ನೀವು ಸಾಮ್ರಾಟ್ ಅಶೋಕ್‌ನ ಹೆಸರು, ಚರಿತ್ರೆ ಓದಿಲ್ಲವೆ?"

ಕುಮಾರ್ ಚರಿತ್ರೆಯ ಪುಟ ಬಿಚ್ಚತೊಡಗಿದ್ದ.

"ಯುದ್ಧದಲ್ಲಿ ರಕ್ತಪಾತ ಮಾಡಿ, ನೋಡಿ, ಶಾಂತಿಯ ದೂತನಾಗಿ, ಬೌದ್ಧ ಧರ್ಮ ಸ್ವೀಕರಿಸಿ, ಪ್ರಪಂಚದ ಮೊತ್ತಮೊದಲನೆಯ ಶಾಂತಿ ಚಕ್ರವರ್ತಿ ಎನಿಸಿಕೊಂಡ! ಅವನು ಬೌದ್ಧಧರ್ಮ ಪ್ರಚಾರ ಮಾಡಿದ್ದು ಸುಳ್ಳೇ ಅಥವಾ ತಪ್ಪೇ? ಹೇಳಿ ನೋಡೋಣ?"

"ಬುದ್ಧ ಶಾಂತಿ ಪ್ರಚಾರ ಮಾಡಿದ. ಧರ್ಮ ಪ್ರಚಾರ ಮಾಡಲಿಲ್ಲ! ಆಸೆಯೇ ದುಃಖಕ್ಕೆ ಮೂಲಕಾರಣ; ದುಃಖವೇ ಅಶಾಂತಿಗೆ ಕಾರಣ ಎಂದ. ದೇವರನ್ನೂ ನಂಬಿ, ಅವನ ಆರಾಧನೆ ಮಾಡಿ, ಗುಡಿ ಕಟ್ಟಿಸಿ, ಪೂಜೆ ಮಾಡಿ ಎಂದು ಅವನು ಹೇಳಲಿಲ್ಲ. ಅವನು ಯಾವ ಹೊಸ ಧರ್ಮಹುಟ್ಟುಹಾಕಲಿಲ್ಲ. ಅವನ ಅನುಯಾಯಿಗಳು ಮಾತ್ರ ಅವನ ಹೆಸರಿನಲ್ಲಿ ಒಂದು ಹೊಸ ಧರ್ಮ ಸ್ಥಾಪಿಸಿ ಅದನ್ನು ಪ್ರಪಂಚದಲ್ಲೆಲ್ಲಾ ಪ್ರಚಾರ ಮಾಡಿ, ಮತ್ತೊಮ್ಮೆ ಧರ್ಮಕ್ಕಾಗಿ ಕಾದಾಟ, ಹೊಡೆದಾಟ, ಹಿಂಸಾಚಾರಕ್ಕೆ ಆಸ್ಪದ ಮಾಡಿಕೊಟ್ಟರು."

ಆವೇಶ ಮಾತುಗಳಾಗಿದ್ದವು ಕಪೂರ್‌ನ ಬಾಯಿಯಿಂದ ಬಂದ ಮಾತುಗಳು. ಆದರೆ ಅವುಗಳಲ್ಲಿ ಸತ್ಯಾಂಶವು ಇದೆಯಲ್ಲವೇ?

ಬುದ್ಧನ ಉಪದೇಶ- ಆಸೆಯೇ ದುಃಖಕ್ಕೆ ಕಾರಣ- ಎಷ್ಟರ ಮಟ್ಟಿಗೆ ಮನುಷ್ಯನ ಜೀವನದಲ್ಲಿ ನಡೆಯುವ ಏರುಪೇರು, ಘರ್ಷಣೆ, ಅವನ ಸ್ವಾಭಾವಿಕ ಗುಣಗಳಿಗೆ ಉತ್ತರ ನೀಡಬಹುದು? ಆಸೆ-ಆಕಾಂಕ್ಷೆಗಳಿಲ್ಲದೇ ಹೋದ ಪಕ್ಷದಲ್ಲಿ ಮನುಷ್ಯನ ಸರ್ವತೋಮುಖ ಬೆಳವಣಿಗೆ ಹೇಗೆ ಸಾಧ್ಯ? ಪ್ರಮುಖ, ಹೆಸರಾಂತ ದಾರ್ಶನಿಕರ ಬರ್ಟ್ರಾಂಡ್ ರಸೆಲ್ ಹೇಳಿದ ಹಾಗೆ-"ಇಂದ್ರಿಯಗಳ ಸುಖವನ್ನು ಖಂಡಿಸುವವ ಪ್ರಪಂಚದ ಧರ್ಮಗಳ, ಅಧಿಕಾರದ ಸುಖದ ಮೊರೆಹೋಗುತ್ತಾರೆ. ಪ್ರಪಂಚದ ಚರಿತ್ರೆ ಅಧಿಕಾರ, ಸನ್ಯಾಸಿಗಳ ದುರಾಚಾರಕ್ಕೆ ಸಿಕ್ಕಿವೆ' ಎಷ್ಟು ನಿಜ!

"ಹಾಗಾದರೆ ಬುದ್ಧ-ಜೈನತೀರ್ಥರು ಜನರನ್ನು ತಪ್ಪು ಹಾದಿಗೆಳೆದರು ಎಂಬ ಅಭಿಪ್ರಾಯವೇನು ನಿಮ್ಮದು, ಕಪೂರ್‌ಜೀ?"

ಕುಮಾರ್ ವ್ಯಗ್ರನಾಗಿ ಕೇಳಿದ.

"ಛೆ! ಛೆ! ನಾನು ಹಾಗೆ ಹೇಳಲಿಲ್ಲ. ಅವರು ಹುಟ್ಟಿದ ಕಾಲದಲ್ಲಿ, ಹಿಂಸೆ, ಜನರ ಜೀವನದಲ್ಲಿ ಹಾಸುಹೊಕ್ಕಾಗಿರಬೇಕು. ಎಲ್ಲೆಲ್ಲೂ ಹಿಂಸೆ ತಾಂಡವವಾಡು ತ್ತಿತ್ತು. ಮತ್ತು ಅದೇ ಒಂದು ವೃತ್ತಿಯಾಗಿ, ಬೆಳವಣಿಗೆ ಕುಂಟು ಹೋಗಿತ್ತು ಎಂದು ತೋರುತ್ತದೆ. ಇದನ್ನು ನೋಡಿದ ಕೆಲವು ಬುದ್ಧಿಜೀವಿಗಳು, ಮನುಷ್ಯ ಮತ್ತು ಅವನ ಸಮಾಜ ನಶಿಸಿಹೋಗುವುದನ್ನು ತಪ್ಪಿಸಲು 'ಅಹಿಂಸೆ'ಯ ಮಂತ್ರ ಹಾಡತೊಡಗಿದರು. ಹಿಂಸೆಯಿಂದ ಯಾವ ಕಾರ್ಯವೂ ಸುಗಮವಾಗಿ ಸಾಗುವುದಿಲ್ಲ, ಹಿಂಸಾಪ್ರವೃತ್ತಿ ಬಿಟ್ಟುಬಿಡಿ ಎಂದು ಸಾರತೊಡಗಿದರು."

"ಅವರು ಈ ಉಪದೇಶ ಮಾಡಿದ್ದು ತಪ್ಪೆ?"

"ತಪ್ಪೇನಿಲ್ಲ! ಆದರೆ ಅದೇ ಒಂದು ಸಂಸ್ಥೆಯಾಗಿ, ಅದೇ ಒಂದು ಧರ್ಮವಾಗಿ, ಬೆಳೆಯಗೊಟ್ಟಿದ್ದು ತಪ್ಪು! ಜೈನಧರ್ಮ ಮತ್ತು ಬೌದ್ಧಧರ್ಮಗಳು ಅಹಿಂಸೆಯ

ಪ್ರತೀಕವಾಗಿ ಬೆಳೆದು ಜನರನ್ನು ನಿಶ್ಕ್ರಿಯರನ್ನಾಗಿ ಮಾಡಿ, ಅವರಲ್ಲಿ ಹೋರಾಡುವ ಸ್ಥೈರ್ಯವನ್ನು ನಾಶಮಾಡಿಬಿಟ್ಟಿತು. ಹಿಂಸಾವೃತ್ತಿಯುಳ್ಳ ಮನುಷ್ಯನನ್ನು ಎದುರಿಸಲು ಧೈರ್ಯ ಸಾಲದೆ, 'ಶಾಂತಿ, ಶಾಂತಿ' ಎಂದು ಪಠಿಸುತ್ತ ಅವನ ಕತ್ತಿಗೆ ಕುರಿಯ ತರಹ ತನ್ನ ತಲೆಕೊಟ್ಟು, ಹೇಡಿಯಂತೆ ಸಾಯುವಂತೆ ಮಾಡಿದ್ದನ್ನು ನಾವು ಚರಿತ್ರೆ ತುಂಬಾ ಓದಿದ್ದೇವೆ! ನೀವೂ ಓದಿರಬಹುದಲ್ಲವೆ?"

ಉತ್ತರಿಸಲಿಲ್ಲ ಕುಮಾರ್!

ಅಷ್ಟರಲ್ಲಿ ನಾವು ದಿಲ್ಲೀ ಶಹರಿನ ಮಧ್ಯದಲ್ಲಿರುವ ಕರೋಲ್‌ಬಾಗ್‌ಗೆ ಬಂದು ಸೇರಿದ್ದೆವು. ಅವತ್ತಿನ ಪ್ರವಾಸ ಮತ್ತು ಚರ್ಚೆಗೆ ಕಾರಣವಾದ ಕಪೂರ್‌ಗೆ ವಿದಾಯ ಹೇಳಿ ನಾನು ಕಾರಿನಿಂದ ಇಳಿದು ಮನೆಯ ಕಡೆಗೆ ಹೆಜ್ಜೆ ಹಾಕಿದೆ.

ಮಾರನೆಯ ದಿನ ಬೆಳಿಗ್ಗೆ ಬ್ಯಾಂಕಿಗೆ ಬಂದಾಗ, ನನ್ನ ಮೇಜಿನ ಮೇಲೆ ಒಂದು ಪತ್ರ ಕೂತಿತ್ತು. ಒಡೆದು ಓದಿದಾಗ ನನಗೆ ದಿಗ್‌ಭ್ರಮೆ ಆಗಿತ್ತು!

ಡೀ.ಎಮ್.ರ ಪತ್ರ ಅದು. ಅದರಲ್ಲಿ ನಿಮ್ಮ ಬ್ರಾಂಚ್ ಕಟ್ಟಡದ ಮೊದಲನೆ ಮಹಡಿಯ ಬಾಡಿಗೆಯನ್ನು ಎಂಟು ರೂಪಾಯಿ ಎಂದು ನಿಗದಿಪಡಿಸಿದ್ದೇವೆ. ದಯವಿಟ್ಟು ಮನೆ ಮಾಲೀಕನಿಗೆ ಈ ಬಗ್ಗೆ ವಿಚಾರ ತಿಳಿಸಬೇಕು,' ಎಂದು ತಿಳಿಸಿದ್ದ.

ನಾಲ್ಕು ಅಥವಾ ಐದು ರೂಪಾಯಿಗಳಿಗಿಂತ ಹೆಚ್ಚು ಬಾಡಿಗೆ ಈ ಮನೆಗೆ ನಿಗದಿ ಪಡಿಸಬಾರದು ಎಂದು ಶಿಫಾರಸ್ಸು ಮಾಡಿದ್ದ ನನಗೆ ನನ್ನ ಕೆನ್ನೆಗೆ ಎರಡು ಏಟು ಕೊಟ್ಟು "ನಿನ್ನ ಶಿಫಾರಸ್ಸಿಗೆ ಏನು ಬೆಲೆ ನನ್ನ ಶಕ್ತಿಯ ಮುಂದೆ' ಎಂದು ಹೇಳಿದ ಹಾಗಾಯಿತು. ಪತ್ರವನ್ನು ಮೇಜಿನ ಮೇಲೆ ಬಿಸಾಡಿದೆ. ಅದು ಅಲ್ಲೇ ಕುಳಿತು ನನ್ನನ್ನು ಅಣಕಿಸಿದ ಹಾಗೆ ತೋರಿತು. ಅದನ್ನು ನೋಡುತ್ತಾ ನನಗೆ ಆ ಡೀ.ಎಮ್.ನ ಮೇಲೆ ಸಿಟ್ಟು ಏರುತ್ತಾ ಹೋಯಿತು. ಎಂತಹ ಕಳ್ಳ ಇವ! ಬ್ರಾಂಚ್‌ನಲ್ಲಿ ಮೇನೇಜರ್ ಆಗಿ ಕೆಲಸ ಮಾಡುತ್ತಿದ್ದಾಗ, ಸಾಕಷ್ಟು ಸಾಲ ಕೊಟ್ಟು ಸಿಕ್ಕಿ ಹಾಕಿಕೊಂಡಿದ್ದ. ಈತನನ್ನು ಅಮಾನತುಗೊಳಿಸಿ, ವಸೂಲಿ ಮಾಡುವವರೆಗೂ, ವಾಪಸ್ಸು ಕೆಲಸಕ್ಕೆ ತೆಗೆದುಕೊಂಡಿರಲಿಲ್ಲ ಅವನನ್ನು! ಬ್ಯಾಂಕ್‌ನ ಮುಖ್ಯ ಅಧಿಕಾರಿಗಳಿಗೆಲ್ಲಾ ಇವನು ನೆಂಟ-ಬಂಟರಾದ್ದರಿಂದ, ಒಂದೇ ವಾರದಲ್ಲಿ ಅವನನ್ನು ಕೆಲಸಕ್ಕೆ ಪುನಃ ಸೇರಿಸಿ ಕೊಂಡು, ಪ್ರಮೋಶನ್ ನೀಡಿ, ಡಿವಿಶನಲ್ ಮೇನೇಜರ್ ಎಂದು ನನ್ನ ಮೇಲೆ ಕೂರಿಸಿದ್ದರು! ತನ್ನ ಕೈಚಳಕವನ್ನು ಈಗ ನನ್ನ ಮುಂದೆಯೂ ತೋರಿಸಿಬಿಟ್ಟಿದ್ದ.

ನನ್ನ ಮೈ-ಮನಸ್ಸು ಬೆಂಕಿಯಂತೆ ಉರಿಯತೊಡಗಿತು. ಎದುರು ಸಿಕ್ಕಿದರೆ ಸಿಗಿದು ಹಾಕಿಬಿಡಲೆ? ಕೋಪಾಗ್ನಿ ಉರಿಯತೊಡಗಿದಾಗ, ಹಿಂದಿನ ದಿನದ ಪ್ರವಾಸ ಮತ್ತು ಕಪೂರ್-ಕುಮಾರ್‌ರ ಚರ್ಚೆ ಹಠಾತ್ತನೆ ಜ್ಞಾಪಕಕ್ಕೆ ಬಂತು. ಅಹಿಂಸಾ ಪರಮ

ಧರ್ಮ!ಕೋಪ ಮಾಡಿ ಹಿಂಸೆಗೆ ತೊಡಗಿ, ಕೆಲಸ ಏಕೆ ಕಳೆದುಕೊಳ್ಳಬೇಕು? ಈ ಡೀ.ಎಮ್. ಮನೆ ಹಾಳಾಗ ಎಂದು ಶಾಪ ಹಾಕಿ ಮನೆ ಮಾಲೀಕನಿಗೆ ಹೇಳಿ ಕಳುಹಿಸಿದೆ.

ಸಭರ್‌ವಾಲ್ ಒಳಗೆ ಬಂದು ಕುರ್ಚಿಯ ಮೇಲೆ ಕುಳಿತು ಹಲ್ಲು ಕಿಸಿದ.

"ಮನೆ ಬಾಡಿಗೆ ಎಂಟು ರೂಪಾಯಿ ಅಂತ ನಿಗದಿಪಡಿಸಿದ್ದಾರೆ" ವಿಷಯ ತಿಳಿಸಿದೆ.

"ನನಗೆ ಮೊದಲೇ ತಿಳಿದಿತ್ತು"

ಅವನು ಹಲ್ಲು ಕಿಸಿಯುತ್ತಲೇ ಇದ್ದ.

ನನ್ನ ಕೋಪ ಏರುತ್ತಲೇ ಇತ್ತು !

"ನಿಮ್ಮ ಡೀ. ಎಮ್‌ನ್ನ ಈ ಮೊದಲೇ ಪರಿಚಯ ಮಾಡಿಕೊಂಡಿದ್ದೆ. ಅವರು ಯಾವ ತರಹದ ಮನುಷ್ಯ ಎಂದು ಮೊದಲೇ ತಿಳಿದಿದ್ದೆ. ಅದಕ್ಕೆ ಸರಿಯಾದ ಕಾರ್ಯ ಕೈಗೊಂಡೆ. ನನ್ನ ಕೆಲಸ ಸುಲಭವಾಗಿ ಆಯಿತು."

ಅವನನ್ನು ಒದ್ದು ಓಡಿಸಲೇ ಎಂಬ ಉತ್ಕಟ ಆಸೆಯುಂಟಾಯಿತು. ಛೆ! ಛೆ! 'ಆಸೆಯೇ ದುಃಖಕ್ಕೆ ಕಾರಣ' ಅವನನ್ನು ಒದ್ದು ಓಡಿಸುವ ಆಸೆಯನ್ನು ಅದುಮಿ ಹಿಡಿದೆ.

"ಸಾಬ್ ! ಸೈನಿಕ್ ಫಾರ್ಮ್‌ನಲ್ಲಿ ನನ್ನ ಒಂದು ಸಣ್ಣ ಮನೆ ಇದೆ. ಆ ಮನೆ ಪಕ್ಕದಲ್ಲಿ ನನ್ನ ಸ್ನೇಹಿತನ ಮನೆ ಇದೆ. ನನ್ನ ಸ್ನೇಹಿತ ಒಬ್ಬ ಎನ್.ಆರ್.ಐ. ಅಮೆರಿಕೆಯಲ್ಲಿ ಅವನ ವಾಸ. ತುಂಬಾ ಹಣ ಮಾಡಿದ್ದಾನೆ. ಅವರಿಂದ ಡಿಪಾಸಿಟ್ ಕೊಡಿಸಬೇಕೆಂದು ಪ್ರಯತ್ನ ಮಾಡುತ್ತಾ ಇದ್ದೇನೆ. ನನ್ನ ಜೊತೆ ಬರುತ್ತೀರಾ? ಹೋಗಿ ಅವನನ್ನು ಕಂಡು ಪರಿಚಯ ಮಾಡಿಕೊಂಡು ಬರೋಣ."

'ಡಿಪಾಸಿಟ್' ಎಂಬ ಪದ ಕೇಳಿದ ಕೂಡಲೇ ನನ್ನ ಕೋಪದ ಕಾವು ಆರತೊಡಗಿತು. ಈ 'ಡಿಪಾಸಿಟ್' ಎಂಬ ಪದ ನಮಗೆಲ್ಲಾ 'ರಾಮಬಾಣ' ವಾಗಿತ್ತು. ರಾಮನಾಮವನ್ನಾದರೂ ಮರೆತುಬಿಡಬಲ್ಲವರಾಗಿದ್ದೆವು, ಆದರೆ 'ಡಿಪಾಸಿಟ್' ಎನ್ನುವ ಪದ ಮರೆಯುವ ಹಾಗೇ ಇರಲಿಲ್ಲ.

ತಕ್ಷಣ ಕುರ್ಚಿಯಿಂದ ಎದ್ದು, ಕುಮಾರ್‌ನಿಗೆ ವಿಷಯ ತಿಳಿಸಿ ಸಭ್ರವಾಲ್‌ನ ಜೊತೆ, ಸೈನಿಕ್ ಫಾರ್ಮ್‌ಗೆ ಹೊರಟೆ.

ಸುಮಾರು ನೂರು -ಇನ್ನೂರು ಎಕರೆ ಜಮೀನು ಹೊಂದಿರುವ ಈ ಸೈನಿಕ ಫಾರ್ಮ ಎನ್ನುವ ಪ್ರದೇಶ ಸೇನೆಯಿಂದ ನಿವೃತ್ತಿ ಹೊಂದಿ ಸೇನಾಧಿಕಾರಿಗಳು ಇಲ್ಲಿ ಕೃಷಿಕಾರ್ಯಗಳಲ್ಲಿ ತಮ್ಮ ನಿವೃತ್ತಿ ಜೀವನ ಕೈಗೊಂಡಿದ್ದರು. ಕ್ರಮೇಣ ಅದು

ವೃದ್ಧಿಗೊಂಡು, ದಿಲ್ಲೀಯ ಪ್ರಮುಖ ವಾಣಿಜ್ಯೋದ್ಯಮಿಗಳು, ಐಶ್ವರ್ಯವಂತರು, ರಾಜಕಾರಣಿಗಳು, ಇಲ್ಲಿ ಬಂದು, ಸುಂದರ ಮನೆ ಬಂಗಲೋಗಳನ್ನು ಕಟ್ಟಿ ವಾಸ ಮಾಡತೊಡಗಿದ್ದರು. ನಾನು ಪ್ರದೇಶದ ಬಗ್ಗೆ ಕೇಳಿದ್ದರೂ, ನೋಡಿರಲಿಲ್ಲ. ಈ ಅವಕಾಶವೊಂದು ಸಿಕ್ಕಿತಲ್ಲಾ ಎಂದು ಸಂತೋಷಗೊಂಡೆ.

ಅಂಕು ಡೊಂಕಾದ ಸಪೂರ ಡಾಮರ ರಸ್ತೆಯಲ್ಲಿ ಸಾಗಿದ ನಮ್ಮ ಕಾರು ಒಂದು ಬೃಹತ್ ಬಂಗಲೆಯ ಮುಂದೆ ನಿಂತಿತು. ಸಭ್ರವಾಲ್ ಕಾರಿನಿಂದ ಇಳಿದು ನನಗೆ ಇಳಿಯಲು ಹೇಳಿ ಬಂಗಲೆಯ ಬೃಹತ್ ಬಾಗಿಲ ಕಡೆ ಸಾಗಿದ. ಬಾಗಿಲ ಬಳಿ ನಿಂತಿದ್ದ ಗೂರ್ಖನಿಗೆ ಏನೋ ಹೇಳಿದ. ಅವನು ಸಲಾಂ ಹಾಕಿದಾಗ ನನಗೆ ಅರಿವಾಯಿತು - ಒಳಗೆ ಹೋಗಲು ದಾರಿ ಸಿಕ್ಕಿದೆ ಎಂದು.

ಸುಮಾರು ಅರ್ಧ ಫರ್ಲಾಂಗ್ ಗೇಟಿನಿಂದ ಬಂಗಲೆಯ ಬಾಗಿಲವರೆಗೆ ನಡೆದ ನಂತರ, ಬಂಗಲೆಯ ಬೃಹತ್ ಬಾಗಿಲ ಬಳಿ ಬಂದು ನಿಂತೆವು. ಕರೆಗಂಟೆ ಒತ್ತಿದ ಕೂಡಲೆ, ಬಾಗಿಲು ತೆಗೆದ ಒಬ್ಬ ನೌಕರ. ಸಭ್ರವಾಲ್‌ನನ್ನು ನೋಡಿದ ಕೂಡಲೆ, ಹಸನ್ಮುಖನಾಗಿ ಒಳಗೆ ಬರಲು ಆಹ್ವಾನಿಸಿದ. ಸಭ್ರವಾಲ್ ಈ ಮನೆಗೆ ಒಬ್ಬ ಪರಿಚಿತ ವ್ಯಕ್ತಿ ಎಂದು ಅರಿವಾಯಿತು. ಮನೆಯ ಒಳಗೆ ಕಾಲಿರಿಸಿದ ನಾನು ಒಂದು ದೊಡ್ಡ ಹಾಲಿನಲ್ಲಿ ನಿಂತಿದ್ದೆ. ಹಾಲಿನ ಮಧ್ಯೆ ಸುಂದರ ಪುಟ್ಟ ಈಜುಕೊಳ ! ತಿಳಿನೀಲಿ ಬಣ್ಣದ ನೀರನ್ನು ಹೊಂದಿದ ಈಜು ಕೊಳವನ್ನು ಕಂಡು ನಾನು ಆನಂದ ಭರಿತನಾದೆ. ಉಟ್ಟ ಬಟ್ಟೆ ಬಿಸಾಡಿ ಕೊಳದಲ್ಲಿ ಈಜಾಡುವ ಮನಸ್ಸಾಯಿತು. ನೀರನ್ನೇ ನಿಂತು ನೋಡುತ್ತಿದ್ದ ನನ್ನನ್ನು ವಿಚಾರಿಸಿ, ಒಳಗೆ ಕರೆದೊಯ್ದ ಸಭ್ರವಾಲ್. ಕೊಳದ ದಡದ್ದಲ್ಲೇ ಹಾದು, ಎದುರಿಗೆ ಕಂಡ ಮೆಟ್ಟಲೇರಿ, ಒಂದು ಅಗಲವಾದ ಪಡಸಾಲೆಗೆ ಬಂದೆವು. ಅದರಲ್ಲಿ ವಿಧವಿಧವಾದ ಬಣ್ಣದ ಸೋಫಾಗಳು, ದಿವಾನ್‌ಗಳು, ವಿವಿಧ ಆಸನಗಳು ಅಲಂಕರಿಸಿದ್ದವು. ಸಭ್ರವಾಲ್ ಒಂದು ಸೋಫಾದಲ್ಲಿ ಕುಳಿತು ನನ್ನನ್ನು ತನ್ನ ಬಳಿ ಕುಳಿತುಕೊಳ್ಳುವಂತೆ ಉಪಚರಿಸಿದ. ಈಜುಕೊಳದ ಸೌಂದರ್ಯವನ್ನು ಮೆಲ್ಲುತ್ತಿದ್ದ ನಾನು ಸೋಪಾದ ಮೇಲೆ ಕುಳಿತುಕೊಳ್ಳುವ ಮನಸ್ಸು ಮಾಡಲಿಲ್ಲ. ತಲೆ ಎತ್ತಿ ನೋಡಿದರೆ, ಸುಮಾರು ೨೦-೨೫ ಅಡಿ ಎತ್ತರದ ಛಾವಣಿ ಹೊಂದಿದ್ದ ಈ ದೊಡ್ಡ ಹಾಲಿನ ನಾಲ್ಕೂ ಕಡೆ ದೊಡ್ಡ ಕಿಟಕಿಗಳನ್ನು ಜೋಡಿಸಿದ್ದರು, ಎತ್ತರದ ಗೋಡೆಗೆ ಗವಾಕ್ಷಿಗಳನ್ನು ಇರಿಸಿ, ಗಾಳಿ ಬೆಳಕು ಧಾರಾಳವಾಗಿ ಈಜುಕೊಳದ ಮೇಲೆ ಬೀಳುವ ಏರ್ಪಾಟು ಮಾಡಿದ್ದರು.

"ನಮಸ್ಕಾರ!"

ಹಿಂದಿರುಗಿ ನೋಡಿದಾಗ, ಒಬ್ಬ ಕಪ್ಪು ಕನ್ನಡಕ ಹಾಕಿಕೊಂಡು, ಅಷ್ಟೇನು

ಎತ್ತರ ನಿಲುವಿಲ್ಲದ ಮಧ್ಯ ವಯಸ್ಸಿನ ವ್ಯಕ್ತಿ ಕಾಣಿಸಿದ. ಅವನ ಮೈ ಬಣ್ಣ ಬಿಳಿಚಿಕೊಂಡಿದ್ದು, ತೊನ್ನು ಹಿಡಿದ ಹಾಗೆ ತೋರಿತು. ಮೈಬಣ್ಣವೇ ಬಿಳಿದಾಗಿದ್ದರೆ, ಬಿಳೀ ಮನುಷ್ಯ ಆಗಿರಬೇಕು.

"ನನ್ನ ಹೆಸರು ಚಡ್ಡಾ!" ಎಂದ ಅವ

ಹಾಗಾದರೆ ಇವನು ಪಂಜಾಬೀ ! ಇಷ್ಟು ಬಿಳೀ ಬಣ್ಣ ಹೇಗೆ ಬಂತು ಇವನಿಗೆ?

"ಇವರು ಬ್ಯಾಂಕ್ ಮೇನೇಜರ್. ನಿಮ್ಮ ಬಳಿ ಡಿಪಾಸಿಟ್‌ಗೋಸ್ಕರ ಬಂದಿದ್ದಾರೆ "

ಸಭ್ರುವಾಲ್ ನನ್ನನ್ನು ಚಡ್ಡಾಗೆ ಪರಿಚಯಿಸಿದ.

"ಇವರು ಬೆಂಗಳೂರಿನವರು."

"ಹೋ! ಬೆಂಗಳೋರ್ ! ಬಹಳ ಸಂತೋಷ. ಊರು ಬಹಳ ಚೆನ್ನಾಗಿದೆ. ನೋಡಿದ್ದೇನೆ ನಾನು. ಚೆನ್ನಾಗಿದೆ !"

"ನಿಮ್ಮ ಈಜು ಕೊಳ ಬಹಳ ಚನ್ನಾಗಿದೆ " ಎಂದೆ.

"ಎಷ್ಟು ಸಮಯದಿಂದಿದ್ದೀರಿ ದಿಲ್ಲೀಯಲ್ಲಿ ?" ಕೇಳಿದ ಅವನು.

"ಎರಡು ವರ್ಷವಾಯಿತು"

"ಹೇಗನಿಸುತ್ತದೆ ದಿಲ್ಲೀ ಜೀವನ ?"

"ಚೆನ್ನಾಗಿದೆ !"

ನೌಕರನೊಬ್ಬ ಮೂರು ಲೋಟ ಶರಬತ್ ತಂದಿರಿಸಿದ. ಒಂದನ್ನು ನನ್ನ ಕೈಗೆ ಇತ್ತು ಹೊರಟು ಹೋದ.

'ಇವರಿಗೆ ಸ್ವಲ್ಪ ಡಿಪಾಸಿಟ್ ಕೊಟ್ಟು ಸಹಾಯ ಮಾಡಿ"

ಸಭ್ರುವಾಲ್ ಮತ್ತೊಮ್ಮೆ ನನ್ನ ಪರವಾಗಿ, ಡಿಪಾಸಿಟ್‌ಗಾಗಿ, ಚಡ್ಡಾನಿಗೆ ನಿವೇದಿಸಿಕೊಂಡ.

"ಬಹಳ ಬಿಸಿಲು ದಿಲ್ಲೀಯಲ್ಲಿ !"

ಚಡ್ಡಾ ಡಿಪಾಸಿಟ್‌ನ ಬಗ್ಗೆ ಚಕಾರ ಎತ್ತದೇ, ದಿಲ್ಲೀ ಬಿಸಿಲಿನ ಬಗ್ಗೆ ಮಾತನಾಡಲಿಕ್ಕೆ ಶುರುಮಾಡಿದನಲ್ಲಾ! ಇನ್ನು ಇವನ ಹತ್ತಿರ ಕುಳಿತು ಚಕ್ಕಂದ ಹೊಡಿಯುವುದರಲ್ಲಿ ಪ್ರಯೋಜವಿಲ್ಲವೆಂದು ಬಗೆದು, 'ಹೋಗೋಣವೇ?" ಎಂದು ಸಭ್ರುವಾಲ್‌ಗೆ ಸೂಚಿಸಿದೆ.

ಸಭ್ರುವಾಲ್ ಎದ್ದು ನಿಂತ. ಚಡ್ಡಾನ ಕೈ ಕುಲುಕಿದ. ಅಲ್ಲಿಂದ ನಾವು ಕಾಲ್ತೆಗೆದೆವು.

ದಾರಿಯಲ್ಲಿ ನಾನು ಸಭ್ರುವಾಲ್‌ನನ್ನು ಕೇಳಿದೆ.

"ಚಡ್ಡಾ ಡಿಪಾಸಿಟ್ ಬಗ್ಗೆ ಅಷ್ಟೇನು ಉತ್ಸುಕತೆ ತೋರಲಿಲ್ಲವಲ್ಲ !"

"ಮೊದಲನೆಯ ಏಟಿಗೆ ಹಣ್ಣು ಉದುರುತ್ತದೆಯೆ ?"

ನಾನು ಮರುಮಾತನಾಡಲಿಲ್ಲ.

ಸೈನಿಕ್‌ಫಾರಂ ಬಿಟ್ಟು ಹೊರಬಂದಾಗ, ಅಲ್ಲೇ ರಸ್ತೆ ಬದಿಯಲ್ಲಿದ್ದ ಜುಗ್ಗಿ ಜೋಪಡಿಗಳ ಸಮೂಹ ಕಾಣಿಸಿತು. ದರಿದ್ರತೆಯ ಕರಾಳ ಮುಖ ಕಂಡು ಬಂದು, ಹೇಸಿಗೆ ರೋಗ ರುಜಿನ ಮಲ-ಮೂತ್ರಗಳ ದುರ್ನಾತ ಗಬ್ಬೆಂದು ಮುಖಕ್ಕೆ ರಾಚಿತು. ಕುಡಿಯುವುದಕ್ಕೆ, ಶುಚಿಯಾಗುವುದಕ್ಕೆ ನೀರಿನ ಕೊರತೆ ಇಲ್ಲಿ ಗೋಚರಿಸಿದರೆ ಚಡ್ಡಾನ ಮನೆಯಲ್ಲಿ ಈಜಾಡುವುದಕ್ಕೆ ಈಜುಕೊಳದ ತುಂಬಾ ನೀರು ! ಕುಡಿಯಲಿಕ್ಕೆ ಇಲ್ಲದಿದ್ದರೂ ಈಜಲಿಕ್ಕೆ ಸಾಕಷ್ಟಿದೆ. ಈ ಸೈನಿಕ್ ಫಾರ್ಮ್‌ನಿಂದ ಸುಮಾರು ೨೫೦ ಬಂಗಲೆಗಳಲ್ಲಿರುವ ಪ್ರತೀ ಈಜಕೊಳದ ನೀರು ದಿಲ್ಲೀಯ ಬಹುತೇಕ ಕೊಳಚೆ ಪ್ರದೇಶಗಳ ನಿವಾಸಿಗಳ ಬಾಯಾರಿಸಬಹುದು! ಎಂತಹ ವಿಪರ್ಯಾಸ !

ದಿಲ್ಲೀಯ ಅಸಂಖ್ಯಾತ ಐಶ್ವರ್ಯ ಪುತ್ರರು ತಮ್ಮ ಐಶ್ವರ್ಯದ ಒಂದು ಭಾಗವನ್ನು ಕೊಳಚೇ ನಿವಾಸಿಗಳ ಬಡತನವನ್ನು ನಿವಾರಿಸುವುದಕ್ಕಾಗಿ ಉಪಯೋಗಿಸಿದರೆ, ದಿಲ್ಲೀಯ ಜನಜೀವನದ ದಿಕ್ಕನ್ನೇ ಬದಲಿಸಬಹುದು. ಆದರೆ ಇದು ಕಷ್ಟ ಸಾಧ್ಯ. ಜನರೆಲ್ಲಾ ಹಣವಂತರಾದರೆ, ಅವರಿಗಾಗಿ ಜೀತದಾಳಾಗಿ ದುಡಿಯುವವರು ಎಲ್ಲಿಂದ ದೊರಕುವರು ? ಬಹಳ ಕಡಿಮೆ ಕೂಲಿಗೆ ಆಳುಗಳು ಎಲ್ಲಿಂದ ಬರಬೇಕು? ಪಾಪದ ಬಿಹಾರಿಗಳು ಮತ್ತು ರಾಜಾಸ್ಥಾನಿಗಳು ತಮ್ಮ ರಟ್ಟೆ ಬಲದಿಂದ ಕಟ್ಟಿದ ದಿಲ್ಲೀ ರಾಜಮಹಲ್‌ಗಳು ಮತ್ತು ಇನ್ನೂ ಕಟ್ಟಲಾಗುತ್ತಿರುವ ಗಗನ ಚುಂಬಿ ಮಹಲ್‌ಗಳು ಮತ್ತು ಪಂಚತಾರಾ ಹೋಟೆಲ್‌ಗಳಿಗೆ ಕೂಲಿಯಾದರೂ ಎಲ್ಲಿಂದ ಕೊಡ ಬೇಕು? ಹಣವಂತರ ಕೈ ಮುಷ್ಟಿಯಲ್ಲಿರುವ ರಾಜಕಾರಣಿಗಳ ವೋಟ್ ಬ್ಯಾಂಕ್ ಆಗಿರುವ ಈ ಕೊಳಚೆ ಪ್ರದೇಶದ ನಿವಾಸಿಗಳಿಗೆ ಮನೆ, ಮಠ, ಉದ್ಯೋಗ, ಆಸ್ಪತ್ರೆ ಪಾಠಶಾಲೆ ಒದಗಿಸಿದರೆ, ಚುನಾವಣೆಗಳಲ್ಲಿ ಚುನಾಯಿಸಿ ಬರುವುದಾದರೂ ಹೇಗೆ?

ತಲೆಯಲ್ಲಿ ನೂರಾರು ಯೋಚನೆಗಳು, ಪ್ರಶ್ನೆಗಳು ನೀರ ಮೇಲಿನ ಗುಳ್ಳೆಗಳಂತೆ ಉದ್ಭವಿಸಿ, ಒಡೆದುಹೋದವು. ಈ ಮಧ್ಯೆ ನಮ್ಮ ಕಾರು ಬ್ಯಾಂಕಿನ ಮುಂದೆ ಬಂದು ನಿಂತಿದ್ದು ಗೊತ್ತಾಗಲೇ ಇಲ್ಲ.

"ಇಳೀರಿ !" ಆಜ್ಞಾಪಿಸಿದ ಸಭ್ರವಾಲ್!

ಕಾರಿನಿಂದ ಇಳಿದು ನನ್ನ ಕ್ಯಾಬಿನ್‌ನ ಒಳಗೆ ಕಾಲಿರಿಸಿದೆ.

"ಹಲ್ಲೋ"

ಕುರ್ಚಿಯಲ್ಲಿ ಕುಳಿತಿದ್ದ ಸರದಾರ್‌ಜೀ ಕತ್ತು ತಿರುಗಿಸಿ, ನನ್ನ ಕಡೆ ನೋಡಿ

'ಹಲೋ' ಎಂದು ಹೇಳಿ ನಕ್ಕಿದ್ದ. ನನಗೂ ಅಚ್ಚರಿಯಾಗಿತ್ತು ಇವನು ಬಂದಿದ್ದು. ಆದರೆ ಸಂತೋಷವೂ ಆಗಿತ್ತು.

"ಏನು ವಿಶೇಷ ? ಇಷ್ಟು ದೂರ ಬಂದಿದ್ದು ?'

ನನ್ನ ಕುರ್ಚಿಯಲ್ಲಿ ಕುಳಿತು ಕೇಳಿದೆ.

"ಇಲ್ಲೇ ನಿಮ್ಮ ಬ್ಯಾಂಕಿನಲ್ಲಿ ಸ್ವಲ್ಪ ಕೆಲಸವಿತ್ತು. ಈ ಚೆಕ್ ಪಾಸ್ ಮಾಡಿಕೊಂಡು, ಹಣ ತೆಗೆದುಕೊಂಡು ಹೋಗೋಣವೆಂದು ಬಂದೆ "

ಚೆಕ್ ಕೈಗೆ ಕೊಟ್ಟ. ಚೆಕ್ ಕ್ರಾಸ್ ಆಗಿತ್ತು. ನಗದು ಹಣ ಕೊಡುವ ಹಾಗಿರಲಿಲ್ಲ ನಗುತ್ತಾ ವಾಪಸ್ಸು ಕೊಟ್ಟು ಹೇಳಿದೆ.

"ಚೆಕ್ ಕ್ರಾಸ್ ಆಗಿದೆಯಲ್ಲಾ !"

ಸರದಾರ್‌ಜೀ ಕೈಗೆ ಚೆಕ್ ತೆಗೆದುಕೊಂಡು ಸೂಕ್ಷ್ಮವಾಗಿ ಅದನ್ನು ಅವಲೋಕಿಸಿದ. ಹೌದೆಂದು ಗೋಣು ಅಳ್ಳಾಡಿಸಿದ.

"ಕಣ್ಣಿಗೆ ಕಾಣಿಸದ ಹಾಗೆ ಕ್ರಾಸ್ ಮಾಡಿಬಿಟ್ಟಿದ್ದಾನೆ. ಬದ್ಮಾಶ್ !"

ಚೆಕ್‌ನ ಮೊತ್ತ ದೊಡ್ಡದಾಗಿದ್ದು, ಕ್ರಾಸ್ ಮಾತ್ರ ಚಿಕ್ಕದಾಗಿದ್ದವು !

ಸರದಾರ್‌ಜೀಗೆ ಹಣ ಕೈಗೆ ಸಿಗದೇ ಇದ್ದುದ್ದು ಬಹಳ ಸಂಕಟವಾಗಿರಬೇಕು.

"ಯಾರ ಚೆಕ್ ಅದು ?"

"ಅದೇ ಧಡಿಯ ಅಗ್ರವಾಲ್‌ನದು !" ಎಂದ.

ಅಗ್ರವಾಲ್ ಎಂದೂ ಕ್ರಾಸ್ ಹಾಕದೇ ಚೆಕ್ ನೀಡುತ್ತಿರಲಿಲ್ಲ. ಬೇರರ್ ಚೆಕ್ ನೀಡುವುದಕ್ಕೆ ಕಾರಣವೂ ಇರಲಿಲ್ಲ. ಹಾಗಿದ್ದ ಮೇಲೆ ಸರದಾರ್‌ಜೀ ಹೇಗೆ ಬೇಸ್ತು ಬಿದ್ದ ?"

"ಹಣದ ಅವಶ್ಯಕತೆ ಇದೆಯೆ?" ವಿಚಾರಿಸಿದೆ.

"ನಮ್ಮ ಬಾಸ್‌ಗೆ ಇದೆ, ನನಗೆ ಇಲ್ಲ. ಹೇಗೋ ಚೆಕ್ ಕ್ರಾಸ್ ಆಗಿಲ್ಲವಲ್ಲ, ಹಣ ತೆಗೆದುಕೊಂಡು ಬಾ ಎಂದ. ನನಗೂ ನಿಮ್ಮನ್ನು ನೋಡಿ ಹೋಗೋಣವೆಂದು ಮನಸ್ಸಾಯಿತು. ಬಂದೆ !"

"ನಮಸ್ಕಾರ!"

ಕಿರುಚುತ್ತಲೇ ಒಳಗೆ ಬಂದ ಕಪೂರ್ !

"ಯಾಕೆ ಹೀಗೆ ಕಿರುಚುತಾನೆ ಈ ಪ್ರಾಣಿ" ಎಂದು ಯೋಚಿಸುವವನ ಹಾಗೆ ಮುಖ ಮಾಡಿ, ಕತ್ತು ತಿರುಗಿಸಿ ನೋಡಿದ ಸರದಾರ್‌ಜೀ.

'ಬನ್ನಿ ಕುಳಿತುಕೊಳ್ಳಿ' ಎಂದು ಆಹ್ವಾನಿಸಿದೆ ಕಪೂರ್‌ನನ್ನು. ಸರದಾರ್‌ಜೀಗೆ ಪರಿಚಯ ಮಾಡಿಸಿದೆ. 'ಕಪೂರ್' ಎಂದು ನುಡಿದ ಕೂಡಲೇ, ಸರದಾರ್‌ಜೀ ಅವ

ನೊಡನೆ, ಪಂಜಾಬಿಯಲ್ಲಿ ಸಂಭಾಷಣೆಯನ್ನು ಶುರುಮಾಡಿ' ತನ್ನ ಮಾತೃಭಾಷೆಯ ಮೇಲಿನ ಪ್ರೇಮವನ್ನು ಹೊರಗೆಡಹಿದ್ದ.

ಊಟದ ಸಮಯವಾದ್ದರಿಂದ, ಬ್ಯಾಂಕಿನ ಸಿಬ್ಬಂದಿಗಳೆಲ್ಲಾ, ತಮ್ಮ ತಮ್ಮ ಟಿಫನ್ ಕ್ಯಾರಿಯರ್ ತೆಗೆದು, ಅಚ್ಚುಕಟ್ಟಾಗಿ ಉಪಾಹಾರವನ್ನು ಕಬಳಿಸಲು ಪ್ರಾರಂಭಿಸಿದ್ದರು. ನನ್ನ ಹೊಟ್ಟೆಯೂ ತಾಳ ಹಾಕಲಾರಂಭಿಸಿತು.

"ಊಟ ಮಾಡಿ ಬರೋಣವೇ ?"

ಇಬ್ಬರನ್ನು ಆಹ್ವಾನಿಸಿದೆ. ಇಬ್ಬರೂ ಒಡನೆಯೇ ಒಪ್ಪಿದರು. ಹೊರಗೆ ಹೋಗಿ, ಸ್ವಲ್ಪವೇ ದೂರದಲ್ಲಿದ್ದ ಒಂದು ಹೋಟಲ್‌ನೊಳಗೆ ನುಗ್ಗಿದೆವು. ಇಡೀ ಇಲಾಖೆಗೆ ಈ ಹೋಟೆಲ್ ಹೆಸರುವಾಸಿಯಾಗಿದ್ದು ಕೇವಲ ಶಾಖಾಹಾರಿ ತಿನಿಸುಗಳು ಅಲ್ಲಿ ದೊರೆಯುತ್ತಿದ್ದವು.

ದೋಸೆಗೆ ಆರ್ಡರ್ ಮಾಡಿ, ಹರಟುತ್ತಾ ಕುಳಿತೆವು.

"ಈ ಹೋಟೆಲ್‌ನ ಮಾಲೀಕ ಒಬ್ಬ ಅಡಿಗೆ ಮಾಡುವ ಭಟ್ಟನಾಗಿದ್ದ. ಲಾಹೋರ್‌ನಲ್ಲಿದ್ದ ಇವನ ಹೋಟೆಲ್ ಲೂಟಿ ಮಾಡಲಾಯಿತು. ೧೯೪೭ ರ ದಂಗೆಯಲ್ಲಿ ಜೀವ ಉಳಿಸಿಕೊಂಡು ಬಂದ ಈತ, ಇದೇ ಜಾಗದ ರಸ್ತೆಯಂಚಿನಲ್ಲಿ, ಆಲೂ ಪಕೋಡ, ಫೂಲ್‌ಗೋಬಿ ಪಕೋಡ ಮಾಡಿ, ಮಾರಿ, ಹಣ ಗಳಿಸಿ, ಈ ಸ್ಥಳ ಖರೀದಿಸಿ, ದೊಡ್ಡ ಹೋಟೆಲ್ ಕಟ್ಟಿಸಿ, ಈಗ ಕೋಟ್ಯಾಧಿಪತಿಯಾಗಿದ್ದಾನೆ!"

ಕಪೂರ್, ಹೋಟೆಲ್ ಮಾಲೀಕನ ಚರಿತ್ರೆಯನ್ನು ಸಂಕ್ಷಿಪ್ತವಾಗಿ ವಿವರಿಸಿದ.

ಅವನ ಮಾತುಗಳಲ್ಲಿ ಉತ್ಪ್ರೇಕ್ಷೆ ಇರಲಿಲ್ಲ.

ಸರ್ವಸ್ವವನ್ನೂ ಕಳೆದುಕೊಂಡು, ನಿರ್ಗತಿಕರಾಗಿ ಬಂದ ಎಲ್ಲಾ ಪಂಜಾಬೀ ನಿರಾಶ್ರಿತರ ಕಥೆಯೂ ಇದಾಗಿತ್ತು. ಯಾರೂ ತಮ್ಮ ಹಣೇಬರಹವನ್ನು ಹಳಿಯುತ್ತಾ, ತಮ್ಮ ದುರ್ದೈವವನ್ನು ಶಪಿಸುತ್ತಾ ಕುಳಿತುಕೊಳ್ಳದೇ, ಯಾರನ್ನೂ ಯಾಚಿಸದೇ, ತಮ್ಮ ಬುದ್ಧಿ ಶಕ್ತಿ, ಯುಕ್ತಿ, ನಿಪುಣತೆ, ಕುಶಲತೆ, ಸಾಮರ್ಥ್ಯ, ದಕ್ಷತೆಗಳಿಂದ ಎಲ್ಲಾ ಕ್ಷೇತ್ರದಲ್ಲೂ ಕ್ರಾಂತಿಕಾರಿಕ ಸಾಧನೆಗಳನ್ನು ಗಳಿಸಿ, ದೇಶದ ಇತರ ಜನಾಂಗದವರಿಗೆ ಮಾದರಿಯಾಗಿದ್ದಾರೆಂಬುದರಲ್ಲಿ ಸಂಶಯವೇ ಇರಲಿಲ್ಲ. ಪಂಜಾಬೀಗಳು ಶ್ರಮಜೀವಿಗಳು, ನುರಿತ ಕಾರ್ಯ ನಿರ್ವಾಹಕರು ಎಂಬ ವಿಷಯ ಸರ್ವ ವಿದಿತವಾಗಿದ್ದವು.

ಮಸಾಲಾ ದೋಸೆ, ವಡೆ ಸಾಂಬಾರ್, ಚೋಲೆ ಬಟೂರೆ-ತಿಂದಾದ ಮೇಲೆ, ದೊಡ್ಡ ಲೋಟದಲ್ಲಿ ಲಸ್ಸೀ ಕುಡಿದು 'ಡರ್' ಎಂದು ತೇಗಿ ಹೊರಹೊರಟರು ಇಬ್ಬರು ಪಂಜಾಬಿಗಳು. ನಾನು ಒಂದು ದೋಸೆ ತಿಂದು, ಕಾಫಿ ಕುಡಿದ ಮಾತ್ರಕ್ಕೆ

ಹೊಟ್ಟೇ ತುಂಬಿ, ವಾಪಸ್ಸು ಬ್ಯಾಂಕಿಗೆ ಹೋಗಿ ಕೆಲಸವಾದರೂ ಹೇಗೆ ಮಾಡುವುದು ಎಂದು ಎಣಿಕೆ ಹಾಕುತ್ತಾ ಇರುವಾಗ, ಕಪೂರ್ ನುಡಿದ :

"ಸಾಬ್ ! ನೀವು ಬ್ಯಾಂಕಿಗೆ ಹೋಗಿ. ನಮಗೆ ಇಲ್ಲಿ ಸ್ವಲ್ಪ ಕೆಲಸ ಇದೆ!" ಎಂದು ಹೇಳಿ ನನ್ನನ್ನು ಅಲ್ಲೇ ಬಿಟ್ಟು, ಬಹಳ ದಿನಗಳಿಂದಲೂ ಅಗಾಧ ಸ್ನೇಹವಿರುವ ಸ್ನೇಹಿತರಂತೆ, ಹೆಗಲ ಮೇಲೆ ಕೈ ಏರಿಸಿ, ನಿಂತ ಜಾಗದಿಂದ ನಿರ್ಗಮಿಸಿದರು !

ಅವರನ್ನೇ ನೋಡುತ್ತಾ ನಾನು ಅಲ್ಲೇ ಕೆಲವು ಕ್ಷಣ ನಿಂತು, ಮೆಲ್ಲನೆ ಬ್ಯಾಂಕ್‌ನತ್ತ ಹೆಜ್ಜೆ ಹಾಕಿದೆ.

ಬ್ಯಾಂಕ್‌ನೊಳಗೆ ಹೊಕ್ಕೊಡನೇ, ಯಾವುದೋ ಸಂತೆಮಾಳಕ್ಕೆ ಹೊಕ್ಕಹಾಗೆ ಅನುಭವವಾಯಿತು. ಸಿಬ್ಬಂದಿಗಳೆಲ್ಲಾ ಕಿರುಚಾಡುತ್ತಾ, ಆರ್ಭಟಿಸುತ್ತಾ ಬಾಯಿ ಬಡಿದುಕೊಳುತ್ತಾ, ಅತ್ತಿಂದ ಇತ್ತ, ಇತ್ತಲಿಂದ ಅತ್ತ ತಿರುಗುತ್ತಿದ್ದರು. 'ಇವರಿಗೆಲ್ಲಾ ಏನಾಗಿದೆ ಈ ದಿನ ಎಂದು ಯೋಚಿಸುತ್ತಾ ನನ್ನ ಕ್ಯಾಬಿನ್‌ಗೆ ಹೋಗಿ ಕುಳಿತೊಡನೆ, ಸಿಬ್ಬಂದಿಗಳೆಲ್ಲಾ ನುಗ್ಗಿದ್ದರು ನನ್ನ ಹಿಂದೆ. ಭಯವಾಯಿತು. ನನಗೆ ! ಇವರೆಲ್ಲಾ ಏನು ಮಾಡಲಿಕ್ಕೆ ತಯಾರಾಗಿದ್ದಾರೆ ?

"ಏನು ಸಮಾಚಾರ?" ಎಂದೆ ಆದಷ್ಟು ಸಮಾಧಾನದ ಧ್ವನಿಯಿಂದ.

"ಕೆಂಪು ಕೋಟೆ ಬಳಿ ಬಸ್‌ನಲ್ಲಿ ಬಾಂಬ್ ಸ್ಫೋಟಗೊಂಡು, ಹತ್ತು ಜನ ಸತ್ತರಂತೆ!"

"ಆತಂಕವಾದಿ ಬಿಂದ್ರನ್‌ವಾಲೇ ಕಡೆಯವರ ಕೈವಾಡವಿದೆಯಂತೆ !"

ಪಂಜಾಬಿನಿಂದ ದಿಲ್ಲೀಗೆ ಆತಂಕವಾದಿಗಳು ಆತಂಕ ಎಬ್ಬಿಸಿ, ನಮ್ಮ ಬ್ಯಾಂಕ್ ಸಿಬ್ಬಂದಿಗಳ ನೆಮ್ಮದಿ ಹಾಳುಮಾಡಿಬಿಟ್ಟಿದ್ದರು.

# 5

"ಈ ಮರದ ಸಸಿಯನ್ನು ಶ್ರೀಲಂಕಾದ ಸಿರಿಮಾವೋ ಬಂದಾರನಾಯ್ಕರು ದಿಲ್ಲೀಗೆ ಬಂದಾಗ, ನೆಟ್ಟಿದ್ದು ! ಈಗ ಹೆಮ್ಮರವಾಗಿ ಬೆಳೆದಿದೆ."

ಹೊಟ್ಟೆ ಅಗ್ರವಾಲ್ ವಿವರಿಸುತ್ತಿದ್ದ. ನಾವು ಇಬ್ಬರೂ ದಿಲ್ಲೀಯ ಪ್ರಸಿದ್ಧ ಬುದ್ಧ ಜಯಂತಿ ಪಾರ್ಕ್‌ನಲ್ಲಿ ಭಾನುವಾರ ಬೆಳಿಗ್ಗೆ, ನಮ್ಮ ಹೊಟ್ಟೆ ಇಳಿಸಿಕೊಳ್ಳುವ ಪ್ರಯತ್ನದಲ್ಲಿ, ವ್ಯಾಯಾಮ ಮಾಡಿಕೊಳ್ಳುವ ನೆಪ ಒಡ್ಡಿ ತಿರುಗಾಡುತ್ತಿದ್ದೆವು.

ಮರ ಸುಂದರವಾಗಿ ಬೆಳೆದಿತ್ತು. ಎರಡೂ ದೇಶಗಳ ಮಧುರ ಬಾಂಧವ್ಯಕ್ಕೆ ಸೂಚ್ಯವಾಗಿ ಭವ್ಯವಾಗಿ ನಿಂತಿತ್ತು ಈ ಬೃಹತ್ ಅರಳೀ ವೃಕ್ಷ. ಮರದ ಸುತ್ತ ಬೇರೆ ಯಾವ ಗಿಡ ಮರ ಬೆಳಸದೆ, ಹುಲ್ಲು ಬೆಳೆಸಿ, ಅಡ್ಡಾಡಲಿಕ್ಕೆಂದು ಜಾಗ ಬಿಟ್ಟಿದ್ದರು. ಒಂದು ಸುಂದರ ಮರ, ಅನುಪಮ ಕವಿತೆಯಂತೆ!' ಮರವನ್ನೇ ನೋಡುತ್ತಾ ಆನಂದಿಸುತ್ತಿದ್ದೆ. ಎಲ್ಲಿಂದಲೋ ಹಾರಿ ಬಂದ ಒಂದು ಕಾಲ್ಚೆಂಡು ಅಗ್ರವಾಲ್‌ನ ಬೆನ್ನಿಗೆ ಗುದ್ದಿತು. ಸಿಟ್ಟಿನಿಂದ ಅಗ್ರವಾಲ್ ಕೆಂಡವಾದ. ಚೆಂಡನ್ನು ಕೈಗೆ ತೆಗೆದು ಸುತ್ತಲೂ ಕಣ್ಣು ಓಡಿಸಿದ.

"ಬಾಲ್ ಈ ಕಡೆ ಎಸೆಯೋ ಧಡಿಯಾ!" ಕೂಗಿದ ಒಬ್ಬ ಯುವಕ ಅವನ ಸುತ್ತ ಸುಮಾರು ಐದು - ಆರು ಯುವಕರು ನಿಂತಿದ್ದರು.

"ಇದು ಪಾರ್ಕ್! ಇಲ್ಲಿ ಫುಟ್‌ಬಾಲ್ ಆಡಕೂಡದು ! ಗೊತ್ತಾ ನಿಮಗೆ ?"

"ಗೊತ್ತು ! ಈಗ ಬಾಲ್ ಎಸೆಯೋ ಧಡಿಯಾ ?" ಮತ್ತೊಬ್ಬ ಕೂಗಿದ.

"ಸುಮ್ಮನೆ ಜಗಳವೇತಕೆ ? ಎಸೆದು ಬಿಡಿ ಬಾಲನ್ನು!" ಎಂದೆ ನಾನು.

" ಬೇಜವಾಬ್ದಾರಿ ಹುಡುಗರು! ಇವರಿಗೆ ಬುದ್ಧಿ ಕಲಿಸಬೇಕು!" ಕಿರುಚಿದ ಅಗ್ರವಾಲ್.

"ಏಸೀ ಬಾಲ್, ಮೋಟೇ !" ಯುವಕರೆಲ್ಲಾ ಒಮ್ಮೆಲೆ ಕಿರುಚತೊಡಗಿದರು.

"ಮೋಟೇ ? ಬಾಲ್ ಫೇಂಕೋ !"

ಬುದ್ಧ ಜಯಂತೀ ಪಾರ್ಕ್‌ನ ಮೂಲೆ ಮೂಲೆಗಳಲ್ಲಿ ಯುವಕರ ಯುದ್ಧ ಕಹಳೆ ಮೊಳಗಿತು !

"ಶಾಂತಿ! ಶಾಂತಿ!" ಎಂದು ಉಚ್ಚರಿಸುತ್ತಾ ಜೀವಮಾನವಿಡೀ ಉಪದೇಶವಿತ್ತ ಬುದ್ಧನ ಹೆಸರಿನ ಈ ವನದಲ್ಲಿ, ಒಂದು ಕಾಲ್ಚೆಂಡಿಗಾಗಿ ಹೋರಾಟ ನಡೆಯುವು ದರಲ್ಲಿತ್ತು! ಸಂಧಾನಕ್ಕಾಗಿ ನಾನು ಮಧ್ಯ ಪ್ರವೇಶಿಸಿದರೆ ಅದೇ ಕಾಲ್ಚೆಂಡಿನಿಂದ ಒದೆ ತಿನ್ನುವ ಅವಕಾಶವಿತ್ತು !

"ಶಿಸ್ತು, ನಿಯಮ ಪಾಲಿಸದ ಜನ ಇವರು! ಪಾರ್ಕಿನಲ್ಲಿ ಚೆಂಡಾಟ! ಛೆ!"

ಹೊಟ್ಟೆ ಅಗ್ರವಾಲ್ ಚೆಂಡನ್ನು ಹೊಟ್ಟೆಗೆ ಅದುಮಿ ಹಿಡಿದು ಗುಡುಗಿದ.

ದೂರದಲ್ಲಿದ್ದ ಯುವಕರಿಗೆ ಅವನು ಗುಡುಗಿದ್ದು ಕೇಳಿಸಲಿಲ್ಲ. ಅವರು ಕೂಗುತ್ತಲೇ ಇದ್ದರು.

"ಬಾಲ್! ಬಾಲ್ ! ದೇ ದೋ ಬಾಲ್ !"

ಕುದುರೆ ಮೇಲಿಂದ ಬಿದ್ದ ಅಗ್ರವಾಲ್, ಮತ್ತೆ ಮದುವೆ ತಂಟೆಗೆ ಹೋಗಿರಲಿಲ್ಲ. ಕೈಕಾಲು ಊನವಾಗಿದ್ದು ಅದನ್ನು ಸರಿಮಾಡಿಕೊಂಡು, ವಿಪರೀತವಾಗಿ ಬೆಳೆದಿದ್ದ ಹೊಟ್ಟೆಯನ್ನು ಇಳಿಸಿಕೊಳ್ಳುವ ಸಲುವಾಗಿ, ಪಾರ್ಕಿಗೆ ಬಂದು ವ್ಯಾಯಾಮ ಮಾಡುವಾಗ, ಈ ಯುವಕರ ಕೈಗೆ ಸಿಕ್ಕಿಹಾಕಿಕೊಂಡು, ಮತ್ತೆ ಎಲ್ಲಿ ಕೈಕಾಲು ಮುರಿಸಿಕೊಳ್ಳುತ್ತಾನೋ ಎಂಬ ಭಯವಾಯಿತು ನನಗೆ. ಅವನ ಒಂದು ಕೈಯಲ್ಲಿ ಒಂದು ಕೈ ಚೀಲ ಬೇರೆ ಹಿಡಿದಿದ್ದ. ಅದರಲ್ಲಿ ಏನಿದೆಯೋ ತಿಳಿದಿರಲಿಲ್ಲ. ಇನ್ನೊಂದು ಕೈಯಲ್ಲಿ ಚೆಂಡು ಹಿಡಿದು, ಅದನ್ನು ಹೊಟ್ಟೆಗೆ ಗಟ್ಟಿಯಾಗಿ ಅದುಮಿ ಹಿಡಿದುಕೊಂಡಿದ್ದ ಠೀವಿಯನ್ನು ನೋಡಿದ ಯಾರಿಗಾದರೂ ನಗು ತರಿಸುವ ನೋಟವಾಗಿತ್ತು.

"ಶಿಸ್ತು ಕಲಿಸಲಿಲ್ಲ ಇವರಿಗೆ ಇವರ ತಂದೆ ತಾಯಿಯರು ! ಪಾರ್ಕಿನಲ್ಲಿ ಚೆಂಡಾಟ!"

ಗುಡುಗುತ್ತಲೇ ಇದ್ದ ಹೊಟ್ಟೆ ಅಗ್ರವಾಲ್ ! ದಿಲ್ಲೀವಾಲರಿಗೆ ಶಿಸ್ತು ಹೇಳಿಕೊಡುವುದು ! ಎಂತಹ ಜೋಕು ! 'ಶಿಸ್ತು' ಎನ್ನುವ ಪದದ ಅರಿವು ತಿಳಿವು ಇರದಿದ್ದ ಈ ಜನರಿಗೆ, ಹೊಟ್ಟೆ ಅಗ್ರವಾಲ್ 'ಶಿಸ್ತು' ಎಂಬ ಪದದ ಪ್ರಯೋಗ ಮಾಡುತ್ತಾ ಇದ್ದಾನಲ್ಲಾ ! ಮಿತಿಮೀರಿ ಬೆಳೆಸಿದ ಹೊಟ್ಟೆಯನ್ನು ಹದ್ದುಬದ್ದಿನಲ್ಲಿರಿಸಿಕೊಳ್ಳದವ, ಚೆಂಡಾಟ ಆಡುತ್ತಿರುವ ಹುಡುಗರಿಗೆ ಶಿಸ್ತು ಹೇಳಿಕೊಡುವನಂತಹನಾಗಿಬಿಟ್ಟನಲ್ಲಾ !

'ನಿಮ್ಮನ್ನು ಚಚ್ಚಿ, ಹೊಟ್ಟೆ ಬಗೆದು, ಕರಳು ಎಲ್ಲಾ ಹೊರ ತೆಗೆದು ನಾಯಿಗೆ ಹಾಕಿ ಬಿಡುತ್ತಾರೆ !' ಎಂದು ಅವನನ್ನು ಎಚ್ಚರಿಸುವ ಎಂದು ಎಣಿಸಿದೆ, ಯಾಕೋ ಮಾತು ಹೊರಬರಲಿಲ್ಲ.

"ಕೊಟ್ಟು ಬಿಡ್ರೀ ಚೆಂಡನ್ನ ! ಇಲ್ಲದೇ ಹೋದ್ರೆ ನಿಮ್ಮ ಕೈಕಾಲು ಮುರಿತಾರೆ ಹುಡುಗರು!"

ಹೆದರಿಸಿದೆ ನಾನು !

ಅಗ್ರವಾಲ್ ಅವಾಕ್ಕಾದ ನನ್ನ ಗದರಿಕೆ ಕೇಳಿ. ನನ್ನ ಮುಖವನ್ನೇ ದುರುಗುಟ್ಟಿ ನೋಡಿದ.

ಎಡಗೈಲಿದ್ದ ಚೀಲದ ಹಿಡಿಯನ್ನು ಗಟ್ಟಿಯಾಗಿ ಹಿಡಿದ. ತನ್ನ ಬಲಗೈಯಲ್ಲಿ ಚೆಂಡನ್ನು ಹಿಡಿದು, ಮೇಲಕ್ಕೆ ಎತ್ತಿದ. ಯುವಕರು ನಿಂತ ದಿಕ್ಕಿಗೆ ಎದುರಾಗಿ, ಚೆಂಡನ್ನು ಮೇಲಕ್ಕೆಸೆದು, ಬಲಗಾಲಿನಿಂದ ರಭಸದಿಂದ ಅದಕ್ಕೆ ಹೊಡೆದ. ಅವನ ಪಾದ, ಚೆಂಡಿಗೆ ತಾಗಲೇ ಇಲ್ಲ! ಚೆಂಡು ಅವನ ಕಾಲಕೆಳಗೇ ಬಿತ್ತು. ಆದರೆ, ಅವನು ಕಾಲು ಎತ್ತಿ ಹೊಡೆದ ರಭಸಕ್ಕೆ ಎಡಗೈಲಿದ್ದ ಕೈಚೀಲ ಒಂದು ಫರ್ಲಾಂಗ್ ದೂರ ಹಾರಿ ಹೋಗಿಬಿತ್ತು. ನಾನು ನೋಡುತ್ತಿರುವಂತೆಯೇ ಚೀಲದಿಂದ ಒಂದು ಟಿಫನ್ ಕ್ಯಾರಿಯರ್ ಹೊರಬಿದ್ದು, ಠಣ ಠಣ ಎಂದು ಸದ್ದು ಮಾಡುತ್ತಾ ಅದರೊಳಗಿದ್ದ, ಚಪಾತಿ, ಪಲ್ಯ, ಚಟ್ನಿ ಎಲ್ಲವೂ ಗಾಳಿಯಲ್ಲಿ ಹಾರಾಡಿ, ಧೂಳೀಪಟವಾಗಿತ್ತು !

ಈ ನೋಟವನ್ನು ನೋಡುತ್ತಲಿದ್ದ ಯುವಕರ ಕೇಕೆ ಇಡೀ ಪಾರ್ಕ್‌ನಲ್ಲಿ ಮಾರ್ದನಿಗೊಂಡಿತ್ತು.

ಅಗ್ರವಾಲ್ ನನ್ನ ಮುಖ ನೋಡುತ್ತಾ, ಪೆಚ್ಚಾಗಿ, ಹುಚ್ಚನಂತಾದ. ಕ್ರಮೇಣ ಪರಿಸ್ಥಿತಿ ಅರಿವಾಗಿ, ಅವನೂ ನಗತೊಡಗಿದ್ದ. ಅವನ ನಗು ಬರೀ ಮುಖದಿಂದ ಹೊರಬಿದ್ದ ಕ್ರಿಯೆಯಾಗಿರಲಿಲ್ಲ. ಇಡೀ ಮೈ ಭೂಕಂಪಿಸುವಂತೆ, ಅಲುಗಿ ಹೊಯ್ದಾಡತೊಡಗಿತು ! ಅದನ್ನು ನೋಡಿ ನನ್ನ ನಗು ನಿಂತು, ಭಯ ಮಿಶ್ರಿತ ಕಣ್ಣುಗಳಿಂದ ಅವನ ಹೊಟ್ಟೆಯನ್ನು ನೋಡತೊಡಗಿದೆ. ಅವನ ಪದರಪದರವಾಗಿ ನಿಂತ ಹೊಟ್ಟೆಯ ಏರು- ತಗ್ಗುಗಳು ಎಲ್ಲಿ ಕಳಚಿ ಬೀಳುತ್ತವೋ, ಎಲ್ಲಿ ಜಾರಿ ಬಿದ್ದು, ಇಡೀ ದೇಹ ಕುಸಿದು ಬಿದ್ದು, ನೆಲಕ್ಕೆ ಅಪಾಯವಾಗುವುದೋ ಎಂದು ಹೆದರಿ ಕಂಗಾಲಾದೆ.

"ಮೋಟಾ ಹಸ್ತಾ ಹೈ !" ಒಬ್ಬ ಹುಡುಗ, ಬಳಿಗೆ ಬಂದು, ಚೆಂಡನ್ನು ಹಿಡಿದುಕೊಂಡು, ಅಗ್ರವಾಲನ ಹೊಟ್ಟೆ ತೀಡಿ ಓಡಿಹೋದ !

"ಹೇ ಬದ್ಮಾಷ್ !" ಎಂದು ಬೈದ ಅಗ್ರವಾಲ್, ನಗುತ್ತಾ.

"ನಡೆಯರಿ ಹೋಗೋಣ !"ಎಂದು ಕರೆದೆ ನಾನು. ಬಿಸಿಲು ಏರಿ, ಗಂಟೆ ಎಂಟಾಗಿತ್ತು. ಬೇಗ ಮನೆ ಸೇರುವ ಬಯಕೆ ಆಗಿತ್ತು ನನಗೆ.

"ತಿಂಡಿ ಯಾಕೆ ತಂದಿರಿ ? ಮನೆಗೆ ಹೋಗಿ ತಿನ್ನಬಹುದಾಗಿತ್ತಲ್ಲ!" ಎಂದೆ.

"ಮನೆಗೆ ಹೋಗುವ ತನಕ ಹೊಟ್ಟೆ ಸುಮ್ಮನೆ ಇರುತ್ತದೆಯೆ !"

"ಹೊಟ್ಟೆ ಸುಮ್ಮನೆ ಇರೋದಿಲ್ಲ ಎಂದು ಈಪಾಟಿ ತಿನ್ನುತ್ತಾ ಇದ್ದರೆ, ಹೊಟ್ಟೆ ಇಳಿಸುವುದು ಹೇಗೆ?"

"ವ್ಯಾಯಾಮ ಮಾಡುತ್ತಾ ಇದ್ದೇನಲ್ಲಾ? ಇನ್ನೇನು ಬೇಕು ಹೊಟ್ಟೇ ಇಳಿಸುವುದಕ್ಕೇ?"

ಅವನಿಗೆ ಆಶ್ಚರ್ಯವಾಗಿತ್ತು ನನ್ನ ಆಕ್ಷೇಪಣೆ ಕೇಳಿ.

"ಹೊಟ್ಟೆ ಇಳಿಸುವುದಕ್ಕೆ ಬರೀ ವ್ಯಾಯಾಮ ಮಾಡಿದರೆ ಸಾಲದು! ತಿನ್ನುವುದು ಕಡಿಮೆ ಮಾಡಬೇಕು!"

"ತಿನ್ನೋದು ಕಡಿಮೆ ಮಾಡಬೇಕು! ಸರಿ. ಒಪ್ಪುತೇನೆ. ತಿನ್ನುವುದು ಬಿಡಬೇಕು ಅಂತ ಹೇಳಲಿಲ್ಲವಲ್ಲ ಸಧ್ಯ!"

"ಇಷ್ಟು ದೊಡ್ಡ ಟಿಫನ್ ಕ್ಯಾರಿಯರ್ನಲ್ಲಿ ಇಷ್ಟೊಂದು ಚಪಾತಿ - ಪೂರಿ-ಪಲ್ಯ ಬೆಳ್ಳಂಬೆಳಿಗ್ಗೆ ತಿಂದರೆ, ಹೊಟ್ಟೆ ಕಡಿಮೆಯಾಗುತ್ತದೆಯೆ?"

"ಇಪ್ಪತ್ತು ಚಪಾತಿ ಜಾಸ್ತೀನಾ?"

"ಜಾಸ್ತಿ ಅಲ್ಲವಾ?"

"ಇಬ್ಬರಿಗೆ?"

ನನ್ನನ್ನೂ ಸೇರಿಸಿದ್ದ ಭೂಪ. ಪರವಾಗಿಲ್ಲ, ಆದರೂ ಒಬ್ಬೊಬ್ಬರಿಗೆ ಹತ್ತು ಚಪಾತಿ! ಪಲ್ಯ-ಚಟ್ನಿ ಬೇರೆ!

"ನಾನು ಅಬ್ಬಬ್ಬಾ ಅಂದರೆ ಎರಡು ಅಥವಾ ಮೂರು ಚಪಾತಿ ತಿನ್ನಬಲ್ಲೆ. ಅದೂ ಬೆಳಿಗ್ಗೆ ನಾಷ್ಠಕ್ಕೆ!" ಎಂದೆ.

ಅಗ್ರವಾಲ್ ನನ್ನ ಹೊಟ್ಟೆಯ ಕಡೆ ಪ್ರಶ್ನಾರ್ಥಕವಾಗಿ ನೋಡಿದ.

"ಆದರೂ ನಿಮ್ಮ ಹೊಟ್ಟೆ ಮಾತ್ರ ದಪ್ಪಗಿದೆಯಲ್ಲಾ!"

ಹೌದಲ್ಲಾ ! ನನ್ನ ಹೊಟ್ಟೆ ಕೂಡ ಏಕೋ ಈಗೀಗ ದಪ್ಪಗಾಗಿದೆ. ನನಗೆ ಗೊತ್ತಿಲ್ಲದ ಹಾಗೆ ಹೆಚ್ಚು ಹೆಚ್ಚು ಆಹಾರ ಸೇವಿಸುತ್ತಾ ಇದ್ದೇನೆಯೊ? ದಿಲ್ಲೀ ಹವಾ ಆರೋಗ್ಯಕರ ಎಂದು ಕೇಳಿದ್ದೆ. ಚೆನ್ನಾಗಿ ಹಸಿವು ಆಗುತ್ತದೆ. ಆದ್ದರಿಂದ ಜಾಸ್ತಿ ತಿನ್ನಬೇಕೆನ್ನಿಸುತ್ತದೆ. ತಿಂದು ಹೊಟ್ಟೆ ಬರಿಸಿಕೊಂಡಿರಬೇಕು. ಇದರಲ್ಲಿ ಸಂಶಯವೇ ಇಲ್ಲ. ನನ್ನ ಉಬ್ಬಿದ ಹೊಟ್ಟೆ ಸಾಕ್ಷಿ ಹೇಳುತ್ತಾ ಇದೆ.

ಮಾತನಾಡದೆ, ಪಾರ್ಕಿನ ಹೊರಗೆ ಹೋಗಲು, ಹೆಜ್ಜೆ ಹಾಕತೊಡಗಿದೆ. ಅಗ್ರವಾಲ್ ನನ್ನ ಜೊತೆ ಹೆಜ್ಜೆ ಹಾಕಿದ. .

"ಚೆಕ್‌ಗೆ ಕ್ರಾಸ್ ಮಾಡುವಾಗ, ಅದು ಕಾಣಸುವಂತೆ ಯಾಕೆ ದೊಡ್ಡದಾಗಿ ಕ್ರಾಸ್ ಮಾಡಬಾರದು?"

"ಚಾಕಲೇಟ್ ಸರದಾರ್‌ಜೀ ಚೆಕ್ ತೆಗೆದುಕೊಂಡು ಬಂದಿದ್ದನೇ?"

ಪಟಿಂಗ ಅಗ್ರವಾಲ್! ತಿಳಿದಿದೆ ತಾನು ಮಾಡಿದ ಕಾರ್ಯ!

"ನಾನು ಬೇಕಂತಲೇ ಮಾಡಿದೆ ಆ ರೀತಿ!"

"ಯಾಕೆ?" ಸೋಜಿಗವಾಗಿತ್ತು ನನಗೆ.

"ನನಗೆ ಸರದಾರ್‌ಜೀಗಳನ್ನು ಕಂಡರೆ ಆಗುವುದಿಲ್ಲ!"

"ನಿಮಗೆ ಏನು ಮಾಡಿದರು ಅವರು?"

"ನಮ್ಮ ವ್ಯಾಪಾರವನ್ನೆಲ್ಲಾ ಹಾಳು ಮಾಡಿ ಬಿಟ್ಟಿದ್ದಾರೆ ಅವರು. ನಿರಾಶ್ರಿತರಾಗಿ ದಿಲ್ಲೀಗೆ ಬಂದ ಇವರು ಈಗ ತಾವೇ ರಾಜ್ಯ ಆಳುತ್ತಾ ಇದ್ದಾರೆ. ನಿಯತ್ತಾಗಿ ವ್ಯಾಪಾರ ಮಾಡೋದಿಲ್ಲ! ನಾವು ಬನಿಯಾಗಳು! ವ್ಯಾಪಾರದಲ್ಲಿ ನಿಯತ್ತು, ನಿಯಮ,ಶಿಸ್ತು ನಮಗೆ ಸ್ವಾಭಾವಿಕ. ಆದರೆ ಈ ಪಂಜಾಬಿಗಳು ಹಣಕ್ಕೋಸ್ಕರ ಶಿಸ್ತು, ನಿಯತ್ತು ಎಲ್ಲಾ ಕಿತ್ತು ಒಗೆದು ಬಿಟ್ಟಿದ್ದಾರೆ. ಬರೀ ಮೋಸ, ದಗಾ, ಹಿಂಸಾಚಾರ ಇವುಗಳಿಂದಲೇ ಇವರು ವ್ಯಾಪಾರ ನಡೆಸುತ್ತಾರೆ. ಆದರೆ ಏನು ಮಾಡುವುದು? ಇವರನ್ನು ವಾಪಸ್ಸು ಕಳಿಸುವ ಹಾಗಿಲ್ಲ,ಇಲ್ಲೇ ಇಟ್ಟುಕೊಳ್ಳುವ ಹಾಗಿಲ್ಲ! ನುಂಗಲಾರದ ತುತ್ತು!"

ವಿಷಾದದ ಛಾಯೆ ಇತ್ತು ಇವನ ಮಾತುಗಳಲ್ಲಿ.

"ಸಣ್ಣದಾಗಿ ಕ್ರಾಸ್ ಮಾಡಿ ಅವನಿಗೆ ತೊಂದರೆ ಕೊಟ್ಟಿದ್ದರಿಂದ ನಿಮಗೆ ಬಂದ ಲಾಭವಾದರು ಏನು?"

"ನನಗೇನು ಲಾಭ ಬರಲಿಲ್ಲ! ನಿಜ. ಲಾಭಕ್ಕೋಸ್ಕರ ಆ ರೀತಿ ಮಾಡಲಿಲ್ಲ ನಾನು. ಅವನ ದುರ್ಬಲ ಮನಸ್ಸನ್ನು ನಾನು ನನ್ನ ಕ್ಷಣಿಕ ಸುಖಕ್ಕಾಗಿ ಉಪಯೋಗಿಸಿ ಕೊಂಡೆ. ಅದರಲ್ಲಿ ತಪ್ಪೇನು?"

ಹೌದು! ಅಗ್ರವಾಲ್ ಗುಡಾಣದ ಹೊಟ್ಟೆಯ ನೋಟ ಚಂಡಾಟ ಆಡುತ್ತಿದ್ದ ಹುಡುಗರಿಗೆ ಆನಂದ ನೀಡಿದರೆ, ಅವರ ತಪ್ಪೇನು? ದುರ್ಬಲ ಮನಸ್ಸು ಅಥವಾ ದುರ್ಬಲ ಮೈ, ಇನ್ನೊಬ್ಬರ ಸುಖಕ್ಕೆ ಅಡ್ಡಿ ಹೇಗೆ ಆಗುತ್ತದೆ? ಅದೇ ರೀತಿ ದುರ್ಬಲ ಜನ , ಜನಾಂಗ, ದೇಶ, ಬಲಿಷ್ಠರ ಸುಖಕ್ಕೆ ಯಾಕೆ ಉಪಯೋಗಿಸಿಕೊಳ್ಳಬಾರದು? ಅಥವಾ ಉಪಯೋಗಿಸಿದ್ದಾಗಿದೆಯಲ್ಲವೆ? ನಮ್ಮ ದೇಶವೂ ಅದೇ ರೀತಿ, ತನ್ನ ದುರ್ಬಲತೆಯಿಂದ ವಿವಿಧ ದೇಶಗಳಿಂದ ಜನಾಂಗದವರಿಂದ ಆಳಿಸಿ ಕೊಂಡಿದೆ ಯಲ್ಲವೆ?

"ಅಲ್ಲಿ ನೋಡಿ! ಎಷ್ಟೊಂದು ಪಾರಿವಾಳಗಳು!"

ಕೂಗಿದ ಅಗ್ರವಾಲ್. ನಾವು ಬುದ್ಧಜಯಂತಿ ಪಾರ್ಕಿನ ಹೊರಗಡೆ ನಮ್ಮ ವಾಹನ ನಿಲ್ಲಿಸುವಲ್ಲಿಗೆ ಬಂದಿದ್ದೆವು. ಸಮೀಪದಲ್ಲೇ ನೂರಾರು ಪಕ್ಷಿಗಳು-ಪಾರಿವಾಳ, ಮೈನಾ, ಗಿಳಿ- ಒಟ್ಟಾಗಿ ಕುಳಿತು ಕಾಳುಗಳನ್ನು ಆರಿಸಿ, ತಿನ್ನುತ್ತಿದ್ದವು. ಕಾಳನ್ನು ಬಿಸಾಡುತ್ತಾ, ತಾವು ಬಿಸಾಡಿದ ಕಾಳುಗಳನ್ನು ಪಕ್ಷಿಗಳು ತಿನ್ನುತ್ತಾ ಇರುವುದನ್ನೇ ನೋಡುತ್ತಾ ಆನಂದಿಸುತ್ತಾ ಇರುವ ಕೆಲವು ಮುದುಕರು ಮತ್ತು

ಮಕ್ಕಳನ್ನು ಕಂಡೆ. ಈ ದಿಲ್ಲೀವಾಲರಿಗೆ ಪಕ್ಷಿಗಳನ್ನು ಸಾಕುವುದರಲ್ಲಿ ಎಷ್ಟು ಆಸಕ್ತಿ! ಅದರಲ್ಲೂ ಪಾರಿವಾಳಗಳನ್ನು ಕಂಡರೆ ಅತಿ ಪ್ರೀತಿ. ಪ್ರತೀ ಮನೆ ಛಾವಣಿ, ಕಿಟಕಿ ಗೂಡುಗಳಲ್ಲಿ ವಾಸವಾಗಿರುವ ಪಾರಿವಾಳಗಳ ಗುಂಪು ದಿಲ್ಲೀಯಲ್ಲಿ ಕಾಣುವುದು ಸರ್ವೇಸಾಮಾನ್ಯ.

ಒಬ್ಬ ಸಣ್ಣ ಹುಡುಗ, ಪಕ್ಷಿಗಳ ಗುಂಪಿನತ್ತ ಸಣ್ಣ ಕಲ್ಲೊಂದನ್ನು ಬೀರಿದ. ಒಮ್ಮೆಲೆ ಪಕ್ಷಿಗಳು ತಮ್ಮ ರೆಕ್ಕೆಗಳನ್ನು ಪಟಪಟನೆ ಬಡಿದು, ಮೇಲಕ್ಕೆ ಹಾರಿ, ಅಲ್ಲೇ ಸುತ್ತತೊಡಗಿದ್ದವು. ಆಹಾರದ ಮೇಲಿನ ಆಸೆ ಅವನ್ನು ದೂರ ಹಾರ ಗೊಡಲಿಲ್ಲ. ಕೆಲವೇ ಕ್ಷಣಗಳಲ್ಲಿ ಅವು ಕೆಳಗೆ ಇಳಿದು, ಕಾಳುಗಳನ್ನು ಆರಿಸಿ ತಿನ್ನ ತೊಡಗಿದ್ದವು.

"ನನಗೆ ಹಸಿವಾಗುತ್ತಾ ಇದೆ. ಮನೆಗೆ ಹೋಗೋಣವೆ?"

ಹೊಟ್ಟೆ ನೀವಿಕೊಳ್ಳುತ್ತಾ, ಅಗ್ರವಾಲ್ ಹೇಳಿದ.

ಅವನ ಕಾರಿನಲ್ಲಿ ಕುಳಿತು, ಕರೋಲ್ ಬಾಗ್ ಕಡೆ ಹೊರಟೆವು. ಕರೋಲ್ ಬಾಗ್‌ನಲ್ಲಿ ದಕ್ಷಿಣ ಭಾರತೀಯ ಹೋಟೆಲ್‌ಗಳು ಸಾಕಷ್ಟು ಇದ್ದುದರಿಂದ, ನನಗೆ ಇಡ್ಲಿ ಸಾಂಬಾರ್ ತಿನ್ನುವುದಕ್ಕೆ ಅವಕಾಶವಿತ್ತು.

ಹೋಟೆಲ್ ಒಂದರಲ್ಲಿ ವಡೆ, ಇಡ್ಲಿ, ಸಾಂಬಾರ್‌ಗೆ ಆರ್ಡರ್ ಕೊಟ್ಟು, ನಾವು ಹರಟತೊಡಗಿದ್ದೆವು.

"ಮಸಾಲೆ ದೋಸೆ ಒಮ್ಮೊಮ್ಮೆ ತಿನ್ನುವುದಕ್ಕೆ ಚೆನ್ನ! ದಿನವಿಡೀ ನೀವು ಹೇಗೆ ತಿನ್ನುತ್ತೀರಿ ದೋಸೆಯನ್ನು?"

ಅಗ್ರವಾಲ್ ದೋಸೆ ಮೇಲೆ ಚರ್ಚೆ ಶುರು ಹಚ್ಚಿದ. ಇವನಿಗೆ ಯಾರು ಹೇಳಿದರು ನಾವು ದಕ್ಷಿಣ ಭಾರತೀಯರು ದಿನವಿಡೀ ಮಸಾಲೆ ದೋಸೆ ತಿನ್ನುವವರು ಎಂದು ? ಮಸಾಲೆದೋಸೆ ಶುರುವಾದದ್ದೇ ಈ ಹೋಟೆಲ್ ಉದ್ಯಮದವರಿಂದ ಎಂದು ಇವನಿಗೆ ಹೇಗೆ ತಿಳಿಸುವುದು? ಮಸಾಲೆ ದೋಸೆ ಮನೆಯಲ್ಲಿ ಮಾಡಲು ಯಾವ ಸ್ತ್ರೀಗೂ ಚೆನ್ನಾಗಿ ಗೊತ್ತಿಲ್ಲ ಎಂಬ ವಿಷಯ ಇವನಿಗೆ ಹೇಗೆ ಗೊತ್ತು?

"ವಡೆ ಸಾಂಬಾರ್ ಕೂಡ ದಿನವಿಡೀ ಮನೆಯಲ್ಲಿ ಮಾಡಿ ತಿನ್ನುವಿರಾ?"

ಅಗ್ರವಾಲ್ ತನ್ನ ಹೊಟ್ಟೆಯನ್ನು ನೀವುತ್ತಾ ಕೇಳಿದ.

"ನಿನ್ನ ಬೊಜ್ಜು ಮಾಡಿ ವಡೆ ತಿನ್ನುತ್ತೇನೆ!" ಎಂದು ಹೇಳುವ ಮನಸ್ಸಾಯಿತು ನನಗೆ.

"ವರ್ಷದಲ್ಲಿ ಒಂದು ಅಥವ ಎರಡು ಬಾರಿ ಮಾತ್ರ ಮನೆಯಲ್ಲಿ ವಡೆ ಮಾಡುತ್ತಾರೆ" ಎಂದೆ.

"ನಿಜವಾಗಲೂ?" ಆಶ್ಚರ್ಯವಾಗಿತ್ತು ಹೊಟ್ಟೆ ಅಗ್ರವಾಲ್‌ನಿಗೆ.

"ವಡೆ ಮಾಡಿ ತಿನ್ನುವುದು, ತಿಥಿ ದಿನ ಮಾತ್ರ!"

"ಆಂ!"

ದೊಡ್ಡದಾಗಿ ಬಾಯಿ ಬಿಟ್ಟು ದೊಡ್ಡ ಹೊಟ್ಟೆ ಅಗ್ರವಾಲ್.

"ಎಂತಹ ವಿಚಿತ್ರ ಪದ್ಧತಿ?"

ವಿಷಾದ ವ್ಯಕ್ತಪಡಿಸಿದ ಅಗ್ರವಾಲ್, ಮಾಣಿ ತಂದಿರಿಸಿದ ಇಡ್ಲಿ-ವಡೆ ಸಾಂಬಾರ್‌ನ್ನು ಕಬಳಿಸತೊಡಗಿದ.

"ಸರ್ದಾರ್‌ಜೀಗಳನ್ನು ಕಂಡರೆ ಆಗೋದಿಲ್ಲ; ಮಾರ್ವಾಡಿಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು?"

"ಥತ್!"

ಉಗುಳಿದ ಹಲ್ಲಿಗೆ ಸಿಕ್ಕಿದ ಮೆಣಸಿನ ಕಾಯಿಯನ್ನು ಅಗ್ರವಾಲ್.

"ಎಷ್ಟು ಖಾರ!"

ನೀರು ಕುಡಿದ ಗಟಗಟನೆ! ಬೆವತಿದ್ದ ಮುಖವನ್ನು ಒರಿಸಿಕೊಂಡ.

"ರಾಜಾಸ್ಥಾನದ ಯಾವುದೇ ಕುಗ್ರಾಮ ಅಥವಾ ಪಟ್ಟಣದಿಂದ ಹೊರಟ ಬಸ್ಸು, ಲಾರಿ, ಅಥವಾ ಟ್ರೈನ್‌ನಲ್ಲಿ ಒಂಟಿ ಮಾರ್ವಾಡಿ ಹುಡುಗನನ್ನು ನೋಡಿದರೆ, ಅವನ ಕೈಯಲ್ಲಿ ಒಂದು ದೊಡ್ಡ ಟಿಫನ್ ಕ್ಯಾರಿಯರ್‌ನ್ನು ಕಾಣಬಹುದು...."

"ನೀವು ಪಾರ್ಕಿಗೆ ತಂದ ಕ್ಯಾರಿಯರ್ ತರಹ. ಅಲ್ಲವೆ?"

ಮಧ್ಯ ಬಾಯಿ ಹಾಕಿ ಕೇಳಿದೆ.

"ಅದಕ್ಕಿಂತ ದೊಡ್ಡದು! ನನ್ನದು ಬರೀ ಟಿಫನ್ ಕ್ಯಾರಿಯರ್,ಮಾರ್ವಾಡೀದು ಲೈಫ್ ಕ್ಯಾರಿಯರ್!"

ಲೈಫ್ ಕ್ಯಾರಿಯರ್! ಇದೆಂತಹ ಕ್ಯಾರಿಯರ್? ಸೋಜಿಗವಾಯಿತು ನನಗೆ.

"ಹದಿನೆಂಟು ವರ್ಷ ಅಥವಾ ಇನ್ನು ಎಳೇ ಪ್ರಾಯದಲ್ಲೇ ಹೊರಗೆ ಅಟ್ಟಿ ಬಿಡುತ್ತಾರೆ ಮಾರ್ವಾಡೀ ಹುಡುಗನನ್ನು ಅವನ ತಂದೆ-ತಾಯಿಯರು! ಒಂದು ದೊಡ್ಡ ಕ್ಯಾರಿಯರ್ ತುಂಬಾ ರೊಟ್ಟಿ, ಪಲ್ಯ, ಉಪ್ಪಿನಕಾಯಿ ತುಂಬಿಸಿ, ಅವನ ಕೈಲಿ ಇರಿಸಿ, ಹೊರಗೆ ಅಟ್ಟಿಬಿಡುತ್ತಾರೆ!"

"ಅಯ್ಯೋ ಪಾಪ! ಮಾರ್ವಾಡೀ ಹುಡುಗ ಏನಾದರೂ ತಪ್ಪು ಮಾಡಿದ್ದಕ್ಕೆ ಹೀಗೆ ಓಡಿಸುತ್ತಾರೆಯೆ?" ವ್ಯಥೆ ವ್ಯಕ್ತಪಡಿಸಿದೆ ನಾನು.

"ತಪ್ಪು ಮಾಡಿದ್ದಕ್ಕಲ್ಲ ಸಾಬ್! ತಮ್ಮ ಜೀವನದ ಗುರಿಯನ್ನು ತಾವೇ ಹುಡುಕಿಕೊಳ್ಳುವುದಕ್ಕೆ!"

"ಅದಕ್ಕೆ ಟಿಫನ್ ಕ್ಯಾರಿಯರ್ ಯಾತಕ್ಕೆ?"

"ಟಿಫನ್ ಕ್ಯಾರಿಯರ್ ಅಲ್ಲ ಅದು! ಲೈಫ್ ಕ್ಯಾರಿಯರ್! ಕ್ಯಾರಿಯರ್‌ನಲ್ಲಿ ರೊಟ್ಟಿ ಮುಗಿಯುವ ತನಕ, ಅವನು ತನ್ನ ಪ್ರಯಾಣ ಸಾಗಿಸುತ್ತಾನೆ. ರೊಟ್ಟಿಗಳು ಮುಗಿದು, ಕ್ಯಾರಿಯರ್ ಖಾಲಿಯಾಗಿ, ತನ್ನ ಹೊಟ್ಟೆಯೂ ಖಾಲಿಯಾದಾಗ, ಮುಂದಿನ ನಿಲ್ದಾಣದಲ್ಲಿ ಇಳಿಯುತ್ತಾನೆ, ಮಾರ್ವಾಡಿ ಹುಡುಗ. ಆ ನಿಲ್ದಾಣ ಸಣ್ಣ ಹಳ್ಳಿಯಾಗಿರಬಹುದು, ಪಟ್ಟಣವಾಗಿರಬಹುದು, ದೊಡ್ಡ ಶಹರಾಗಿರಬಹುದು....."

"ಅಂದರೆ ಅವನು ಟಿಕೆಟ್ ತೆಗೆದುಕೊಂಡಿರುವುದಿಲ್ಲವೆ?"

"ಕೈಯಲ್ಲಿ ಕಾಸೇ ಇಲ್ಲದಿರುವಾಗ ಟಿಕೆಟ್‌ಗೆ ಕಾಸೆಲ್ಲಿರುತ್ತದೆ? ಟಿಕೆಟ್ ಕಲೆಕ್ಟರ್ ಇವನನ್ನು ಹಿಡಿದು ಇಳಿಸಿದರೆ, ಅಲ್ಲೇ ಇಳಿದು, ತನ್ನ ಪ್ರಯಾಣ ಮುಂದಿನ ಟ್ರೈನ್‌ನಲ್ಲಿ ಪ್ರಯಾಣ ಮಾಡುತ್ತಾನೆ."

"ಬಸ್‌ನಲ್ಲಾದರೆ ಟಿಕೆಟ್ ತೆಗೆದುಕೊಳ್ಳಲೇ ಬೇಕಲ್ಲ!"

ಅನುಮಾನವಾಗಿತ್ತು ನನಗೆ.

"ಹತ್ತಿರದ ರೈಲ್ವೇ ಸ್ಟೇಷನ್ ತನಕ ಹೇಗೋ ಬಸ್‌ನಲ್ಲಿ ಸಾಗುತ್ತಾನೆ. ಅಲ್ಪ ಸ್ವಲ್ಪ ಕಾಸು ಇದ್ದೇ ಇರುತ್ತದಲ್ಲಾ! ಟ್ರೈನ್‌ನಿಂದ ಇಳಿದೊಡನೆ, ಆ ಊರಿನ ಜಿನ ಮಂದಿರ ಹುಡುಕಿ ಕೊಂಡು ಹೊರಡುತ್ತಾನೆ."

"ಜಿನಮಂದಿರ ಇರದಿದ್ದರೆ?"

"ಜಿನ ಮಂದಿರವಿಲ್ಲದಿದ್ದರೆ, ಹಾಳು ಗುಡಿಯಾದರೂ ಇರುತ್ತದಲ್ಲಾ!"

ಅವನ ಧ್ವನಿಯಲ್ಲಿ ಸಿಡಿಕಿನ ಕಿಡಿ ಹಾರಿತ್ತು.

"ಸರಿ ಬಿಡಿ! ಆಮೇಲೆ?"

ಕತೆ ಮುಂದುವರೆಸುವಂತೆ ಹೇಳಿದೆ.

"ಜಿನಮಂದಿರದಲ್ಲಿ ಉಳಿದು, ಅಲ್ಲಿಗೆ ಬರುವ ಜೈನ ಭಕ್ತಾದಿಗಳ ಜೊತೆ ಸಂಪರ್ಕ ಬೆಳೆಸಿ, ಆ ಊರಿನಲ್ಲಿ ಯಾವ ತರಹದ ವ್ಯಾಪಾರ ಮಾಡಿದರೆ ಬದುಕ ಬಹುದು ಎಂದು ವಿಚಾರಿಸಿ, ಆಲೋಚಿಸಿ, ಕೊನೆಗೆ ಒಂದು ನಿರ್ಣಯ ತೆಗೆದುಕೊಂಡು ಊರಿಗೆ ಪತ್ರ ಬರೆಯುತ್ತಾನೆ. 'ನಾನು ಇಂತಹ ದಂಧೆ ಶುರು ಮಾಡಬೇಕೆಂದು ನಿರ್ಧರಿಸಿದ್ದೇನೆ. ಹಣ ಕಳುಹಿಸಿ' ತಂದೆ ತಾಯಿ ಹಣ ಕಳುಹಿಸುತ್ತಾರೆ. ಸಾಲದ ರೂಪವಾಗಿ. ಇವ ದಂಧೆ ಶುರುಮಾಡಿ, ಲಾಭ ಗಳಿಸಿ, ಸಾಲ ವಾಪಾಸ್ಸು ಮಾಡುತ್ತಾನೆ. ತಂದೆ ಹಣ ಕಳಿಸದಿದ್ದರೆ ಜಿನಮಂದಿರ ಅಥವಾ ಜೈನರ ಮಠದ ಗುರುಗಳು ಇವನಿಗೆ ಸಾಲ ನೀಡುತ್ತಾರೆ. ಇವ ಆ ಹಣದಿಂದ ದಂಧೆ ಶುರು ಮಾಡಿ, ಮುಂದೆ ಬರುತ್ತಾನೆ....."

ತಲೆ ತೂಗಿದೆ ನಾನು ಜಿನ ಕತೆ ಕೇಳಿ!

ಅಗ್ರವಾಲ್ ಇಡ್ಲಿ ಸಾಂಬಾರ್ ತಿಂದು, ಮಸಾಲೆದೋಸೆ ಕಬಳಿಸಿ, ಮೈಸೂರು ಪಾಕ್ ಮೆದ್ದು, ಡರ್ ಎಂದು ತೇಗಿ, ಮೇಲಕ್ಕೆದ್ದು, ಕೈಲಿದ್ದ ಟಿಫನ್ ಕ್ಯಾರಿಯರ್‌ನ ಬಾಯಿ ಬಿಚ್ಚಿ, ಅದರೊಳಗೆ ಇಡ್ಲಿ-ವಡೆ-ಸಾಂಬಾರ್ ತುಂಬಿಸಿಕೊಂಡು, ಹೊರ ಹೊರಟ. ನಾನು ಅವನನ್ನು ಹಿಂಬಾಲಿಸಿದೆ.

"ಇಷ್ಟೆಲ್ಲಾ ತಿಂದು ಹೊಟ್ಟೆ ತುಂಬಿಸಿಕೊಂಡಿದ್ದಾಯಿತು! ಟಿಫನ್ ಕ್ಯಾರಿಯರ್‌ನ ಹೊಟ್ಟೆ ಯಾಕೆ ತುಂಬಿಸಿದೆ?"

ನನ್ನ ಮುಖ ಒಂದು ಸಾರಿ ನೋಡಿ, ಮರುಮಾತನಾಡದೇ ಮುನ್ನಡೆದ ಅಗ್ರವಾಲ್.

"ಮಾರ್ವಾಡಿಗಳ ತರಹ ಟಿಫನ್ ಕ್ಯಾರಿಯರ್‌ನ ಇಡ್ಲಿ- ಸಾಂಬಾರ್ ಮುಗಿದ ಕೂಡಲೇ ಅಲ್ಲೇ ಇಳಿದು ದಂಧೆ ಶುರು ಮಾಡ್ತೀರಾ?"

ತಮಾಷೆ ಮಾಡಿದೆ ನಾನು.

"ನಾನೇನು ಮಾರ್ವಾಡಿ ಏನು? ಬನಿಯಾ ನಾನು ಬನಿಯಾ! ಬನಿಯಾಗಳು ದಂಧೆ ಶುರುಮಾಡೋದು ಟಿಫನ್ ಕ್ಯಾರಿಯರ್‌ನಲ್ಲಿದ್ದ ತಿಂಡಿ ಮುಗಿದ ಮೇಲಲ್ಲಾ, ಟಿಫನ್ ಕ್ಯಾರಿಯರ್ ತುಂಬಾ ತಿಂಡಿ ತುಂಬಿದ ಮೇಲೆ! ಈ ಟಿಫನ್ ಕ್ಯಾರಿಯರ್ ತುಂಬಿದೆ! ಈಗ ಶುರುವಾಗುತ್ತದೆ ನನ್ನ ದಂಧೆ!"

ಅವನು ಹೇಳಿದ್ದು ಅಕ್ಷರಶಃ ನಿಜವಾಗಿತ್ತು!ಅವನ ದಂಧೆ ಟಿಫನ್‌ಕ್ಯಾರಿಯರ್ ತುಂಬಿದ ಮೇಲೆ ಶುರುವಾಗಲಿತ್ತು! ಟಿಫನ್ ಕ್ಯಾರಿಯರನ್ನು ಖಾಲಿ ಮಾಡುವ ದಂಧೆ ಮನೆಗೆ ತಲುಪಿದೊಡನೆ ಶುರು ಮಾಡುವವನಿದ್ದ, ಹೊಟ್ಟೆ, ಅಗ್ರವಾಲ್!

ಮಾರನೆ ಬೆಳಿಗ್ಗೆ ಆಫೀಸ್‌ಗೆ ಬಂದಾಗ, ನನ್ನ ಮೇಜಿನ ಮೇಲೆ ಒಂದು ಲಕೋಟೆ ಬಿದ್ದಿತ್ತು. ಒಡೆದು ನೋಡಿದಾಗ, ಒಮ್ಮೆಲೆ ಹರ್ಷವಾಯಿತು ಮನಸ್ಸಿಗೆ! ಒಡನೆಯೇ ಚಿಂತಾಕ್ರಾಂತನಾದೆ. ಲಕೋಟೆಯಲ್ಲಿ ಒಂದು ಪತ್ರವಿತ್ತು. ಅದು ನಮ್ಮ ಡಿಪ್ಯೂಟಿ ಜನರಲ್ ಮೇನೇಜರ್‌ರವರ ಪತ್ರ. ನನ್ನನ್ನು ಹಳೇ ದೆಹಲಿಯ ಒಂದು ಶಾಖೆಗೆ ವರ್ಗ ಮಾಡಲಾಗಿತ್ತು. ದೊಡ್ಡ ಶಾಖೆ, ಮೇನೇಜರ್‌ಗೆ ಕಾರಿನ ಸೌಕರ್ಯ ವಿರುವ ಶಾಖೆ. ಅಂದರೆ ನನಗೆ ಬಡ್ತಿ ನೀಡಿದ ಹಾಗಾಯಿತು. ಮೋಟರ್ ಸಾಯಿಕಲ್ ಶಾಖೆಯಿಂದ ಕಾರ್ ಇರುವ ಶಾಖೆಗೆ! ಆದರೆ ಕಾರ್ ಓಡಿಸುವುದಕ್ಕೆ ಬರದ ನನಗೆ ಕಾರ್‌ನ ಸೌಕರ್ಯ ನೀಡಿದ್ದಾರಲ್ಲ! ಕಾರ್ ಓಡಿಸಲಿಕ್ಕೆ ಬರದೇ ಹೋದರೂ ಪರ ವಾಗಿಲ್ಲ! ಬ್ಯಾಂಕ್ ನಡೆಸಲಿಕ್ಕೆ ಬರುತ್ತದಲ್ಲಾ!

ಕುಮಾರ್‌ನನ್ನು ಕರೆದೆ. ಅವನಿಗೆ ವಿಷಯ ತಿಳಿಸಿದೆ.

"ಕಾರ್ ಬ್ರಾಂಚ್! ಒಳ್ಳೇ ನಸೀಬ ಸಾರ್ ನಿಮಗೆ!"

ಅವನಿಗೆ ಸಂತೋಷವಾಗಿತ್ತು.

"ಆದರೆ ಆ ಶಾಖೆ ಪ್ರಾಬ್ಲಮ್ ಶಾಖೆ ಸಾರ್ !"

"ಪ್ರಾಬ್ಲಮ್?"

"ಗೊತ್ತಿಲ್ವೇ ನಿಮಗೆ?"

"ಇಲ್ಲ!" ಎಂದೆ.

"ಸೀನಿಯರ್ ಮೇನೇಜರ್, ಮೇನೇಜರ್, ಅಕೌಂಟೆಂಟ್ಸ್, ನಾಲ್ಕು ಕ್ಲಾರ್ಕ್ಸ್- ಒಟ್ಟು ಹತ್ತು ಜನರಿಗೆ ಸಸ್ಪೆಂಡ್ ಮಾಡಿದ್ದಾರೆ!"

"ಗೊತ್ತು ನನಗೆ" ಎಂದೆ.

"ಶಾಖೆಯಲ್ಲಿ ಗಲಾಟೆ ನಡೆಯುತ್ತಾ ಇದೆ. ಕೆಲಸ ಆಗುತ್ತಾ ಇಲ್ಲ. ಸಿಬ್ಬಂದಿಗಳೆಲ್ಲಾ ಚಳುವಳಿ ನಡೆಸುತ್ತಾ ಇದ್ದಾರೆ. ಯಾರೋ ಬೊಂಬಾಯಿಯಿಂದ ಒಬ್ಬ ಮೇನೇಜರ್‌ನ ಆ ಶಾಖೆಗೆ ವರ್ಗಾಯಿಸಿದ್ದಾರೆ. ಅವ ಬಂದಾಗಿನಿಂದ, ಗಲಾಟೆ ಜಾಸ್ತಿಯಾಗಿದೆ. ಶಾಖೆ ಜವಾಬ್ದಾರಿ ಹೆಚ್ಚು; ಅದೇ ರೀತಿ ಸೌಕರ್ಯವೂ ಹೆಚ್ಚು.....

"ಶಾಖೆಗೆ ಬೆಂಕಿ ಬಿದ್ದಿದೆ. ಅದನ್ನು ಆರಿಸಲಿಕ್ಕೆ ನಿಮ್ಮನ್ನು ಕಳುಹಿಸುತ್ತಾ ಇದ್ದಾರೆ, ಅಷ್ಟೇ. ಯೋಚಿಸಿ ನೋಡಿ. ಬೆಂಕಿ ಆರಿಸಲಿಕ್ಕೆ ಹೋಗಿ ನೀವೇ ಸಿಕ್ಕಿ ಹಾಕಿಕೊಂಡು ಸುಟ್ಟುಕೊಂಡರೆ ಕಷ್ಟ!" ವಟವಟ ಎನ್ನುತ್ತಲೇ ಇದ್ದ ಕುಮಾರ್!

ಮೋಟರ್ ಸಾಯಿಕಲ್ ಹತ್ತಿಕೊಂಡು, ಕನ್ನಾಟ್ ಸರ್ಕಸ್‌ನಲ್ಲಿರುವ ಡಿ.ಜೀ.ಎಮ್‌ನ ಆಫೀಸಿಗೆ ಹೋದೆ. ಅಲ್ಲಿ ಅವನನ್ನು ಕಂಡೆ. ಅವನೊಬ್ಬ ತಮಿಳ. ತಮಿಳು ಬಿಟ್ಟು ಬೇರೆ ಭಾಷೆ ಮಾತನಾಡುತ್ತಿರಲಿಲ್ಲ. ಇಂಗ್ಲಿಷ್‌ನಲ್ಲಿ ಮಾತನಾಡಿದೆ. ನನಗೆ ತಮಿಳಿನಲ್ಲೇ ಉತ್ತರ ಕೊಟ್ಟ.

"ಹೌದು! ಶಾಖೆ ತುಂಬಾ ತೊಂದರೆಯಲ್ಲಿದೆ. ಅದನ್ನು ಸರಿ ಮಾಡಲಿಕ್ಕೇ ನಿನ್ನನ್ನು ಅಲ್ಲಿಗೆ ವರ್ಗ ಮಾಡಿದ್ದೇನೆ. ನಿನಗೆ ನಮ್ಮ ಸಂಪೂರ್ಣ ಸಹಕಾರ ನೀಡುತ್ತೇವೆ."

ಡಿ.ಜೀ.ಎಮ್ ಇಷ್ಟು ಹೇಳಿದ ಮೇಲೆ ನನಗೆ ಮಾರುತ್ತರ ಹೇಳಲು ಏನೂ ಉಳಿದಿರಲಿಲ್ಲ.

ಒಂದು ವಾರದೊಳಗೆ ಬಜಾರ್ ಶಾಖೆಗೆ ಹಾಜರಾಗಿ ಬೊಂಬಾಯಿ ಮೇನೇಜರ್‌ನಿಂದ ಜವಾಬ್ದಾರಿ ವಹಿಸಿಕೊಂಡೆ.

ಮೂರು ತಿಂಗಳಿಂದ ಜರುಗುತ್ತಿದ್ದ ಕಾಳಗಕ್ಕೆ ಧುಮುಕಿದೆ. ಘನಘೋರ ಕಾಳಗವದು! ಕಾಳಗದ ತೀವ್ರತೆಯನ್ನು ನೋಡಿ, ಕಂಗಾಲಾದೆ. ಕುಮಾರ್ ನುಡಿದಿದ್ದು

ದಿಟವೆನಿಸಿತು. ತಮ್ಮ ಪ್ರಾಣಗಳನ್ನು ತೊರೆದು ಹುಮ್ಮಸ್ಸಿನಿಂದ ಹೋರಾಡುತ್ತಿದ್ದ, ಶಾಖೆಯ ಸಿಬ್ಬಂದಿಯನ್ನು ಎದುರಿಸುವುದು ಕಷ್ಟವೆನ್ನಿಸಿತು. ನಾನು ಬರೀ ವೈರಿಯಾಗಿರಲಿಲ್ಲ, ಕಡು ವೈರಿಯಾಗಿದ್ದೆ! ಅದರಲ್ಲೂ ದಕ್ಷಿಣದಿಂದ ದಂಡೆತ್ತಿ ಬಂದ ಮದ್ರಾಸೀ ವೈರಿಯಾಗಿದ್ದೆ! ಇಡ್ಲೀ ಸಾಂಬಾರ್ ತಿನ್ನುವ ಮದ್ರಾಸೀ ವೈರಿಗಳನ್ನು ಸಿಗಿದು ಸೀಳಿ ಹಾಕುವ ಈ ಬ್ಯಾಂಕ್ ಸಿಬ್ಬಂದಿಗಳು ಘಾಯಗೊಂಡ ವ್ಯಾಘ್ರನಂತೆ ನನ್ನ ಮೇಲೆ ಬಿದ್ದರು. ಅಲ್ಪ ಸ್ವಲ್ಪ ಅರಿತಿದ್ದ ಉಪಾಯಗಳನ್ನೆಲ್ಲಾ ಉಪಯೋಗಿಸಿ ದರೂ ಅವರನ್ನು ಗೆಲ್ಲುವುದು ಸುಲಭವಾಗಿರಲಿಲ್ಲ. ಸಾಮ, ದಾನ, ಭೇದ ಮತ್ತು ದಂಡ- ಈ ನಾಲ್ಕು ಉಪಾಯಗಳನ್ನು ಉಪಯೋಗಿಸುವ ಪ್ರಯತ್ನ ಮಾಡಿ, ಎಲ್ಲದರಲ್ಲೂ ವಿಫಲಗೊಂಡೆ. ಒಬ್ಬನನ್ನು ಕರೆದು ಒಳ್ಳೆಯ ರೀತಿಯಲ್ಲಿ ಬುದ್ಧಿವಾದ ಹೇಳಹೊರಟರೆ, ಇಡೀ ಶಾಖೆಯ ಸಿಬ್ಬಂದಿಗಳು ಬಿರುಗಾಳಿಯಂತೆ ನನ್ನ ಬಳಿ ನುಗ್ಗಿ, ಸಿಕ್ಕಿಬಿದ್ದ ತಮ್ಮ ಸಹಯೋಗಿಯನ್ನು ಎಳೆದುಕೊಂಡು ಹೋಗುತ್ತಿದ್ದರು.

ಹೊತ್ತು ಮೀರಿ ಕೆಲಸಕ್ಕೆ ಬಂದು, ಬೇಕಾಬಿಟ್ಟಿ ಕೆಲಸ ಮಾಡಿ, ಅನ್ನ ಚೆಲ್ಲಾಡು ವಂತೆ ಕೆಲಸ ಚಲ್ಲಾಡಿ ಉಳಿಸಿ, ಹೊತ್ತಿಗೆ ಮುಂಚೆ, ಮನೆಗೆ ಹೋಗುವ ಈ ಮಂದಿಯನ್ನು ಹೇಗೆ ನಿಯಂತ್ರಿಸುವುದು ಮತ್ತು ನಿಭಾಯಿಸುವುದು.?

"ನಿಮ್ಮ ಮೇಲೆ ನಮ್ಮ ವೈಯಕ್ತಿಕ ಹಗೆ ಇಲ್ಲ! ನಮ್ಮ ಹೋರಾಟ ಬ್ಯಾಂಕ್ ಮೇನೇಜ್‌ಮೆಂಟ್ ಮೇಲೆ!"

"ಆದರೆ ನನ್ನ ಮೇಲೆ ವೈಯಕ್ತಿಕವಾಗಿ ಹೋರಾಡುತ್ತಿದ್ದೀರಲ್ಲಾ! ನನ್ನನ್ನು ಹುಚ್ಚಾಪಟ್ಟೆ ಬೈಯುತ್ತಿದ್ದೀರಲ್ಲಾ? ಬೆಳಿಗ್ಗೆ ಸಾಯಂಕಾಲ ಧರಣಿ-ಮುಷ್ಕರ ಮಾಡುತ್ತಿದ್ದೀರಲ್ಲಾ?"

"ನೀವು ಬ್ಯಾಂಕ್ ಮೇನೇಜ್‌ಮೆಂಟ್‌ನ ಪ್ರತಿನಿಧಿ. ಹೋರಾಟ ನಿಮ್ಮ ವಿರುದ್ಧ ಅಲ್ಲ! ನೀವು ತಪ್ಪು ತಿಳಿದುಕೊಂಡಿದ್ದೀರ!"

ಮುಂದಾಳು ಜಗಬೀರ್ ಸಿಂಗ್ ಉತ್ತರಿಸಿದ.

ಸಿಂಗ್ ಪಂಜಾಬೀ ಸೀಖ್‌ನಾಗಿದ್ದ. ಸಿಬ್ಬಂದಿಗಳ ಒಂದು ಶಾಖೆಗೆ ನಾಯಕ ನಾಗಿದ್ದ. ಇಂಗ್ಲಿಷ್ ಚೆನ್ನಾಗಿ ಮಾತನಾಡುತ್ತಿದ್ದ. ಎಲ್ಲಾ ದಿಲ್ಲೀವಾಲ್‌ರ ಹಾಗೆ, ಸ್ವಂತ ಉದ್ದಿಮೆ ಹೊಂದಿದ್ದ. ಬ್ಯಾಂಕ್ ನೌಕರಿ ಅವನಿಗೆ ಪಾರ್ಟ್ ಟಾಯಿಮ್ ಕೆಲಸವಾಗಿತ್ತು. ಬ್ಯಾಂಕಿನ ಯಾವುದೇ ಕಾಯದೆ ನಿಯಮಗಳು ಅವನಿಗೆ ಅನ್ವಯ ವಾಗುತ್ತಿರಲಿಲ್ಲ. ಸಮಯ ಪ್ರಜ್ಞೆಯ ಬಗ್ಗೆ ಪ್ರಶ್ನೆಯೇ ಇರಲಿಲ್ಲ. ಯಾವಾಗೆಂದರೆ, ಹೇಗೆಂದರೆ ಹಾಗೆ ಹೋಗಿ ಬರುವ ಅಭ್ಯಾಸವಿದ್ದ ಇವನನ್ನು ನಿಯಂತ್ರಿಸುವುದು ಕಷ್ಟವಾಗಿತ್ತು.

ನನ್ನ ಅನಿಸಿಕೆಗಳನ್ನೆಲ್ಲಾ ಬರೆದು, ಕೆಲವು ಮಂದಿ ಸಿಬ್ಬಂದಿಗಳನ್ನಾದರೂ ಶಾಖೆಯಿಂದ ವರ್ಗ ಮಾಡಿದರೆ, ಪರಿಸ್ಥಿತಿ ಸುಧಾರಿಸಬಹುದು. ಶಿಫಾರಸ್ಸು ಮಾಡಿ ಡಿ.ಜಿ.ಎಮ್‌ಗೆ ತಿಳಿಸಿದೆ. ಪತ್ರ ಕೈ ಸೇರಿದ ಕೂಡಲೆ ನನ್ನನ್ನು ಕರೆಸಿದ.

"ನಿಮ್ಮನ್ನು ಆ ಶಾಖೆಗೆ ವರ್ಗ ಮಾಡಿದ್ದು, ಶಾಖೆಯನ್ನು ನಿಭಾಯಿಸಲಿಕ್ಕೆ, ಸಿಬ್ಬಂದಿಗಳನ್ನು ವರ್ಗ ಮಾಡಿ ಎಂದು ಬರೆಯುವುದಕ್ಕಲ್ಲ!"

ಕಣ್ಣು ಕೆಂಪು ಮಾಡಿಕೊಂಡು ನನ್ನ ಮೇಲೆ ಹರಿಹಾಯ್ದ.

"ನೀವು ಸಹಕಾರ ಕೊಡುತ್ತೀರ ಎಂದು ಹೇಳಿದ್ದೀರಲ್ಲಾ!"

ಅವರು ನನಗೆ ನೀಡಿದ ಆಶ್ವಾಸನೆ ಬಗ್ಗೆ ಅವನ ಗಮನಕ್ಕೆ ತಂದೆ.

ನನ್ನ ಮುಖ ದುರುಗುಟ್ಟಿ ನೋಡಿದ.

"ನಿನ್ನ ಸಿಬ್ಬಂದಿನೆಲ್ಲಾ ಬೇರೆ ಶಾಖೆಗಳಿಗೆ ವರ್ಗ ಮಾಡಿಬಿಟ್ಟರೆ, ನಿನಗೆ ಸಹಕಾರ ನೀಡಿದಂತೆ ಎಂದು ಕೊಂಡಿದ್ದೀಯಾ?"

ಗುಡುಗಿದ ತಮಿಳ!

ನಾನು ಮಾತನಾಡಲಿಲ್ಲ.

"ನಿನ್ನ ಶಾಖೆಯ ಒಬ್ಬನೇ ಒಬ್ಬ ಸಿಬ್ಬಂದಿಯನ್ನು ಬೇರೆ ಶಾಖೆಗೆ ವರ್ಗ ಮಾಡಿಬಿಟ್ಟರೆ ಆ ಶಾಖೆಯ ಗತಿ ಏನಾಗುತ್ತದೆ ಎಂದು ಅರಿವಿದೆಯಾ?"

ನಾನು ಮಿಸುಕಾಡಲಿಲ್ಲ.

"ಆ ಶಾಖೆ ಕುಲಗೆಟ್ಟು ಹೋಗುತ್ತದೆ! ಒಂದು ಒಳ್ಳೇ ಶಾಖೆಯನ್ನು ಹಾಳು ಮಾಡಲಿಕ್ಕೆ ನಿಮ್ಮ ಶಾಖೆಯ ಒಬ್ಬ ಕಾರಕೂನ ಸಾಕು! ಗೊತ್ತಾಯಿತೇ?"

ಕುರಿಯಂತೆ ತಲೆ ಅಲ್ಲಾಡಿಸಿದೆ.

"ಒಂದು ತೊಟ್ಟು ನಿಂಬೆ ಹುಳಿ ಸಾಕು ಹಾಲು ಕೆಡಿಸಲಿಕ್ಕೆ! ಗೊತ್ತೇ?"

ಹಾಗಾದರೆ ನನ್ನ ಶಾಖೆಯ ಸಿಬ್ಬಂದಿಗಳೆಲ್ಲಾ ಹುಳಿಮೊಟ್ಟೆಗಳೇ! ಒಳ್ಳೇ ಬೆಳ್ಳಗಿರುವ ಹಸನಾದ ಹಾಲನ್ನು ಹಾಳು ಮಾಡಲು ಹುಳೀ ಬಿಂದುಗಳು!

"ನನ್ನ ಶಾಖೆಯ ಸಿಬ್ಬಂದಿಗಳೆಲ್ಲಾ ಅಷ್ಟು ಕೆಟ್ಟವರಾ ಸಾರ್?"

ನಿಧಾನವಾಗಿ ಕೇಳಿದೆ.

"ಕೆಟ್ಟವರಾ? ಇದಕ್ಕಿಂತ ಕೆಟ್ಟ ಪದಗಳಿಲ್ಲ ಇವರನ್ನು ವಿವರಿಸಲಿಕ್ಕೆ!"

"ಒಂದೇ ಶಾಖೆಯಲ್ಲಿ ಸಿಬ್ಬಂದಿ ವರ್ಗದವರೆಲ್ಲಾ ಕೆಟ್ಟವರು ಹೇಗಾಗುತ್ತಾರೆ?"

ಕೆಲವರಾದರೂ ಒಳ್ಳೆಯವರಿರಲೇ ಬೇಕಲ್ಲಾ! ೨೫ ಮಂದಿ ಕೆಲಸಗಾರರಲ್ಲಿ, ಎಲ್ಲರೂ ಕೆಟ್ಟವರಿರಬೇಕಾಗಿರಲಿಲ್ಲ!

"ದಿಲ್ಲೀಯ ಎಲ್ಲಾ ಶಾಖೆಗಳಿಂದ, ಯಾರು ಯಾರು ನಾಲಾಯಕ್ ಪಟಿಂಗ ಸಿಬ್ಬಂದಿಗಳಿದ್ದರೋ, ಅವರನ್ನೆಲ್ಲಾ ನಿಮ್ಮ ಶಾಖೆಗೆ ವರ್ಗ ಮಾಡುವ ಅಭ್ಯಾಸ ಕೆಲವು ವರ್ಷಗಳಿಂದ ನಡೆದುಕೊಂಡು ಬರುತ್ತಾ ಇದೆ. ಈ ವಿಷಯ ಗೊತ್ತಿಲ್ಲವೇ?"

ನನಗೆ ಅರ್ಥವಾಗಿತ್ತು!

ಇದೆಂತಹ ನೀತಿ-ನಿಯಮ? ನನ್ನ ಶಾಖೆಯನ್ನು 'ಗಾರ್ಬೇಜ್ ಗ್ರೌಂಡ್' ಅಥವಾ 'ಡಸ್ಟ್‌ಬಿನ್' ತರಹ ಪರಿವರ್ತಿಸಿಬಿಟ್ಟಿದ್ದಾರೆಯೆ? ನನ್ನದೊಂದೇ ಶಾಖೆಯೇ ಈ ಪರಿಯ ವಿಶೇಷ ಶಾಖೆ?

"ಇದೇ ರೀತಿ ಬೇರೆ ಶಾಖೆ ಇವೆಯೇ ಅಥವಾ ನನ್ನದೊಂದೇ ಶಾಖೆಯೇ?"

"ಘಾಸಿಯಾಬ್ಯಾಡ್, ಫಿರೋಜಾಬ್ಯಾಡ್ ಶಾಖೆಗಳೂ ನಿನ್ನ ಶಾಖೆ ತರಹ ಇವೆ!"

ತಮಿಳು ಡಿಜೀಎಮ್‌ಗೆ 'ಬಾದ್' ಪದವನ್ನು 'ಬ್ಯಾಡ್' ಅಂತ ಉಚ್ಛರಿಸು ವುದನ್ನು ನೋಡಿದಾಗ, ನನಗೆ ಅನುಮಾನವಾಗಿತ್ತು. ಬೇಕಂತಲೇ ಅವನ್ನು 'ಬ್ಯಾಡ್' 'ಬ್ಯಾಡ್' ಅಂತ ಉಚ್ಛರಿಸಿ, ಆ ಶಾಖೆಗಳನ್ನು ಹೀಯಾಳಿಸುತ್ತಿದ್ದಾನೆಂದು. ಸಧ್ಯ ನನ್ನ ಶಾಖೆಯು 'ಬ್ಯಾಡ್' ಆಗಿರದೆ, 'ಬಜಾರ್' ಆಗಿತ್ತು.

"ಅವುಗಳ ಹೆಸರಿನಂತೆ ಅವು ಬಾದ್ ಶಾಖೆಗಳು! ಅದಕ್ಕೇ ಆ ಶಾಖೆಗಳಿಗೆ ಡಂಪ್ ಮಾಡಿದೆವು ಎಲ್ಲಾ ಪಟಿಂಗರನ್ನು!"

"ನಿಮ್ಮ ಶಾಖೆಯಿಂದ ಯಾರನ್ನು ವರ್ಗ ಮಾಡೋದಿಲ್ಲ!"

ಹೊರಗೆ ಬಂದೆ. ಮುಖಕ್ಕೆ ಮಂಗಳಾರತಿ ಮಾಡಿದ್ದ ಈ 'ಬ್ಯಾಡ್' ಡಿಜೀಯಂ! ಹಿಡಿ ಶಾಪ ಹಾಕಿದೆ. ನನ್ನ ಶಾಖೆಗೆ ಹೆಪ್ಪು ಮೋರೆ ಹಾಕಿಕೊಂಡು ಬರೀ ಕೈಲಿ ವಾಪಸ್ಸು ಬಂದೆ.

ಒಳ್ಳೇ ಉತ್ತಮ ಶಾಖೆಗಳನ್ನು ಪಟಿಂಗ, ಪೋಕರಿಗಳಿಂದ ರಕ್ಷಿಸಲು, ಅವರನ್ನು ಬೇರೆ ಶಾಖೆಗಳಿಗೆ ವರ್ಗ ಮಾಡಿ, ಅವರನ್ನು ಪ್ರತ್ಯೇಕಗೊಳಿಸಿ, ಅವರಿಗೆ ಶಿಕ್ಷೆ ನೀಡುವ ಹಾಗೆ, ಅವರ ಬಗ್ಗೆ ನಿಕೃಷ್ಟ ಭಾವನೆ ತೋರಿ, ಮಲತಾಯಿ ಧೋರಣೆ ತೋರಿಸಿ, ಅವರನ್ನು ಸುಧಾರಣೆ ಮಾಡುವ ಯತ್ನವನ್ನೂಮಾಡದ ಈ ಬ್ಯಾಂಕ್ ಮೇನೇಜ್ ಮೆಂಟ್‌ನ ನೀತಿಗೆ ಏನು ಹೇಳಬೇಕು? ಬಜಾರ್ ಶಾಖೆಯಲ್ಲಿ, ಬ್ಯಾಂಕಿನ ಲೆಕ್ಕಪತ್ರ ತಿದ್ದಿ ಸುಳ್ಳು ಕಾಗದ ಪತ್ರ ಸೃಷ್ಟಿಸಿದ ಕಾರಣಕ್ಕೆ ಹತ್ತು ಜನ ಸಿಬ್ಬಂದಿಯನ್ನು ಅನಾಮತುಗೊಳಿಸಿ, ಅವರನ್ನು ಶಿಕ್ಷೆಗೊಳಿಸಿದ್ದಕ್ಕೆ, ಮಿಕ್ಕ ಸಿಬ್ಬಂದಿಗೆ ಕೋಪ ಉಂಟಾಗಿ, ತಮ್ಮ ಸಹದ್ಯೋಗಿಗಳ ಬೆಂಬಲಕ್ಕೆ ಧರಣಿ-ಮುಷ್ಕರ ಹೂಡಿ ಬ್ಯಾಂಕ್ ವ್ಯವಹಾರ, ಸೇವೆಗಳಿಗೆ ಧಕ್ಕೆ ಉಂಟುಮಾಡುತ್ತಿದ್ದರೂ ಅವರ ಮೇಲೆ ಯಾವ

ರೀತಿಯ ಕ್ರಮಗಳನ್ನೂ ತೆಗೆದುಕೊಳ್ಳದೇ, ಎಲ್ಲಾ ಜವಾಬ್ದಾರಿಯನ್ನು ನನ್ನ ಮೇಲೆ ಹೇರಿ, 'ನೀ ನಿಭಾಯಿಸು! ನಿನ್ನನ್ನು ಈ ಶಾಖೆಗೆ ವರ್ಗ ಮಾಡಿದ್ದು ಯಾಕೆ ಅಂತ ಮಾಡಿದ್ದೀ? ಆ ಪುಂಡರನ್ನು ನಿಭಾಯಿಸಲಿಕ್ಕೆ!' ಎಂದು ಹೇಳಿ ನನ್ನನ್ನು ಬೆಪ್ಪನನ್ನಾಗಿ ಮಾಡಿಬಿಟ್ಟನಲ್ಲಾ ಈ ತಮಿಳು ಡಿಜೀಎಮ್.

ತಲೆ ಮೇಲೆ ಕೈಹೊತ್ತಿಕೊಂಡು ಕೂತಿದ್ದ ನನ್ನನ್ನು ಕಂಡು, ಅಕೌಂಟೆಂಟ್ ವರ್ಮಾ ಕೇಳಿದ:

"ನಿಮ್ಮ ಶಿಫಾರಸ್‌ನ ಪ್ರಕಾರ, ಸಿಬ್ಬಂದಿಗಳನ್ನು ಈ ಶಾಖೆಯಿಂದ ವರ್ಗ ಮಾಡಲಿಕ್ಕೆ ಆಗೋದಿಲ್ಲ ಅಂತ ಹೇಳಿದರಾ?"

"ಹೌದು" ಎಂದು ಗೋಣು ಅಲ್ಲಾಡಿಸಿದೆ.

"ನೀವು ಈ ಶಾಖೆಗೆ ಬಂದು ಮೂರು ತಿಂಗಳಾಯಿತು. ಸುಮ್ಮನೆ ಕುಳಿತಿದ್ದೀರಿ! ನಾವು ಆಫೀಸರ್‌ಗಳು ಕತ್ತೆ ತರಹ ದುಡಿಯುತ್ತಾ ಇದ್ದೇವೆ. ರಾತ್ರಿ ೧೦ ಗಂಟೆ ಯಾದರೂ ಕೆಲಸ ಮುಗಿಯುವುದಿಲ್ಲ, ಕಾರಕೂನರೆಲ್ಲಾ ಕೆಲಸ ಬಾಕಿ ಇಟ್ಟು, ವೇಳೆಗೆ ಮುಂಚೆ ಹೊರಟುಹೋಗುತ್ತಾ ಇದ್ದಾರೆ. ನಿವ್ಯಾಕೆ ಕ್ರಮ ತೆಗೆದುಕೊಳ್ಳಬಾರದು?"

"ಈಗಲೇ ಬೆಂಕಿ ಹತ್ತಿ ಉರಿಯುತ್ತಿದೆ. ಕ್ರಮ ತೆಗೆದುಕೊಂಡರೆ, ಉರಿಯುವ ಬೆಂಕಿಗೆ ತುಪ್ಪ ಹಾಕಿದ ಹಾಗೆ ಆಗಲ್ವೆ?"

"ಉರಿದು ಬೆಂದು ಹೋಗಲಿ! ನಾವು ದಿನವಿಡೀ ಬೆಂದು ಹೋಗುವುದನ್ನು ನೋಡುತ್ತಾ ಇದ್ದೀರಿ. ಕ್ರಮ ತೆಗೆದುಕೊಂಡರೆ, ಭುಗಿಲ್ ಅಂತ ಒಂದು ದಿನ ಉರಿಯ ಬಹುದು. ಉರಿದು ಸುಟ್ಟು, ಬೂದಿಯಾಗಲಿ! ನೋಡಿ ಸಾರ್! ನಾವು ಒಂದು ದಿನ ಸಾಯೇ ಸಾಯ್ತೀವಿ! ಆದರೆ ೩೬೫ ದಿನನೂ ಸಾಯಲಿಕ್ಕೆ ತಯ್ಯಾರಿಲ್ಲ!"

ಇವನು ಏನು ಹೇಳ್ತಾ ಇದ್ದಾನೆ? ಒಂದು ದಿನ ಸಾಯಬಹುದು; ೩೬೫ ದಿನವೂ ಸಾಯಲಿಕ್ಕೆ ಆಗೋದಿಲ್ಲ!

"ತೆಗೆದುಕೊಳ್ಳಿ ಕ್ರಮ! ಹೆದರಬೇಡಿ! ನಾವಿದ್ದೇವೆ!"

ದಿಟ್ಟತನದ ಪಂಜಾಬೀ ವರ್ಮನ ಉವಾಚ!'ಹೆದರಬೇಡಿ' ಅಂತ ಹೇಳಿ ನನ್ನನ್ನು ಪರೋಕ್ಷವಾಗಿ 'ಹೇಡಿ' ಅಂತ ಹೀಯಾಳಿಸಿದ, ಹಾಗೆ ಆಯಿತು.

"ಮೊದಲು ಶಿಸ್ತು ಬೇಕು ಈ ಶಾಖೆಗೆ! ಶಿಸ್ತು ಕಾಪಾಡಿ! ಆಮೇಲೆ ನೋಡಿ ಎಲ್ಲಾ ಸರಿ ಹೋಗುತ್ತದೆ."

ಮಾತನಾಡುತ್ತಲೇ ಇದ್ದ ವರ್ಮಾ.

"ವೇಳೆಗೆ ಸರಿಯಾಗಿ ಶಾಖೆಗೆ ಬಂದು, ವೇಳೆಗೆ ಸರಿಯಾಗಿ ಮನೆಗೆ ಹೋಗಲಿ! ಕೆಲಸ ಮಾಡಿಸುವುದು ಆಮೇಲೆ!"

"ನಾನು ಕ್ರಮ ತೆಗೆದುಕೊಂಡರೆ ನೀವು ನನಗೆ ಸಂಪೂರ್ಣ ಸಹಕಾರ ನೀಡುತ್ತೀರ?"

ಡಿಜೀಎಮ್‌ನ ಸಹಕಾರ ಆಶ್ವಾಸನೆ ನನಗೆ ನೆನಪಿಗೆ ಬಂದಿತು.

"ಆಗಲೇ ಹೇಳಿದೆನಲ್ಲಾ! ಒಂದು ದಿನ ಸಾಯುವ;ಪ್ರತೀ ದಿನ ಸಾಯುವುದು ಬೇಡ ಎಂದು!"

ಕಾಳಗದಲ್ಲಿ ನನ್ನನ್ನು ರಕ್ಷಿಸಿಕೊಳ್ಳುವುದರಲ್ಲೇ ಸಮಯ ಕಳೆದು ಹೊಡೆತ ತಿಂದಿದ್ದ ನಾನು, ಆ ವೈರಿಗಳ ಮೇಲೆ ಆಕ್ರಮಣ ಮಾಡಲು ನಿರ್ಧರಿಸಿದೆ. ಆಕ್ರಮಣ ಮಾಡುವ ಮೊದಲು, ವೈರಿಗಳ ದೋಷ, ಕುಂದುಗಳ ಅಂಶಗಳನ್ನು ಗಮನದಲ್ಲಿಟ್ಟು, ಅಲ್ಲಿಗೆ ಬಲವಾದ ಹೊಡೆತ ನೀಡುವ ಸಾಹಸ ಮಾಡಿದೆ.

ಮಾರನೆ ಬೆಳಿಗ್ಗೆ, ಹತ್ತು ಗಂಟೆಗೆ ಅಟೆಂಡನ್ಸ್ ರಿಜಿಸ್ಟರ್ ಕೈಗೆ ತೆಗೆದುಕೊಂಡು ನನ್ನ ಮೇಜಿನ ಮೇಲೆ ಇರಿಸಿದೆ. ಯಾವ ನೌಕರನೂ ಸರಿಯಾದ ಸಮಯಕ್ಕೆ ಶಾಖೆಗೆ ಬರುವ ಪರಿಪಾಠ ಇರಿಸಿಕೊಂಡಿರಲಿಲ್ಲ. ಹನ್ನೊಂದು ಗಂಟೆಯವರೆಗೂ ಒಬ್ಬೊಬ್ಬರೇ ಶಾಖೆಗೆ ಬರುವ ಪರಿಪಾಠವಿರಿಸಿದ್ದ ಅವರು, ಅಂದು ಸಹಿ ಹಾಕಲು ರಿಜಿಸ್ಟರ್ ಕಾಣದೆ ಇದ್ದ ಪ್ರಯುಕ್ತ, ತಬ್ಬಿಬ್ಬಾದರು.

ನನ್ನ ಬಳಿ ರಿಜಿಸ್ಟರ್ ಇದೆ ಎಂದು ತಿಳಿದಕೂಡಲೇ ಹುಬ್ಬು ಗಂಟಿಕ್ಕಿ, ಒಬ್ಬೊಬ್ಬರೇ ನನ್ನ ಕೋಣೆಗೆ ಬಂದು 'ಎಲ್ಲಿ ರಿಜಿಸ್ಟರ್?' ಎಂದು ಕೇಳಿದರು.

"ಸಹಿ ಹಾಕಿ. ನಿಮ್ಮ ಸಹಿಯ ಮುಂದೆ ನೀವು ಬಂದ ಸಮಯವನ್ನು ಗುರುತು ಮಾಡಿ' ಎಂದೆ.

"ಯಾಕೆ?"

"ಲೇಟಾಗಿ ಬಂದಿದ್ದೀರಿ. ಎಷ್ಟು ಗಂಟೆಗೆ ಬಂದಿದ್ದೀರಿ ಎಂದು ದಾಖಲು ಮಾಡಲಿಕ್ಕೆ." ಎಂದೆ.

"ನಾವು ಮಾಡುವುದಿಲ್ಲ!" ಎಂದರು ಎಲ್ಲರೂ.

"ಬೇಡ! ಮಾಡಬೇಡಿ! ಮಾಡದೇ ಹೋದರೆ ಇಂದಿನ ಸಂಬಳ ಸಿಗುವುದಿಲ್ಲ!" ಎಂದೆ ಧೈರ್ಯದಿಂದ. ಹೋರಾಟದ ಮೊದಲ ಗುಂಡು ಹಾರಿಸಿದ್ದೆ. ಅವರ ಪ್ರತಿ ಧಾಳಿಗೆ ಕಾದೆ. ಧಾಳಿಯ ಮುಂದಾಳು ಸಿಂಗ್ ಮುಂದೆ ಬಂದ.

"ನಮ್ಮ ಶಾಖೆಯ ನಿಯಮ ನಿಮಗೆ ತಿಳಿಯದು ಅಂತ ಕಾಣುತ್ತದೆ. ಈ ಶಾಖೆಗೆ ನೀವು ಇನ್ನೂ ಹೊಸಬರು. ನಾವು ಹೇಳಿದ ಹಾಗೆ ಕೇಳಿಕೊಂಡರೆ, ನಿಮಗೂ ಕ್ಷೇಮ, ನಮಗೂ ಕ್ಷೇಮ. ಇಲ್ಲದೇ ಹೋದರೆ, ನೀವು ಪಶ್ಚಾತ್ತಾಪ ಪಡಬೇಕಾಗುತ್ತದೆ" ಎಂದ.

"ಸಹಿ ಮಾಡಿ! ಪಕ್ಕದಲ್ಲಿ ಬಂದ ಸಮಯ ಗುರುತು ಮಾಡಿ!" ಎಂದೆ.

"ನಾವು ಮಾಡುವುದಿಲ್ಲ!"

"ಬೇಡ! ಸಂಬಳ ಸಿಗುವುದಿಲ್ಲ!ಸಂಬಳ ಕಡಿದುಬಿಡುತ್ತೇನೆ!" ಹೆದರಿಸಿದೆ.

ಗುಂಪಿನಲ್ಲಿ ಒಬ್ಬ ಮುಂದೆ ಬಂದು,

"ರಿಜಿಸ್ಟರ್ ಕೊಡಿ. ನಾನು ಸಹಿ ಮಾಡಿ, ಸಮಯ ಗುರುತು ಹಾಕುತ್ತೇನೆ" ಎಂದು ಹೇಳಿ ರಿಜಿಸ್ಟರ್ ಕೈಗೆ ತೆಗೆದುಕೊಂಡು ಸಹಿ ಮಾಡಿ, ಹೊರಗೆ ಹೊರಟ. ಎಲ್ಲರೂ ಅವನ ಮುಖವನ್ನೇ ದುರುಗುಟ್ಟಿ ನೋಡಿ, ಗೊಣಗಿದರು. ಗೊಣಗಾದ ಮೇಲೆ, ಬೈಯಲಿಕ್ಕೆ ಶುರು ಮಾಡಿದರು.

"ಕಮೀನೆ ! ಬದ್ಮಾಷ್!"

ಆದರೆ, ಮಿಕ್ಕ ಎಲ್ಲರೂ ಒಬ್ಬೊಬ್ಬರಾಗಿ ರಿಜಿಸ್ಟರ್‌ನಲ್ಲಿ ಸಹಿ ಮಾಡಿ, ಸಮಯ ಸೂಚಿಸಿ ನಿರ್ಗಮಿಸಿದರು. ಹೊರಗೆ ಹೋಗಿ ನನಗೆ ಕೇಳುವ ಹಾಗೆ ಬೈಗುಳದ ಸಮಸ್ತನಾಮ ಹಾಕಿ, ನೆಟಿಕೆ ಮುರಿದು,

"ನಿನ್ನ ಕಾಲು ಕೈ ಮುರಿದು ಮದ್ರಾಸ್‌ಗೆ ವಾಪಸ್ಸು ಕಳುಹಿಸುತ್ತೇವೆ, ನೋಡುತ್ತಾ ಇರು, ಬದ್ಮಾಷ್!"

ನಾನು ನನ್ನ ಕಾಲು ಮುಟ್ಟಿಕೊಂಡೆ! ಗಟ್ಟಿಯಾಗೇ ಇತ್ತು!

ಕಾಳಗದ ಮೊದಲನೆ ಸುತ್ತು ನನಗೆ ಜಯ ತಂದಿತ್ತು. ಮುಂದಿನ ಕಾಳಗಕ್ಕೆ ಅಣಿಯಾದೆ.

ವರ್ಮಾ ಒಳಗೆ ಬಂದ. ಅವನ ಮುಖದಲ್ಲಿ ನಗುವಿತ್ತು.

"ಈ ದಿನ ನನಗೆ ಬಹಳ ಸಂತೋಷ ತಂದಿದೆ. ಪಂಜಾಬಿಗಳಿಗೆ ಹೋರಾಟ ಗಾರರನ್ನೂ ಕಂಡರೆ ಆದರ ಗೌರವ- ಅವರು ವೈರಿಯಾದರೂ ಸಹ! ಆದರೆ, ಪುಕ್ಕಲ ರನ್ನೂ ಕಂಡರೆ, ಕೋಳಿಯ ಕತ್ತನ್ನು ಮುರಿಯುವ ಹಾಗೆ ಅವರ ಕತ್ತನ್ನು ಮುರಿದು ಬಿಡುತ್ತಾರೆ! ನೀವು ಈ ದಿನ ನಿಜವಾದ ಧೈರ್ಯ ತೋರಿಸಿದ್ದೀರಿ. ಹಮ್ ಆಪ್ ಕೇ ಸಾಥ್ ಹೈ! ಲಡೋ! ಸಾಬ್ ಲಡೋ"

ನನ್ನ ಪ್ರತಿಕ್ರಿಯೆಗೂ ಕಾಯದೇ ಅವ ಹೊರಟುಹೋದ. ಅವನ ಹಿಂದೆಯೇ ಇನ್ನೊಬ್ಬ ಬಂದ.

"ನಮಸ್ಕಾರ್!" ಎಂದ.

"ಏನು ಬೇಕು?" ಕೇಳಿದೆ.

"ನೀವು ಒಳ್ಳೆಯದನ್ನೇ ಮಾಡಿದಿರಿ!" ಎಂದ.

"ನಿಮ್ಮ ಹೆಸರೇನು?" ಅವನ ಹೆಸರು ಮರೆತುಹೋಗಿತ್ತು.

"ಸಾಗೂ!" ಎಂದು.

"ಪೂರೀ ಸಾಗೂ?"

"ಇಲ್ಲ! ಇಲ್ಲ! ನಾರಾಯಣ್ ಸಾಗೂ!" ಎಂದ.

ತೆಳ್ಳಗೆ, ಬೆಳ್ಳಗೆ, ಕಡಿಮೆ ವಯಸ್ಸಾದರೂ ತಲೆ ಕೂದಲು ಉದುರಿಹೋಗಿ ಬಕ್ಕ ತಲೆಯುಳ್ಳವನಾಗಿದ್ದ.

"ನಾನು ದಿನವಹೀ ಸೋನೇಪತ್‌ನಿಂದ ಬರುತ್ತೇನೆ. ರೈಲು ತಪ್ಪಿದರೆ, ಬ್ಯಾಂಕಿಗೆ ಬರಲು ತಡವಾಗುತ್ತದೆ. ನೀವು ಇಷ್ಟು ಸ್ಟ್ರಿಕ್ಟ್ ಆಗಿಬಿಟ್ಟರೆ, ನನಗೆ ಬಹಳ ತೊಂದರೆ ಯಾಗುತ್ತದೆ."

ಯೋಚಿಸಿದೆ. ಇವ ಒಳ್ಳೆಯವನ ಹಾಗೆ ಕಾಣುತ್ತಾನೆ. ಯಾಕೆ ಇವನ ಸ್ನೇಹ ಗಳಿಸಬಾರದು? ಶತ್ರುವಿನ ಪಾಳ್ಯದಿಂದ ಒಬ್ಬನ ಸ್ನೇಹಗಳಿಸಿದರೆ, ಅವನನ್ನು ನನ್ನ ಗೂಢಾಚಾರನನ್ನಾಗಿ ಯಾಕೆ ಉಪಯೋಗಿಸಬಾರದು?

"ರೈಲು ತಪ್ಪಿ ಬ್ಯಾಂಕಿಗೆ ಬರಲು ತಡವಾದರೆ, ನನ್ನದೇನು ಅಭ್ಯಂತರವಿಲ್ಲ. ಆದರೆ ಒಂದು ನಿಯಮ!"

"ಏನು?" ಕಾತರವಿತ್ತು ಅವನ ಧ್ವನಿಯಲ್ಲಿ.

"ಆ ದಿನದ ಕೆಲಸ ಮುಗಿಸಿ ಹೋಗಬೇಕು!"

"ಆಗಲಿ!" ಎಂದ. ಆನಂದವಾಗಿತ್ತು ಅವನಿಗೆ.

ಸಿಂಗ್‌ನನ್ನು ಕರೆದೆ. ಒಳಗೆ ಬಂದ ಕೂಡಲೆ "ಬ್ಯಾಂಕ್‌ನ ಕೆಲಸದ ಸಮಯ- ಹತ್ತರಿಂದ ಐದು ಗಂಟೆಯವರೆಗೆ. ಐದು ಗಂಟೆ ಮೊದಲು ಯಾರೂ ಅಪ್ಪಣೆ ಇಲ್ಲದೆ ಹೋಗಕೂಡದು!" ದರ್ಪದ ಧ್ವನಿ ಯಲ್ಲಿ ಹೇಳಿದೆ.

"ಇದು ಮೊಘಲ್ ದರ್ಬಾರ್ ಅಲ್ಲ! ನೀವೇನು ಬಾದ್‌ಶಹಾ ಅಲ್ಲ! ಇದು ಸರಕಾರದ ಬ್ಯಾಂಕ್! ಗೊತ್ತಾಯಿತಾ?" ಗುಡುಗಿದ ಅವನು!

"ಗೊತ್ತಿದೆ! ಇದು ಮೊಘಲ್ ದರ್ಬಾರ್ ಅಲ್ಲ! ಇದು ಬ್ಯಾಂಕ್ ಅಂತ. ಇದನ್ನ ಬ್ಯಾಂಕ್ ಎಂದು ತಿಳಿದು ಸಮಯಕ್ಕೆ ಸರಿಯಾಗಿ ಕೆಲಸಕ್ಕೆ ಬಂದು, ಕೆಲಸ ಮಾಡಿ, ಸಮಯ ಮುಗಿದ ಕೂಡಲೇ ಹೊರಟು ಹೋಗಬಹುದು!"

"ದರ್ಪ ತೋರಿಸಬೇಡಿ! ಅದನ್ನು ಇಳಿಸಲಿಕ್ಕೆ ನನಗೆ ಗೊತ್ತಿದೆ!"

ನನ್ನ ಕೋಪ ಏರುತ್ತಾ ಹೋಯಿತು. ಆದರೆ ಕೋಪದ ವೈಭವ ಪ್ರದರ್ಶಿಸಿ ದರ್ಪ ತೋರಿಸಿದರೆ ಅವನು ಹೇಳಿದ್ದು ಸಾಬೀತು ಮಾಡಿಕೊಂಡಾಗುತ್ತದಲ್ಲವೆ?

"ಕೌಂಟರ್‌ನಲ್ಲಿ ಗಿರಾಕಿಗಳು ಕಾಯುತ್ತಾ ಇದ್ದಾರಂತೆ. ಇನ್ನು ನೀವು ಹೋಗಿ ನಿಮ್ಮ ಕೆಲಸ ಮಾಡಬಹುದು."

ಕೋಪ ಅದುಮಿ ಹಿಡಿದು, ಆದಷ್ಟು ತಗ್ಗಿದ ಧ್ವನಿಯಲ್ಲಿ ನುಡಿದೆ.

ದುರುಗುಟ್ಟಿ ನನ್ನ ಮುಖವನ್ನೇ ತಿನ್ನುವಂತೆ ನೋಡಿ, ಹೊರಗೆ ಹೋದ ಸಿಂಗ್!

ಮಾರನೆಯ ದಿನ ನಾನು ಎಣಿಸಿದಂತೆ, ಸಿಬ್ಬಂದಿಗಳೆಲ್ಲಾ ಸರಿಯಾದ ಸಮಯಕ್ಕೆ ಕೆಲಸಕ್ಕೆ ಹಾಜರಾದರು. ಶಿಸ್ತಿನ ಸಿಪಾಯಿಗಳ ಹಾಗೆ ಸಾಲಾಗಿ ನಿಂತು, ರಿಜಿಸ್ಟರ್‌ನಲ್ಲಿ ಸಹಿ ಹಾಕಿ, ತಮ್ಮ ತಮ್ಮ ಸ್ಥಾನದಲ್ಲಿ ಕುಳಿತು ಕೆಲಸಕ್ಕೆ ತೊಡಗಿದರು.

ಆದರೆ ಸಿಂಗ್ ಮಾತ್ರ ಆ ದಿನ ಹಾಜರಾಗಲಿಲ್ಲ!

ಮಾರನೆಯ ಬೆಳಿಗ್ಗೆ ಒಂದು ಗಂಟೆ ತಡವಾಗಿ ಬಂದ. ನನ್ನ ಕೋಣೆಗೆ ಬಂದು, ರಿಜಿಸ್ಟರ್ ಕೇಳಿದ.

"ಮಿ. ಸಿಂಗ್! ನೀವು ರಜೆ ಹಾಕಿ!" ಎಂದೆ.

"ಯಾಕೆ?" ಕೇಳಿದ ಗಡುಸಾಗಿ.

"ಒಂದು ಗಂಟೆ ತಡವಾಗಿ ಬಂದಿದ್ದೀರಾ? ನಾನು ನಿಮಗೆ ಈ ದಿನ ಕೆಲಸ ಮಾಡಲಿಕ್ಕೆ ಅಪ್ಪಣೆ ನೀಡುವುದಿಲ್ಲ!"

"ರಿಜಿಸ್ಟರ್ ಕೊಡಿ ನಾನು ಸಹಿ ಮಾಡಬೇಕು!"

ಕೆರಳಿ ಕೇಳಿದ ಸಿಂಗ್.

"ರಜೆ ಹಾಕಿ!" ಎಂದೆ ಆದಷ್ಟು ಧ್ವನಿ ತಗ್ಗಿಸಿ.

"ನನಗೆ ಕೆಲಸ ಮಾಡಲು ಹಕ್ಕಿದೆ. ಅದನ್ನು ನೀವು ಕಸಿದುಕೊಳ್ಳುವ ಹಾಗೆ ಇಲ್ಲ! ಗೊತ್ತೇನು?"

ಕಿರಿಚಿದ. ಅವನ ಧ್ವನಿಗೆ ಓ ಗೊಟ್ಟು ಬಾಕಿ ಸಿಬ್ಬಂದಿಗಳು ಭರಭರನೆ ಬಂದರು ನನ್ನ ಕೋಣೆಗೆ.

"ಸಿಂಗ್‌ರಿಗೆ ರಿಜಿಸ್ಟರ್ ಕೊಡಿ. ಸಹಿ ಮಾಡಲಿ."

ಎಲ್ಲರೂ ಒಕ್ಕರಲಿನಿಂದ ಕೂಗಿದರು.

"ನೀವೆಲ್ಲ ನಿಮ್ಮ ನಿಮ್ಮ ಸ್ಥಳಕ್ಕೆ ಹೋಗಿರಿ. ಇಲ್ಲದೇ ಇದ್ದ ಪಕ್ಷದಲ್ಲಿ, ಮುಷ್ಕರ ಮಾಡುತ್ತಾ ಇದ್ದಾರೆಂದು ಹೇಳಿ ರಿಪೋರ್ಟ್ ಮಾಡಿ, ಸಂಬಳ ಹಿಡಿಸುತ್ತೇನೆ."

ಕೋಪದಿಂದ ನಡುಗುತ್ತಿದ್ದ ನನ್ನ ಧ್ವನಿ ಕೇಳಿ ಮೆತ್ತಗಾದರು ಅವರು. ಒಬ್ಬೊಬ್ಬರೇ ಹೊರಗೆ ಹೋಗಿ ತಮ್ಮ ತಮ್ಮ ಸ್ಥಳದಲ್ಲಿ ಕುಳಿತರು.

"ರಜೆ ಹಾಕಿರಿ!"

"ಹಾಕೋದಿಲ್ಲ! ನನ್ನನ್ನ ಹೆದರಿಸುತ್ತಾ ಇದ್ದೀರಾ? ನಾನು ಯಾರು ಅಂತ ನಿಮಗೆ ಗೊತ್ತಿಲ್ಲಾ!"

"ರಜೆ ಹಾಕಿರಿ!" ಮತ್ತೆ ನುಡಿದೆ.

"ನಾನು ಕೆಲಸ ಮಾಡೇ ಮಾಡ್ತೀನಿ!" ಎಂದು ಹೇಳಿ ಹೊರಕ್ಕೆ ಕಾಲು ಹಾಕಿದ.

"ಕೆಲಸ ಮಾಡಿದರೆ ನೀವೇ ಜವಾಬ್ದಾರಿ! ಸಂಬಳ ಮಾತ್ರ ನಿಮಗೆ ಸಿಗುವುದಿಲ್ಲ!"

ಹೊರಟವನು ಹಿಂದಿರುಗಿ ನಿಂತು, ನನ್ನ ಮುಖವನ್ನೇ ತೀಕ್ಷ್ಣವಾಗಿ ನೋಡಿ ಹೇಳಿದ:

"ಇದರಿಂದ ನೀವು ಪಶ್ಚಾತ್ತಾಪ ಪಡಬೇಕಾಗುತ್ತದೆ!"

ಅಪಾಯದ ಗಂಟೆ ಬಾರಿಸಿ ಹೊರಟುಹೋದ ಸಿಂಗ್! ಹೊರಗೆ ಹೋಗಿ ಇಡೀ ದಿನ ತನ್ನ ಸ್ನೇಹಿತರೊಡನೆ ಮಾತನಾಡುತ್ತಾ, ಮುಂದಿನ ಕ್ರಮ ಜರುಗಿಸುವುದಕ್ಕೆ ಆಪ್ತಾಲೋಚನೆ ಮಾಡುತ್ತಾ ಕಾಲ ಕಳೆದ.

ಈ ಪಂಜಾಬೀ ಸಿಖ್‌ನನ್ನು ಎದುರು ಹಾಕಿಕೊಂಡಾಯಿತು. ಸಿಖ್‌ರಿಗೆ ಕೋಪ ಜಾಸ್ತಿ. ಅವರನ್ನು ಕೆರಳಿಸಿದರೆ ಹಾವನ್ನು ಕೆರಳಿಸಿದಂತೆ. ಅವರು ಪ್ರತೀಕಾರ ತೆಗೆದು ಕೊಂಡೇ ಬಿಡುವರಂತೆ. ಈಗ ನಾನು ಬಚಾವು ಆಗುವುದಾದರೂ ಹೇಗೆ? ಮನಸ್ಸು ಚಡಪಡಿಸತೊಡಗಿತ್ತು. ಅವನು ಪ್ರತೀಕಾರ ತೆಗೆದುಕೊಳ್ಳುವ ಮುನ್ನ ಮುನ್ನೆಚ್ಚರಿಕೆ ವಹಿಸಬೇಕು. ಅವನೇನಾದರೂ ಅವರ ಗುರುದ್ವಾರಗಳಲ್ಲಿ ಇಟ್ಟಿರುವ 'ಹಿಟ್ ಲಿಸ್ಟ್' ನಲ್ಲಿ ನನ್ನ ಹೆಸರನ್ನು ನಮೂದಿಸಿ ಬಿಟ್ಟರೆ, ನನ್ನೂರಿಗೆ ವಾಪಸ್ಸು ಹೋಗುವುದಾದರೂ ಹೇಗೆ?

"ಬಹಳ ಚಿಂತಿತರಾಗಿದ್ದ ಹಾಗೇ ಕಾಣುತ್ತದೆ!"

ಸಾಗೂ ಒಳಗೆ ಬಂದು ನಿಂತು ಯೋಚನೆಗಳಿಗೆ ಮುಳುಗಿದ್ದ ನನ್ನನ್ನು ಮೇಲಕ್ಕೆ ಎತ್ತಿದ.

"ಸರದಾರಜೀಗೆ ಸ್ವಂತ ದಂಧೆ ಇದೆ. ಅವನಿಗೆ ಬ್ಯಾಂಕ್ ನೌಕರೀ ಬೇಡ. ಆದರೆ ಸಂಬಳ ಬೇಕು. ಅದು ಪಾಕೆಟ್ ಮನಿ. ಕಳೆದುಕೊಳ್ಳಲು ಇಷ್ಟವಿಲ್ಲ."

"ಗೊತ್ತಿದೆ ನನಗೆ" ಎಂದೆ.

"ಅವನನ್ನು ಎದುರು ಹಾಕಿಕೊಳ್ಳಬೇಡಿ. ಉಪಾಯವಾಗಿ ಅವನನ್ನು ನಿಮ್ಮ ಬುಟ್ಟಿಗೆ ಹಾಕಿಕೊಳ್ಳಿರಿ. ನಿಮ್ಮ ಎಲ್ಲಾ ಕೆಲಸ ಸುಗುಮವಾಗುತ್ತದೆ!"

ಸಾಗು ಇಷ್ಟು ಹೇಳಿ ಹೊರಗೆ ಸಾಗಿದ. ಹೋಗುವ ಮುನ್ನ ನನ್ನ ಬಳಿ ಬಂದು ಮೆಲ್ಲನೆ ನುಡಿದ.

"ಸಾರ್! ಐವತ್ತು ರೂಪಾಯಿ ಇದ್ದರೆ ಕೊಡುತ್ತೀರಾ? ಸಂಬಳದ ದಿನ ವಾಪಸ್ಸು!"

"ಯಾಕೆ?"

"ಬ್ಯಾಂಕ್ ಕೊಡುವ ಸಂಬಳ ಎಲ್ಲಿ ಸಾಕಾಗುತ್ತದೆ ಹೆಂಡತಿ ಮಕ್ಕಳನ್ನು ಸಾಕಲಿಕ್ಕೆ?"

"ನೀನೂ ಒಂದು ಧಂಧೆ ಶುರು ಮಾಡಬಹುದಲ್ಲಾ!"

"ಸೋನೇಪತ್‌ಗೆ ವರ್ಗ ಕೊಡಿಸಿ. ಅಲ್ಲಿ ದಂಧೆ ಮಾಡಿ ಬದುಕುತ್ತೇನೆ!"

"ನೀನೇನೋ ಬದುಕುತ್ತೀಯಾ! ಆದರೆ ಆ ಪಾಪದ ಸೋನೇಪತ್ ಶಾಖೆಯ ಮೇನೇಜರ್ ಸಾಯಿತಾನೆ!"

ಜೋರಾಗಿ ನಕ್ಕ ಸಾಗೂ. ನಗಿಸಿ ಅವನನ್ನು ಸಾಗು ಹಾಕಿದೆ ಅಂದು ತಿಳಿದು ಕೊಳ್ಳುವ ಮುನ್ನ ಅವನು ಕೈ ಒಡ್ಡಿ ಕೇಳಿದ.

"ಸಾಬ್! ಐವತ್ತು ರೂಪಾಯಿ!"

ಪಾಕೆಟ್‌ನಿಂದ ಹಣ ತೆಗೆದು ಅವನ ಕೈಗೆ ನೀಡಿದೆ.

"ಧನ್ಯವಾದ್!" ಹಲ್ಲು ಕಿರಿದು ಹಣ ಎಣಿಸಿಕೊಂಡು ಹೊರಟುಹೋದ.

ಗೂಢಾಚಾರನಿಗೆ ಹಣದ ಅವಶ್ಯಕತೆ ಹೆಚ್ಚಲ್ಲವೆ? ಇವರಿಗೆ ಇರುವಷ್ಟು ಕಷ್ಟ ಕಾರ್ಪಣ್ಯಗಳು ಮತ್ಯಾರಿಗೂ ಇರಲಿಕ್ಕಿಲ್ಲ. ಇವರರಿಗೆ ಇರುವಷ್ಟು ಆಸೆ-ಆಕಾಂಕ್ಷೆಗಳು ಬೇರೆ ಯಾರಿಗೂ ಇರಲಿಕ್ಕಿಲ್ಲ. ಗೂಢಾಚಾರರಿಗೆ, ತಮ್ಮ ಜೀವದ ಮೇಲೆ ಇರುವಷ್ಟು ಅಂಜಿಕೆ ಬೇರೆ ಯಾರಿಗೂ ಇರಲಿಕ್ಕಿಲ್ಲ. ಇವರರಿಗೆ ಇರುವಷ್ಟು ಜವಾಬ್ದಾರಿತನ ಮತ್ತು ಗಂಡಾಂತರ ಬೇರೆ ಯಾರಿಗೂ ಇರಲಿಕ್ಕಿಲ್ಲ. ನನ್ನ ಗೂಢಾಚಾರ ಸಾಗೂವಿಗೂ ಗಂಡಾಂತರ ತಪ್ಪಿದ್ದಲ್ಲ ಎನ್ನಿಸಿತು. ನೌಕರರ ಸಂಘದ ನಾಯಕ ಸಿಂಗ್ ಒಬ್ಬನೇ ಸಾಕು, ಸಾಗೂವನ್ನು ತಿಂದು ತೇಗುವುದಕ್ಕೆ!

ವರ್ಮಾನನ್ನು ಕರೆದೆ. ಅವನು ಈಗಾಗಲೇ ನನ್ನ ನೆಚ್ಚಿನ ಆಪ್ತ ಮಂತ್ರಿ ಯಾಗಿದ್ದ. ಅವನ ಒಳ್ಳೆಯ ನಡತೆ ಅವನನ್ನು ನನ್ನ ಬಳಿ ಸೆಳೆದಿತ್ತು. 'ಒಳ್ಳೆಯ ನಡತೆ ಪ್ರಪಂಚದಲ್ಲಿ ದೊರೆಯುವ ಅತ್ಯಂತ ಕಡಿಮೆ ಬೆಲೆಯ ಸರಕಂತೆ. ಪ್ರೀತಿ ಯೊಂದೇ ಶೇಖಡ ಹತ್ತರಷ್ಟು ಬಡ್ಡಿ ಸಾಲ ಕೊಟ್ಟವನಿಗೂ ಮತ್ತು ತೆಗೆದುಕೊಳ್ಳು ವವನಿಗೂ ಸಿಗುತ್ತದಂತೆ'

ಸಾಗೂ, ನನ್ನಿಂದ ಪಡೆದ ಹಣದ ಬಗ್ಗೆ ಅವನಿಗೆ ತಿಳಿಸಿದೆ. ಅವನು ಗಾಬರಿ ಯಾದಂತೆ ತೋರಿತು.

"ಬೇಸ್ತು ಬಿದ್ದರಲ್ಲ ನೀವು!" ಎಂದ.

"ಹೇಗೆ?"

"ಸಾಲ ಮಾಡಿ ವಾಪಸ್ಸು ಕೊಡದಿರುವುದೇ ಅವನ ಹವ್ಯಾಸ."

"ಅದು ನಮ್ಮ ಜನಗಳ ಮುಖ್ಯ ಸ್ವಭಾವವೇ ಆಗಿದೆಯಲ್ಲಾ!" ಉದ್ಗಾರ ತೆಗೆದೆ.

"ಸಾಗೂ ಸಾಲ ಮಾಡೋದಿಲ್ಲ; ವಾಪಸ್ಸು ಕೊಡುತ್ತೇನೆ ಎಂದು ನಂಬಿಸಿ ಹಣ ಕೇಳುತ್ತಾನೆ. ಅದರಲ್ಲೂ ಮೇನೇಜರ್‌ಗಳಿಂದ ಹಣ ಕೀಳುವುದೆಂದರೆ ಅವನಿಗೆ ಎಲ್ಲಿಲ್ಲದ ಸಂತೋಷ."

"ಅಂದರೆ?" ನನಗೆ ಅರ್ಥವಾಗಲಿಲ್ಲ.

"ಅಂದರೆ-ಕೆಲವು ವಿಶಿಷ್ಟ ಕಲೆಗಳಿವೆ ಅವನಿಗೆ. ಹಣ ಕೀಳುವ ಕಲೆ! ಹಿಂದಿನ ಮೇನೇಜರ್‌ಗೆ ಹಲವಾರು ಬಾರಿ ತನ್ನ ಬುದ್ಧಿಚಳಕ ತೋರಿಸಿ, ಹಣ ಕೀಳಿದ್ದ.... ಒಂದು ಬಾರಿ ಮೇನೇಜರ್ ಸಾಹೇಬರು ಕೆಲವು ಗಣ್ಯ ಗಿರಾಕಿಗಳ ಜೊತೆ ಮಾತಾಡುತ್ತಾ ಕುಳಿತಿದ್ದಾಗ, ಅವರ ಬಳಿ ಬಂದು, 'ಇವತ್ತು ಹಣ ವಾಪಸ್ಸು ಕೊಡುತ್ತೀರ ಎಂದು ಹೇಳಿದ್ದೀರಿ! ಈಗ ನನಗೆ ತುರ್ತಾಗಿ ಹಣ ಬೇಕು. ನೂರು ರೂಪಾಯಿ ಕೊಡಿ!" ಎಂದು ಕೇಳಿದ. ಮೇನೇಜರ್‌ಗೆ ಗಾಬರಿ, ಕೋಪ, ಅವಮಾನ ಎಲ್ಲಾ ಒಂದೇ ಬಾರಿ ಆಯಿತು. ಅವತು ಕೋಪದಿಂದ 'ಯಾವ ಹಣ, ಏನು ಕತೆ?' ಎಂದು ಕೇಳಿದ್ದಕ್ಕೆ, 'ಅವತ್ತೇ ಹೇಳಿದಿರಲ್ಲಾ, ಕೊಡುತ್ತೇನೆ ಎಂದು? ಯಾಕೆ ಸತಾಯಿಸುತ್ತೀರಾ? ಕೊಟ್ಬಿಡಿ!'

ಮೇನೇಜರ್ ಕಂಗಾಲು! ಗಣ್ಯ ವ್ಯಕ್ತಿಗಳ ಮುಂದೆ ಮರ್ಯಾದೆ ತೆಗೆದು ಹಾಕುತ್ತಾ ಇದ್ದಾನಲ್ಲಾ ಇವನು ಎಂದು ಕೋಪ! ಆದಷ್ಟು ಬೇಗ ಇವನನ್ನು ಸಾಗ ಹಾಕಬೇಕೆಂದು, ಸಾಗುವಿಗೆ ನೂರು ರೂಪಾಯಿ ಕೊಟ್ಟು ಕಳುಹಿಸುತ್ತಾರೆ ಮೇನೇಜರ್ ಸಾಹೇಬ!"

ಖದೀಮ ಸಾಗೂ! ನನಗೂ ಹೀಗೆ ಮಾಡಿ ಬಿಟ್ಟರೆ! ಹೇಗೆ ಇವನನ್ನ ನಿಭಾಯಿಸುವುದು?

"ಮತ್ತೊಂದು ಸಲ ಏನು ಮಾಡಿದ ಗೊತ್ತೆ? ತಪ್ಪಾಲ್ ಮತ್ತು ಪೆಟ್ಟೀ ಕ್ಯಾಷ್ ಶಾಖೆಯಲ್ಲಿ ಕೆಲಸ ಮಾಡುತ್ತಿದ್ದ ಸಾಗೂ. ಹಣದ ಅವಶ್ಯಕತೆ ಉಂಟಾಯಿತು. ಸೀದಾ ನಡೆದ ಮೇನೇಜರ್ ಬಳಿ. 'ಐವತ್ತು ರೂಪಾಯಿ ಬೇಕು!' ಎಂದ. 'ನನ್ನ ಬಳಿ ಇಲ್ಲ!' ಎಂದರು ಮೇನೇಜರ್ ಸಾಹೇಬ್. 'ಹಾಗಾದರೆ ಪೆಟ್ಟೀ ಕ್ಯಾಷ್‌ನಿಂದ ೫೦ ರೂಪಾಯಿ ತೆಗೆದುಕೊಳ್ಳುತ್ತೇನೆ' ಎಂದ. 'ಬ್ಯಾಂಕ್ ಹಣ ನಿನ್ನ ಸ್ವಂತಕ್ಕೆ ಉಪಯೋಗಿಸಕೂಡದು!' ತಾಕೀತು ಮಾಡಿದರು. 'ಹಾಗಾದರೆ ನಿಮ್ಮ ಹಣ ಕೊಡಿರಿ' ಎಂದ. 'ಕೊಡೋದಿಲ್ಲ!' ಎಂದರು. 'ಸರಿ! ನಾನು ಪೆಟ್ಟಿ ಕ್ಯಾಷ್ ಹಣ ತೆಗೆದು ಕೊಳ್ಳುತ್ತೇನೆ!' ಎಂದು ಹೇಳಿ ಹೊರ ನಡೆದ. ಮಾರನೆ ದಿನ, ಮೇನೇಜರ್ ಕ್ಯಾಷ್

ಬಾಕ್ಸ್ ತರೀಸಿ, ತನಿಖೆ ನಡೆಸಿದರು. ೫೦ ರೂಪಾಯಿ ಕಡಿಮೆ ಇತ್ತು. ಹೆಡ್ ಆಫೀಸ್‌ಗೆ ರಿಪೋರ್ಟ್ ಕಳುಹಿಸಿದರು. ಸಾಗೂಗೆ ಚಾರ್ಜ್ ಶೀಟ್ ಆಗಿ, ಒಂದು ಇನ್‌ಕ್ರೀಮೆಂಟ್ ಕಟ್ ಮಾಡಿ, ಶಿಕ್ಷೆ ವಿಧಿಸಿದರು."

ಸಾಗೂವಿನ ಕತೆ ವಿಚಿತ್ರ ರೀತಿಯಾಗಿ ಸಾಗಿತ್ತು!

"ಯಾಕೆ ಇಷ್ಟು ಸಾಲ ಮಾಡುತ್ತಾನೆ?"

"ಸಾಲ ಮಾಡುವುದು ಒಂದು ಹವ್ಯಾಸ ಅವನಿಗೆ. ಮಿತಿಮೀರಿದ ಖರ್ಚು ಮಾಡುವ ಅಭ್ಯಾಸವಿದ್ದರೆ, ಸಾಲ ಮಾಡುವ ಹವ್ಯಾಸ ತಾನಾಗಿಯೇ ಬೆಳೆದು ಬಿಡುತ್ತದೆ. ಖರ್ಚು ಏತಕ್ಕಾಗಿ ಮಾಡುತ್ತಾನೆ? ಇಸ್ಪೀಟು, ಕುಡಿತ, ಹೆಣ್ಣಳೆಯ ಸಹವಾಸ!"

"ಹೆಣ್ಣಳೆಯರ ಸಹವಾಸ?" ಆಶ್ಚರ್ಯವಾಗಿತ್ತು ನನಗೆ.

"ಹೌದು! ಬೆಲೆವೆಣ್ಣುಗಳ ಸಹವಾಸವಿದೆ ಅವನಿಗೆ. ಈ ಬಗ್ಗೆ ಒಂದು ಘಟನೆ ನಡೆಯಿತು. ಕೇಳ ಬಯಸುತ್ತೀರಾ?"

"ಯಾರಿಗೆ ತಾನೇ ಇಷ್ಟವಾಗುವುದಿಲ್ಲ ಇಂತ ಕತೆ ಕೇಳುವುದಕ್ಕೆ? 'ಹೇಳಿ' " ಎಂದೆ

"ಒಂದು ದಿನ ಆಫೀಸ್ ಬಾಗಿಲು ತೆಗೆಯುವ ಮುನ್ನವೇ ಒಂದು ಹೆಂಗಸು ಬಾಗಿಲ ಬಳಿ ನಿಂತಿದ್ದಳು. ನೋಡಲು ಚೆನ್ನಾಗಿದ್ದಳು. ಸುಮಾರಾದ ಒಳ್ಳೆಯ ಸೀರೆ ಉಟ್ಟು ಠೀಕಾಗಿದ್ದಳು. ಮೇನೇಜರ್ ಬಂದೊಡನೆ ಅವರ ಹಿಂದೆ ನಡೆದು, ಅವರ ಕೊಠಡಿಯೊಳಗೆ ಹೋಗಿ ನಿಂತಳು.

"ಏನು ಬೇಕು?" ಕೇಳಿದರು ಮೇನೇಜರ್.

"ಸಾಗೂ ಬೇಕು!" ಎಂದಳು ಆ ಹೆಂಗಸು.

"ಏಕೆ?"

"ಅವರು ನನಗೆ ಹಣ ಕೊಡಬೇಕು!" ಎಂದಳು.

"ಅವರನ್ನೇ ಕೇಳಿ. ನನ್ನ ಬಳಿ ಏಕೆ ಬಂದಿರಿ?"

"ಅವರು ಸಿಗೋದೆ ಇಲ್ಲ ಕೈಗೆ!"

"ಅದಕ್ಕೆ ನಾನೇನು ಮಾಡಲಿ?"

"ನೀವು ಅವರಿಂದ ಹಣ ತೆಗೆದುಕೊಂಡು ನನಗೆ ಕೊಡಿಸಿರಿ!"

"ನೀವು ಯಾತಕ್ಕೆ ಅವರಿಗೆ ಸಾಲ ಕೊಟ್ಟಿರಿ?"

"ನಾನು ಸಾಲ ಕೊಡಲಿಲ್ಲ ಅವರಿಗೆ!"

"ಹಾಗಾದರೆ ಅವರು ನಿಮಗೆ ಹಣ ಏಕೆ ಕೊಡಬೇಕು? ವ್ಯಾಪಾರ ಮಾಡ್ತೀರಾ?"

"ಹೌದು! ದಂಧೆ ಮಾಡ್ತೀನಿ! ನನ್ನ ಮೈ ಮಾರಿ ದಂಧೆ ಮಾಡ್ತೀನಿ! ಮೊದಲನೆ ದಿನ ಹಣ ಕೊಟ್ಟರು. ಎರಡನೆ ದಿನ ಕೊಟ್ಟರು ಮೂರನೆಯ ದಿನ ಸಾಲ ಕೇಳಿದರು. ಬ್ಯಾಂಕ್ ನೌಕರ ಎಂದರು. ಹಣ ತಂದಿಲ್ಲ. ಸಂಬಳ ಸಿಕ್ಕಿದೊಡನೆ ಕೊಡುತ್ತೇನೆ ಎಂದರು. ನಾನು ನಂಬಿದೆ. ತಿಂಗಳಾಯಿತು. ಆಸಾಮಿ ಪತ್ತೆ ಇಲ್ಲ. ನಾನೇ ಇಲ್ಲಿ ಬರಬೇಕಾಯಿತು!"

"ಮೇನೇಜರ್ ಕಕ್ಕಾಬಿಕ್ಕಿಯಾದರು! ಹೇಗೆ ಈ ಸಾಗುವನ್ನು ನಿಭಾಯಿಸುವುದು? ಈ ಹೆಂಗಸನ್ನು ಹೇಗೆ ಸಾಗಿ ಹಾಕುವುದು?"

"ನಾವು ಈ ದಂಧೆ ಮಾಡುವುದು ಈ ದರಿದ್ರ ಹೊಟ್ಟೆ ತುಂಬಿಸಿಕೊಳ್ಳುವುದಕ್ಕೆ! ಆದರೆ ವಿದ್ಯಾವಂತರಾದ ನೀವೇ ಹೀಗೆ ಮೋಸಮಾಡಿ ನಮ್ಮ ಹೊಟ್ಟೆ ಮೇಲೆ ಹೊಡೆದರೆ ಹೇಗೆ? ಹೇಳಿ ಸಾಬ್ ಹೇಳಿ!"

ಅವಳ ಕೂಗು ಅಳುವಿನಲ್ಲಿ ಕೊನೆಗೊಂಡಿತ್ತು.

ಮೇನೇಜರ್‌ಗೆ ಗಾಬರಿ, ಆತಂಕ ಎರಡೂ ಆಗಿತ್ತು.

"ನೀ ಅಳಬೇಡ! ಸಾಗೂ ಬಂದ ಮೇಲೆ ಅವನಿಗೆ ಹೇಳಿ ನಿನ್ನ ಹಣ ಕೊಡಿಸುತ್ತೇನೆ. ಆದರೆ ದಯವಿಟ್ಟು ಇನ್ನು ಮೇಲೆ ಇಲ್ಲಿಗೆ ಬರಬೇಡ!"

ಅಂಗಲಾಚಿದರು ಮೇನೇಜರ್! ಅವರ ಸ್ಥಿತಿ ಚಿಂತಾಜನಕವಾಗಿತ್ತು.

"ನಾನು ಅವನು ಬರುವವರೆಗೂ ಇಲ್ಲೇ ಕಾಯುತ್ತೇನೆ."

"ಅಯ್ಯೋ ಬೇಡ! ಅವನು ಬರುವುದು ಯಾವಾಗಲೋ?"

ಮತ್ತೆ ಅಂಗಲಾಚಿದರು ಮೇನೇಜರ್!

"ಇಲ್ಲ, ಇಲ್ಲ! ಈ ದಿನ ಅವನಿಂದ ಹಣ ತೆಗೆದುಕೊಂಡೇ ಹೋಗುತ್ತೇನೆ ಎಂದು ನುಡಿದು, ಹೊರಗಡೆ ಹಾಕಿದ್ದ ಬೆಂಚಿನ ಮೇಲೆ ಧರಿಣೆ ಕುಳಿತಳು ಧಾರಿಣಿ!

"ಸುಮಾರು ಎರಡು ಗಂಟೆ ಕಾದರೂ ಸಾಗೂವಿನ ಸುದ್ದಿ ಇರಲಿಲ್ಲ. ಅವ ಬರಲೇ ಇಲ್ಲ ಆ ದಿನ. ಆಮೇಲೆ ವಿಷಯ ತಿಳಿಯಿತು. ಆ ದಿನ ಶಾಖೆಗೆ ಬಂದಿದ್ದನಂತೆ ಒಳಗೆ ಬಂದವ ಆ ಹೆಂಗಸನ್ನು ನೋಡಿದೊಡನೆ ಪರಾರಿಯಾಗಿದ್ದ. ಮತ್ತೆ ಒಂದು ವಾರ ಬ್ಯಾಂಕಿನ ಕಡೆ ತನ್ನ ಮುಖ ತೋರಿಸಲೇ ಇಲ್ಲ! ಆ ಪಾಪದ ಹೆಂಗಸು ದಿನವಿಡೀ ಬ್ಯಾಂಕಿಗೆ ಬಂದು ಕಾದು ಕಾದು ಸುಸ್ತಾಗಿ, ಬರೀಕೈಲಿ ಹೋಗಿ, ಕೊನೆಗೆ ಬರುವುದನ್ನು ನಿಲ್ಲಿಸಿದಳು."

ಇಂತಹ ಸಾಗುವನ್ನು ಹೇಗೆ ನಿಭಾಯಿಸುವುದು? ಅವನನ್ನು ಗೂಢಾಚಾರನನ್ನಾಗಿ ಬೇರೆ ನೇಮಕ ಮಾಡಿಯಾಯಿತಲ್ಲಾ!

"ಅವನಿಗೆ ಬ್ಯಾಂಕ್ ನೌಕರಿ ಸಿಕ್ಕಿ ಒಂದು ಸಣ್ಣ ಊರಿಗೆ ವರ್ಗ ಮಾಡಿದ್ದರು.

ಅಲ್ಲಿ ಒಂದು ಕೊಠಡಿ ಬಾಡಿಗೆ ಹಿಡಿದ. ಮಾಲೀಕನಿಗೆ ಸಾವಿರ ರೂಪಾಯಿ ಮುಂಗಡ ಕೊಟ್ಟ. ಮಾಲೀಕ ಖುಷಿಯೋ ಖುಷಿ! ತಿಂಗಳ ಬಾಡಿಗೆ ಕೊಡುವಾಗ ಎರಡು ಸಾವಿರ ಸಾಲ ಕೇಳಿದ ಸಾಗೂ. ಹೇಗೂ ಬ್ಯಾಂಕ್ ನೌಕರನಲ್ಲವೆ? ಕೈ ತುಂಬಾ ಸಂಬಳ ಸಿಗುತ್ತದೆ. ಎಲ್ಲಿ ಓಡಿ ಹೋಗುತ್ತಾನೆ? ಸಾಲ ಕೊಟ್ಟ ಮಾಲೀಕ. ಕೊಟ್ಟು ಆರು ತಿಂಗಳಾದರೂ ಸಾಲ ವಾಪಸ್ಸು ಪಡೆಯಲಾಗಲಿಲ್ಲ ಮಾಲೀಕ! ಕೊನೆಗೆ ಒಂದು ದಿನ ಬೇಸತ್ತು ರೂಮಿನಲ್ಲಿದ್ದ ಸಾಮಾನೆಲ್ಲಾ ಕಿತ್ತು ಒಗೆದು, ಓಡಿಸಿದ ಸಾಗುವನ್ನು ಮಾಲೀಕ! ಅಂದಿನಿಂದ ದಿನವಿಡೀ ಬಸ್‌ನಲ್ಲಿ ಓಡಾಟ ಹಳ್ಳಿಯಿಂದ ಸೋನೇ ಪತ್‌ಗೆ!"

ಸಾಗುವಿನ ಕಥೆ ಸಾಗುತ್ತಿತ್ತು ವರ್ಮನ ಬಾಯಿಯಿಂದ.

"ಊರಿನವರ ಹತ್ತಿರವೆಲ್ಲಾ ಸಾಲ ಮಾಡಿ, ತೀರಿಸದಿದ್ದಾಗ, ಬ್ಯಾಂಕಿಗೆ ಘೇರಾವ್ ಮಾಡಿ, ಸಾಗುವಿಗೆ ಹೊಡೆದು ಹಣ್ಣು ಗಾಯಿ ನೀರು ಗಾಯಿ ಮಾಡಿ, ಊರಿನಿಂದ ಓಡಿಸಿದ್ದರು. ಓಡಿ ಬಂದ ಸಾಗು ಬ್ಯಾಂಕ್‌ನ ಮೇಲಧಿಕಾರಿಗಳ ಮೊರೆ ಹೊಕ್ಕ. ಇವನ ಫಜೀತಿ ಕತೆ ಕೇಳಿ ಇವನನ್ನು ದಿಲ್ಲೀಗೆ ವರ್ಗಾಯಿಸಿದರು. ದಿಲ್ಲೀ ದೊಡ್ಡ ಪಟ್ಟಣ. ಇಲ್ಲಿ ಇವನ ಆಟ ಸುಗಮವಾಯಿತು. ಆದರೆ ಬಾಡಿಗೆಗೆ ಮಾತ್ರ ಯಾರು ಇವನಿಗೆ ಮನೆ ಯಾಕೆ? ಒಂದು ಸಣ್ಣ ಕೊಠಡಿ ಕೂಡ ಕೊಡಲಿಲ್ಲ! ಇವನ ಚರಿತ್ರೆ ಇಡೀ ಶಹರಿಗೆ ತಿಳಿದು, ಇವನಿಗೆ ಇರಲಿಕ್ಕೆ ಜಾಗ ಕೊಡಲಿಲ್ಲ ಜನ. ಈಗ ಸೋನೇಪತ್‌ನಿಂದ ರೈಲಿನಲ್ಲಿ ಪ್ರಯಾಣ ಮಾಡುತ್ತಾನೆ ದಿನವಹೀ. ಟಿಕೆಟ್ ಇಲ್ಲದೆ!"

"ನಮಸ್ಕಾರ್!"

ಬಾಗಿಲ ಬಳಿ ಸರ್ದಾರ್ಜೀ ಸಿಂಗ್ ನಿಂತಿದ್ದ. ಅವನನ್ನು ಕಂಡು ಸಂತೋಷವಾಗಿತ್ತು ನನಗೆ. ಒಳಗೆ ಬಂದು ಕುರ್ಚಿಯಲ್ಲಿ ಕೂತ ಸರ್ದಾರ್ಜೀ. ವರ್ಮನಿಗೆ ಪರಿಚಯಿಸಿದೆ ಅವನನ್ನು.

"ಈ ಶಾಖೆಗೆ ವರ್ಗ ಆಗಿದ್ದು ನೀವು ಹೇಳಲೇ ಇಲ್ಲ!"

"ಹೇಳಲಿಕ್ಕೆ ಆಗಲಿಲ್ಲ, 'ಕ್ಷಮಿಸಿ' ಎಂದು ಕ್ಷಮೆ ಕೇಳಿದೆ.

ಕಪೂರ್ ಭೇಟಿಯಾಗಿದ್ದನಂತೆ. ಇಬ್ಬರೂ ಕೂಡಿ 'ಟಾಜ್ ಮಹಲ್'ನ್ನು ನನಗೆ ತೋರಿಸುವ ಸಲುವಾಗಿ, ನನ್ನ ಭೇಟಿ ಮಾಡಲು ಬಂದನೆಂದು ತಿಳಿಸಿದ ಸರ್ದಾರ್ಜೀ. ಯಾಕೆ ಆಗಬಾರದು? ತಾಜ್‌ಮಹಲ್‌ನ್ನು ಎಷ್ಟು ಸಲ ನೋಡಿದರೂ ಮತ್ತೆ ಮತ್ತೆ ನೋಡಿ ಆನಂದಿಸುವಂತೆ ಪ್ರೇರೇಪಿಸುವ ಭವ್ಯ ಮಹಲ್ ಅದು. ಭಾನುವಾರದಂದು ದಿನ ಕಳೆಯುವ ಏರ್ಪಾಡಾಯಿತಲ್ಲಾ ಎಂದು ಎಣಿಸಿ, ನನ್ನ ಒಪ್ಪಿಗೆ ಕೊಟ್ಟೆ. ಚಾ ತರಿಸಿ ಅವನಿಗೆ ಉಪಚರಿಸಿದ.

ನಮ್ಮ ಆತ್ಮೀಯ ಮಾತುಕತೆ, ನಗು ಹೊರಗಡೆ ಕುಳಿತಿದ್ದ ನೇತಾಸಿಂಗ್‌ನ ಗಮನಕ್ಕೆ ಬಂದಿತು. ಕುತೂಹಲದಿಂದ ನಮ್ಮನ್ನೇ ನೋಡುತ್ತಿದ್ದ. ಅವನ ಮನಸ್ಸಿನಲ್ಲಿ ಏನು ನಡೆದಿರಬೇಕು ಎಂದು ನಾನು ಯೋಚಿಸುವಂತಾಯಿತು. ಈ ಹೊಸ ಸರ್ದಾರ್ಜೀಯ ಪರಿಚಯ ನನಗೆ ಹೇಗೆ, ಎಂದು ಮತ್ತು ಯಾಕೆ ಆಯಿತು ಎಂದು ಅವನು ಯೋಚಿಸುತ್ತಿರಬಹುದೆ?

"ನನಗೆ ಮೇನೇಜರ್ ಸಾಬ್‌ರನ್ನು ಕಂಡರೆ ಇಷ್ಟ! ಯಾಕೆ ಗೊತ್ತೇ?"

ಸರ್ದಾರ್ಜೀ ವರ್ಮನನ್ನು ಕೇಳುತ್ತಿದ್ದ.

ವರ್ಮ ಉತ್ತರಿಸದೆ, ಪ್ರಶ್ನಾರ್ಥಕವಾಗಿ ಅವನ ಮುಖವನ್ನೇ ನೋಡಿದ.

"ಇವರು ಕರ್ನಾಟಕದವರು! ಕರ್ನಾಟಕದ ಬೀದರ್‌ನಲ್ಲಿ ನಮ್ಮ ಗುರುದ್ವಾರವಿದೆ. ಬಹಳ ಪುಣ್ಯಸ್ಥಳ ಅದು. ಅಲ್ಲಿಂದಲೇ ಅಲ್ಲದೇ ನಮ್ಮ ಪಂಚ ಪ್ಯಾರೇಗಳಲ್ಲಿ ಒಬ್ಬರಾದ ಸಾಹಿಬ್‌ಸಿಂಗ್ ಹುಟ್ಟಿದ್ದು. ಸಾಹಿಬ್‌ಸಿಂಗ್ ಕರ್ನಾಟಕದವನು."

"ಇಷ್ಟಕ್ಕೆ ಅವರ ಮೇಲೆ ಪ್ರೀತಿಯಾ ನಿಮಗೆ ?" ಆಶ್ಚರಿಯಾಗಿತ್ತು ವರ್ಮನಿಗೆ.

"ಗುರುನಾನಕರು ಹುಟ್ಟಿದ ಸ್ಥಳ ಪಾಕೀಸ್ಥಾರದಲ್ಲಿದೆ. ಪಾಕೀಸ್ಥಾನದ ಪಂಜಾಬ್‌ನ ಪಂಜಾಬೀಗಳು ನಿನಗೆ ಪ್ರಿಯವಾಗಬೇಕು ಹಾಗಾದರೆ !"

ಸರ್ದಾರ್ಜೀಯ ಹುಬ್ಬುಗಂಟಿಕ್ಕಿತು. ಮೀಸೆ ಗಡ್ಡ ಸೆಟೆದವು. ಕಣ್ಣುಗಳು ಕೆಂಪಾದವು. ಬೆಳ್ಳಗಿದ್ದ ಅವನ ಮುಖದ ಬಣ್ಣ ಕೆಂಪಾಯಿತು.

"ಮೇನೇಜರ್ ಸಾಬ್ ಪಾಕೀಸ್ಥಾನೀ ಅಲ್ಲ !"

ಹೂಂಕರಿಸಿದ ಸರ್ದಾರ್ಜೀ.

"ಅವರು ದಿಲ್ಲೀಗೆ ಬಂದು ಮಾಡಿದ ಮೊದಲನೆ ಕೆಲಸ ಸೀಸ್‌ಗಂಜ್ ಗುರುದ್ವಾರಕ್ಕೆ ಭೇಟಿ ಇತ್ತಿದ್ದು. ಹಿಂದೂ ದೇವಾಲಯಕ್ಕೆ ಹೋಗಲಿಲ್ಲ ! ಗೊತ್ತಿದೆಯಾ ನಿನಗೆ ?"

ಮರ್ಮಾ ನನ್ನ ಮುಖ ನೋಡಿ ನಗುತ್ತಾ ಹೇಳಿದ.

"ಮೀಸೆ ಗಡ್ಡ ಬಿಡಬೇಕೆಂದು ಮಾಡಿದ್ವೀರಾ ? ಹೇಗೆ ?" ನಾನು ಮಾತನಾಡಲಿಲ್ಲ.

"ನೀನು ಪಂಜಾಬಿ ಆಗಿ ದಿಲ್ಲೀವಾಲನಾಗಿ, ಇಲ್ಲೇ ಹುಟ್ಟಿ ಬೆಳೆದರೂ ಸೀಸ್‌ಗಂಜ್ ಗುರುದ್ವಾರದ್ದೊಳಗೆ ಕಾಲಿಟ್ಟಿಲ್ಲ, ಅಲ್ಲವೆ ?"

ಕಟುವಾಗಿ ಕೇಳಿದ ಸರ್ದಾರ್ಜೀ.

ವರ್ಮಾ ಉತ್ತರಿಸಿದೆ ಅವನ ಮುಖ ವನ್ನೇ ನೋಡಿದ. ಅವನ ತುಟಿಯಲ್ಲಿ ತುಂಟ ನಗುವಿತ್ತು.

'ಪಂಜಾಬೀ ಹಿಂದೂಗಳು ತಮ್ಮ ಮಾತೃ ಭಾಷೆ ಮರೆತುಬಿಟ್ಟಿದ್ದಾರೆ. 'ಹಿಂದೀ' ಎಂದು ಹೇಳಿಕೊಂಡು ತಿರುಗುತ್ತಾರೆ. ಗುರುದ್ವಾರಗಳಿಗೆ ಹೋಗುವುದನ್ನು ಮರೆತು ದೇವಸ್ಥಾನಗಳಿಗೆ ಭೇಟಿ ನೀಡುತ್ತಾರೆ!"

ವರ್ಮಾ ನಸುನಗುತ್ತಾ ಕೇಳುತ್ತಲಿದ್ದ ಸರ್ದಾರ್ಜೀ ಮಾತುಗಳನ್ನು.

"ನಮ್ಮ ಬಗ್ಗೆ ಹೊಲಸು ಜೋಕ್ ಮಾಡ್ತಾರೆ, ಹೀಯಾಳಿಸುತ್ತಾರೆ, ನಗುತ್ತಾರೆ. ಆದರೆ ಸಾಬ್, ಈ ಜೋಕ್ ಕೇಳಿದ್ದೀರಾ ನೀವು? ಒಮ್ಮೆ ರೈಲ್ವೇ ಸ್ಟೇಷನ್‌ನಲ್ಲಿ ಟಿಕೆಟ್ ಕೌಂಟರ್‌ನಲ್ಲಿ ಉದ್ದ ಕ್ಯೂ ಇತ್ತಂತೆ. ಒಬ್ಬ ಸರ್ದಾರ್ಜೀ ಬಂದು ಸೀದಾ ಟಿಕೆಟ್ ಕೌಂಟರ್ ಬಳಿ ಸಾಗಿ, ಟಿಕೆಟ್ ಕೊಡು ಎಂದು ಕೌಂಟರ್ ಕ್ಲರ್ಕ್‌ನ್ನು ಕೇಳಿದನಂತೆ. ಒಡನೇ ಶುರುವಾಯಿತು ನೋಡಿ, ಗಲಾಟೆ! 'ಸರ್ದಾರ್ಜೀ ಹಿಂದೆ ಬಾ! ಕ್ಯೂನಲ್ಲಿ ಬಾ! ನಮ್ಮ ಹಿಂದೆ ಬಾ! ಬೊಬ್ಬೆ ಹೊಡೆದರು ಜನ. ಆಗ ಸರ್ದಾರ್ಜೀ ನಿಂತಲ್ಲಿಂದಲೇ ಗದರಿಸುತ್ತಾನಂತೆ. 'ಯಾಕೆ ಹಿಂದೆ ಬರಬೇಕು? ಯಾಕೆ ಕ್ಯೂನಲ್ಲಿ ಬರಬೇಕು? ನಾನು ಸೈನ್ಯದಲ್ಲಿ ದುಡಿಯುವ ಯೋಧ! ಯುದ್ಧ ಶುರುವಾದರೆ, ಸರ್ದಾರ್ಜೀ ಮುಂದೆ ಹೋಗು! ಮುಂದೆ ನುಗ್ಗು! ಸೈನ್ಯ ಸೇರು! ಕಾದಾಡು! ಮುಂದೆ ನುಗ್ಗು ಎಂದು ನಮಗೆ ಮುಂದಕ್ಕೆ ತಳ್ಳುತ್ತೀರಾ! ಕಾದಾಡದೆ ಬದುಕಲಿಕ್ಕೆ ನೀವು! ಮುಂಚೂಣಿಯಲ್ಲಿ ಸಾಯುವುದಕ್ಕೆ ನಾವು! ಇಲ್ಲಿ ಈಗ ಒಂದು ಟಿಕೆಟ್ ಕೊಳ್ಳುವುದಕ್ಕೆ ಬಂದರೆ 'ಹಿಂದೆ ಹೋಗು, ಕ್ಯೂನಲ್ಲಿ ಬಾ, ನಮ್ಮನ್ನು ನೋಡಿ, ಜೋಕ್ ಮಾಡಿ, ನಗುತ್ತೀರಾ!"

ಕೆಂಡದ ಉಂಡೆಗಳು ಉರುಳಿ ಬೀಳುತ್ತಿದ್ದವು ಅವನ ಬಾಯಿಯಿಂದ. ನಾನು ಬೆರಗಾಗಿ ಅವನ ಮಾತುಗಳನ್ನು ಆಲೈಸುತ್ತಿದ್ದೆ. ಅವನು ಹೇಳಿದ್ದರಲ್ಲಿ ನಿಜದ ಅಂಶವಿದೆಯಲ್ಲವೆ?

"ಯಾಕೆ ಸುಮ್ಮನೆ ಕುಳಿತಿದ್ದೀಯಾ ವರ್ಮಾಜೀ? ಮಾತಾಡು!"

ತಿಣುಕಿದ ವರ್ಮನನ್ನು ಸರ್ದಾರ್ಜೀ!

ವರ್ಮನ ಮುಖದಲ್ಲಿ ಅದೇ ನಸುನಗು ಅದೇ ನೇರದೃಷ್ಟಿ!

"ಮೊದಲು ವಿವಾಹ ಸಂಬಂಧಗಳು ಏರ್ಪಾಡುತ್ತಿದ್ದವು ಹಿಂದು -ಸೀಖ್‌ರ ನಡುವೆ. ಈಗ ಅದೂ ಇಲ್ಲ! ಏನು ಹೇಳ್ತೀಯಾ ನೀನು?" ಸರ್ದಾರ್ಜೀ ಅಬ್ಬರಿಸಿದ!

ಆಗ ನಿಧಾನವಾಗಿ ಬಾಯಿ ಬಿಟ್ಟ ವರ್ಮಾಜೀ. "ನೀನು ಹೇಳುವುದು ಸುಳ್ಳು. ಈಗಲೂ ನಡೆಯುತ್ತಾ ಇದೆ. ನನ್ನ ಹೆಂಡತಿ ಸೀಖ್!"

# 6

"ತನ್ನ ಪತ್ನಿಯ ಮೇಲಿನ ಅತೀವ ಪ್ರೇಮ ಸೂಚಕವಾಗಿ ತಾಜ್‌ಮಹಲ್ ಕಟ್ಟಿದ ಶಹಜಹಾನ್ ಬಾದ್‌ಶಹಾ. ಅದಕ್ಕಾಗಿ ಲಕ್ಷಾಂತರ ರೂಪಾಯಿ ಖರ್ಚು ಮಾಡಿದ. ಅದರ ಬದಲಾಗಿ ತನ್ನ ಪತ್ನಿಯ ಹೆಸರಿನಲ್ಲಿ ಏನಾದರೊಂದು ಲೋಕೋಪಯೋಗಿ ಕಾರ್ಯ ಮಾಡಿದ್ದರೆ ಎಷ್ಟು ಉಪಯೋಗವಾಗುತ್ತಿತ್ತು!"

ಕಪೂರ್, ತಾಜ್‌ಮಹಲ್‌ನ ಚಂದವನ್ನು ನೋಡುತ್ತಾ ಉದ್ಗರಿಸಿದ್ದ.

ಕಪೂರ್, ಸರ್ದಾರ್ಜೀ, ನಾನು ತಾಜ್‌ಮಹಲ್‌ನ ಹಿಂಬದಿಯ ಗೋಡೆಗೆ ಆತುಕೊಂಡು, ಮಹಲ್‌ನ ಸೌಂದರ್ಯವನ್ನು ಸವಿಯುತ್ತಿದ್ದೆವು.

ಶೂರತನದ ಜೊತೆಗೆ ಸೌಂದರ್ಯದ ಉಪಾಸನೆಯೂ ಮೊಘಲ್‌ರ ಉದಾತ್ತ ಗುಣವಾಗಿತ್ತಲ್ಲವೆ? ಹುಟ್ಟಿನಿಂದ ಸಾಯುವವರೆಗೂ ಪ್ರಕೃತಿ ದೇವಿಯ ಉಪಾಸಕರಾಗಿ ವಿಜೃಂಭಿಸಿದ್ದರಲ್ಲವೆ? ಎಲ್ಲೆಲ್ಲಿಯೂ ತೋಟ- ಹೂ ಬನ ನಿರ್ಮಿಸಿ, ತಾವು ಸತ್ತ ಮೇಲೂ ಹೂ ತೋಟದ ನಡುವೆ ಗೋರಿ ನಿರ್ಮಿಸಿ ತಮ್ಮ ಆತ್ಮಕ್ಕೆ ಅಪೂರ್ವ ಶಾಂತಿ ದೊರೆಯಲೆಂಬ ಉದ್ದೇಶವಿರಬಹುದಲ್ಲವೆ? ಕೆಲವರು ಹೂತೋಟ ಬೆಳೆಸಿ ಅದರ ಮಧ್ಯ ಸುಂದರ ಗೋರಿಯನ್ನು ಕಟ್ಟಿಸಿದರೆ ಮೊಘಲರು ಹೂಬನದ ಮಧ್ಯೆ ಭವ್ಯ ಮಹಲ್‌ಗಳನ್ನು ನಿರ್ಮಿಸಿ, ಸತ್ತವರ ನೆನಪನ್ನು ಚಿರಸ್ಥಾಯಿಗೊಳಿಸದರಲ್ಲವೆ! ಶಹಜಹಾನ್, ತನ್ನ ಪ್ರೀತಿಯ ಹೆಂಡತಿಯ ನೆನಪಿನಲ್ಲಿ ತಾಜ್‌ಮಹಲ್‌ನ್ನು ನಿರ್ಮಿಸಿ, ಆಕೆಯ ಹೆಸರಿನ ಜೊತೆಗೆ ಅವಳ ಮೇಲಿನ ಪ್ರೀತಿಯ ಕುರುಹಾಗಿ ಈ ಮಹಲ್ ಇಂದಿಗೂ ನಿಂತಿದೆಯಲ್ಲವೆ? ಒಬ್ಬ ಮನುಷ್ಯನ ಪ್ರೀತಿ ಎಷ್ಟು ಅಘಾತ ಮತ್ತು ಅನುಪಮ ಎಂದು ಈ ಭವ್ಯ ಮಹಲ್ ಪ್ರಪಂಚಕ್ಕೆ ಸಾರುತ್ತದೆಯಲ್ಲವೆ?

"ಈ ಮಹಲ್‌ಗೆ ಎಷ್ಟು ಖರ್ಚಾಗಿರಬಹುದು?"

ಹೌದು! ಎಷ್ಟು ಖರ್ಚಾಗಿರಬಹುದು? ಇದನ್ನು ನೋಡಿದವರ ಮನಸ್ಸು ಇದರ ಬಗ್ಗೆ ಯೋಚಿಸುತ್ತದೆಯೊ?

ಮಹಲ್‌ನ ಸೌಂದರ್ಯವನ್ನು ನೋಡಿ ಅನುಭವಿಸಿ ತಮ್ಮ ಮನಸ್ಸನ್ನು ಸೂರೆಗೊಂಡ ಮೇಲೆ, ಇದನ್ನು ಕಟ್ಟಲು ಖರ್ಚು ಎಷ್ಟು ಆಯಿತೆಂದು ಯೋಚಿಸಲು ಸಾಧ್ಯವಾಗುವುದೆ?

ಸರ್ದಾರ್ಜೀಯ ಮನಸ್ಸು ಏಕೆ ಹೀಗೆ ಓಡಿತು? ಮಹಲ್‌ನ ಸೌಂದರ್ಯವನ್ನು ನೋಡಿ ಆನಂದ ಪಡುವುದರ ಬದಲು ಅದನ್ನು ನಿರ್ಮಿಸಿದ, ಖರ್ಚಿನ ಬಗ್ಗೆ ಯೋಚಿಸುತ್ತಿದ್ದಾನಲ್ಲಾ? ಇದೆಂತಹ ವಿಚಿತ್ರ ಪ್ರಾಣಿ?

"ಸುಮಾರು ೫೦ ಲಕ್ಷ ರೂಪಾಯಿ ಖರ್ಚಾಯಿತೆನ್ನುತ್ತಾರೆ, ಇತಿಹಾಸ ಕಾರರು."

"ಎಷ್ಟು ಸಮಯ ತೆಗೆದುಕೊಂಡರಂತೆ ಇದನ್ನು ಕಟ್ಟಲಿಕ್ಕೆ?" ಕೇಳಿದ ಸರ್ದಾರ್ಜೀ.

"ಸುಮಾರು ೨೨ ವರ್ಷಗಳು!"

"ಎಷ್ಟು ಜನ ಕೆಲಸಗಾರರು ಈ ಮಹಲ್‌ನ್ನು ಕಟ್ಟಿದರು?"

ಯಾರೂ ಕೇಳದ ಪ್ರಶ್ನೆ! ಯಾರು ಕಟ್ಟಿದರು ಈ ಮಹಲ್‌ನ್ನ? ಮೊಘಲ್ ಬಾದ್‌ಶಹಾ ಶಹಜಹಾನ್ ಎಂದು ಎಲ್ಲರಿಗೂ ತಿಳಿದ ವಿಷಯ. ಯಾತಕ್ಕಾಗಿ? ತನ್ನ ಪ್ರೀತಿಯ ಪತ್ನಿಯ ಸವಿ ನೆನಪಿಗಾಗಿ! ಆದರೆ ಈ ಮಹಲ್‌ನ್ನು ಎಷ್ಟು ಜನ ಕೆಲಸಗಾರರು ಕಟ್ಟಿದರು?

"ಸುಮಾರು ೨೨೦೦೦ ಕೆಲಸಗಾರರು!"

ಸರ್ದಾರ್ಜೀಯ ಮುಖದಲ್ಲಿ ಮಂದಹಾಸ ಮೂಡಿತು.

"ಅಂದರೆ, ೨೨೦೦೦ ಕೆಲಸಗಾರರಿಗೆ, ೨೨ ವರ್ಷ ನೌಕರಿ ಸಿಕ್ಕ ಹಾಗೆ ಆಯಿತು. ಒಬ್ಬ ಕೆಲಸಗಾರನ ಇಡೀ ಆಯುಸ್ಸೇ ಈ ಮಹಲ್‌ನ್ನು ಕಟ್ಟುವುದರಲ್ಲಿ ಕಳೆಯಿತು!"

"ಹೇ ಸರ್ದಾರ್ಜೀ! ಯಾರು ಕಟ್ಟಿದರೇನು, ಎಷ್ಟು ಖರ್ಚಾದರೇನು? ತಾಜ್ ಮಹಲ್ ನೋಡಲಿಕ್ಕೆ ಬಂದಿದ್ದೀಯಾ? ನೋಡಿ, ನಲಿದು ಸುಖಪಡು!"

"ನೋಡಿಯಾಯಿತು, ನಲಿದಾಯಿತು! ಇದನ್ನು ಕಟ್ಟಿದವರ ಪಾಡೇನಾಯಿತು? ಎಂದು ಯೋಚಿಸುತ್ತಿದ್ದೆ."

"ಕಟ್ಟಿಸಿದ ಶಹಜಹಾನ್ ಮತ್ತು ಅವನ ಹೆಂಡತಿ ತರಹ, ಕಟ್ಟಿದವರು ಕೂಡ ಮಣ್ಣಾದರು! ಅಷ್ಟೇ! ಇನ್ನೇನಾಗುತ್ತಾರೆ?"

ನಗುತ್ತಾ ಹೇಳಿದ ಕಪೂರ್.

"ನೀನು ಹೇಳಿದ್ದು ನಿಜ. ಇಬ್ಬರೂ ಸತ್ತು ಮಣ್ಣಾದರು. ಆದರೆ ಕಟ್ಟಿಸಿದವನನ್ನು ಮರೆತಿಲ್ಲ ಜನ. ಬೆವರು ಸುರಿಸಿ ತಮ್ಮ ಜೀವನವನ್ನೇ ಬಲಿ ಕೊಟ್ಟರಲ್ಲ ಆ ಕೂಲಿಗಳು ಅವರನ್ನು ಜನ ಮರೆತುಬಿಟ್ಟಿದ್ದಾರೆ!"

ಇವನು ಯಾಕೆ ಹೀಗೆ ಮಾತನಾಡುತ್ತಾ ಇದ್ದಾನೆ ಎನ್ನಿಸಿತು ನನಗೆ! ಇದು ಪ್ರಪಂಚದ ನಿಯಮ. ಸಾಮಾನ್ಯ ಜನರು, ಸಾಮಾನ್ಯ ಕೂಲಿಗಳು, ಸಾಮಾನ್ಯ ರೈತರು, ಸಾಮಾನ್ಯ ಕುಶಲಕರ್ಮಿಗಳು, ಸಾಮಾನ್ಯ ಸೈನಿಕ ನಾವಿಕ- ಏಕೆ ಎಲ್ಲ ರಂಗದ ಸಾಮಾನ್ಯ ಜನರು, ತಮ್ಮ ಮುಂದಾಳುಗಳು ಹೇಳಿಕೊಟ್ಟ, ತೋರಿಸಿಕೊಟ್ಟ ದಾರಿ

ಯಲ್ಲಿ ನಡೆಯುವುದು ಸ್ವಾಭಾವಿಕ. ಹೆಸರು ಮುಂದಾಳುಗಳಿಗೆ ಹೊರತು ಅವರ ಹಿಂಬಾಲಿಕರಿಗಲ್ಲ. ಯುದ್ಧದಲ್ಲಿ ಜಯಗಳಿಸಿದರೆ, ರಾಜ್ಯ, ಹೆಸರು, ವೈಭವ, ಹಣ, ಅಂತಸ್ತು ಎಲ್ಲವೂ ಮುಂದಾಳತ್ವ ಹೊಂದಿದ ರಾಜನಿಗೆ ಅಥವಾ ರಾಜಕಾರಣಿಗೆ! ಅವನನ್ನು ಹಿಂಬಾಲಿಸಿ ಹೋರಾಡಿ, ಪ್ರಾಣ ತೆತ್ತ ಸಾಮಾನ್ಯ ಸೈನಿಕನಿಗಲ್ಲ! ಟಾಜ್ ಮಹಲ್ ಕಟ್ಟಿಸಿದ ಬಾದ್‌ಶಹಾನಿಗೆ ಕೀರ್ತಿ ಸಿಗದೆ, ಅದನ್ನು ಕಟ್ಟಿದ ಸಾಮಾನ್ಯ ಬಡ ಕೂಲಿಕಾರನಿಗೆ ಹೇಗೆ ಸಿಗಲು ಸಾಧ್ಯ?

"ಕೆಲಸಗಾರರಿಗೆ ಕೂಲಿ ಸಿಕ್ಕರೆ ಸಾಕು; ಅವನಿಗೆ ಹೊಟ್ಟೆ ತುಂಬಿದರೆ ಸಾಕು; ಅವನನ್ನು ಮರೆತರೆ ಯಾರಿಗೆ ನಷ್ಟ?"

ಕಪೂರ್ ಹೇಳಿದ,

"ಶಹಜಹಾನ್‌ನ ಹೆಂಡತಿ ಸತ್ತು ಅವಳನ್ನು ಮಣ್ಣು ಮಾಡಿದ ಸ್ಥಳಕ್ಕೆ ಐವತ್ತು ಲಕ್ಷ ರೂಪಾಯಿ ಖರ್ಚು ಮಾಡಿ ಮಹಲ್ ಕಟ್ಟಿಸಿದರೆ, ಜನರಿಗೆ ಏನು ಲಾಭ! ಅವಳನ್ನು ಮರೆಯಲಾರದೆ, ಅವಳ ನೆನಪಿಗೆ ಮಹಲ್ ಕಟ್ಟಿಸಿದವನು ಸತ್ತ! ಇದರಿಂದ ಸತ್ತವರಿಗೇನು ಲಾಭ? ಬದುಕಿದ್ದವರಿಗೆ ಏನು ನಷ್ಟ? ಅವನನ್ನು ಮರೆತರೆ ಯಾರಿಗೆ ನಷ್ಟ?"

ಸರ್ದಾರ್ಜೀ, ಮಧ್ಯಾಹ್ನದ ಉರಿಬಿಸಿಲಿನ ಬೇಗೆಯಿಂದ ಬೆಂದು, ಈಗ ಈ ಚರ್ಚೆಯಿಂದ ಮತ್ತಷ್ಟು ಬಿಸಿ ಏರಿ, ಅವನ ಮುಖವೆಲ್ಲಾ ಬೆವತು ನೀರಾಗಿತ್ತು.

ಹಾಸುಗಲ್ಲಿನ ಚಪ್ಪಡಿಯ ಮೇಲೆ ಓಡಾಡುತ್ತಿದ್ದ ನಮ್ಮ ಬರೀ ಕಾಲಿನ ಪಾದಗಳು ಭರತನಾಟ್ಯವಾಡುತ್ತಿದ್ದವು. ಈ ಭವ್ಯ ಮಹಲಿನ ಮುಂದೆ, ಬಾದ್‌ಶಹನ ಪ್ರೀತಿಯ ಚಿಹ್ನೆಯ ಮೇಲಿನ ಅಭಿಮಾನಪೂರ್ವಕವಾಗಿ ನಮ್ಮ ಪಾದಗಳು ಬಹಳ ಉತ್ಸುಕತೆಯಿಂದ, ನಾಟ್ಯವಾಡುತ್ತಿದ್ದವು. ಈ ವೈಭವದ ಮಹಲಿಗೆ ನಮ್ಮ ಭವ್ಯ ನಾಟ್ಯ ಸಾಕೆಂದು ನಮಗೆ ಮನವರಿಕೆಯಾಗಿ, ನೆರಳನ್ನರಿಸಿಕೊಂಡು ನಾವು ಅಲ್ಲಿಂದ ಕಾಲ್ತೆಗೆದೆವು. ಮಹಲಿನ ಹಿಂಭಾಗದಲ್ಲೇ ಹರಿಯುತ್ತಿದ್ದ ಯಮುನಾ ನದಿಯ ನೀರಿನಲ್ಲಿ ಸುಟ್ಟು ಬಳಲಿದ್ದ ಪಾದಗಳನ್ನು ಇರಿಸಿ, ಪಾಪವನ್ನಾರಿಸಿಕೊಳ್ಳುವ ಬಯಕೆ ಹೊತ್ತು ನಾವು ನದಿಯ ದಡವನ್ನರಿಸಿದೆವು.

ಕೃಷ್ಣನ ಪ್ರಿಯ ನದಿಯಾದ ಯಮುನಾ ಮಂದಗಮನೆ. ಅನಾದಿಕಾಲದಿಂದಲೂ ಮಂದವಾಗಿ ಹರಿಯುತ್ತಾ ಸಾಗುವ ಈ ನದಿ ಈಗ ಮಂದವಾಗಿ ಹರಿಯುವುದು ಬೇರೆಯೇ ಕಾರಣದಿಂದಲ್ಲವೆ? ಹಿಮಾಲಯ ತಪ್ಪಲಿನಿಂದ ಹಿಮ ಕರಗಿ ನೀರಾಗಿ ಹರಿದು, ದಣಿದು ಬೆಂದ ಭೂಮಿಯನ್ನು ತಣಿಸಿ, ಭತ್ತ, ಗೋಧಿ, ಕಬ್ಬುಗಳ ಗದ್ದೆಗಳಿಗೆ ನೀರುಣಿಸಿ, ರಾಜಧಾನಿ ದಿಲ್ಲಿಗೆ ಬಂದು ಸೇರಿ, ಅದರ ಬೃಹತ್ ಚರಂಡಿ ಮತ್ತು

ಆಗಸರ ಘಾಟ್ ಆಗಿ ಪರಿವರ್ತನೆಗೊಂಡು, ಶ್ರೀಕೃಷ್ಣ ಪರಮಾತ್ಮನ ಹುಟ್ಟಿದೂರಾದ ಮಥುರಾದಲ್ಲಿ, ಭಕ್ತಜನರ ಸಮಸ್ತ ಪಾಪಗಳನ್ನು ತೊಳೆದು, ಆಗ್ರ ನಗರದ ಈ ಮೊಘಲ್ ಬಾದ್‌ಶಹನ ಪತ್ನಿಯ ಗೋರಿಯ ನೆಲಗಟ್ಟನ್ನು ಸವರಿಕೊಂಡು, ಪ್ರಯಾಗದಲ್ಲಿ ಪವಿತ್ರ ಗಂಗೆಯನ್ನು ಸೇರುವ ಈ ಯಮುನಾ ನೋಡಲು ಎಷ್ಟು ಚಂದ? ಎಷ್ಟು ಸುಖ? ಎಷ್ಟು ದುಃಖ? ಚಂದ, ಆನಂದ, ಸುಖ, ದುಃಖಗಳಿಗಿಂತ ಆಶ್ಚರ್ಯವೇ ಆಗಬಹುದಲ್ಲವೆ? ಇಷ್ಟು ದೂರ ಹರಿದು, ಸಕಲರ ಕೊಳೆ, ಕಲ್ಮಷ, ಪಾಪ ಪುಣ್ಯಗಳನ್ನು ಹೊತ್ತು ಇನ್ನೂ ಮಂದಗಮನೆಯಾಗಿ ಹರಿಯುತ್ತಾ ಇದ್ದಾಳಲ್ಲಾ ಎಂದು. ಮಂದವಾಗಿ ಹರಿಯಲಿ, ಚುರುಕಾಗಿ ಹರಿಯಲಿ, ಬಿರುಸಾಗಿ ಸಾಗಲಿ-ನದೀ ನೀರು ನೀರೇ! ಅವರ ನೀರು ಬೆಂದ ನೆಲವನ್ನು ತಣಿಸಿ, ಅದರ ಸಾಗುವಳಿಗೆ ನೆರವಾಗಿ, ಹಿಂಗಿ ಮಾಯವಾಗುತ್ತದೆ. ಅದು ಒಂದು ಧ್ಯೇಯ ಗುರಿ ಹೊತ್ತು ಹರಿದು, ಸುರಿದು ಓಡಾಡಿ, ಸಾಧಿಸುವಂತೆ ತೋರುತ್ತದೆಯಲ್ಲವೇ?

"ಹೆಂಡತಿಯ ಮೇಲಿನ ಪ್ರೇಮದ ಕುರುಹಾಗಿ, ಸಮಾಧಿ, ಗೋರಿ, ಮಹಲ್ ಕಟ್ಟಿ ಪುಣ್ಯ ಕಟ್ಟಿಕೊಂಡಿದ್ದಾರೆ ರಾಜರು! ಗಂಡನ ಮೇಲಿನ ಪ್ರೇಮದ ಕುರುಹಾಗಿ, ಯಾಕೆ ಯಾವ ಹೆಂಡತಿ ಮಹಲ್ ಕಟ್ಟಿಲ್ಲ?"

ಸರ್ದಾರ್ಜೀ ಕೇಳಿದ.

"ದಿಲ್ಲೀಯವನಾಗಿ ನಿನಗೆ ಇನ್ನೂ ದಿಲ್ಲೀ ಚರಿತ್ರೆ ತಿಳಿದಿಲ್ಲಾ ಎಂದರೆ ಆಶ್ಚರ್ಯವಾಗುತ್ತದೆ!"

ಅಚ್ಚರಿ ವ್ಯಕ್ತಪಡಿಸಿದ ಕಪೂರ್!

"ಯಾಕೆ? ದಿಲ್ಲೀಯಲ್ಲಿ ಅಂತಹ ಕಟ್ಟಡವಿದೆಯಾ?"

"ಯಾಕಿಲ್ಲ? ಹುಮಾಯೂನ್‌ನ ಸಮಾಧಿ ಇದೆಯಲ್ಲಾ! ಅದನ್ನು ಯಾರು ಕಟ್ಟಿಸಿದ್ದು ಅಂತ ಮಾಡಿದ್ದೀ? ಹುಮಾಯೂನ್‌ನ ಹೆಂಡತಿ, ಗಂಡ ಸತ್ತ ಮೇಲೆ, ಅವನ ಮೇಲಿನ ಪ್ರೀತಿಯ ಕುರುಹಾಗಿ, ಒಂದು ಬೃಹತ್‌ಮಹಲ್ ಕಟ್ಟಿಸಿದಳು. ಆ ಕಟ್ಟಡ, ಟಾಜ್‌ಮಹಲ್ ಶೈಲಿಯಂತೇ ಇದೆ. ವಿಧ್ವಾಂಸರ ಪ್ರಕಾರ, ಹುಮಾಯೂನ್‌ನ ಸಮಾಧಿಯನ್ನು ನೋಡಿ, ಅದೇ ಶೈಲಿಯಲ್ಲಿ ಅವನ ವಂಶದವನೇ ಆದ ಶಹಜಹಾನ್, ತನ್ನ ಪ್ರೀತಿಯ ಹೆಂಡತಿಯ ನೆನಪಿನ ಮೇಲೆ ತಾಜ್‌ಮಹಲ್ ಕಟ್ಟಿಸಿದನಂತೆ."

"ಇವರೆಲ್ಲಾ ಈ ಬೃಹತ್ ಕಟ್ಟಡವನ್ನು ಕಟ್ಟಿಸದೆ, ಲೋಕೋಪಯೋಗಿ ಕಾರ್ಯಗಳನ್ನು ಮಾಡಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು?"

ಸರ್ದಾರ್ಜೀಯ ಪೇಚಾಟ ನೋಡಿ ನನಗೆ ನಗು ಬಂತು.

"ಹೊರಗಿನಿಂದ ದಂಡೆತ್ತಿ ಬಂದು, ನಮ್ಮ ದೇಶವನ್ನು ಆಳಲಿಕ್ಕೆ ಬಂದವರು ಯಾಕೆ ಜನಗಳ ಉದ್ಧಾರ ಮಾಡಲಿಕ್ಕೆ ಲೋಕೋಪಯೋಗಿ ಕಾರ್ಯ ಮಾಡುತ್ತಾರೆ? ಅವರು ನಮ್ಮನ್ನು ಗೆದ್ದು, ದೋಚಿ ಆಳಿದ್ದು, ತಮ್ಮ ಮತ್ತು ತಮ್ಮವರ ಸುಖಕ್ಕೆ. ನಿರಂತರವಾಗಿ ನಮ್ಮ ಸಂಪತ್ತನ್ನು ದೋಚಿ, ಹಾಳು ಮಾಡಿ ಮೆರೆದರು."

ನನ್ನ ಮಾತು ಕೇಳಿ, ಸರ್ದಾರ್ಜೀಗೆ ಸಮಾಧಾನವಾದಂತಾಗಲಿಲ್ಲ.

"ಇಂಗ್ಲೀಷ್‌ನವರು ನಮ್ಮನ್ನು ದೋಚಿದರೂ ಲೋಕೋಪಯೋಗಿ ಕಾರ್ಯ ಮಾಡಿದರು. ಅದು ಹೇಗೆ? ಅವರ ಕಾಲದಲ್ಲೇ ಲೋಕೋಪಯೋಗಿ ಇಲಾಖೆಯನ್ನೇ ಶುರುಮಾಡಿದ್ದರಲ್ಲಾ!"

"ಹೌದು! ಇಂಗ್ಲೀಷ್‌ನವರು ನಮ್ಮನ್ನು ದೋಚಿದರೂ, ಒಳ್ಳೆಯ ಕಾರ್ಯಗಳನ್ನು ಮಾಡಿದರು. ನಮಗೆ ರೈಲು ರೋಡುಗಳನ್ನು ಕೊಟ್ಟರು;ನೀರಾವರೀ ಅಣೆಕಟ್ಟುಗಳನ್ನು ಕಟ್ಟಿದರು. ಮೇಲಾಗಿ, ವಿಶ್ವವಿದ್ಯಾನಿಲಯಗಳನ್ನು, ಶಾಲೆಗಳನ್ನು ಸ್ಥಾಪಿಸಿ, ಆಧುನಿಕ ವಿದ್ಯಾಭ್ಯಾಸಕ್ರಮಗಳನ್ನು ಹೇಳಿಕೊಟ್ಟರು. ಎಲ್ಲಾ ಕ್ಷೇತ್ರಗಳಲ್ಲೂ ಅವರು ಭಾರತೀಯರಿಗಾಗಿ ತಮ್ಮ ತನು, ಮನ, ಧನಗಳನ್ನು ಉಪಯೋಗಿಸಿದರು. ಇದರ ಬಗ್ಗೆ ಎರಡು ಮಾತಿಲ್ಲ!"

"ಏನೇ ಆದರೂ ನಾವು ಗುಲಾಮರಂತೂ ಆಗೇ ಆಗಿದ್ದೆವಲ್ಲ! ಕೇವಲ ಮೂರು ಸಾವಿರ ಮೊಘಲರು ಮೂರು ಕೋಟಿ ಭಾರತೀಯರನ್ನು ಆಳಿದರು. ಅದು ಯಾರ ತಪ್ಪು?"

ನನ್ನ ಪ್ರಶ್ನೆಗೆ ಉತ್ತರಕ್ಕಾಗಿ ಕಪೂರ್ ಹೇಳಿದ "ಪಂಜಾಬೀಗಳದ್ದು!"

"ನಿನ್ನ ತಲೆ ಬಡೀತೀನಿ!"

ಸರ್ದಾರ್ಜೀ ಜೋರಾಗಿ ಒದರಿದ. ಅವನ ಕೋಪ ಮುಗಿಲಿಗೇರಿತ್ತು!

ಕಪೂರ್ ಮತ್ತೆ ನಸುನಗುತ್ತಾ ಯಮುನಾ ದಂಡೆಗುಂಟಾ ಹೆಜ್ಜೆ ಹಾಕುತ್ತಾ ನಡೆಯುತ್ತಿದ್ದ, ಸ್ವಲ್ಪ ಹೊತ್ತು ಮೌನವಾಗಿ ನಡೆದ ಮೇಲೆ, ಕೆಂಡ ಕೋಪವಾಗಿದ್ದ ಸರ್ದಾರ್ಜೀಯ ಮುಖವನ್ನು ನೋಡುತ್ತಾ, ಹೇಳಿದ ಕಪೂರ್.

"ಯಾಕೆ ಅಷ್ಟು ಕೋಪ ನಿನಗೆ?"

"ನಾವು ಗುಲಾಮರಾಗಿದ್ದು ಪಂಜಾಬಿಗಳಿಂದ ಅಂತ ಹೇಳಿದರೆ ಕೋಪ ಬರದೇ ಇನ್ನೇನು ಬರುತ್ತದೆ?"

"ನಿನಗೆ ನಾನು ಸಮಾಧಾನ ಹೇಳುತ್ತೇನೆ, ಕೇಳು! ಪುರಾತನ ಕಾಲದಿಂದಲೂ ಭಾರತದ ಮೇಲೆ ದಂಡೆತ್ತಿ ಬಂದವರೆಲ್ಲಾ ಪಂಜಾಬಿನ ಮುಖಾಂತರವೇ ದಂಡೆತ್ತಿ ಬಂದವರು. ಹೌದೋ ಅಲ್ಲವೋ?"

"ಆಕ್ರಮಣಕಾರರನ್ನು ತಡೆದು ನಿಲ್ಲಿಸಿದವರು ಪಂಜಾಬಿಗಳು! ಗೊತ್ತಾ ನಿನಗೆ?"

"ಗೊತ್ತು! ತಡೆದರು, ಆದರೆ ನಿಲ್ಲಿಸಲಿಲ್ಲ! ಅಲ್ಲವೇ?"

"ಹೌದು! ನಿಲ್ಲಿಸಲಾಗಲಿಲ್ಲ! ಅದಕ್ಕೆ ಪಂಜಾಬೀಗಳು ಹೊಣೆಗಾರರೇ? ನೀನು ಪಂಜಾಬೀಯಾಗಿ ಈ ರೀತಿ ಮಾತನಾಡುತ್ತಿದ್ದೀಯಲ್ಲಾ!"

ಸರ್ದಾರ್ಜೀ ಕೆಂಡಕಾರಿದ.

"ನಾನು ಒಬ್ಬ ಭಾರತೀಯನಾಗಿ ಈಗ ಮಾತನಾಡುತ್ತಿದ್ದೇನೆ. ಪಂಜಾಬಿಯಾಗಿ ಅಲ್ಲ!"

"ಭಾರತೀಯವನಾಗಿ ಮಾತನಾಡುತ್ತಿದ್ದೀಯ; ಅಥವಾ ತಲೆಕೆಟ್ಟ ಕುಡುಕನ ಹಾಗೆ ಮಾತನಾಡುತ್ತಿದ್ದೀಯಾ?"

ಕೋಪ ಇನ್ನು ಆರಿರಲಿಲ್ಲ, ಸರ್ದಾರ್ಜೀಗೆ.

"ನಮ್ಮನ್ನು ಗುಲಾಮರನ್ನಾಗಿ ಮಾಡಿದ್ದು ಪಂಜಾಬಿಗಳು ಎಂದು ಭಾರತೀಯನಾದ ನೀನು 'ಪಂಜಾಬಿ' ಎಂಬ ಪದವನ್ನು ಯಾಕೆ ಉಪಯೋಗಿಸಿದೆ? ಗುಲಾಮರಾಗಿದ್ದು ಭಾರತೀಯರಿಂದಲೇ ಎಂದು ಹೇಳಬಹುದಲ್ಲಾ?"

ಸರ್ದಾರ್ಜೀ ಮಾತನಾಡುತ್ತಲೇ ಇದ್ದ.

"ನಾವು ಭಾರತೀಯರಾಗಿದ್ದು ಇಂಗ್ಲಿಷರಿಂದ. ಅವರೇ ನಮ್ಮನ್ನು 'ಇಂಡಿಯನ್ಸ್' ಎಂಧು ಕರೆದರು. ನಾವು ರಾಜಕೀಯವಾಗಿ ಯಾವತ್ತೂ ಒಂದಾಗಿರಲಿಲ್ಲ! ರಾಜಕೀಯವಾಗಿ, ಸ್ವತಂತ್ರ ಜನರಾಗಿ ಹದಿನೈದು ಆಗಸ್ಟ್ ೧೯೪೭ರಲ್ಲಿ ನಾವು ಭಾರತೀಯರೆನಿಸಿಕೊಂಡವು. ಆದರೆ ಮತ್ತೆ ೧೯೫೬ರಲ್ಲಿ ರಾಜ್ಯ ಪುನರ್ವಿಂಗಡವಾಗಿ, ಪಂಜಾಬಿ, ಗುಜರಾತಿ, ಮರಾಠೀ, ಬೆಂಗಾಲೀ, ಮದ್ರಾಸೀ ಗಳಾದೆವು."

ನನ್ನ ತಲೆ ಬಿಸಿಯಾಗತೊಡಗಿತ್ತು. ನೆತ್ತಿಯ ಮೇಲಿನ ಸೂರ್ಯ ಪಶ್ಚಿಮಕ್ಕೆ ಹೊರಳಿ, ಕೆನ್ನೆಗೆ ತನ್ನ ಕಿರಣಗಳನ್ನು ಹೊಡೆದು ಹಿಂಸಿಸುತ್ತಿದ್ದ. ಇವನ ಕಾಟ ತಾಳಲಾರದೆ ನಾನು ಕರವಸ್ತ್ರ ತೆಗೆದು, ತಲೆಯ ಮೇಲೆ ಮತ್ತು ಕೆನ್ನೆಯ ಮೇಲೆ ಅದರ ಉರಿ ಬೀಳದ ಹಾಗೆ ಹೊದ್ದಿಕೊಂಡೆ. ಮತ್ತೆ ಹೆಜ್ಜೆಹಾಕುತ್ತ ಯೋಚಿಸತೊಡಗಿದೆ.

ಕಪೂರ್ -ಸರದಾರಜೀಗಳ ವಾಗ್ಯುದ್ಧದಲ್ಲಿ ಎಷ್ಟು ಸತ್ಯಾಂಶವಿದೆ?

ರಾಜಕೀಯವಾಗಿ ನಾವು ಸ್ವತಂತ್ರವಾಗಿದ್ದು 1947ರಲ್ಲಿ. ಇದರ ಬಗ್ಗೆ ಸಂಶಯವಿಲ್ಲ. ಆದರೆ ನಾವು ಭಾರತೀಯರಾಗಿದ್ದು ಯಾವಾಗ? 1947ರಲ್ಲೇ ಅಥವಾ ವೇದ ಕಾಲದಲ್ಲೇ?

ಒಂದು ರಾಷ್ಟ್ರವೆಂದರೆ ಏನು? ಅದರ ವಿವರಣೆ ಏನು?

ಒಂದು ಖಚಿತವಾದ ಭೂಗೋಳದ ಇತಿಮಿತಿ ಇದ್ದು, ಒಂದೇ ಭಾಷೆ, ಒಂದೇ ಸಂಸ್ಕೃತಿ ಹೊಂದಿ, ಅದರಲ್ಲಿ ವಾಸಿಸುವ ಜನರಲ್ಲಿ ಭಾವೈಕ್ಯತೆ ಇದ್ದ ಪಕ್ಷದಲ್ಲಿ ಅದು ರಾಷ್ಟ್ರವೆಂದೆನಿಸಿಕೊಳ್ಳುತ್ತದೆ ಎಂದು ತಿಳಿದ ನಾನು ನಮ್ಮ ರಾಷ್ಟ್ರಕ್ಕೆ ಈ ಸೂತ್ರ ಅನ್ವಯಿಸುತ್ತದೆಯೇ? ನೂರಾರು ಭಾಷೆಗಳನ್ನು ವಿವಿಧ ಸಂಸ್ಕೃತಿ, ವಿವಿಧ ಜನಾಂಗ, ವಿವಿಧ ಧರ್ಮ ಹೊಂದಿರುವ ಈ ನಮ್ಮ ನಾಡು ರಾಷ್ಟ್ರವೆಂದು ಕರೆಸಿಕೊಳ್ಳುತ್ತದೆಯಲ್ಲಾ! ರಾಜಕೀಯವಾಗಿ ಏಕತೆ ಇದೆ ಎನಿಸಿಕೊಂಡರೂ ಭಾವೈಕ್ಯತೆ ಇದೆಯೋ? ಬಹಳ ಸಪೂರವಾದ ಐಕ್ಯತೆಯ ದಾರ ನಮ್ಮನ್ನು ಬಂಧಿಸಿ ಒಟ್ಟುಗೂಡಿಸಿದೆಯೋ? ಇದು ಯಾವಾಗ ಯಾವ ರೀತಿಯಲ್ಲಿ, ಯಾರಿಂದ ಕಡಿದುಹೋಗುತ್ತದೆಯೋ ಎಂಬ ಭಯವಿದ್ದೇ ಇದೆಯಲ್ಲವೆ?

ಆದರೆ ಒಂದೇ ಭಾಷೆ, ಒಂದೇ ರಾಜ್ಯ, ಒಂದೇ ರಾಷ್ಟ್ರ, ಒಂದೇ ಸಂಸ್ಕೃತಿಯವರಾದರೂ, ಕಪೂರ್ ಮತ್ತು ಸರ್ದಾರ್ಜೀ ಇಬ್ಬರಲ್ಲೂ ಐಕ್ಯತೆಯ ಕೊರತೆ ಕಾಣುತ್ತದೆಯಲ್ಲವೆ? ಪೃಥ್ವೀರಾಜ್ ಚೌಹಾನ್ ಮತ್ತು ಜಯಸಿಂಹ ಗಹಡವಾಲ್‌ರ ಐಕ್ಯತೆಯ ಕೊರತೆಯಿಂದ ದೇಶ ಪರಕೀಯರ ಧಾಳಿಗೆ ಗುರಿಯಾಗಿ ಸ್ವಾತಂತ್ರ ಕಳೆದುಕೊಳ್ಳುವಂತಾಯಿತಲ್ಲಾ!

"ಏನು ಯೋಚನೆ ನಡೆದಿದೆ ನಿಮ್ಮ ತಲೆಯಲ್ಲಿ? ಅದೂ ಈ ಸುಡುಬಿಸಿಲಿನಲ್ಲಿ? ತಂಪು ಪಾನೀಯ ಕುಡಿದು ದಿಲ್ಲೀಗೇ ವಾಪಸ್ಸು ಹೋಗೋಣವೇ?"

ಕಪೂರ್ ಕೇಳಿದ. ಅವನ ನಗುಮುಖ ನೋಡಿ ನನಗೆ ಸೋಜಿಗವಾಯಿತು. ಇವನ ಮುಖದಲ್ಲಿ ನಗು ಮಾಸುವುದೇ ಇಲ್ಲವೆ? ಯಾವಾಗಲೂ ಹಸನ್ಮುಖನಾಗಿರುವ ಈತನಿಗೆ ಸಂಕಟ ಬಂದಾಗ ಹೇಗಿದ್ದಾನು? ಛೆ! ಈ ಕೆಟ್ಟ ಯೋಚನೆ ಯಾಕಾದರೂ ಮಾಡಿದೆ?

"ಬನ್ನಿ ಹೋಗೋಣ" ಎಂದು ನದೀ ದಂಡೆಯಿಂದ ಮೇಲೇರಿ ಹೊರಬಂದೆವು.

ಊರಿನ ಮಧ್ಯೆ ಹಾದು ಹೋಗುವಾಗ, ಅಲ್ಲೇ ಕಾಣುವ ಜುಗ್ಗಿ ಜೋಪಡಿಗಳನ್ನು ತೋರಿಸಿ, ಕಪೂರ್ ಹೇಳಿದ,

"ಇವರ ಹಿರಿಯರೇ ಈ ತಾಜ್‌ಮಹಲ್‌ನ್ನು ಕಟ್ಟಿರಬೇಕು? ಅಲ್ಲವೇ ಸರ್ದಾರ್ಜೀ?"

"ಇರಬಹುದು!" ಹುಬ್ಬು ಗಂಟಿಕ್ಕಿ ನುಡಿದ ಸರ್ದಾರ್ಜೀ.

ತಲೆಯ ಮೇಲಿದ್ದ ಪೇಟ ಉರುಳಿಸಿದರೆ ಇವನ ಮುಖದ ಮೇಲಿದ್ದ ಗಂಟು ಉರುಳುತ್ತದೇನೋ ಎನ್ನಿಸಿತು. ಬೃಹತ್ ಮಹಲ್‌ಗಳನ್ನು, ಕಟ್ಟಡಗಳನ್ನು ನಿರ್ಮಿಸಿದ

ರಾಜವಂಶ ಕೀರ್ತಿ ಹಣವಂತರು ನಿರ್ನಾಮವಾದರೂ ಅವರ ಹೆಸರು ಹೇಳಲು ಆ ಭವ್ಯ ಮಹಲ್‌ಗಳೂ ಇಂದಿಗೂ ನಿಂತಿದ್ದರೂ, ಬಹಳ ಕಡಿಮೆ ಕೂಲಿಗೆ ಕೆಲಸ ಮಾಡಿ, ಹೊಟ್ಟೆ ಹರಿದುಕೊಂಡು, ಸಾಯುವವರೆಗೂ ದುಡಿದು, ಅಲ್ಲೇ ಮರಣ ಹೊಂದಿ ಹೇಳ ಹೆಸರಿಲ್ಲದಂತಾದ ಈ ಕೂಲಿಕಾರರ ವಂಶ ಇಂದಿಗೂ ಇರಬಹುದೆ? ಇಂದಿಗೂ ಪ್ರಪಂಚದ ಅತಿ ದರಿದ್ರ ದೇಶದಲ್ಲೊಂದಾದ ನಮ್ಮ ದೇಶದಲ್ಲಿ ಅತಿ ಕಡಿಮೆ ಕೂಲಿಗೆ ಕೂಲಿಕಾರರು ಕೂಲಿ ಮಾಡಿ ಸಾಯುವವರೆಗೂ ದುಡಿಯುವ ದೃಶ್ಯ ಕಾಣಬಹುದಲ್ಲವೆ?

ಸರ್ದಾರ್ಜೀಯ ಅನಿಸಿಕೆಯಲ್ಲಿ ಸತ್ಯದ ಅಂಶವಿಲ್ಲದೆ ಇರಲಿಕ್ಕೆ ಸಾಧ್ಯವಿಲ್ಲ!

"ಶತಮಾನದಿಂದಲೂ, ನಮ್ಮ ಕೆಲಸಗಾರರನ್ನು ದುಡಿಸಿಕೊಂಡು ಅವರಿಗೆ ಅನ್ಯಾಯ ಮಾಡಿದ್ದಾರೆ!"

ಸರ್ದಾರ್ಜೀ ಪುನಃ ತನ್ನ ವಾದವನ್ನು ಪ್ರತಿಪಾದಿಸಿದ.

"ಏನು? ನೀನು ಕಮ್ಯೂನಿಸ್ಟ್ ಆಗಿ ಪರಿವರ್ತನೆಗೊಂಡ ಹಾಗೆ ಕಾಣುತ್ತದಲ್ಲಾ!"

ಕಪೂರ್ ಚುಡಾಯಿಸಿದ.

"ಹೊರದೇಶದಿಂದ, ವ್ಯಾಪಾರೋದ್ಯಮಿಗಳು ನಮ್ಮ ದೇಶಕ್ಕೆ ಯಾಕೆ ಉದ್ದಿಮೆ ಹೂಡಲಿಕ್ಕೆ ಬರುತ್ತಿದ್ದಾರೆ,ಗೊತ್ತಿದೆ ಏನು? ಇಲ್ಲಿ ಕಡಿಮೆ ಕೂಲಿಯ ಕಾರಣದಿಂದ! ಅಂದರೆ ಕಡಿಮೆ ಕೂಲಿ ಕೊಟ್ಟು, ಹೆಚ್ಚು ಲಾಭ ಮಾಡಿ, ಹೊರದೇಶ ದವರು ನಮ್ಮ ದೇಶದ ಸಂಪತ್ತು ಸೂರೆ ಮಾಡಿ ತಾವು ಐಶ್ವರ್ಯವಂತರಾಗು ತ್ತಿದ್ದಾರೆ."

"ಇದೆಲ್ಲಾ ಗೊತ್ತಿರೋ ವಿಷಯಾ! ಇದರ ಬಗ್ಗೆ ಮಾತಾಡಿ ಪ್ರಯೋಜನವಿಲ್ಲ. ಸುಮ್ಮನೆ ಚರ್ಚಿಸಿ ತಲೆ ಕೆಡಿಸಿಕೊಂಡರೆ ಉಪಯೋಗವಿಲ್ಲ. ಕಡಿಮೆ ಕೂಲಿ ಕೊಟ್ಟು ಕೆಲಸ ತೆಗೆದುಕೊಳ್ಳುವುದು ಬರೀ ಹೊರಗಿನವರಲ್ಲ! ನಮ್ಮವರೂ ಇದರಲ್ಲಿ ಕಮ್ಮಿ ಏನಿಲ್ಲ. ನಿನ್ನ ಚಾಕಲೇಟ್ ಕಂಪನಿ ಯಜಮಾನ ಹೊರದೇಶದವನ? ಅವನೇನು ಕೈ ತುಂಬಾ ಕೂಲಿ ಸಂಬಳ ಕೊಟ್ಟು ಚಾಕಲೇಟ್ ಮಾಡಿ ಮಾರಿ, ಲಾಭ ಮಾಡುತ್ತಾ ಇದ್ದಾನೆಯೆ?"

ತನ್ನ ಚಾಕಲೇಟ್ ಕಂಪನಿಯ ಬಗ್ಗೆ ಲೇವಡಿ ಮಾಡಿದ್ದಕ್ಕೆ ಹುಬ್ಬುಗಂಟಿಕ್ಕಿದ ಅವನ ಮುಖ ಮತ್ತಷ್ಟು ಗಂಟು ಕಟ್ಟಿ ಬಿರುಸಾಯಿತು.

"ಒಂದು ವಿಷಯದ ಬಗ್ಗೆ ಮಾತನಾಡುತ್ತಾ ಇರುವಾಗ ವೈಯಕ್ತಿಕ ವಿಷಯವನ್ನು ಚರ್ಚೆಯಲ್ಲಿ ಎಳೆಯಬೇಡ. ವೈಯಕ್ತಿಕ ಸ್ವಂತ ವಿಷಯ ತಂದರೆ, ಜಗಳ ಮನಸ್ತಾಪ ಉಂಟಾಗುತ್ತದೆ. ಅದರಿಂದ ಯಾರಿಗೂ ಲಾಭವಿಲ್ಲ; ನಷ್ಟವೇ ಜಾಸ್ತಿ."

"ಹೋಗಲಿ ಬಿಡು! ನಿನಗೆ ಇಷ್ಟವಿಲ್ಲದಿದ್ದರೆ, ಈ ವಿಷಯದ ಬಗ್ಗೆ ಚರ್ಚಿಸುವುದು ಬೇಡ. ಈಗ ತಂಪು ಪಾನೀಯ ಕುಡಿಯೋಣ ಬಾ!" ಎಂದು ನಮ್ಮನ್ನು ಹತ್ತಿರದಲ್ಲೇ ರಸ್ತೆ ಬದಿಯಲ್ಲಿ ತಂಪು ಪಾನೀಯ ಮಾರುತ್ತಿದ್ದ ಅಂಗಡಿಯ ಬಳಿ ನಮ್ಮನ್ನು ಕರೆದೊಯ್ದ. ಮಾವಿನ ಹಣ್ಣಿನ ಕಾಲವಾದ್ದರಿಂದ, ಅದರದ್ದೇ ರಸ ಕುಡಿಯುತ್ತಾ ನಿಂತೆವು. ದಶೇರಿ ಮಾವಿನಹಣ್ಣು ದಿಲ್ಲಿ- ಆಗ್ರಾಗಳಲ್ಲಿ ಬಹಳ ಪ್ರಸಿದ್ಧಿ. ದಶೇರಿ ಜಾತಿ ಮಾವಿನಹಣ್ಣಿನಲ್ಲಿ ಹುಳಿಹಣ್ಣು ಸಿಗುವುದು ಅಪರೂಪ. ರಸ ಕಡಿಮೆಯಾದರೂ, ಸಿಹಿ ಹೆಚ್ಚು. ಇಲ್ಲಿಯ ಜನರಿಗೆ ಈ ಸಕ್ಕರೆಯ ಹಣ್ಣಿನ ಬಗ್ಗೆ ಬಲು ಅಕ್ಕರೆ! ಇದರ ಪಾನೀಯವೆಂದರೆ ಬಲು ಅಚ್ಚುಮೆಚ್ಚು.

ಪ್ರಸಿದ್ಧ ಉರ್ದು ಕವಿ ಗಾಲೀಬ್ ಮಾವಿನಹಣ್ಣನ್ನು ಎಷ್ಟು ಪ್ರೀತಿಸುತ್ತಿದ್ದನೆಂದರೆ, ಅದರ ಬಗ್ಗೆ ಕವಿತೆಗಳನ್ನು ಕಟ್ಟಿ ಹಾಡುತ್ತಿದ್ದನಂತೆ.

ಎರಡನೆ ಬಾರಿ ಮಾವಿನ ಹಣ್ಣಿನ ರಸ ಕುಡಿದು, ಬಾಯಿ ಚಪ್ಪರಿಸಿಕೊಂಡು, ಕಪೂರ್ ನನಗೆ ಇನ್ನೊಂದು ಲೋಟ ರಸ ಕುಡಿಯುವಂತೆ ಕೇಳಿಕೊಂಡ. ನಾ 'ಒಲ್ಲೆ' ಎಂದೆ.

"ನಿಮಗೆ ಮಾವಿನ ಹಣ್ಣು ಇಷ್ಟವಿಲ್ಲವೆ?"

"ಇಷ್ಟ! ಆದರೆ ಒಂದು ಲೋಟ ಸಾಕೆನಿಸಿದೆ. ತುಂಬಾ ಸಿಹಿ ಅಲ್ಲವೆ?"

"ಒಂದು ಲೋಟ ರಸ ಕುಡಿದಮೇಲೆ ಇನ್ನೂ ಬೇಕೆನ್ನಿಸುವುದಿಲ್ಲವೆ?"

"ಮದುವೆಯಾದರೂ, ಇನ್ನೊಂದು ಹೆಣ್ಣಿನ ಸಹವಾಸ ಮಾಡಿದ ಹಾಗೆ! ಅಲ್ಲವೆ?"

ಫಕ್ಕನೆ ನನ್ನ ಬಾಯಿಯಿಂದ ಮಾತುಗಳು ಉದುರಿದ್ದವು. ಹೇಳಬಾರದಾಗಿತ್ತೇನೋ ಅನ್ನಿಸಿತು. ಹೇಳಿಯಾಗಿತ್ತು. ಕಪೂರ್‌ನ ಮುಖದಲ್ಲಿ ಒಂದು ಕ್ಷಣ ಅಸಹನೆಯ ಗಂಟು ಕಾಣಿಸಿ ಮಾಯವಾಯಿತು. ಅವನಿಗೆ ನನ್ನ ಮಾತು ಇಷ್ಟವಾಗಲಿಲ್ಲ ಎಂದು ತೋರಿಸಿತ್ತು ಅವನ ಮುಖ. ಆದರೆ ಅದು ಒಂದೇ ಒಂದು ಕ್ಷಣವಾಗಿತ್ತು. ಮತ್ತೆ ಅದೇ ಹಸನ್ಮುಖಿ, ಅದೇ ಬೆಳದಿಂಗಳ ಬಾಲೆಯ ನಗುಮುಖ.

"ಮದುವೆಯಾದನೆಂದರೆ, ಹೆಂಡತಿಯ ಮೇಲೆ ಪ್ರೇಮವಿದೆ ಎಂದು ತಿಳಿದರೆ ಅದು ತಪ್ಪಾಗುತ್ತದೆಯಲ್ಲವೆ?"

"ಪ್ರೇಮವೋ, ಕಾಮವೋ, ನಿನಗೆ ಯಾಕೆ ಬೇಕು. ಇನ್ನಷ್ಟು ಹೆಣ್ಣಿನ ಸಹವಾಸ?" ಸರ್ದಾರ್ಜೀ ಕೇಳಿದ.

"ಈ ವಿಷಯದಲ್ಲಿ ಅನುಭವವಿಲ್ಲ, ಆದ್ದರಿಂದ ನಿನಗೆ ಅಧಿಕಾರವಿಲ್ಲ ಬಾಯಿ ಹಾಕುವುದಕ್ಕೆ!?"

"ಚರ್ಚೆ ಮಾಡುವುದಕ್ಕೆ ಅನುಭವ, ಅಧಿಕಾರ? ಅದೂ ನಮ್ಮ ದೇಶದಲ್ಲಿ? Kapoor, you are very poor!"

ಚುಡಾಯಿಸಿದ ಸರ್ದಾರ್ಜೀ.

"ವ್ಯಕ್ತಿಗಳ ಸ್ವಂತ ವಿಷಯಕ್ಕೆ ಕೈ ಹಾಕಿ, ಚರ್ಚೆ ಮಾಡಿದರೆ ಸರಿಬರೋದಿಲ್ಲ ಎಂದು ನೀನೇ ನನಗೆ ಹೇಳಿ ನನ್ನ ಬಾಯಿ ಮುಚ್ಚಿಸಿದ್ದೆ. ಈಗ ನನ್ನ ಸ್ವಂತ ವಿಷಯದ ಬಗ್ಗೆ ಯಾಕೆ ಚರ್ಚಿಸಬೇಕು?"

"ಹೋಗಲಿ ಬಿಡಿ! ನಿಮಗೆ ಇಷ್ಟವಿಲ್ಲದಿದ್ದರೆ, ಚರ್ಚೆಬೇಡ. ಯಾಕೆ ವೃಥಾ ನಮ್ಮನಮ್ಮಲ್ಲೇ ಮನಸ್ತಾಪ?"

ಅವನನ್ನು ಸಮಾಧಾನ ಮಾಡಲು ಯತ್ನಿಸಿದೆ.

"ಇದೆಂತಹ ವೈಯಕ್ತಿಕ ವಿಷಯ? ಒಬ್ಬ ಬಾದ್‌ಶಹಾ ತನ್ನ ಹೆಂಡತಿಯ ಮೇಲಿನ ಪ್ರೀತಿಯನ್ನು ಸಾರ್ವಜನಿಕವಾಗಿ ಒಪ್ಪಿಕೊಂಡು, ಅವಳು ಸತ್ತನಂತರ ಅವಳ ಶವವನ್ನು, ಲಕ್ಷಾಂತರ ರೂಪಾಯಿ ಖರ್ಚು ಮಾಡಿ, ಅಮೃತ ಶಿಲೆಯ ಸುಂದರ ಕಟ್ಟಡ ನಿರ್ಮಿಸಿ, ಅದರಡಿ ಹೂಳಿ, ತನಗೆ ಅವಳ ಮೇಲೆ ಪ್ರೀತಿ ಅವಳು ಸತ್ತಮೇಲೂ ಇದೆ ಎಂದು ಪ್ರಪಂಚಕ್ಕೆಲ್ಲಾ ಸಾರಿದನಲ್ಲಾ, ಇದಕ್ಕೇನು ಹೇಳುತ್ತೀಯಾ?"

"ಈಗೇನು? ನಾನೂ ಅದೇ ರೀತಿ ಒಂದು ಮಹಲ್‌ನ್ನು ಕಟ್ಟಿಸಿ, ಅದರಡಿ ನನ್ನ ಹೆಂಡತಿಯ ಶವವನ್ನು ಹೂಳಬೇಕೆಂದು ಹೇಳುತ್ತಿದ್ದೀಯಾ?"

ಕಪೂರ್‌ನ ಮಾತಿನಲ್ಲಿ ವ್ಯಂಗ್ಯದ ಕುರುಹು ಹಣಿಕಿ ನೋಡುತ್ತಿತ್ತು!

"ಅದು ಸಾಧ್ಯವಿಲ್ಲದ ಮಾತು!"

"ಯಾಕೆ?"

"ಶಹಜಹಾನ್‌ನ ಹೆಂಡತಿ ೧೩ ಮಕ್ಕಳನ್ನು ಹೆತ್ತು, ಹದಿನಾಲ್ಕನೆಯ ಮಗುವನ್ನು ಹೆರುವಾಗ ಸತ್ತಳಂತೆ!"

"ಅಂದರೆ, ನನ್ನ ಹೆಂಡತಿ ೧೩ ಮಕ್ಕಳನ್ನು ಹೆತ್ತು ಸತ್ತು, ಆ ಹತ್ತು ಮಕ್ಕಳು ನನ್ನ ಕಿತ್ತು ತಿಂದಾದ ಮೇಲೆ ನನ್ನ ಗೋರಿ ಕಟ್ಟಿ, ಎಲ್ಲರೂ ನನ್ನನ್ನು ಕೊಂಡಾಡ ಬೇಕೆಂದು ಆಸೆಯಾ ನಿನಗೆ?"

ನಗುತ್ತಾ ನುಡಿದ ಮಾತುಗಳಿಗೆ ಹೆಚ್ಚಿನ ಮಹತ್ವಕೊಡದೆ, ನಾವು ಅಲ್ಲಿಂದ ಕಾಲ್ತೆಗೆದೆವು.

ದಿಲ್ಲೀಗೆ ಬಂದು ಅವರವರ ಮನೆಗಳ ದಾರಿ ಹಿಡಿದೆವು. ನಾನು ನನ್ನ ಮನೆಗೆ ಬಂದಾಗ, ಬಾಗಿಲಿನಲ್ಲೇ ಒಬ್ಬ ವ್ಯಕ್ತಿ ನನಗಾಗಿ ಕಾಯುತ್ತಾ ಇದ್ದ.

"ಕಪೂರ್ ನಿಮ್ಮ ಜೊತೆಗೆ ಬರಲಿಲ್ಲವೆ?"

"ನೀವು ಯಾರು?" ಕೇಳಿದೆ.

"ಕಪೂರ್‌ರವರ ತಮ್ಮ. ನನ್ನ ಹೆಸರು ರಾಕೇಶ್!"

ಅವನ ಧ್ವನಿಯಲ್ಲಿ ದುಗುಡವಿತ್ತು.

"ಅವರು ನಿಮ್ಮ ಮನೆಗೆ ಹೋದರಲ್ಲ!"

"ಇನ್ನೂ ಬರಲಿಲ್ಲ. ನಿಮ್ಮಲ್ಲಿಗೆ ಬಂದಿರಬಹುದು ಎಂದು ಇಲ್ಲಿಗೆ ಬಂದೆ" ಎಂದ.

"ಏನು ವಿಷಯ?"

ಅವನ ಕಾತರ ತುಂಬಿದ ಮುಖ ನನಗೆ ಸೋಜಿಗ ತಂದಿತ್ತು.

ನನ್ನ ಮನೆಯ ಪತ್ತೆ ಅವನಿಗೆ ಹೇಗೆ ಸಿಕ್ಕಿತು? ಇಷ್ಟು ದೂರ ಏಕೆ ಬಂದ?

"ನಮ್ಮ ಮನೆ ಗ್ಯಾಸ್ ಸಿಲಿಂಡರ್ ಸಿಡಿದು, ಬೆಂಕಿ ಹತ್ತಿಕೊಂಡಿತು."

ನನ್ನ ತಲೆ ಸಿಡಿಯತೊಡಗಿತು! ಸಿಲೆಂಡರ್ ಒಡೆದು ಹೋಯಿತೆಂದರೆ ಅಪಘಾತವಾಗಿರಬೇಕು!

"ಯಾರಿಗಾದರೂ ಅಪಾಯವಾಗಿದೆಯೆ?"

ನನ್ನ ಮುಖವನ್ನು ಒಂದು ಸಲ ನೋಡಿ, ಮುಖ ಕೆಳಗೆ ಹಾಕಿದ.

"ನನ್ನ ತಾಯಿಗೆ ಬೆಂಕಿ ತಗುಲಿ ಸತ್ತು ಹೋದರು!"

# 7

"ನಾನು ನನ್ನ ಸರ್ವಿಸ್‌ನಲ್ಲೇ ಪೆನ್ ಹಿಡಿದಿರಲಿಲ್ಲ!"

ಕೈಯಲ್ಲಿ ಪೆನ್ ಹಿಡಿದು, ಅದನ್ನು ನನಗೆ ತೋರಿಸುತ್ತಾ ಹೇಳುತ್ತಿದ್ದ ಸಾಹನೀ. ಅವನು ನಮ್ಮ ಶಾಖೆಗೆ ಹೊಸದಾಗಿ ವರ್ಗವಾಗಿ ಬಂದಿದ್ದ. ಒಂದು ಮುಳುಗುತ್ತಿದ್ದ ಪಂಜಾಬೀ ಬ್ಯಾಂಕ್‌ನ್ನು ನಮ್ಮ ಬ್ಯಾಂಕ್‌ನೊಂದಿಗೆ ವಿಲೀನ ಮಾಡಿದ್ದರಿಂದ, ಆ ಬ್ಯಾಂಕಿನ ನೌಕರನಾದ ಈ ಸಾಹನೀಯನ್ನು ನಮ್ಮ ಶಾಖೆಗೆ ವರ್ಗ ಮಾಡಿದ್ದರು. ಈತ ಆ ಬ್ಯಾಂಕಿನ ನೌಕರ ಸಂಘದ ಪ್ರಮುಖ ಹಾಗೂ ಬಲಿಷ್ಠ ನೇತಾ ಆಗಿದ್ದ. ನೌಕರರ ಅಸಹಕಾರ ಚಳುವಳಿ, ಹಗರಣ ಮುಂತಾದ ಹಾವಳಿಗಳಿಂದ ಜರ್ಜಿತವಾದ ನನ್ನ ಶಾಖೆ ಮತ್ತೊಂದು ಹಾವಳಿಯಿಂದ ಘಾಸಿಗೊಂಡಿತ್ತು.

ಗ್ರಾಹಕರಿಂದ ಚೆಕ್ ತೆಗೆದುಕೊಂಡು, ಅವರಿಗೆ ರಸೀದಿ ಹರಿದು ಕೊಡುವ ಕೆಲಸ ನೀಡಿದೆ ಸಾಹನೀಗೆ. ಚೆಕ್ ಸರಿಯಾಗಿದೆಯೇ, ಇಲ್ಲವೇ ಎಂದು ಪರೀಕ್ಷಿಸಿ, ರಸೀದಿಯಲ್ಲಿ ತನ್ನ ಸಹಿ ಹಾಕಿ ನೀಡುವ ಸುಲಭ ಕೆಲಸ ಅವನಿಗೆ ನೀಡಿದ್ದು ಅವನ ಮನಸ್ಸಿಗೆ ಸರಿಬಂದಿರಲಿಲ್ಲ.

"ನಮ್ಮ ಬ್ಯಾಂಕಿನಲ್ಲಿ ನಾನು ಕೆಲಸ ಮಾಡಿದ್ದೇ ಇಲ್ಲ!"

ಅವನ ಕೈಯಲ್ಲಿದ್ದ ಪೆನ್ ನನ್ನ ಕಡೆ ಬೊಟ್ಟು ಮಾಡಿ ತೋರಿಸುತ್ತಿತ್ತು, ಕತ್ತಿಯ ತರಹ. "ಪೆನ್ ಈಸ್ ಮೈಟಿಯರ್ ದ್ಯಾನ್ ಸ್ವೋರ್ಡ್' ಗಾದೆ ಇವನಿಗೆ ಅರಿವಿದೆಯೋ ಇಲ್ಲವೋ? ಪೆನ್ನು ಕತ್ತಿಯ ತರಹ ಕೈಯಲ್ಲಿ ಹಿಡಿದು, ಹೆದರಿಸುತ್ತಾ ಇದ್ದಾನೆ ಬಡವ! ಆದರೆ ಅದನ್ನು ಕತ್ತಿಯ ತರಹ ಉಪಯೋಗಿಸಿದರೆ ನನ್ನ ಗತಿ ಏನು? ಇವ ಬರೀ ಪೇಪರ್ ಟೈಗರ್ ಆದನೆ? ಪಂಜಾಬೀ ಬ್ಯಾಂಕ್‌ನ್ನು ಮುಳುಗಿಸಿದ ಈತ ನಮ್ಮ ಬ್ಯಾಂಕ್‌ನ್ನು ಮುಳುಗಿಸಿಯಾನೆಯೊ? ಬ್ಯಾಂಕ್‌ನ್ನು ಮುಳುಗಿಸದಿದ್ದರೂ ನನ್ನ ಶಾಖೆಯನ್ನು ಮುಳುಗಿಸಲೂ ಬಹುದು! ಪೆನ್ ಹಿಡಿದು ಹೆದರಿಸುತ್ತಿದ್ದ ಈತನ ಕೈಯಿಂದ ಪೆನ್ ತೆಗೆದು ಸುಮ್ಮನೆ ಕುಳ್ಳಿರಿಸಲೇ? ಪೆನ್ ಉಪಯೋಗಿಸಲು ತಿಳಿಯದವ ಒಂದು ವೇಳೆ ಅದನ್ನು ನನ್ನ ಮೇಲೆ ಉಪಯೋಗಿಸಲು ಶುರು ಹಚ್ಚಿದರೆ ಏನು ಮಾಡುವುದು? ಈ ಕುಳ್ಳ ಕಾಶ್ಮೀರೀ ಕಾವೇರಿ ನನ್ನ ಮೇಲೆ ಕೆಂಡ ಕಾರಿದರೆ, ನಾನು ಕಾಶ್ಮೀರಕ್ಕೆ ಹೋಗಬೇಕಾದೀತು ಅಲ್ಲಿನ ತಂಪು ಹವೆಯ ಮೊರೆ ಹೊಕ್ಕು!

"ನೌಕರರ ಮುಖಂಡ ನಾನು. ನನಗೇ ಒಂದು ಪ್ರತ್ಯೇಕ ಕೋಣೆ, ಟೆಲಿಫೋನ್ ನೀಡಿದ್ದರು ಬ್ಯಾಂಕ್ ಮೇನೇಜ್‌ಮೆಂಟ್."

ನಾನು ಅವನ ಮುಖವನ್ನೇ ನೋಡುತ್ತಾ ಕುಳಿತೆ, ಉತ್ತರಿಸಲಿಲ್ಲ.

"ನನ್ನ ಮಾತನ್ನು ಕೇಳದೇ ಯಾವ ಕೆಲಸವೂ ಮಾಡುತ್ತಿರಲಿಲ್ಲ ಬ್ಯಾಂಕ್ ಮೇನೇಜ್‌ಮೆಂಟ್!"

ನನ್ನ ಮೌನಯಜ್ಞ ಸಾಗಿತ್ತು.

"ನನ್ನ ಮಾತೆಂದರೆ ವೇದವಾಕ್ಯ! ನಾನು ಹೇಳಿದ ಹಾಗೆ ಕೇಳುತ್ತಿದ್ದರು ಅವರು! ಅಷ್ಟು ಬಲಿಷ್ಠನಾಗಿದ್ದೆ ನಾನು!"

ಇನ್ನು ತಡೆಯಲಾಗಲಿಲ್ಲ ನನಗೆ!

"ಅದಕ್ಕೇ ನಿಮ್ಮ ಬ್ಯಾಂಕ್ ದಿವಾಳಿಯಾಗಿದ್ದು! ನಿಮ್ಮನ್ನೆಲ್ಲಾ ಬೀದಿ ಪಾಲಾಗಿ ಮಾಡದೆ, ನಮ್ಮ ಬ್ಯಾಂಕಿನೊಂದಿಗೆ ವಿಲೀನ ಮಾಡಿದ್ದು ನಮ್ಮ ತಪ್ಪು!"

ಕುಳ್ಳಗೆ, ಬೆಳ್ಳಗೆ, ತೆಳ್ಳಗೆ ಇದ್ದ ಈ ಸಾಹನೀ ಕಾಶ್ಮೀರೀ ಎಂದು ಹೇಳಿ ಕೊಂಡಿದ್ದ. ಕನ್ನಡಕ ಹಾಕಿಕೊಂಡು, ಒಬ್ಬ ಪ್ರಾಥಮಿಕ ಶಾಲೆಯ ಅಧ್ಯಾಪಕನ ಹಾಗೆ ತೋರುತ್ತಿದ್ದ ಈತ "ಬಲಿಷ್ಠ ನಾಯಕನಾಗಿದ್ದನೆಂದರೆ ನಂಬಲಸಾಧ್ಯವಾಗಿತ್ತು.

"ನಿಮ್ಮ ಮಾತು ಕೇಳಿ ಬ್ಯಾಂಕ್ ದಿವಾಳಿ ಆಯಿತು. ಈಗ ನಿಮ್ಮ ಮಾತು ನಾನು ಕೇಳಿ, ನಮ್ಮ ಬ್ಯಾಂಕ್ ದಿವಾಳಿ ಆಗಬೇಕೇನು?"

ಮಾತಿನಿಂದ ಚುಚ್ಚಿದೆ ಅವನನ್ನು. ಮುಖ ಸಿಂಡರಿಸಿದ. ಮಾತನಾಡದೆ, ಮೌನವಾಗಿ ಹಿಂದಿರುಗಿದ ತನ್ನ ಸ್ಥಾನಕ್ಕೆ!

ಅವನು ಹೋದೊಡನೆ, ಒಳಗೆ ಬಂದು ಗೂಢಾಚಾರ ಸಾಗೂ!

"ಸಾರ್! ಅವನೊಬ್ಬ ಪಟಿಂಗ! ದೊಡ್ಡ ದಾದಾ ಅವನು! ಅವನನ್ನು ಎದುರು ಹಾಕಿಕೊಳ್ಳಬೇಡಿ. ಉಪಾಯದಿಂದ ಅವನನ್ನು ಸಂಭಾಳಿಸಿ. ಆ ಬ್ಯಾಂಕ್ ಹಾಳಾಗಿದ್ದೇ ಇವನಿಂದ ಅಥವಾ ಇವನಂತಹ ಮುಖಂಡರಿಂದ, ಹುಶಾರಾಗಿರಿ!"

ಸಾಗೂ, ಎಲ್ಲಾ ಮುಖಂಡರ ಬಗ್ಗೆ ಇದೇ ರೀತಿ ಉಪದೇಶ ನೀಡುತ್ತಾ ಇದ್ದಾನಲ್ಲಾ! ಇವನೆಂತಹ ಗೂಢಾಚಾರಿ? ಡಬಲ್ ಕ್ರಾಸ್ ಮಾಡುತ್ತಾ ಇದ್ದಾನೆ ಎಂದು ತೋರಿತು.

"ಈ ಚೆಕ್ ತೆಗೆದುಕೊಳ್ಳುವುದಿಲ್ಲ ಎಂದು ಹೇಳುತ್ತಿದ್ದಾರೆ ಸಾರ್. ಹೊಸಬ ಸೂಪರ್‌ವೈಸರ್!"

ಗ್ರಾಹಕನೊಬ್ಬ ನನ್ನ ಬಳಿ ಬಂದು ಚೆಕ್ ಹಿಡಿದು ನಿಂತಿದ್ದ.

"ಯಾಕಂತೆ?" ಕೇಳಿದೆ.

"ಹೆಸರಿನಲ್ಲಿ ವ್ಯತ್ಯಾಸವಿದೆಯಂತೆ."

ಚೆಕ್‌ನಲ್ಲಿ 'ಹೆಚ್.ಕೆ. ಮಲ್‌ಹೋತ್ರಾ' ಎಂದಿತ್ತು.

"ನಿಮ್ಮ ಖಾತೆ ಯಾವ ಹೆಸರಿನಲ್ಲಿದೆ?" ಕೇಳಿದೆ

"ಹರಿಕೃಷ್ಣ ಮಲ್‌ಹೋತ್ರಾ" ಎಂಬ ಹೆಸರಿನಲ್ಲಿದೆ. "ಹೆಚ್.ಕೆ. ಅಂದರೆ ಹರಿಕೃಷ್ಣ ಎಂದು". ವಿವರಿಸಿದ,

ಸಾಹನೀಯನ್ನು ಕರೆಸಿ ಕೇಳಿದೆ. 'ಬ್ಯಾಂಕ್ ನಿಯಮದ ಪ್ರಕಾರ ಹೆಸರಿನಲ್ಲಿ ವ್ಯತ್ಯಾಸವಿದ್ದರೆ ಚೆಕ್ ಕ್ಲಿಯರ್ ಮಾಡುವಂತಿಲ್ಲ' ಎಂದು ಹೇಳಿ ಚೆಕ್ ತೆಗೆದು ಕೊಳ್ಳಲು ನಿರಾಕರಿಸಿದ. ಒಂದು ರಿಸ್ಕ್ ಲೆಟರ್ ತೆಗೆದುಕೊಂಡು, ನಾನೇ ಸಹಿ ಹಾಕಿ, ಚೆಕ್ ತೆಗೆದುಕೊಂಡು, ಗ್ರಾಹಕನಿಗೆ ರಸೀದಿ ನೀಡಿದೆ.

"ಇವನೊಂದು ಹೊಸ ಪೀಡೆ!" ಬೈದ ಸಾಗೂ.

ಹೌದು! ಇದೊಂದು ಹೊಸ ಪೀಡೆ. ಈ ಪೀಡೆಯಿಂದ ಬಿಡುಗಡೆಯಾಗುವುದು ಹೇಗೆ?

ಫೋನ್ ಗಂಟೆ ಬಾರಿಸಿತು. ಕಪೂರ್ ಆ ತುದಿಯಲ್ಲಿದ್ದ. ಸಾಯಂಕಾಲ ಭೇಟಿಯಾಗೋಣವೇ ಎಂದು ಕೇಳಿದ. ಆಗಲಿ ಎಂದು ಹೇಳಿದೆ. ಆ ದಿನದ ಘಟನೆ ಬಗ್ಗೆ ಚಿಂತಿಸತೊಡಗಿದೆ.

ಕಪೂರ್‌ನ ತಾಯಿಯ ಮರಣದ ಸುದ್ದಿ ತಿಳಿದೊಡನೆ ನಾನು ಅವನ ಜೊತೆ ಓಡಿದ್ದೆ, ರಾಮ್‌ಮನೋಹರ್ ಲೋಹಿಯಾ ಆಸ್ಪತ್ರೆಗೆ! ಅಲ್ಲಿ ಕಪೂರ್‌ನ ಕುಟುಂಬದವರ ಸಂತೆ ನೆರೆದಿತ್ತು. ಎಲ್ಲರ ಮುಖದಲ್ಲಿ ದುಃಖದ ನೆರಳಿತ್ತು. ಕಪೂರ್ ವಾರ್ಡ್‌ನ ಒಂದು ಮೂಲೆಯಲ್ಲಿ ನಿಂತಿದ್ದ. ಮುಖ ನಿಸ್ತೇಜವಾಗಿತ್ತು. ಬಿಳೇಮುಖ ಮತ್ತಷ್ಟು ಬಿಳಚಿಕೊಂಡಿತ್ತು. ಮೈಯಲ್ಲಿದ್ದ ರಕ್ತವೆಲ್ಲಾ ಎಲ್ಲಿ ಹೋಗಿ ಅವಿತು ಕೊಂಡಿದೆ ಎಂದು ಯೋಚಿಸುತ್ತಾ, ಅವನ ಬಳಿ ಹೋಗಿ ನಿಂತು, ಅವನ ಕೈ ಹಿಡಿದು, ಹಸ್ತವನ್ನು ಮೆಲ್ಲನೆ, ಬಹು ಮೆಲ್ಲನೆ ಅದುಮಿದೆ.

"ಹೇಗಾಯಿತು?" ಕುತೂಹಲ ತಡೆಯಲಾರದೆ ಕೇಳಿದೆ.

"ಕೆಟ್ಟ ಸಿಲೆಂಡರ್! ಗ್ಯಾಸ್ ಬರುತ್ತಾ ಇರಲಿಲ್ಲವಂತೆ. ಮೆಕಾನಿಕ್‌ನ್ನು ಕರೆಸಿದರು. ಅವ ಬಂದು ರಿಪೇರಿ ಮಾಡುತ್ತಾ ಇದ್ದ. ಇನ್ನೊಂದು ರೂಮಿನಲ್ಲಿ ತಂದೆಗೆ ಚಾ ಮಾಡಿಕೊಡಲೆಂದು, ಸೀಮೇಎಣ್ಣೆ ಸ್ಟೋವ್ ಹಚ್ಚಿಸಿದರು. ಅಷ್ಟೇ ಗೊತ್ತು ಅವರಿಗೆ! ಬೆಂಕಿ ಹತ್ತಿ ಉರಿಯಿತು. ತಂದೆ ಓಡಿ ಬಂದರು. ತಾಯಿಯನ್ನು ಉಳಿಸಲಿಕ್ಕೆ ನೋಡಿದರು. ಅವರಿಗೂ ಬೆಂಕಿ ಹತ್ತಿತು. ಮೆಕಾನಿಕ್ ಬೆಂಕಿ ಉಂಡೆ ಯಾಗಿದ್ದ. ಜನ ಸೇರಿದರು. ಆಸ್ಪತ್ರೆಗೆ ಸೇರಿಸಿದರು. ತಾಯಿ ಸತ್ತಾಗಿತ್ತು. ತಂದೆ ಪಾರಾಗಿದ್ದಾರೆ. ಆದರೆ ಅವರು ಉಳಿದರೂ ಸತ್ತಂತೆ!"

ಅವನ ಧ್ವನಿ ಕ್ಷೀಣವಾಗಿತ್ತು. ದುರಂತದ ಪೆಟ್ಟು ಬಲವಾಗಿತ್ತು.

"ಮನೆಯಲ್ಲಿ ಬೇರೆ ಯಾರೂ ಇರಲಿಲ್ಲವೆ?"

"ಇಲ್ಲ! ನನ್ನ ತಮ್ಮ ಮತ್ತು ಅವನ ಹೆಂಡತಿ ಬೇರೆ ಮನೆ ಮಾಡಿಕೊಂಡು ಅಲ್ಲೇ ವಾಸ ಅವರದ್ದು."

ಅಣ್ಣ-ತಮ್ಮ ಬೇರೆ ಇರುವ ವಿಷಯ ನನಗೆ ತಿಳಿದಿರಲಿಲ್ಲ.

ತಮ್ಮ ಡ್ರಗ್ ಇನ್ಸ್‌ಪೆಕ್ಟರ್ ಆಗಿ ನೌಕರೀ ಮಾಡುತ್ತಿದ್ದ. ಬಹಳ ನಿಷ್ಠಾವಂತ ಎಂದು ಹೆಸರು ಗಳಿಸಿದ್ದನಂತೆ.

"ನಿನ್ನ ಹೆಂಡತಿ ಮನೆಯಲ್ಲಿರಲಿಲ್ಲವೇ?"

ನನ್ನ ಪ್ರಶ್ನೆ ಅವನಿಗೆ ಅಚ್ಚರಿ ತಂದಿರಬೇಕು. ಕ್ಷಣ ನನ್ನನ್ನೇ ನೋಡಿ ನುಡಿದ:

"ಮನೆಯಲ್ಲೂ ಇಲ್ಲ, ಮನದಲ್ಲೂ ಇಲ್ಲ!"

ನಾನು ಮಾತು ಮುಂದುವರೆಸಲಿಲ್ಲ.

"ಸಾರ್! ನನಗೆ ಸ್ವಲ್ಪ ಐಸ್ ಬೇಕು."

ಸಾಗೂ ನನ್ನ ಮುಂದೆ ನಿಂತು, ನನ್ನ ಯೋಚನೆಗಳಿಗೆ ತಣ್ಣೀರು ಎರಚಿದ್ದ.

"ಐಸ್?"

"ಹೌದು! ಐಸ್! ಬರ್ಫ್!"

ತಣ್ಣಗಿರುವ ಹಿಮದ ತುಂಡು- ಬರ್ಫ್. ಇವನಿಗೆ ಎಲ್ಲಿಂದ ತಂದು ಕೊಡುವುದು? ಐಸ್ ಆದರೂ ಏಕೆ ಬೇಕು?

"ಐಸ್ ವಾಟ್‌ರ್ ಕೂಲರ್ ಕೆಟ್ಟು ಹೋಗಿದೆ. ತಣ್ಣೀರು ಸಿಗುತ್ತಾ ಇಲ್ಲ. ಮಾರ್ಕೆಟಿಂದ ಐಸ್ ತರಿಸಿ ಕೊಡಿ. ನೀರಿಗೆ ಹಾಕಿ ಕುಡಿಯಬೇಕು."

"ನಿಮ್ಮ ಮನೆಯಲ್ಲಿ ರೆಫ್ರಿಜರೇಟರ್ ಇದೆಯಾ?" ಕೇಳಿದೆ ನಾನು.

"ಇಲ್ಲ!" ಎಂದ ಸಂಶಯದ ಧ್ವನಿಯಲ್ಲಿ.

"ಮನೆಯಲ್ಲಿ ಕುಡಿಯಲಿಕ್ಕೆ ಐಸ್-ವಾಟರ್ ಇಲ್ಲ! ಆಫೀಸ್‌ನಲ್ಲಿ ಮಾತ್ರ ನಿನಗೆ ಐಸ್-ವಾಟರ್ ಬೇಕು! ಅಲ್ಲವಾ?" ಕಾರವಾಗಿ ಕೇಳಿದೆ.

"ಮನೆಯಲ್ಲಿ ಐಸ್‌ವಾಟರ್‌ನ ಅವಶ್ಯಕತೆ ಇಲ್ಲ. ಇಲ್ಲಿ ಇದೆ" ಎಂದು ತುಂಟ ನಗುನಗುತ್ತಾ.

"ಹೇಗೆ?"

"ಮನೆಯಲ್ಲಿ ಆಫೀಸ್ ಕೆಲಸ ಮಾಡೋದಿಲ್ಲ. ಅಂದರೆ ತಲೆ ಬಿಸಿ ಇರೋದಿಲ್ಲ. ಆಫೀಸ್‌ನಲ್ಲಿ ತಲೆ ಬಿಸಿ ಜಾಸ್ತಿ. ಅಂದರೆ ಐಸ್-ವಾಟರ್ ಕುಡಿದರೆ, ಮೈಮನಸ್ಸು ಸ್ವಲ್ಪ ತಣ್ಣಗಾಗುತ್ತೆ ಅಲ್ಲವೆ?"

ಥೂ! ನಿನ್ನ ಮನೆ ಹಾಳಾಗ! ಎಂದು ಮನದಲ್ಲೇ ಹಿಡಿ ಶಾಪ ಹಾಕಿ ಐಸ್ ತರಿಸಲಿಕ್ಕೆ ಜವಾನನನ್ನು ಕಳುಹಿಸಿದೆ.

ಈ ಸಾಗೂ ಹೇಳಿದ ಹಾಗೆ ಯಾಕೆ ಮುಖಂಡರನ್ನು ಕರಿಸಿ, ಮಾತನಾಡಬಾರದು? ಆಫೀಸಿನ ಬಿಕ್ಕಟ್ಟು ಪರಿಸ್ಥಿತಿಯನ್ನು, ಮಾತನಾಡಿ, ಸಂಧಾನ ನಡೆಸಿ, ಬಗೆಹರಿಸಿಕೊಳ್ಳಬಾರದು? ಈ ಶೀತಲ ಯುದ್ಧವನ್ನು ಯಾಕೆ ಕೊನೆಗೊಳಿಸಬಾರದು? ಮಾತುಕತೆಯಿಂದ ಎಂತಹ ಜಟಿಲ ಸಮಸ್ಯೆಗಳನ್ನು ಬಿಡಿಸಿಕೊಂಡಿರುವಾಗ ಒಂದು ಸಾಮಾನ್ಯ ಸಮಸ್ಯೆಯನ್ನು ಯಾಕೆ ಬಗೆಹರಿಸಿಕೊಳ್ಳಲು ಪ್ರಯತ್ನಪಡಬಾರದು?

ಸಾಯಂಕಾಲ ಇಬ್ಬರು ಮುಖಂಡರನ್ನು ಬರ ಹೇಳಿದೆ. ಇಬ್ಬರನ್ನೂ ಔದಾರ್ಯದಿಂದ ಬರಮಾಡಿಕೊಂಡು, ಕುಳ್ಳಿರಿಸಿದೆ. ಚಾ-ಬಿಸ್ಕತ್ತು ತರಿಸಿ ಉಪಚರಿಸಿದೆ. ನಾನೇ ಮಾತಿಗೆ ಮೊದಲು ಮಾಡಿದೆ.

"ನಮ್ಮ ಶಾಖೆಯ ಪರಿಸ್ಥಿತಿ ಬಗ್ಗೆ ನಿಮಗೆ ಅರಿವಿದೆಯಲ್ಲವೆ?"

ಇಬ್ಬರೂ ಮೌನದಿಂದಿದ್ದರು.

"ನಿಮ್ಮ ಅಸಹಕಾರ ಚಳುವಳಿಯಿಂದ, ಶಾಖೆಯ ವ್ಯವಹಾರ ಹದಗೆಟ್ಟು ಹೋಗಿದೆ. ಡಿಪಾಸಿಟ್ ಹಾರಿಹೋಗುತ್ತಾ ಇದೆ. ಡಿಪಾಸಿಟ್‌ನ ಜೊತಗೆ ಗ್ರಾಹಕರೂ ಓಡಿ ಹೋಗುತ್ತಿದ್ದಾರೆ!"

ಯಾವ ಪ್ರತಿಕ್ರಿಯೆಯೂ ಅವರಿಂದ ಬರಲಿಲ್ಲ.

"ಶಾಖೆಯ ವ್ಯಾಪಾರ ಕುಸಿದರೆ, ಶಾಖೆ ಮುಚ್ಚುವ ಸಂಭವ ಹೆಚ್ಚು. ನನಗೆ ಈಗಾಗಲೇ ಮೇಲಧಿಕಾರಿಗಳು ನೋಟೀಸ್ ಕೊಟ್ಟಿದ್ದಾರೆ!"

ಇಬ್ಬರೂ ಒಬ್ಬರ ಮುಖ ಒಬ್ಬರು ನೋಡಿಕೊಂಡರು.

"ಶಾಖೆ ಮುಚ್ಚುತ್ತೇನೆ ಎಂದು ಹೆದರಿಸುತ್ತೀರಾ?"

"ನಾನು ಹೆದರಿಸುತ್ತಾ ಇಲ್ಲ! ಮೇಲಧಿಕಾರಿಗಳು ಹೇಳಿದ್ದು ಹೇಳುತ್ತಾ ಇದ್ದೇನೆ. ಮುಚ್ಚಿದರೆ ಯಾರಿಗೇನು ನಷ್ಟವಿಲ್ಲ. ಕೆಲಸ ಕಳೆದುಕೊಳ್ಳುವುದಿಲ್ಲ. ಆದರೆ, ಇಲ್ಲಿಂದ ವರ್ಗ ಮಾಡಿಬಿಡುತ್ತಾರೆ. ಎಲ್ಲಿಗೆ, ಯಾವ ಊರಿಗೆ ಅಂತ ನಮಗೆ ಗೊತ್ತಿಲ್ಲ!"

ವರ್ಗ ಎಂದ ಕೂಡಲೇ, ಇಬ್ಬರ ಮುಖದಲ್ಲಿ ಕಳವಳ, ಶಂಖೆಯ ಗೆರೆಗಳು ಕಾಣಿಸಿಕೊಂಡಿತು. ಆದರೆ, ಅವರಿಂದ ಯಾವ ಪ್ರತಿಕ್ರಿಯೆಯೂ ಹೊರಬರಲಿಲ್ಲ. ನಾನು ಮುಂದುವರೆಸಿದೆ.

"ನಮಗೆ ಸಂಬಳ ಯಾಕೆ ಕೊಡುತ್ತಾರೆ ಎಂಬುದು ತಿಳಿದಿದೆಯಲ್ಲವೆ? ಕೆಲಸ ಮಾಡಿದರೆ ಸಂಬಳ. ಇಲ್ಲದೇ ಹೋದರೆ ಇಲ್ಲ, ಅಲ್ಲವೆ?"

ಕಲ್ಲಾಗಿ ಕುಳಿತಿದ್ದರು ಅವರು! ನನಗೆ ಕೊಂಚ ಗಾಬರಿಯಾಗತೊಡಗಿತ್ತು.

ಅದುಮಿಟ್ಟ ಬಾಂಬ್ ಯಾವಾಗ ಸಿಡಿಯುತ್ತದೆಯೋ? ಸಿಡಿದು ನನ್ನನ್ನು ಆಹುತಿ ತೆಗೆದುಕೊಂಡರೆ?

"ಇಲ್ಲಿಂದ ಕನ್ನಾಟ್ ಸರ್ಕಸ್‌ಗೆ ಹೋಗಬೇಕಾದರೆ, ಸೈಕಲ್‌ರಿಕ್ಷಾದಲ್ಲಿ ಹೋಗ ಬೇಕು. ಬಸ್‌ಗಳಿಲ್ಲ. ಗೊತ್ತಿದೆಯಲ್ಲಾ ನಿಮಗೆ? ಸೈಕಲ್ ರಿಕ್ಷಾದವನು ಕೇವಲ ಒಂದು ರೂಪಾಯಿ ಬಾಡಿಗೆ ತೆಗೆದುಕೊಳ್ಳುತ್ತಾನೆ. ಒಂದು ರೂಪಾಯಿ ಸಂಪಾದಿಸುವುದಕ್ಕೆ ಬಿಸಿಲಿನಲ್ಲಿ ರಿಕ್ಷಾ ತುಳಿದು, ಬೆವರು ಸುರಿಸಿ, ಕಷ್ಟಪಡುತ್ತಾನೆ. ಸುಡುಬಿಸಿಲಿನಲ್ಲಿ ಅವನಿಗೆ ಯಾರೂ ಫ್ಯಾನ್ ಗಾಳೀ ಹಾಕುವುದಿಲ್ಲ, ಬರ್ಫ,ತಣ್ಣೀರು ಕೊಡುವುದಿಲ್ಲ!"

ನನ್ನ ಭಾಷಣ ಅವರ ಮೇಲೆ ಯಾವ ಪ್ರತಿಕ್ರಿಯೆಯೂ ಉಂಟಾಗಲಿಲ್ಲ, ಅಥವಾ ಉಂಟಾಗಿದ್ದರೂ, ಅದು ಅವರಲ್ಲೇ ಹುದುಗಿ ಅಡಗಿ, ಹೊರಬರಲು ಹೊಂಚಿಹಾಕಿದ್ದಿರಬಹುದು.

ಮಾತುಕತೆಯಾಡಿ, ಬಿಕ್ಕಟ್ಟು ಬಗೆಹರಿಸಿಕೊಳ್ಳೋಣವೆಂದರೆ, ನನ್ನದೊಬ್ಬನದೇ ಒಂಟಿ ರೋಧನವಾಯಿತಲ್ಲಾ! ಇವರ ನಾಲಿಗೆ ಸತ್ತು ಹೋಯಿತೆ? ಗರಬಡಿದವರ ತರಹ ಕುಳಿತುಬಿಟ್ಟಿದ್ದಾರಲ್ಲಾ! ಇವರ ಬಾಯಿ ಬಿಡಿಸುವುದಾದರೂ ಹೇಗೆ?

"ಬಜಾರ್‌ನಲ್ಲಿ ಅಂಗಡಿಗಳ ಮುಂದೆ, ಗುಡಿಗಳ ಮುಂದೆ ಗುರುದ್ವಾರ ಮಸೀದಿಗಳ ಮುಂದೆ ಭಿಕ್ಷುಕರು ಬೇಡುವುದನ್ನು ನೋಡಿದ್ದೀರಾ?"

'ಹೌದು' ಮತ್ತು 'ಇಲ್ಲ' ಎನ್ನುವ ಸೌಜನ್ಯ ತೋರಿಸಲಿಲ್ಲ ಇಬ್ಬರೂ.

ಅವರ ಕಣ್ಣುಗಳ ತೀಕ್ಷ್ಣತೆ ಮಾತ್ರ ಹೆಚ್ಚುತ್ತಾ ಹೋಗಿತ್ತು ನನ್ನ ಮಾತುಗಳು ಮುಂದುವರೆದ ಹಾಗೆ.

"ಭಿಕ್ಷುಕರು ಕೆಲಸ ಮಾಡುವುದಿಲ್ಲ! ಬೇಡುತ್ತಾರೆ. ಕೆಲಸ ಮಾಡದೆ ದಿನಂಪ್ರತೀ ಬೇಡಿ ಜೀವನ ಕಳೆಯುತ್ತಾರೆ. ಅಲ್ಲವೇ?"

ಮಾರುತ್ತರವಿಲ್ಲ!

"ಕೆಲಸ ಮಾಡದೆ ಸಂಬಳ ತೆಗೆದುಕೊಳ್ಳುವವರನ್ನು ಏನೆಂದು ಕರೆಯ ಬಹುದು?"

ಮೌನ ಕೆಲಸ ಮಾಡುತ್ತಾ ಇತ್ತು.

"ಅಂತಹವರನ್ನು ಭಿಕ್ಷುಕರೆಂದು ಕರೆಯಬಹುದು ಅಲ್ಲವೆ? ಕೆಲಸ ಮಾಡದೇ ತಿಂಗಳ ಸಂಬಳ ತೆಗೆದುಕೊಳ್ಳುವವರಿಗೂ, ಭಿಕ್ಷೆ ಬೇಡಿ ಹಣ ಸಂಪಾದಿಸುವವರಿಗೂ ಏನು ವ್ಯತ್ಯಾಸ?"

ಅವರ ಕಣ್ಣುಗಳು ಕೆಂಡ ಕಾರುತ್ತಿದ್ದವು! ಅವರ ತೀವ್ರ ಪ್ರತಿಕ್ರಿಯೆಗಾಗಿ ಕಾದು ಕುಳಿತೆ. ಪ್ರತಿಕ್ರಿಯೆ ಬರಲಿಲ್ಲ.

"ಇಬ್ಬರಲ್ಲೂ ಯಾವ ವ್ಯತ್ಯಾಸವ್ವೂ ಇಲ್ಲ!"

ಮಾತು ಮುಗಿಸಿ, ಕುರ್ಚಿ ಒರಗಿ ಕುಳಿತೆ. ಅವರ ಪ್ರತಿಕ್ರಿಯೆಗಾಗಿ ಕಾದೆ.

ಇಬ್ಬರೂ ನಿಧಾನವಾಗಿ ಎದ್ದು, ಬಾಗಿಲು ತೆರೆದು ಹೊರಗೆ ಹೋದರು. ಮಾತಿಲ್ಲ, ಕತೆಯಿಲ್ಲ!

ಮಾರನೆಯ ಬೆಳಿಗ್ಗೆ ಆಫೀಸ್‌ಗೆ ಬಂದಾಗ, ಇಡೀ ಶಾಖೆಯ ಸಿಬ್ಬಂದಿ ನನ್ನ ಕ್ಯಾಬಿನ್ ಬಳಿ ನಿಂತಿದ್ದರು. ಕುರ್ಚಿಯಲ್ಲಿ ನಾನು ಕುಳಿತೊಡನೆ, ಮುಖಂಡರಿಬ್ಬರು ಬಳಿಗೆ ಬಂದು ನನಗೆ ಒಂದು ಉದ್ದ ಹಾಳೆಯನ್ನು ಕೈಗೆ ಇತ್ತರು. ಅದರಲ್ಲಿ "ಮೇನೇಜರ್ ಸಾಹೇಬರು ನಮ್ಮನ್ನು ಭಿಕ್ಷುಕರು, ರಿಕ್ಷಾಚಾಲಕರು, ನಾಲಾಯಕರು ಎಂದು ಹೀಯಾಳಿಸಿ ಅವಮಾನಿಸಿದ್ದಾರೆ! ಅವರ ಮೇಲೆ ಶಿಸ್ತಿನ ಕ್ರಮವನ್ನು ಜರುಗಿಸ ಬೇಕಾಗಿ ಕೋರುತ್ತೇವೆ!" ಎಂದು ಬರೆದು, ಎಲ್ಲಾ ನೌಕರರು ಸಹಿ ಹಾಕಿದ್ದರು. ಅದರಲ್ಲಿ ಗೂಢಚಾರ ಸಾಗೂವಿನ ಸಹಿಯೂ ಇತ್ತು!

ನಾನೊಂದು ಎಣಿಸಿದ್ದರೆ, ದೈವವೊಂದು ಎಣಿಸಿತ್ತು!

ಸಂಧಾನ ಮಾತುಕತೆಗಳಿಂದ ಬಿಕ್ಕಟ್ಟು ಬಗೆಹರಿಸಿಕೊಳ್ಳೋಣವೆಂದರೆ, ಬಿಕ್ಕಟ್ಟು ಇನ್ನಷ್ಟು ಬಿಗಡಾಯಿಸಿತಲ್ಲಾ! ಅದುಮಿಟ್ಟ ಬಾಂಬ್ ಸಿಡಿಸಿಬಿಟ್ಟರಲ್ಲಾ ಈ ಚಂಡಾಲ ಮುಖಂಡರು! ನಾನೊಬ್ಬನೇ ಮಾತನಾಡಿ, ಅವರಿಗೆ ನನ್ನ ಮನಸ್ಸಿನ ಲ್ಲಿದ್ದದನ್ನು ಒದರಿಧುದರ ಫಲ, ನನ್ನ ಮೇಲೆ ಕಂಪ್ಲೇಂಟ್! ಇದೆಂತಹ ವಿಪರ್ಯಾಸ! ಈ ಸಾಗೂವಿನ ಮಾತು ಕೇಳಿ ನಾನು ಕೆಟ್ಟೆನಲ್ಲಾ!

"ಮುರ್ದಾಬಾದ್! ಮುರ್ದಾಬಾದ್!

ಮೇನೇಜರ್ ಮುರ್ದಾಬಾದ್!

ಡೌನ್ ವಿತ್ ಮೇನೇಜರ್!

ತಾನಾ ಶಾಹೀ ನಹೀ ಚಲೇಗಾ!

ನಹೀ ಚಲೇಗಾ!

ಸಿಬ್ಬಂದಿಗಳ ಒಕ್ಕರಿಲಿನ ಬೊಬ್ಬೆ ನನ್ನ ಕಿವಿಗೆ ಬಿತ್ತು. ಬೊಬ್ಬೆ ಬರಸಿಡಿಲಿನಂತೆ ನನಗೆ ಬಡಿದಿತ್ತು! ಕಾರಕೂನನಾಗಿದ್ದಾಗ, ಇದೇ ಘೋಷಣೆಗಳನ್ನು ನಾನೇ ಕೂಗಿದ್ದೆ. ಮೇನೇಜ್‌ಮೆಂಟ್ ವಿರುದ್ಧ! ಈಗ ನನ್ನ ವಿರುದ್ಧ ಘೋಷಣೆಗಳನ್ನು ಕೇಳತೊಡಗಿದ್ದೆ! ವಿಧಿಯ ಆಟ!

"ಮುರ್ದಾಬಾದ್ ಮುರ್ದಾಬಾದ್!"

ಕೂಗು ಹಾಕುತ್ತಿದ್ದ ಸಾಗೂವಿನ ಮುಖ ನೋಡಿದೆ. ಐವತ್ತು ರೂಪಾಯಿ ಸಾಲ ತೆಗೆದುಕೊಂಡು, ವಾಪಸ್ಸು ಕೊಡದೆ, ನನ್ನ ಗೂಢಾಚಾರಿ ನನ್ನ ವಿರುದ್ಧ

ಘೋಷಣೆ ಕೂಗುತ್ತಿದ್ದಾನಲ್ಲಾ! ಚಾಟಿ ಏಟು ಹೊಡೆದು, ನೇಣು ಹಾಕಬೇಕು ಅವನಿಗೆ ಅನ್ನಿಸಿತು.

ಹತ್ತು ನಿಮಿಷ ಕೂಗಿದ ಮೇಲೆ, ತಮ್ಮ ತಮ್ಮ ಸ್ಥಳಕ್ಕೆ ಹೋಗಿ ಕೂತರು ನೌಕರರು. ಸಾಹನೀ ನನ್ನ ಮುಖವನ್ನೇ ದಿಟ್ಟಿಸಿ ನೋಡುತ್ತಾ, ತನ್ನ ಕೈಲಿದ್ದ ಪೆನ್ನನ್ನು ಗನ್ನನ್ನೂ ಹಿಡಿದ ಹಾಗೆ ಹಿಡಿದುಕೊಂಡು ಶಿಸ್ತಿನ ಸಿಪಾಯಿತರಹ ಕಾಲು ಹಾಕಿ ತನ್ನ ಕುರ್ಚಿಯ ಕಡೆ ಜರ್ಬಾಗಿ ನಡೆಯುತ್ತಿದ್ದ! ಕಶ್ಮೀರೀ ಸೆಹನೀ ತನ್ನ ಪೆನ್ನನ್ನು ಉಪಯೋಗಿಸಿದ್ದ!

ನನ್ನ ಪ್ರತಿಕ್ರಿಯೆ ಒಕ್ಕಣೆಯೊಂದಿಗೆ, ನೌಕರರ ಮನವಿ ಪತ್ರವನ್ನು, ಪ್ರಧಾನ ಕಛೇರಿಗೆ ಕಳುಹಿಸಿದೆ.

ಮಾರನೆಯ ದಿನವೇ ಕರೆ ಬಂತು, ಡೀ.ಎಮ್‌ನಿಂದ. ಈ ಡೀ.ಎಮ್. ಚೇರ್ ಮನ್‌ರವರ ಸಹೋದರ. ಅಂದಮೇಲೆ ಅವನ ಅಧಿಕಾರ ಅಪಾರ ಅಪರಿಮಿತ. ಬಾದಶಹಾನ ಬಲಗೈ ಬಂಟ, ಹಿತೈಷಿ, ಗೂಢಾಚಾರ, ಮೇಲಾಗಿ ರಕ್ತಸಂಬಂಧಿ! ಕೇಳಬೇಕೆ ಅವನ ಆಡಳಿತದ ವೈಖರಿ! ಅಧಿಕಾರಿಗಳೆಲ್ಲರೂ ಹೆದರಿ ಹೆದರಿ ನೀರಾಗಿದ್ದರು.

"ಏನ್ರೀ ಇದು? ನಿಮ್ಮ ಮೇಲೆ ಕಂಪ್ಲೇಂಟ್ ಬಂದಿದೆಯಲ್ಲಾ?"

ಗುಡುಗಿದ ಅವನು.

ಇದ್ದಬದ್ದ ಧೈರ್ಯವನ್ನೆಲ್ಲಾ ಉಪಯೋಗಿಸಿದೆ.

"ನಾನೇ ಅದನ್ನು ನಿಮಗೆ ಕಳುಹಿಸಿದ್ದೆ!"

ನನ್ನ ಮುಖ ನೋಡಿದ. ಸುಮಾರು ೫೦ ವರ್ಷದ ವಯಸ್ಸಿನ ಅವರ ಮುಖದಲ್ಲಿ ಆಗಲೇ ಮುದಿಕಳೆ ಬಂದಿತ್ತು. ಸಿಗರೇಟ್ ಸೇದಿ ಸೇದಿ ತುಟಿ ಕಪ್ಪಾಗಿದ್ದವು. ಕುಡಿದು ಕುಡಿದು ಅವನ ಕಣ್ಣುಗಳು ಕೆಂಪೇರಿದ್ದವು. ಕುಡಿಯದೇ ನಿದ್ರೆಯೇ ಬರುವುದಿಲ್ಲವೆಂದು ಎಲ್ಲರಿಗೂ ಹೇಳುವ ಅಭ್ಯಾಸ, ಕುಡಿಯುವ ಅಭ್ಯಾಸವಷ್ಟೇ ಇತ್ತು.

"ಯಾಕ್ರೀ ನೌಕರರ ಹತ್ತಿರ ದ್ವೇಷ ಕಟ್ಟಿಕೊಳ್ಳುತ್ತೀರಾ? ಅವರ ಬಳಿ ಕ್ಯಾಷುವಲ್ ಆಗಿ ನಡೆದುಕೊಳ್ಳಲಿಕ್ಕೆ ಆಗೋದಿಲ್ವಾ?"

ನಾನು ಮೌನಿಯಾಗಿದ್ದೆ.

"ಇರೋ ವಿಷಯ ಇದ್ದ ಹಾಗೆ ಯಾಕೆ ಹೇಳ್ಬೇಕ್ರೀ?"

ಮಾತನಾಡದೇ ಸುಮ್ಮನಿದ್ದೆ. ನೋಡೋಣ ಎಲ್ಲಿಯವರೆಗೆ ಇವನ ಉಪದೇಶ ಸಾಗುತ್ತದೆ ಎಂದು ಕಾದೆ. ಕೊನೇ ಮಾತು ನನ್ನದೇ ಇರಲಿ ಎಂದು ಕಾದೆ.

"ಇದ್ದ ವಿಷಯ ಇದ್ದ ಹಾಗೇ ಹೇಳಿದರೆ ಎದರು ಬಂದು ಗುದ್ದಿದರು ಎಂಬ ಗಾದೆ ಹಾಗೆ ಯಾಕ್ರೀ ಮೈಮೇಲೆ ಗುದ್ದಿಸಿಕೊಳ್ಳುತ್ತೀರಾ? ನಾನು ನೋಡ್ರೀ ಇಲ್ಲವೇನ್ರೀ! ಎದುರು ಚೆನ್ನಾಗಿ ನಗುನಗುತ್ತಾ ಮಾತನಾಡಿ, ಹಿಂದಿನಿಂದ ಬೆನ್ನಿಗೆ ಬಾಕು ಹಾಕುತ್ತೇನೆ!"

ಒಮ್ಮೆಲೆ ತಲೆಯ ಮೇಲೆ ಬಂಡೆಯೊಂದು ಬಿದ್ದ ಹಾಗೆ ಆಯಿತು!

ಬೆನ್ನಿಗೆ ಬಾಕು ಹಾಕುವುದು! ಎದುರಿಗೆ ಚೆನ್ನಾಗಿ ಮಾತನಾಡಿ, ಹಿಂದಿನಿಂದ ಬಾಕು ಹಾಕುವುದು! ಎಂತಹ ನೀಚ ಬುದ್ಧಿ! ಬ್ಯಾಂಕ್‌ನ ಹಿರಿಯ ಅಧಿಕಾರಿಯಾಗಿದ್ದು, ವಯಸ್ಸಿನಲ್ಲಿ ಹಿರಿಯನಾಗಿದ್ದು, ಸಮಾಜದಲ್ಲಿ ಗಣ್ಯವ್ಯಕ್ತಿ ಎನಿಸಿಕೊಂಡು, ಒಳ್ಳೇ ಧಾರ್ಮಿಕ ವ್ಯಕ್ತಿ ಎನ್ನಿಸಿಕೊಂಡು, ನೀಚ ಬುದ್ಧಿ ಹೊಂದಿರುವ ಈ ಗೋಮುಖ ವ್ಯಾಘ್ರನನ್ನು ಕಂಡು ನನ್ನ ಮನಸ್ಸು ರೋಸಿ ಹೋಯಿತು. ಇವನೆಂತಹ ಅಧಿಕಾರಿ?

"ಏನು ಯೋಚಿಸುತ್ತಾ ನಿಂತಿದ್ದೀರಿ? ಹೋಗ್ರೀ? ಹುಡುಗರನ್ನು ಸರಿಯಾಗಿ ಸಂಭಾಳಿಸಿ! ಅವರನ್ನು ಎದುರು ಹಾಕಿಕೊಳ್ಳಬೇಡ್ರೀ!"

ಸಪ್ಪೆ ಮುಖ ಮಾಡಿಕೊಂಡು, ಬ್ಯಾಂಕಿಗೆ ವಾಪಸ್ಸಾದೆ. ತಲೆ ಚಿಂತೆಯ ಗೂಡಾಗಿತ್ತು. ಕುರ್ಚಿಯಲ್ಲಿ ಕುಳಿತು ಯೋಚನಾಕ್ರಾಂತನಾದೆ.

"ಹುಡುಗರನ್ನು ಎದುರು ಹಾಕಿಕೊಳ್ಳಬೇಡ್ರೀ! ಎದುರಿಗೆ ಚೆನ್ನಾಗಿ ಮಾತನಾಡ್ರೀ! ಬೆನ್ನಿಗೆ ಬಾಕು ಹಾಕಿ."

ಅವನ ಮಾತುಗಳು ಬಾಕುವಂತೆ ನನ್ನನ್ನು ಇರಿದುವು.

"ಏನು ಯೋಚನೆ ಮಾಡುತ್ತಾ ಇದ್ದೀರಿ ಸಾರ್?"

ಸಾಗೂ ನನ್ನ ಮುಂದೆ ನಿಂತು ಪ್ರಶ್ನೆ ಕೇಳಿದ.

"ಏನೂ ಇಲ್ಲ!"

ಅವನಿಗೆ ವಿಷಯ ತಿಳಿಸುವ ಧೈರ್ಯ ಮಾಡಲಿಲ್ಲ.

"ಕೆಟ್ಟ ಹವಾ. ಬಿಸೀ ಹವಾ ನನ್ನ ಮೈ ಮನಸ್ಸು ಎರಡನ್ನು ಚುಚ್ಚಿ ಪ್ರಾಣ ತೆಗೆಯುತ್ತಾ ಇದೆ!"

"ಇಂದು ಬಿಸಿಲು ಜಾಸ್ತಿ. ಹವಾ ಕೆಟ್ಟಿದೆ. ಫ್ಯಾನ್ ಕೆಳಗೆ ಕುಳಿತರೂ ಮೈಯೆಲ್ಲಾ ಬೆವತು ಬೆಂಡಾಗಿ ಹೋಯಿತು."

ನನ್ನ ಮಾತಿಗೆ ಬೆಂಬಲ ನೀಡಿದ ಸಾಗೂ.

"ಬೆನ್ನಿಗೆ ಚುಚ್ಚುತ್ತಿದ್ದ ಬಾಕುವಿನ ಹಾಗೆ ಈ ಕೆಟ್ಟ ಬಿಸೀ ಹವಾ!"

"ಬೆನ್ನಿಗೆ ಮಾತ್ರ ಚುಚ್ಚುತ್ತಿತ್ತಾ ಸಾರ್?"

ಅಚ್ಚರಿಯಿಂದ ಕಣ್ಣು ಕಿರಿದು ಮಾಡಿ ಕೇಳಿದ ಸಾಗೂ.

"ಹೌದು! ದಿಲ್ಲೀಯ ಬಿಸಿ ಹವಾ ಬೆನ್ನಿಗೆ ಇರಿಯುತ್ತದೆ, ಬಾಕು ಇರಿದ ಹಾಗೆ!"

ಪೆಚ್ಚು ಪೆಚ್ಚಾಗಿ ನಕ್ಕ ಸಾಗು, ನನ್ನ ಮಾತು ಕೇಳಿ.

"ಸಾರ್! ನೂರು ರೂಪಾಯಿ ಸಾಲ ಕೊಡುತ್ತೀರಾ?"

"ಹಿಂದೆ ಕೊಟ್ಟ ಸಾಲ ವಾಪಸ್ಸು ಕೊಡಲಿಲ್ಲ. ಈಗ ಮತ್ತೆ ಸಾಲ ಕೇಳುತ್ತೀಯಲ್ಲ!" ಆಕ್ಷೇಪಿಸಿದೆ.

"ವಾಪಸ್ಸು ಕೊಡಲಿಲ್ಲ ಅಂತ, ಪುನಃ ಸಾಲ ಕೇಳಬಾರದೇ?"

"ಸಾಲಕ್ಕೆ ಕಾರಣ?"

"ಸಾಲ ತೀರಿಸುವುದಕ್ಕೆ!"

"ಯಾರಿಗೆ?"

"ನನ್ನ ಒಬ್ಬ ಹಳೇ ಗೆಳೆಯ! ಅವನಿಗೆ ಈ ದಿನ ಹಣ ವಾಪಸ್ಸು ಕೊಡುತ್ತೇನೆ ಎಂದು ಹೇಳಿದ್ದೆ."

"ವಾಪಸ್ಸು ಕೊಡದಿದ್ದರೆ ಏನು ಮಾಡುತ್ತಾನಂತೆ?"

"ಬೆನ್ನಿಗೆ ಬಾಕು ಹಾಕುತ್ತಾನಂತೆ!"

# 8

ಬೆಳಗಿನಿಂದಲೇ ಸಣ್ಣಗೆ ಮಳೆ ಬರುತ್ತಿತ್ತು. ದಿಲ್ಲೀಯಲ್ಲಿ ಮಳೆ ಅಂದರೆ ಆಶ್ಚರ್ಯವಾಗುವ ಸಂಗತಿ. ವರ್ಷದ ೩೬೫ ದಿನಗಳಲ್ಲಿ ಅಬ್ಬಬ್ಬಾ ಅಂದರೆ ಹದಿನೈದು ದಿನಗಳು ಮಳೆ ಕಾಣಬಹುದು. ಮಳೆ ಅಂದರೆ ತುಂತುರು ಮಳೆ. ಒಂದೆರಡು ಜಡಿ ಮಳೆ ಹೊಡೆದರೂ ಹೊಡೆದೀತು. ಹಾಗೆ ಮಳೆ ಬಂದರೆ, ದಿಲ್ಲೀ ಶಹರ ಮಳೆಯ ನೀರಿಗೆ ಕೊಚ್ಚಿ ಹೋಗಬಹುದೆಂಬ ಹೆದರಿಕೆ ಇಲ್ಲಿಯ ಜನರಿಗೆ. ರಾಜಸ್ಥಾನದ ಮರುಭೂಮಿಯಂಚಿನಲ್ಲಿರುವ ಈ ಸಮತಟ್ಟದ ದಿಲ್ಲೀ ನೆಲ ಒಂದೇ ಒಂದು ಮಳೆಗೆ, ಕೆರೆಯಾಗಿ, ರಾಜರಸ್ತೆ ನದಿಯಾಗಿ ಚರಂಡಿಗಳೆಲ್ಲಾ ಕಾಲುವೆಗಳಾಗಿ, ಎರಡು ದಿನಗಳ ಮಟ್ಟಿಗೆ, ರಸ್ತೆಗಳಲ್ಲಿ ನಡೆಯುವುದು ತ್ರಾಸಾಗಿ, ಜನರು ಮಳೆಯನ್ನೂ, ಮುನಿಸಿಪಲ್ ಕಾರ್ಪೊರೇಶನ್, ಸರಕಾರ, ಇತ್ಯಾದಿಗಳಿಗೆ ಶಾಪವನ್ನು ಮರೆಯದೇ ಹಾಕುತ್ತಾರೆ. ಇತ್ತೀಚೆಗೆ, ದಿಲ್ಲೀ ಶಹರಿನಲ್ಲಿ ಬ್ರಿಟಿಷರು ನೆಟ್ಟು ಬೆಳೆಸಿದ ಸುಮಾರು ಹತ್ತು ಸಾವಿರಕ್ಕೂ ಹೆಚ್ಚಿನ ಗಿಡಗಳು ದೊಡ್ಡವಾಗಿ ಬೆಳೆದು, ಮಳೆ ಮೋಡ ಗಳನ್ನು ಆಕರ್ಷಿಸಿ, ವರ್ಷಕ್ಕೆ ಐದು ಇಂಚು ಮಳೆ ಬೀಳುವ ಈ ಶಹರಿನಲ್ಲಿ, ಹತ್ತು ಇಂಚಿಗೆ ಏರಿದ್ದು, ದಿಲ್ಲೀ ಜನರಿಗೆ ಆಶ್ಚರ್ಯ ಮತ್ತು ಸಂಕಟ ಒದಗಿಬಂದಿದೆ. ಮಳೆ ಬಂದರೆ ಓಡಾಡುವುದು ಕಷ್ಟ. ಮನೆಯಲ್ಲಿರುವುದಕ್ಕಿಂತ ಹೊರಗೇ, ಬಯಲಿ ನಲ್ಲಿ ಅಡ್ಡಾಡಿಕೊಂಡು ಜೀವನ ಸಾಗಿಸುವ ಈ ದಿಲ್ಲೀ ಜನರಿಗೆ, ಮಳೆ ಒಂದು ಕಂಟಕ. ಬಿಸಿಲು ಕಾಲದಲ್ಲಿ, ರಾತ್ರಿ ಹೊತ್ತು, ಮನೆ ಹೊರಗೆ ಚಾರ್‌ಪಾಯ ಜೋಡಿಸಿ ಮಲಗುವುದೆಂದರೆ ಅಪರಿಮಿತಾನಂದ. ಚಳಿಗಾಲದಲ್ಲಿ ರಜಾಯಿ ಹೊದ್ದು ಬೆಚ್ಚಗೆ ಮಲಗುವುದೆಂದರೆ ಎಲ್ಲಿಲ್ಲದ ಸಂತೋಷ. ಎರಡೇ ಋತುಗಳನ್ನು ಹೊಂದಿರುವ ದಿಲ್ಲೀ ಶಹರು ಮೂರನೇ ಮಳೆಗಾಲ ಬಂತೆಂದರೆ ಅಚ್ಚರಿ!

ಈ ಬಯಲುನಾಡು, ಉರಿಬಿಸಿಲನಾಡು, ಅಸಾಧ್ಯ ಚಳಿನಾಡು, ಹೇಗೆ ಮಳೆಗಾಲದ ನಾಡಾದೀತು?

ಹಾಸಿಗೆಯಿಂದ ಏಳುವ ಮನಸ್ಸು ಮಾಡದೇ, ಗಂಟೆ ಎಂಟಾದರೂ, ಇನ್ನು ಕನಸು ಕಾಣುತ್ತಿದ್ದ ನನ್ನನ್ನು ಕರೆಗಂಟೆ ಬಾರಿಸಿ ಎಬ್ಬಿಸಿತು. ಎದ್ದು ಬಾಗಿಲು ತೆರೆದು, ನೋಡಿದರೆ, ಕಪೂರ್ ನಿಂತಿದ್ದ. ಎಂದಿನಂತೆ ಹಲ್ಲು ಕಿರಿಯುತ್ತಾ! 'ಬನ್ನಿ' ಎಂದು ಒಳಕ್ಕೆ ಕರೆದು, ಲಗುಬಗೆಯಿಂದ ಹಲ್ಲು ಬಾಯಿ ತೊಳೆದು, 'ಚಾ'ಗೆ ನೀರಿಟ್ಟು, ಮಾತಿಗೆ ಶುರು ಹಚ್ಚಿದೆ.

"ಹೇಗಿದ್ದಾರೆ ನಿಮ್ಮ ತಂದೆ?"

"ಬೆಂಕಿ ಉರಿಯ ಬಾಧೆಗಿಂತ ವಿರಹ ಬಾಧೆ ಜಾಸ್ತಿ!"

ಅವನ ಮುಖವನ್ನು ಸೂಕ್ಷ್ಮವಾಗಿ ಅವಲೋಕಿಸಿದೆ. ತಾಯಿಯನ್ನು ಕಳೆದುಕೊಂಡು ಈಗಾಗಲೇ ಮೂರು ತಿಂಗಳು ಕಳೆದಾಗಿತ್ತು. ತಾಯಿಯ ಸಾವಿನಿಂದ ದುಃಖಕ್ಕೆ ಈಡಾಗಿದ್ದ ಇವ, ತಂದೆಯ ಸ್ಥಿತಿಯನ್ನು ಕಂಡು ಹತಾಶನಾಗಿದ್ದಿರಬಹುದೆ?

"ತಂದೆಯನ್ನು ಆಸ್ಪತ್ರೆಗೆ ಸೇರಿಸಬೇಕು. ಈ ಸಲ ಮೆಂಟಲ್ ಆಸ್ಪತ್ರೆಗೆ ಸೇರಿಸಬೇಕು. ಅವರಿಗೆ ಮನೋವೇದನೆ. ಮಾತನಾಡುವುದಿಲ್ಲ; ತಿನ್ನುವುದಿಲ್ಲ; ಕುಡಿಯುವುದಿಲ್ಲ, ಮನಸ್ಸಿಗೆ ಶಾಖ್ ಆಗಿದೆ."

ಹಾಗಾದರೆ ಪರಿಸ್ಥಿತಿ ಬಿಗಡಾಯಿಸಿದೆ. ಮನೋರೋಗಿಯನ್ನು ನೋಡಿಕೊಳ್ಳುವುದಕ್ಕೆ ಮನೆಯಲ್ಲಿ ಯಾರೂ ಇಲ್ಲ.

"ಸುಟ್ಟ ಗಾಯ ವಾಸಿಯಾಗಿದೆಯಾ?"

"ಸುಟ್ಟ ಗಾಯ ವಾಸಿಯಾದರೂ, ಮನಸ್ಸಿನ ಮೇಲೆ ಉಳಿದ ಗಾಯ ಇನ್ನು ವಾಸಿಯಾಗಿಲ್ಲ. ಅದು ವಾಸಿಯಾಗುವ ಲಕ್ಷಣವೂ ಇಲ್ಲ!"

"ಛೆ! ಛೆ! ವಾಸಿಯಾಗದೇ ಏನು? ಒಳ್ಳೇ ಡಾಕ್ಟರ್, ಒಳ್ಳೇ ಔಷಧ ಕೊಡಿಸಿದರೆ ಗುಣವಾಗುತ್ತದೆ." ಸಾಂತ್ವನ ಹೇಳಿದೆ.

"ಈ ಕಾಯಿಲೆಗೆ ಔಷಧವೇ ಇಲ್ಲ! ಮನೋರೋಗಕ್ಕೆ ಮದ್ದೆಲ್ಲಿದೆ?"

"ಮನೋರೋಗಕ್ಕೆ ಈಗೀಗ ಒಳ್ಳೇ ಔಷಧಗಳನ್ನು ಕಂಡುಹಿಡಿದಿದ್ದಾರಂತಲ್ಲಾ? ನಿಮ್ಮ ತಂದೆಗೆ ಮನೋರೋಗ ಎಂದು ನೀನು ತೀರ್ಮಾನಿಸಿಬಿಟ್ಟರೆ ಹೇಗೆ?"

"ಡಿಪ್ರೆಶನ್ ಅಂತ ಹೇಳುತ್ತಾರೆ ಡಾಕ್ಟರ್. ಈ ರೋಗ ಗುಣವಾಗುವುದು ಬಹಳ ಕಷ್ಟ, ಎನ್ನುತ್ತಾರೆ. ಅದರಲ್ಲೂ ಮನೆಯ ವಾತಾವರಣ ಹದಗೆಟ್ಟಿರುವಾಗ ಹೇಗೆ ಅವರ ಕಾಯಿಲೆ ಗುಣವಾಗುತ್ತದೆ? ಮನೆಯ ವಾತಾವರಣಕ್ಕಿಂತ ಆಸ್ಪತ್ರೆಯ ವಾತಾವರಣವೇ ಹಿತ ಎನ್ನುತ್ತಾರೆ ಅವರು. ಏನು ಮಾಡುವುದು?"

'ಡಿಪ್ರೆಶನ್' ಆಗುವುದು ನಾನಾ ಕಾರಣಗಳಿಂದ ಎಂದು ಎಲ್ಲೋ ಓದಿದ ನೆನಪು. ಮನಸ್ಸು ಮತ್ತು ದೇಹ ಎರಡೂ ತಮ್ಮ ತಮ್ಮ ಸ್ವಾಭಾವಿಕ ಕಾರ್ಯಗಳನ್ನು ಮಾಡುವುದರಲ್ಲಿ ವಿಫಲವಾಗುವುದು ಅಥವಾ ಕುಂಠಿತಗೊಳ್ಳುವುದು. ಮನಸ್ಸು ಮುಜುಗರಗೊಂಡು, ಹತಾಶನಾಗಿ, ಜೀವನ ನಿಸ್ಸಾರವಾಗಿ, ಜುಗುಪ್ಸೆಗೊಂಡು, ಪ್ರಾಣ ತೆಗೆದುಕೊಳ್ಳುವ ಹಂಬಲ ಉಂಟಾಗುವ ಮನೋಸ್ಥಿತಿ ಈ ಕಪೂರ್‌ನ ತಂದೆಗಾಗಿದೆಯಾ? ಹೆಂಡತಿ ಸತ್ತರೆ ಈ ಪರಿ ಶೋಕಿಸಿ, ತಲೆ ಕೆಡಿಸಿಕೊಳ್ಳಬೇಕೆ? ಎಲ್ಲರೂ ಒಂದಲ್ಲ ಒಂದು ದಿನ ಸಾಯುವುದು ನಿಶ್ಚಿತ! ಇದನ್ನು ಅರಿತೂ ವ್ಯಸನ, ವ್ಯಥೆ

ದುಗುಡಗಳಿಂದ ಯಾಕೆ ನರಳಬೇಕು? ನರಳಿ, ಹತ್ತಿರದ ಬಂಧು ಬಳಗದವರಿಗೆ ತಮ್ಮ ವ್ಯಸನವನ್ನು ಹಂಚಬೇಕೆ?

"ನಿಮ್ಮ ತಲೆ ಎಲ್ಲಿ ಓಡುತ್ತಾ ಇದೆ?"

ಕಪೂರ್ ಗಟ್ಟಿಯಾಗಿ ಒದರಿದ. ಅವನ ಒದರಿಕೆ ಕೇಳಿ ಬೆಚ್ಚಿ ಬಿದ್ದೆ.

'ಹಾಂ ಎಂದು ಅವನ ಮುಖ ನೋಡಿ ನಕ್ಕೆ. ಕಪೂರ್‌ನ ತಂದೆಗೆ ಹುಚ್ಚು ಹಿಡಿದ ಹಾಗೆ ನನಗೂ ಹಿಡಿದಿಲ್ಲವಷ್ಟೆ! ನನ್ನ ಮನಸ್ಸು ಯಾಕೆ ಹೀಗೆ ಗೊತ್ತು-ಗುರಿಯಿಲ್ಲದ ಹಾಗೆ ಓಡುತ್ತಿದೆ ಎಂದು ಅಚ್ಚರಿಯಾಯಿತು. ಲಗುಬಗೆಯಿಂದ ಕುಳಿತಲ್ಲಿಂದ, ಎದ್ದು, ಕುದಿಯುತ್ತಿದ್ದ ನೀರಿಗೆ ಚಾ ಪುಡಿ ಹಾಕಿ, ಕುದಿಸಿ, ಸೋಸಿ, ಸಕ್ಕರೆ, ಹಾಲು ಹಾಕಿ, ಎರಡು ಲೋಟಗಳಿಗೆ ಸುರಿದು ಒಂದನ್ನು ಕಪೂರ್‌ನಿಗೆ ಕೊಟ್ಟು, ನಾನು ಒಂದನ್ನು ಕೈಗೆ ತೆಗೆದುಕೊಂಡೆ,

"ನಿಮ್ಮ ಕುಟುಂಬವನ್ನು ದಿಲ್ಲೀಗೆ ಕರೆದುಕೊಂಡು ಬರುವುದಿಲ್ಲವೆ?"

"ಇಲ್ಲ! ಮಕ್ಕಳ ವಿದ್ಯಾಭ್ಯಾಸಕ್ಕೆ ತೊಂದರೆ. ಊರಲ್ಲಿ ಅವರು ಆರಾಮಾಗಿದ್ದಾರೆ. ಇಲ್ಲಿ ನಾನು ಆರಾಮಾಗಿದ್ದೇನೆ."

"ಚಾ ಚೆನ್ನಾಗಿದೆ. ನಿಮ್ಮ ಅಡಿಗೆ ಕೂಡ ಚೆನ್ನಾಗಿರಬಹುದು."

"ನನ್ನ ಅಡಿಗೆ ನನ್ನನ್ನು ಇದುವರೆಗೆ ಆರೋಗ್ಯವಂತನನ್ನಾಗಿ ಮಾಡಿದೆ. ರುಚಿ ಇಲ್ಲದಿದ್ದರೂ, ಪುಷ್ಟಿಕರವಾಗಿದೆ."

ನನ್ನ ಅಡಿಗೆ ಬಗ್ಗೆ ನಾನೇ ಹೊಗಳಿಕೊಂಡೆ.

"ಈ ದಿನ ನೀವು ಅಡಿಗೆ ಮಾಡಬೇಡಿ. ಹೊರಗೆ ಹೋಗಿ ಊಟ ಮಾಡೋಣ." ಆಹ್ವಾನಿಸಿದ ಕಪೂರ್.

"ಈ ಮಳೆಯಲ್ಲಿ?" ನನ್ನ ಪ್ರಶ್ನೆ ಕೇಳಿ ನಕ್ಕ ಕಪೂರ್!

"ಇದನ್ನು ಮಳೆ ಎನ್ನುತ್ತೀರಾ? ಇದೆಂತಹ ಮಳೆ? ಈ ಮಳೆಗೆ ಹೆದರುತ್ತೀರಾ? ಬನ್ನಿ ಬನ್ನಿ ಹೋಗೋಣ!"

ನನ್ನ ಅಡಿಗೆ ತಿಂದು ನನಗೇ ಬೇಸರವಾಗಿತ್ತು. ಈ ದಿನ ಹೋಟೆಲ್ ಊಟ ತಿಂದು ಮನೆ ಅಡಿಗೆ ಮಾಡುವ ರಂಪದಿಂದ ಬಿಡುಗಡೆ ಮಾಡಿಕೊಳ್ಳೋಣವೆನ್ನಿಸಿ, ಒಪ್ಪಿಗೆ ನೀಡಿದೆ.

"ನಿಮ್ಮ ತಂದೆ, ನಿಮ್ಮ ತಾಯಿಯನ್ನು ತುಂಬಾ ಪ್ರೀತಿಸುತ್ತಿದ್ದರೆ?"

ನನ್ನ ಪ್ರಶ್ನೆಗೆ ಉತ್ತರವಾಗಿ, ಕೆಲವು ಕ್ಷಣ ಸುಮ್ಮನೆ ನನ್ನ ಮುಖವನ್ನೇ ದಿಟ್ಟಿಸಿ ನೋಡಿ, ಕೇಳಿದ,

"ನೀವು ನಿಮ್ಮ ಹೆಂಡತಿಯನ್ನು ಪ್ರೀತಿಸುವುದಿಲ್ಲವೆ?"

"ನಮ್ಮದು ಸಿನೀಮಾ ಪ್ರೀತಿಯಲ್ಲ!"

"ನಮ್ಮ ತಂದೆ ತಾಯಿಯವರದೂ ಸಿನೀಮಾ ಪ್ರೀತಿಯಲ್ಲ!" ನಕ್ಕ ಅವ.

"ಆದರೆ, ಅವರು ದಿಟವಾಗಿ ಪ್ರೀತಿಸುತ್ತಿದ್ದರು ಎಂಬುವುದಕ್ಕೆ, ನಮ್ಮ ತಾಯಿಯವರ ಹಠಾತ್ ಮರಣವೇ ಕಾರಣ. ಅವರು ಒಟ್ಟಿಗೆ ಬಾಳ್ವೆ ನಡೆಸುತ್ತಿದ್ದಾಗ, ಒಬ್ಬರನೊಬ್ಬರು ಪ್ರೀತಿಸುವ ತೋರಿಕೆಯನ್ನು ಒಮ್ಮೆಯೂ ತೋರಿಸಲಿಲ್ಲ! ಅವರು ತಮ್ಮ ತಮ್ಮೊಡನೆ ಜಗಳವಾಡಿದ್ದೇ ಹೆಚ್ಚು! ಮಕ್ಕಳು ದೊಡ್ಡವರಾಗಿ, ಮದುವೆಯಾಗಿ, ಮಕ್ಕಳಾದ ಮೇಲೂ, ಅವರ ಜಗಳದಾಟ ಮಾತ್ರ ಕಡಿಮೆಯಾಗಿರಲಿಲ್ಲ. ಎಷ್ಟೋ ವೇಳೆ ನನಗೆ ಅನ್ನಿಸುತ್ತಿತ್ತು! ಇವರು ಯಾಕೆ ಹೀಗೆ ಜಗಳ ಕಾಯುತ್ತಾ ಇದ್ದಾರೆ ಎಂದು? ಆದರೆ ಈಗ ಅರ್ಥವಾಗುತ್ತಾ ಇದೆ. ಮೂವತ್ತು ವರ್ಷಗಳ ಒಡನಾಟಕ್ಕೆ ಬೆಂಕಿ ಬಿದ್ದಾಗ ಹೊರಹೊಮ್ಮಿತ್ತು ಪ್ರೀತಿಯ ಸುಗಂಧದ ಹೊಗೆ!"

ಆಲೈಸುತ್ತಾ ಕುಳಿತ ನಾನು ಹಾಗೇ ಯೋಚಿಸತೊಡಗಿದೆ.

ಈ ಪ್ರೀತಿ-ಪ್ರೇಮವೆಂದರೇನು? ಜನರು ಏಕಿಷ್ಟು ಭಾವುಕರಾಗುತ್ತಾರೆ! ಭಾವುಕರಾಗಿ, ನಿಜಸ್ಥಿತಿಯನ್ನು ಯಾಕೆ ಮರೆಯುತ್ತಾರೆ? ಅತಿಭಾವುಕರಾಗಿ, ಭ್ರಮನಿರಸನಕ್ಕೆ ಒಳಗಾಗುತ್ತಾರಲ್ಲಾ ಈ ಹುಚ್ಚು ಜನರು. ತಂದೆಯಂತೆ ಮಗನೂ ಭಾವುಕನಾಗಿ, ಪ್ರೀತಿಯ ಹುಚ್ಚು ಹೊಳೆಯಲ್ಲಿ ಕೊಚ್ಚಿ ಹೋಗುವಂತೆ ಕಾಣುತ್ತಾನಲ್ಲ! ಹೆಂಡತಿ ಇದ್ದರೂ, ಬೇರೊಂದು ಹೆಣ್ಣಿನ ಸಹವಾಸಕ್ಕೆ ಹಾತೊರೆದು, ಕೊನೆಗೆ ಭ್ರಮನಿರಸನನಾಗಿ, ಮನಸ್ಸು ಘಾಸಿಗೊಂಡು, ಹುಚ್ಚಾಸ್ಪತ್ರೆ ಸೇರುವಂತಾದರೆ?.

"ನಿನ್ನ ಮನೆಯ ವಾತಾವರಣ ಸರಿಯಿಲ್ಲವೆ ನಿನ್ನ ತಂದೆಯ ದೇಹಸ್ಥಿತಿ ಸುಧಾರಿಸಲಿಕ್ಕೆ?"

"ವಾತಾವರಣದ ಪ್ರಶ್ನೆಯೇ ಅಲ್ಲ! ಪ್ರಶ್ನೆ ನಮ್ಮ ತಂದೆಯ ಹತಾಶತೆಯ ಚಿಂತನದ್ದು! ಅವರಿಗೆ ಜೀವನ ಬೇಸರವಾಗಿದೆ. ಹೆಂಡತಿ ಸತ್ತ ಮೇಲೆ, ಏನಿದೆ ಈ ಜೀವನದಲ್ಲಿ? ಈ ಪ್ರಪಂಚದಲ್ಲಿ? ಒಂದೇ ಕೊರಗು, ಒಂದೇ ಅಳು! ಅವರಿಗೆ ಸಮಾಧಾನ ಮಾಡುವವರ್‍ಯಾರು?"

ಇಂತಹ ಮನೋಭಾವವುಳ್ಳ ತಂದೆಯ ಮುಂದೆ ಯಾವಾಗಲೂ ನಗುನಗುತ್ತಾ, ಅಪರಿ ಮಿತ ಉತ್ಸಾಹ ಆನಂದದಿಂದ ಹಾಡಿ, ಆಡಿ, ಕುಣಿಯುತ್ತಾ, ತನ್ನ ಜೀವನವೇ ಒಂದು ಶ್ರೇಷ್ಠ ರಸದೌತಣವೆಂದು ತಿಳಿಯುತ್ತಾ ನಲಿಯುವ ಈ ಮಗನೆಲ್ಲಿ? ಅಥವಾ, ಈತನೂ, ಏನಾದರೊಂದು, ವೈಯುಕ್ತಿಕ ದುರ್ಘಟನೆಗೆ ಈಡಾದ ಮೇಲೆ ತಂದೆಯಂತೆ, ಬದಲಾಗಿ ನರಳುತ್ತಾನೆಯೆ?

'ಎದೆಯಲ್ಲಿ ಒಂದು ಹಸಿರು ಗಿಡ ಬೆಳೆಸು. ಹಕ್ಕಿಗಳು ಬಂದು ಕುಳಿತು

ಹಾಡ್ಯಾವು' ಎಂಬ ಚೀನೀ ನಾಣ್ಣುಡಿ ನೆನಪಿಗೆ ಬಂತು. ಈ ಕಪೂರ್ ಹೃದಯದಲ್ಲಿ ಹೂ ಗಿಡ ಬೆಳೆಸುತ್ತಿದ್ದಾನೆಯೊ?'

"ನಿನಗೆ ಬೇಸರವಾಗದಿದ್ದರೆ, ಒಂದು ವೈಯಕ್ತಿಕ ಪ್ರಶ್ನೆ ಕೇಳಲೇ?"

"ನಿಮ್ಮ ಪ್ರಶ್ನೆ ಏನೆಂಬುದು ನನಗೆ ಗೊತ್ತು! ಈ ಪ್ರಶ್ನೆ ನಿಮ್ಮಿಂದ ಮೊದಲೇ ನಿರೀಕ್ಷಿಸಿದ್ದೆ. ನಾನು ಮದುವೆಯಾದ ಮೇಲೂ, ಏಕೆ ಕಮಲಳ ಜೊತೆ ಸಂಗ ಇಟ್ಟುಕೊಂಡಿದ್ದೇನೆ?... ಇದೇ ಅಲ್ಲವೇ ನಿಮ್ಮ ಪ್ರಶ್ನೆ?"

ನನಗೆ ಆಶ್ಚರ್ಯವಾಯಿತೆ? ಆಗಿಲ್ಲವೆನ್ನಬಹುದು. ನಮ್ಮ ಮಾತುಕತೆಗಳು ಪ್ರೀತಿ ಪ್ರೇಮ, ಹತಾಶೆ ಜುಗುಪ್ಸೆ ಇವುಗಳಿಂದ ಶುರುವಾಗಿ ಮೆಲ್ಲಮೆಲ್ಲನೆ ಕಪೂರ್‌ನ ನಿಗೂಢ ವೈಯಕ್ತಿಕ ಜೀವನದ ಬಳಿ ಸರಿಯುತ್ತಿದ್ದುದು ನನಗೆ ಅರಿವಾಗಿತ್ತು. ಪ್ರಾಯಶಃ ಕಪೂರ್‌ನಿಗೂ ಇದರ ಅರಿವಿತ್ತೆಂದು ತಿಳಿಯಬಹುದು. ಅವನಿಗೂ ತನ್ನ ವೈವಾಹಿಕ ಜೀವನದ ಬಗ್ಗೆ ಹಿತಚಿಂತಕರೊಡನೆ ಹಂಚಿಕೊಳ್ಳುವ ಆಸೆ ಇದ್ದಿರಬೇಕು.

"ಹೌದು! ನನ್ನ ವೈವಾಹಿಕ ಜೀವನ ಸರಿಯಿಲ್ಲ."

ಯಾರ ವೈವಾಹಿಕ ಜೀವನ ಸಂಪೂರ್ಣವಾಗಿ, ಎಲ್ಲಾ ರೀತಿಯಲ್ಲಿ ಸರಿ ಇರುತ್ತದೆ? ಎಡರು-ತೊಡರುಗಳಿಲ್ಲದ ವೈವಾಹಿಕ ಜೀವನವಿರುವುದು ದೇವ ದೇವತೆಗಳಿಗೇ ಸಾಧ್ಯವಿಲ್ಲದಿರುವಾಗ, ಹುಲುಮಾನವರಾದ ನಮಗೆ ಹೇಗೆ ಸಾಧ್ಯ? ದೇವ ದೇವತೆಗಳನ್ನೇ ಸೃಷ್ಟಿಸಿದ ಮಾನವ ಬೇಕಂತಲೇ ಅವರ ಜೀವನವನ್ನು ತನ್ನ ಜೀವನದಂತೆಯೇ ರೂಪಿಸಿ, ರಂಜಿಸಿದ್ದಾನೆಯೇ?

"ಆದರೆ ಕಮಲಳ ಜೊತೆ ಅಕ್ರಮ ಸಂಬಂಧವಿಲ್ಲ; ಸ್ನೇಹ ಸಂಬಂಧವಿದೆ."

"ಸಹೋದರ-ಸಹೋದರಿಯರ ಸಂಬಂಧವೇ?"

"ಇಲ್ಲ; ಖಂಡಿತವಾಗಿಯೂ ಇಲ್ಲ; ಅವಳನ್ನು ನಾನು ಸ್ನೇಹಿತೆಯಂತೆ ಮೊದಲಿನಿಂದಲೂ ನೋಡಿಲ್ಲ, ಮುಂದೆ ನೋಡುವುದೂ ಇಲ್ಲ!"

"ಹಾಗಾದರೆ ಒಬ್ಬ ಪ್ರೇಯಸಿಯನ್ನು ನೋಡುವಂತೆ ನೋಡಿದ್ದೀಯಾ?"

"ಪ್ರೇಯಸಿ? ಉಂಟು, ಇಲ್ಲ!"

"ಅಂದರೆ?"

"ಒಂದು ಗಂಡು ಮತ್ತು ಹೆಣ್ಣು-ಇವರ ಸಂಬಂಧ ಕೇವಲ ದೈಹಿಕ ಅಥವಾ ಮಾನಸಿಕವಾಗಿಯೇ ಇರಬೇಕೆಂಬ ನಿಯಮವಿದೆಯೆ? ಇಲ್ಲವಷ್ಟೇ! ನಮ್ಮ ಸ್ನೇಹ ಎಲ್ಲರ ಸ್ನೇಹದ ಹಾಗೆ ಅಂಕುರವಾಯಿತು. ಎಲ್ಲರ ಸ್ನೇಹದ ಹಾಗೆ ಪ್ರೇಮದ ಕಡೆ ಹೊರಳಿತು. ಪ್ರೇಮದಿಂದ ಕಾಮದ ಕಡೆಗೆ ವಾಲಿತು. ಕಾಮದಿಂದ ವಿವಾಹ ಸಂಬಂಧಕ್ಕೆ ಮಾತ್ರ ನಮ್ಮ ಸ್ನೇಹ ನಮ್ಮನ್ನು ಬಂಧಿಸಲಿಲ್ಲ."

ಹಾಗಾದರೆ ಇವರ ಸಂಬಂಧ 'ಎಕ್ಸ್‌ಟ್ರಾ ಮಾರಿಟಲ್ ರಿಲೇಶನ್‌ಶಿಪ್!' ವಿವಾಹಕ್ಕೆ ಬಾಹಿರವಾದ ಸಂಬಂಧ!

"ಮದುವೆಯಾದ ಮೇಲೂ ಬೇರೊಬ್ಬ ಹೆಣ್ಣಿನ ಸಂಬಂಧ ಇಟ್ಟುಕೊಳ್ಳುವುದು ಅಕ್ರಮವಲ್ಲವೆ?"

"ಅಕ್ರಮ? ಇರಬಹುದು. ಆದರೆ ಈ ಸಂಬಂಧದಿಂದ ಯಾರಿಗೂ ನಾನು ಕೇಡು ಬಯಸಿಲ್ಲ; ನಷ್ಟ ಉಂಟಾಗಲಿಲ್ಲ; ಯಾರ ಬಾಳೂ ಹಾಳು ಮಾಡಿಲ್ಲ; ಸಮಾಜಕ್ಕೆ ಧಕ್ಕೆ ಉಂಟು ಮಾಡಿಲ್ಲ!"

"ಯಾರಿಗೂ ಕೇಡು ಬಯಸಿಲ್ಲ? ಎಂತಹ ವಿಚಿತ್ರ ವಾದ ನಿನ್ನದು?.... ನಿನ್ನ ಕೈ ಹಿಡಿದ ಹೆಂಡತಿಗೇ ದ್ರೋಹ ಮಾಡಿದಂತಾಗಲಿಲ್ಲವೆ?"

ನನ್ನ ಪ್ರಶ್ನೆಗೆ ಉತ್ತರವಾಗಿ, ಕಪೂರ್ ಕುಳಿತಲ್ಲಿಂದ ಎದ್ದು ನಿಂತು ಹೇಳಿದ:

"ಬನ್ನಿ ಹೋಗೋಣ! ಮಳೆ ನಿಂತಿದೆ. ಹೊಟ್ಟೆ ತುಂಬಿಸಿಕೊಂಡು ಬರೋಣ!"

ಬಟ್ಟೆ ಹಾಕಿಕೊಂಡು, ಮನೆ ಬಾಗಿಲು ಎಳೆದು, ಬೀಗ ಹಾಕಿ ಕುತುಬ್‌ಮಿನಾರ್ ಮೆಟ್ಟಿಲುಗಳನ್ನು ಬಳಸಿ ಒಳಗೆ ಇಳಿದು ಕೆಳಗೆ ರಸ್ತೆಗೆ ಬಂದಿಳಿದಾಗ ತಲೆ ಸಣ್ಣಗೆ ತಿರುಗುತ್ತಿತ್ತು. ದಿಲ್ಲೀಯ ಕುತುಬ್‌ಮಿನಾರ್‌ನ್ನು ಹತ್ತಲಿಕ್ಕೆ ಸುತ್ತು ಮೆಟ್ಟಲು ಪ್ರಸಿದ್ಧಿ ಪಡೆದಿದ್ದರೂ, ಅದನ್ನು ಉಪಯೋಗಿಸಲು ಈಗ ಪ್ರತಿಬಂಧಿಸಿದ್ದಾರೆ. ಯಾಕೆಂದರೆ ಅಲ್ಲಿ ನಡೆದ ಒಂದು ದುರ್ಘಟನೆಯಿಂದಾಗಿ ಕೆಲವು ನಿಶ್ಪಾಪ ಯಾತ್ರಿಕರು ಪ್ರಾಣ ಕಳೆದುಕೊಳ್ಳುವಂತಾಗಿತ್ತು. ಆದರೆ ರಾಜೇಂದ್ರನಗರದ ಎಲ್ಲಾ ಮನೆಗಳಿಗೆ ಕೈಸುತ್ತ ಮೆಟ್ಟಿಲಿನ ದೆಸೆಯಿಂದ, ಎರಡು, ಮೂರು ಅಂತಸ್ತಿನ ಮನೆಗಳಿಗೆ ಹೋಗಿ ತಲುಪು ವಂತಾದರೂ ತಲೆ ತಿರುಗಿ ಬಿದ್ದ ಅಥವಾ ಬೀಳುವ ದುರ್ಘಟನೆ ಕಡಿಮೆ. ಮಹಡಿ ಮನೆಗೆ ತಲುಪಿದೊಡನೆ, ನೀರು ಕುಡಿದು ಹಾಸಿಗೆ ಮೇಲೆ ಬೀಳುವುದರಿಂದ, ತಲೆ ತಿರುಗುವಿಕೆಯಿಂದ ಪಾರಾಗಬಹುದು. ಇನ್ನು ಕೆಳಗೆ ಇಳಿದಾಗ, ತಲೆ ತಿರುಗಿದರೆ ಕಡೇ ಮೆಟ್ಟಿಲಿನಲ್ಲೇ ಕುಳಿತು, ಸುಧಾರಿಸಿಕೊಂಡು, ಮುಂದೆ ನಡೆಯಲು ಅಸಾಧ್ಯ ವಾದರೆ ವಾಪಸ್ಸು ಬಂದ ದಾರಿಯಲ್ಲೇ ಸಾಗಿ ಸುತ್ತು ಮೆಟ್ಟಲೇರಿ, ಮನೆ ಸೇರಿ ಹಾಸಿಗೆಯ ಮೇಲೆ ದೊಪ್ಪನೆ ಬಿದ್ದು ಮೈಮನಕ್ಕೆ ಆರಾಮ ನೀಡಬಹುದು.

ಬಸ್ ಹಿಡಿದು ಕೆಂಪು ಕೋಟೆ ಎದುರು ಇರುವ ಮಾರ್ಕೆಟ್ ಒಳಗೆ ನುಗ್ಗಿ, ಒಂದು ಸಣ್ಣ ಊಟದ ಅಂಗಡಿಗೆ ಹೋಗಿ, ಬರಿದಾಗಿದ್ದ ಕುರ್ಚಿ ಹಿಡಿದು ಕುಳಿತೆವು. ಇಷ್ಟು ದೊಡ್ಡ ಶಹರಿನಲ್ಲಿ, ಇಷ್ಟು ಸಣ್ಣ ಹೋಟೆಲ್‌ಗೆ ಯಾಕೆ ಕರೆದುಕೊಂಡು ಬಂದ ಈ ಕಪೂರ್! ಬೃಹತ್ ದಿಲ್ಲೀ ನಗರಕ್ಕೆ ಒಂದು ಬಾದ್‌ಶಹಾ ಹೋಟೆಲ್‌ಗೆ ಬರಗಾಲವೆ?

"ಎರಡು ಅಮೃತಸರೀ ಕುಲ್ಚೇ!"

ಕಪೂರ್ ಆರ್ಡರ್ ಕೊಟ್ಟ. 'ಕುಲ್ಚೇ'ಯ ಹೆಸರು ಕೇಳಿದ್ದೆ. ಈ 'ಕುಲ್ಚೇ' ತಿಂದು ಕುಲಗೆಡುವ ಸಂಭವವಿಲ್ಲವಷ್ಟೇ! ಕುಲಕೆಟ್ಟರೂ ಪರವಾಗಿಲ್ಲ. ಹೊಟ್ಟೆ ಕೆಟ್ಟು ಆಸ್ಪತ್ರೆ ಸೇರುವಂತಾಗಬಾರದಷ್ಟೇ!

ಮಾಣಿ ಎರಡು ಪ್ಲೇಟ್ ಕುಲ್ಚೇ ತಂದಿಟ್ಟ. ಅದರ ಜೊತೆ ಒಂದು ಅಗಲ ಬಾಯಿಯುಳ್ಳ ಲೋಟ ಮೊಸರು, ಒಂದು ಸಣ್ಣ ಬಟ್ಟಲಿನ ತುಂಬ ಕೊಚ್ಚಿದ ಹಸೀ ಈರುಳ್ಳಿ ಮತ್ತು ಹಸೀ ಮೆಣಸಿನಕಾಯಿ ತಂದಿಟ್ಟ.

"ಕುಲ್ಚೇಗೆ ಮೊಸರು ಶ್ರೇಷ್ಠ ಸಾತಿ!"

"ನೀನು ಮತ್ತು ಕಮಲ ಇದ್ದ ಹಾಗೆ!" ಕಪೂರ್ ನಗಾಡಿದ.

"ಎಂತಹ ಹೋಲಿಕೆ? ಕುಲ್ಚೇ-ಮೊಸರು, ಎರಡನ್ನು ನೀವು ತಿಂದು ಬಿಡುತ್ತೀರಾ, ನಿಮ್ಮ ಸಮಾಜ ನಮ್ಮನ್ನು ತಿಂದು ತೇಗಿದ ಹಾಗೆ!"

ನಾನು ಅವನ ಮುಖವನ್ನೇ, ಬೆಪ್ಪನ ಹಾಗೆ ನೋಡಿದೆ. ಅವನ ಮುಖದಲ್ಲಿ ಬೇಸರದ ಇಂಗಿತ ಕಾಣಬರಲಿಲ್ಲ. ನನ್ನ ಮಾತಿನಿಂದ ಅವನಿಗೆ ನೋವುಂಟಾಯಿತೇನೋ ಎಂದು ಹೆದರಿದ್ದ ನನ್ನ ಮನಸ್ಸು ಹಗುರವಾಯಿತು.

'ಕುಲ್ಚೇ'ಯನ್ನ ಸಣ್ಣ ತುಂಡಾಗಿ ತುಂಡರಿಸಲು ಹೆಣಗಿದೆ. ನಾರಾಗಿದ್ದ ದೋಸೆಯಾಕಾರದ ಈ ತಿನಿಸು ಬಿಡಿಸಲಾರದ ಗಂಟಾಗಿತ್ತು.

"ಎರಡೂ ಕೈಯಿಂದ ಬಿಡಿಸಿ! ಯಾಕೆ ಒಂದೇ ಕೈ ಉಪಯೋಗಿಸುತ್ತೀರಾ?"

ಬಲಗೈ ಬಂಟನಾದ ನಾನು ಎಡಗೈಗೆ ಶರಣು ಹೋಗುವುದು ನನ್ನ ಸ್ವಾಭಿಮಾನಕ್ಕೆ ವಿರುದ್ಧವಾಗಿತ್ತು.

ಉತ್ತರಭಾರತೀಯರು ತಿಂಡಿ ತಿನಸನ್ನು ತಿನ್ನುವಾಗ ಅದರಲ್ಲೂ ಗಟ್ಟಿ ಪದಾರ್ಥಗಳನ್ನು ತಿನ್ನುವಾಗ, ಎರಡು ಕೈಗಳ ಉಪಯೋಗವನ್ನು ಮಾಡುವುದು ಸರ್ವೇಸಾಮಾನ್ಯ. ನನಗೆ ಎಡಗೈಯನ್ನು ಎಷ್ಟೇ ಕಠಿಣಕಾರ್ಯವಾದರೂ, ತಿಂಡಿ-ತಿನಿಸುಗಳನ್ನು ತಿನ್ನುವುದಕ್ಕೆ ಉಪಯೋಗಿಸುವುದು ಸರ್ವಥಾ ಮನಸ್ಸಿಗೆ ಒಪ್ಪುವ ಕಾರ್ಯವಾಗಿರಲಿಲ್ಲ. ಬಹಳ ಕಷ್ಟಪಟ್ಟು 'ಕುಲ್ಚೆ'ಯ ಗಂಟನ್ನು ಕಳಚಿ ಕಳಚಿ, ಮೊಸರಿನಲ್ಲಿ ಅದ್ದಿ, ಒಂದೊಂದೇ ತುಣಕನ್ನು ಬಾಯಿಯಲ್ಲಿ ಹಾಕಿ ತಿನ್ನಲು ಪ್ರಯತ್ನಿಸುತ್ತಿದ್ದೆ. ನಾನು ಅರ್ಧ ಮುಗಿಸುವ ವೇಳೆಗೆ, ಕಪೂರ್ ಕುಲ್ಚೆಯನ್ನು ಕಬಳಿಸಿ, ಮತ್ತೊಂದು ಕುಲ್ಚೆಗೆ ಕರೆ ಹೇಳಿದ್ದ!

"ಈ ಅಂಗಡಿಯ ಕುಲ್ಚೇ ಇಡೀ ದಿಲ್ಲೀಗೆ ಪ್ರಸಿದ್ಧಿ! ಪಾರ್ಸಲ್ ಮಾಡಿಕೊಂಡು ಮನೆಗೆ ತೆಗೆದುಕೊಂಡು ಹೋಗುವವರೆ ಹೆಚ್ಚು."

'ಪಟ್!ಪಟ್!ಪಟ್!' ಶಬ್ದದೊಂದಿಗೆ, 'ಕುಲ್ಚೇ'ತಯಾರು ಮಾಡುವವನ ಕೈಗಳು ಕುಣಿದು, ಚಪ್ಪಾಳೆ ಹೊಡೆದು, ಯಕ್ಷಿಣಿಯವನ ಕೈಗಳಿಂದ ಬೆಳ್ಳಗಿನ ಕರವಸ್ತ್ರ ಹೊರಬಂದ ಹಾಗೆ ಹೊರಬರುತ್ತಿತ್ತು, 'ಕುಲ್ಚೇ' ಹಾಳೆ! ಅದನ್ನು ತನ್ನ ಮುಂದೆ ಇರಿಸಿದ್ದ ದೊಡ್ಡ ಅಗ್ಗಿಸ್ಟಿಕೆ-'ತಂದೂರ್'ನ ಹೊಟ್ಟೆಯ ಗೋಡೆಗೆ ಮೆತ್ತುತ್ತಿದ್ದ. ಒಂದು ಕಡೆಯಿಂದ ಹಾಳೆಗಳನ್ನು ಮೆತ್ತಿ ಮತ್ತೊಂದು ಕಡೆಯಿಂದ ಬೆಂದ 'ಕುಲ್ಚೆ' ಯನ್ನು ಉದ್ದನಾಲಿಗೆಯ ಇಕ್ಕಳಗಳ ಸಹಾಯದಿಂದ ಹೊರತೆಗೆದು, ದೊಡ್ಡ ತಟ್ಟೆಗೆ ಬಿಸಾಡುತ್ತಿದ್ದ.

"ಇದು ಅಂತಿಂತಹ 'ಕುಲ್ಚೆ' ಅಲ್ಲ. ಅಮೃತ್‌ಸರೀ ಕುಲ್ಚೇ! ಹಿಟ್ಟಿಗೆ ಬೇಯಿಸಿದ ಆಲೂಗೆಡ್ಡೆ ಸೇರಿಸಿ ಕಲಿಸುತ್ತಾರೆ. ಕಲಿಸುವಾಗ ಎಣ್ಣೆಯನ್ನು ಧಾರಾಳ ವಾಗಿ ಉಪಯೋಗಿಸುತ್ತಾರೆ. ಇದರಿಂದ ರುಚಿ ಹೆಚ್ಚು. ನಿಮಗೆ ಹೇಗೆನಿಸುತ್ತದೆ?"

ಇನ್ನೂ ಅರ್ಧ 'ಕುಲ್ಚೇ' ಖಾಲೀ ಮಾಡಲಿಕ್ಕೆ ಪ್ರಯಾಸ ಪಡುತ್ತಿರುವ ನನ್ನನ್ನು ಕೇಳಿದ ಕಪೂರ್‌ಗೆ ಉತ್ತರ ಹೇಳಲು ಪ್ರಯತ್ನಿಸಲಿಲ್ಲ. ಠೊಣಪ ರೊಟ್ಟಿ, ಗಟ್ಟಿ ಮೊಸರು ತಿಂದೇ ಪಂಜಾಬಿಗಳು ಗಟ್ಟಿಯಾಗಿರುವುದು ಎನ್ನಿಸಿತು. ಹಾಲು, ಮೊಸರು, ಗೋಧಿ ಯಥೇಚ್ಛವಾಗಿ ದೊರಕುವ ಪಂಜಾಬಿನಲ್ಲಿ ಅವನ್ನು ಅಷ್ಟೇ ಯಥೇಚ್ಛವಾಗಿ ಕಬಳಿಸಿ, ದೇಹ ಬೆಳೆಸಿ, ನಲಿದಾಡುವ ಪಂಜಾಬಿಗಳು ಧನ್ಯರೇ ಸರಿ!

"ಖಾವೋ, ಪೀವೋ, ಮಜಾ ಕರೋ!"

ಪಂಜಾಬಿಗಳ ಈ ಮಹಾಮಂತ್ರದ ಮುಂದೆ ಬೇರೆ ಯಾವ ತಂತ್ರವೂ ನಡೆಯಲಾರವು.

ಬಿಲ್ ತೆತ್ತು ಕಪೂರ್‌ನೊಂದಿಗೆ ಹೊರ ಬಂದಾಗ, ಮಳೇ ಸಂಪೂರ್ಣವಾಗಿ ನಿಂತು, ಸೂರ್ಯ ಹೊರಬಂದು, ತನ್ನ ಕಿರಣದ ಶಾಖವನ್ನು ನಮ್ಮ ಮೈಮೇಲೆ ಮುಚ್ಚುಮರೆಯಿಲ್ಲದೆ ಹರಿಬಿಟ್ಟಿದ್ದ. ಕಾದಿದ್ದ ಭೂಮಿಯ ಮೇಲೆ ಬಿದ್ದ ತುಂತುರು ಮಳೆ, ಕಾದ ಹಂಚಿನ ಮೇಲೆ ನೀರು ಸುರಿಸಿದಂತೆ, ಬಿಸಿ ಬಿಸಿ ಹವೆ ಉತ್ಪತ್ತಿಯಾಗಿ, ಸೂರ್ಯನ ಕಿರಣದ ಶಾಖಕ್ಕೆ ತನ್ನ ಶಾಖವನ್ನೂ ನೀಡಿ, ಸೂರ್ಯದೇವನಿಗೆ ಊದು ಬತ್ತಿಯ ಪೂಜೆ ಮಾಡಿತ್ತು. ಎದುರಿಗೆ ಬೃಹದಾಕಾರವಾಗಿ ಕೆಂಪುಕೋಟೆ ತನ್ನ ಎರಡು ಕೈಗಳನ್ನು ಅಗಲವಾಗಿ ಚಾಚಿ, ತನ್ನ ಕೆಂಪು ಬಣ್ಣವನ್ನು ಬಿಸಿ ಹವಾದಿಂದಾಗಿ, ಕಂದು ಬಣ್ಣಕ್ಕೆ ಪರಿವರ್ತಿಸಿಕೊಂಡಿತ್ತು.

"ಏನು ಯೋಚನೆ ಮಾಡಿ ನಡೆಯುತ್ತಿದ್ದೀರಾ? ಹಿಂಬದಿ ಎಡಕ್ಕೆ ಬಲಕ್ಕೆ ನುಗ್ಗುತ್ತಿರುವಾಗ ಈ ಸೈಕಲ್ ರಿಕ್ಷಾಗಳ ಹಾವಳಿಯಿಂದ ಕಾಪಾಡಿಕೊಳ್ಳಿರಿ!"

ಕಪೂರ್‌ನ ಮಾತು ಕೇಳಿ, ಎಚ್ಚರಗೊಳ್ಳುವ ಮೊದಲೇ ಒಬ್ಬ ಸೈಕಲ್ ರಿಕ್ಷಾ

ದವನ ಸೈಕಲ್‌ನ ಕೈ ನನ್ನ ಬಲಗೈ ಬೆರಳಿಗೆ ತಾಕಿಕೊಂಡು ಮುಂದೆ ಹೋಯಿತು. ತೋರುಬೆರಳಿನ ಚರ್ಮ ಕಿತ್ತು, ರಕ್ತ ಸೋರಿದಾಗ, ಕರವಸ್ತ್ರ ತೆಗೆದು ಅದನ್ನು ಒರೆಸಿ, ಅದರಲ್ಲೇ ಬ್ಯಾಂಡೇಜ್ ಕಟ್ಟಿ, ಬೆರಳಿನ ಊನಕ್ಕೆ ಉಪಚರಿಸಿದೆ.

"ನನ್ನ ಎಚ್ಚರಿಕೆ ಪ್ರಯೋಜನವಾಗಲಿಲ್ಲ. ರಕ್ತ ಕೊಟ್ಟೇ ಕಲೀಬೇಕಾ ಹುಷಾರಾಗಿರುವುದಕ್ಕೆ?'' ಕಪೂರ್ ನನ್ನ ಕೈ ಬೆರಳಿನ ಕಡೆ ನೋಡಿ ಹೇಳಿದ.

"ದಿಲ್ಲೀಯಲ್ಲಿ ಯಾರು ರಕ್ತ ಚೆಲ್ಲಲಿಲ್ಲವೆ?" ಬಹಳವಾಗಿ ರಕ್ತ ಚೆಲ್ಲಿ, ಯಾವುದೋ ಮಹತ್ಕಾರ್ಯ ಮಾಡಿದವನಂತೆ ಹೇಳಿದೆ.

"ದಿಲ್ಲೀಯಲ್ಲಿ ರಕ್ತ ಚೆಲ್ಲಿದಷ್ಟು ಪ್ರಪಂಚದ ಬೇರೆ ಯಾವ ದೇಶದ ರಾಜಧಾನಿ ಯಲ್ಲೂ ರಕ್ತ ಚೆಲ್ಲಿ ಹರಿದಿಲ್ಲ ಎಂದು ಹೇಳುತ್ತಾರೆ! ನಿಜ ಇರಬಹುದು. ಈಗ ನೀವು ಕೂಡ ರಕ್ತ ಚೆಲ್ಲಿದಿರಿ!"

ತಮಾಷೆಯಾಗಿ ಕಂಡರೂ, ಕಪೂರ್ ಮಾತಿನಲ್ಲಿ ನಿಜಾಂಶವಿದೆಯಲ್ಲವೆ ಎನ್ನಿಸಿತು.

ಮಹಾಭಾರತ ಯುದ್ಧದಿಂದ ಆರಂಭಿಸಿದ ಈ ರಕ್ತದೋಕಳಿಯಾಟ ಭೀಮ ಸೇನ, ದುಶ್ಯಾಸನನ ಹೊಟ್ಟೆ ಬಗೆದು, ಅವನ ರಕ್ತ ಹೀರಿದ ನಂತರ, ರಾಜಪೂತ ಮಹಾರಾಜರು ಬಹು ವಿಜೃಂಭಣೆಯಿಂದ ನಡೆಸಿ, ಮುಂದುವರೆಸಿಕೊಂಡು ಹೋದರು. ಅವರನ್ನು ಕೊಂದು ನೆತ್ತರನ್ನು ಸುರಿಸಿ, ದಿಲ್ಲೀ ಸಿಂಹಾಸನವನ್ನು ಪ್ರಪ್ರಥಮವಾಗಿ ಏರಿದ ಗುಲಾಮೀ ತುರ್ಕರು! ಅವರನ್ನು ಸೋಲಿಸಿ, ಪುನಃ ರಕ್ತ ಸುರಿಸಿದ ಪಠಾಣರು! ಮುಂದೆ ಮೊಘಲರು, ಮರಾಠರು ಮತ್ತು ಇಂಗ್ಲಿಷ್‌ರು, ಈಗ ನಾವು ನಾವೇ ನಮ್ಮಲ್ಲೇ ಕಚ್ಚಾಡುತ್ತಾ ರಕ್ತ ಸುರಿಸುತ್ತಾ, ಅತಿ ಭಾವುಕತೆಯಿಂದ, ಉತ್ಸುಕತೆಯಿಂದ ಯಾವ ಕಾಳಜೀಯೂ ತೋರದೇ ಈ ರಕ್ತದೋಕಳಿಯಾಟವನ್ನು ಆಡುತ್ತಾ ಇದ್ದೀ ವಲ್ಲವೆ?

"ಕರವಸ್ತ್ರ ತೆಗೀರಿ ಸಾಬ್! ನೋಡಿದೋರು ಎಲ್ಲೋ ಹೊಡೆದಾಟದಲ್ಲಿ ತೊಡಗಿ ತಪ್ಪಿಸಿಕೊಂಡು ಬಂದಿರಬಹುದು ಎಂದು ನಿಮಗೆ ಎರಡು ಬಾರಿಸಬಹುದು!"

ಕಪೂರ್‌ನ ತಮಾಷೆಗೆ ಮಿತಿ ಇರಲಿಲ್ಲ; ಆದರೂ ಅವ ಹೇಳಿದಂತೆ ಕಟ್ಟಿದ್ದ ಕರವಸ್ತ್ರ ಬಿಚ್ಚಿದೆ. ಬಿಳೀ ಕರವಸ್ತ್ರ ಕೆಂಪಾಗಿತ್ತು! ಘಾಯ ಬಲವಾಗಿ, ರಕ್ತ ಚಿಲುಮೆ ಯಂತೆ ಹರಿಯುತ್ತಿತ್ತು. ಕೆಂಪು ಕರವಸ್ತ್ರದಿಂದ ಮತ್ತೊಮ್ಮೆ ರಕ್ತ ಒರೆಸಿದೆ.

"ಅದಕ್ಕೆ ಯಾಕೆ ಅಷ್ಟು ಉಪಚಾರ ಮಾಡುತ್ತೀರಾ? ಬೆರಳು ಚೀಪಿ ರಕ್ತ ಕುಡಿಯಿರಿ. ರಕ್ತ ಹರಿಯುವುದು ನಿಲ್ಲುತ್ತದೆ!"

ಮತ್ತೆ ಉಪದೇಶಿಸಿದ.

ಅವನು ಹೇಳಿದಂತೆ ಬೆರಳು ಚೀಪತೊಡಗಿದೆ. ರಕ್ತ ನಾಲಿಗೆ ಮುಟ್ಟಿದೊಡನೆ, ತಿಂದಿದ್ದ ಅಮೃತಸರೀ ಕುಲ್ಚೆ ರುಚಿ ಕೆಟ್ಟು, ಉಪ್ಪು ತಿಂದ ಹಾಗೆ ಆಯಿತು. ದಿಲ್ಲೀಯನ್ನು ಗೆದ್ದು ಜನರ ರಕ್ತ ಹೀರಿದ ರಾಜ, ಮಹಾರಾಜ ಸುಲ್ತಾನ್, ಬಾದ್‌ಶಹಾ, ಗೌವರ್ನರ್-ಜನರಲ್‌ಗಳ ಹಾಗೆ, ನಾನು ಬೇರೆಯವರ ರಕ್ತ ಹೀರದೆ ನನ್ನ ರಕ್ತವನ್ನೇ ಹೀರಿದ್ದೆ! ಉಪ್ಪು ತಿಂದವನು ನೀರು ಕುಡಿಯಬೇಕಷ್ಟೆ! ರಸ್ತೆ ಬದಿಯಲ್ಲಿ ಮಾರುತ್ತಿದ್ದ ನಾಲ್ಕು ಆಣೆ 'ಐಸ್ ವಾಟರ್' ಕುಡಿದು ಬಾಯಿ ಸ್ವಚ್ಛ ಮಾಡಿಕೊಂಡೆ. ಕರವಸ್ತ್ರದಿಂದ ನಿಲ್ಲದ ರಕ್ತ ನನ್ನ ನಾಲಿಗೆಯಿಂದ ನಿಂತಿತು. ಇರಾನಿನ ಸುಲ್ತಾನ್ ನಾದಿರ್ ಶಾ, ದಿಲ್ಲೀ ದಂಡೆಯಾತ್ರೆ ಮಾಡಿ, ದಿಲ್ಲೀ ಜನರ ಕಗ್ಗೊಲೆ ಮಾಡಿ, ರಕ್ತದ ಕೋಡಿ ಹರಿಸಿಯಾದ ಮೇಲೆ, ದಿಲ್ಲೀ ಬಾದ್‌ಶಹಾನ ಮಂತ್ರಿ ಬಂದು ಅವನಿಗೆ ನಿವೇದಿಸಿಕೊಳ್ಳುತ್ತಾನಂತೆ. 'ದಿಲ್ಲೀಯಲ್ಲಿ ಇನ್ನು ಯಾರೂ ಉಳಿದಿಲ್ಲ ನಿಮ್ಮ ಕತ್ತಿಗೆ ಗುರಿಯಾಗಲು. ಈಗಲಾದರೂ, ಸಾಕು ಮಾಡಿರಿ ರಕ್ತ ಹರಿಸುವುದನ್ನು! ರಕ್ತ ಹರಿಯುವುದು ನಿಲ್ಲಿಸಲಿಕ್ಕೆ ನಾಲಿಗೆ ಸಾಲದೆ! ಕೊನೆಗೂ ಮಂತ್ರಿಯ ನಾಲಿಗೆಯಿಂದಲೇ ಹರಿಯುವ ರಕ್ತ ನಿಂತಿತು!

"ಈ ಸೋನೇರೀ ಮಸ್ಜಿದ್ ಎಲ್ಲಿದೆ ಇಲ್ಲಿ?" ಹಠಾತ್ತನೆ ಕೇಳಿದೆ ನಾನು.

"ವಾಪಸ್ಸು ಬಂದ ದಾರಿಯಲ್ಲಿ ಹೋಗಬೇಕು. ಅದು ಸೀಸ್‌ಗಂಜ್ ಗುರುದ್ವಾರದ ಬಗಲಿನಲ್ಲಿ ಇದೆ."

"ಹೋಗೋಣವೇ?" ಎಂದು ಕೇಳಿ, ಅವನ ಉತ್ತರಕ್ಕೆ ಕಾಯದೆ, ಹಿಂದಕ್ಕೆ ಹೆಜ್ಜೆ ಇರಿಸಿದೆ.

"ಏನವಸರ? ನಿಧಾನವಾಗಿ ಇನ್ನೊಮ್ಮೆ ಹೋದರಾಯಿತು!"

ಕಪೂರ್‌ನ ಮಾತಿಗೆ ಉತ್ತರ ನೀಡದೆ ನಾನು ಹೆಜ್ಜೆ ಹಾಕಿದೆ.

"ಬರ್ರೀ! ಇಲ್ಲಿ ಬರ್ರೀ! ಕೂಡ್ರೀ ಬನ್ನಿ!"

ಕೂಗುತ್ತಿದ್ದ ಕಪೂರ್. ಯಾವ ಮಾಯೆಯಲ್ಲೋ ರಸ್ತೆ ದಾಟಿ ಸೈಕಲ್ ರಿಕ್ಷಾ ಹತ್ತಿ ಕುಳಿತು ನನಗೆ ಅದರಲ್ಲಿ ಕುಳಿತುಕೊಳ್ಳುವಂತೆ ಬೊಬ್ಬೆ ಹೊಡೆಯುತ್ತಿದ್ದ. ನಾನು ಎಚ್ಚರಿಕೆಯಿಂದ ರಸ್ತೆಯ ಬಲಬದಿಗೆ ದಾಟಿ, ಸೈಕಲ್ ರಿಕ್ಷಾ ಏರಿ ಕುಳಿತೆ. ದಿಲ್ಲೀಯ ಚಾಂದನೀ ಚೌಕ್ ಪ್ರದೇಶದಲ್ಲಿ ಕಾಣುವಷ್ಟು ಸೈಕಲ್ ರಿಕ್ಷಾಗಳು ಪ್ರಾಯಶಃ ಬೇರೆ ಯಾವ ಶಹರಿನ ಪ್ರದೇಶದಲ್ಲಿ ಕಾಣಸಿಗುವುದಿಲ್ಲವೆನಿಸಿತು. ರಿಕ್ಷಾಗಳ ಸಂತೆಯೇ ಸಂತೆ.ಇಲ್ಲಿ. ರಿಕ್ಷಾವಾಲಾಗಳು ಮುಖ್ಯವಾಗಿ ಬಾಂಗ್ಲಾದೇಶದಿಂದ ಬಂದ ನಿರ್ಗತಿಕ ಮುಸ್ಲಿಮರು. ಕಲ್ಕತ್ತಾನಗರದಿಂದ ಹೊರಟ ಈ ರಿಕ್ಷಾವಾಲರ ತಂಡ, ದಿಲ್ಲೀ ಶಹರ ಸೇರಿ ತಮ್ಮ ರಕ್ತ ಸುರಿಸುತ್ತಿದೆ.

ಕೇವಲ ಒಂದು ರೂಪಾಯಿಗೆ ಒಂದು ಕಿಲೋಮೀಟರ್ ದೂರ ದಾರಿ ಸವೆಸಿ, ಬೆವರು ಹರಿಸಿ, ರಕ್ತ ಸುರಿಸಿ, ಹಣ ಸಂಪಾದಿಸುವ ಈ ಬಡ ಕೂಲಿಗಳನ್ನು ನೋಡಿದಾಗ ಬ್ಯಾಂಕ್ ನೌಕರರ ಮುಖಂಡ ಸಹಾನೀಯ ನೆನಪು ಮನಸ್ಸಿಗೆ ಬಂದು, ನನ್ನ ರಕ್ತ ಕುದಿಯತೊಡಗಿತು!

"ನೌಕರಿ ಸಿಗದೇ ನಿರ್ಗತಿಕನಾಗಿ ಬೀದಿ ಬೀದಿ ಅಲೆಯುವಾಗ, ನೌಕರೀ ಸಿಕ್ಕರೆ ಸಾಕು ಎಂದು ಕಂಡಕಂಡವರ ಕೈಕಾಲು ಕಟ್ಟಿ, ನೌಕರೀ ಗಿಟ್ಟಿಸಿಕೊಂಡ ಮೇಲೆ ನೌಕರರ ನೇತಾ ಆಗಿ, ಪೆನ್ನು ಹಿಡಿಯದೆ, ಕೊಟ್ಟ ಕೆಲಸ ಮಾಡದೆ, ಬಿಟ್ಟಿ ಸಂಬಳ ತೆಗೆದುಕೊಂಡು, ಹೊಟ್ಟೆ ಹೊರೆಯೋ ಭಂಢ ನೀನು!"

ಮಣಮಣಗುಟ್ಟುತ್ತಿದ್ದ ನನ್ನನ್ನು ನೋಡಿ, ಚಕಿತಗೊಂಡ ಕಪೂರ್!

"ಪ್ರಾರ್ಥನೆ ಮಾಡುತ್ತಿದ್ದೀರಾ?" ಕೇಳಿದ.

"ಹೌದು! ನೌಕರಿ ಸಿಕ್ಕ ಮೇಲೆ ನೌಕರೀ ಮಾಡದೇ ನೇತಾಗಿರಿ ಮಾಡುವವರ ಚರ್ಮ ಸುಲಿದು, ರಕ್ತ ಹೀರಿ ತೋರಣ ಕಟ್ಟುವಂತೆ ಮಾಡು ದೇವಾ ಅಂತ ಪ್ರಾರ್ಥಿಸಿಕೊಳ್ಳುತ್ತಿದ್ದೆ!"

"ರಕ್ತ ಹೀರೋ ವಿಷಯ ಬಿಡಿ. ಈ ಚಾಂದನೀ ಚೌಕ್‌ನಲ್ಲಿ, ಗಂಟೇವಾಲಾ ಸ್ವೀಟ್ ಅಂಗಡಿ ನೋಡಿದ್ದೀರಾ, ಕೇಳಿದ್ದೀರಾ? ೨೦೦ ವರ್ಷ ಹಳೆಯ, ಮೊಘಲ್ ಕಾಲದ ಸ್ವೀಟ್ ಅಂಗಡಿ ಅದು. ಇಂದಿಗೂ ಈ ಅಂಗಡಿಯ ಸಿಹಿ ತಿಂಡಿಗಳು ಬಹು ಪ್ರಸಿದ್ಧ. ಇಂದು ಭಾನುವಾರ. ರಜೆ. ಇಲ್ಲದೇ ಹೋಗಿದ್ದರೆ, ಇವರ ಸಿಹಿ ತಿಂಡಿ ತಿಂದು ಹೀರಬಹುದಾಗಿತ್ತು."

"ಇದೇ ನೋಡಿ ಸೋನೇರಿ ಮಸ್ಜಿದ್!"

ರಿಕ್ಷಾದಿಂದ ಇಳಿದು, ಮಸ್ಜಿದ್ ಬಳಿಗೆ ಹೋದೆವು. ಚಿಕ್ಕ ಮಸೀದಿ ಅದು. ಚಿನ್ನದ ಮುಲಾಮು ಹೊಡೆದಿದ್ದ ಗುಮ್ಮಟವಿತ್ತಂತೆ ಹಿಂದೆ. ಈಗ ಕಾಣಬರುವುದಿಲ್ಲ. ಮಸೀದಿಯ ಆವರಣದಲ್ಲಿ ಕುಳಿತು, ನಿಂತು, ಅಡ್ಡಾಡುತ್ತಾ, ತನ್ನ ಇರಾನೀ ಸೈನಿಕರಿಗೆ ಆದೇಶ ನೀಡಿದ್ದನಂತೆ—ತುರ್ಕೀವಂಶದ ಇರಾನೀ ಸುಲ್ತಾನ್ ನಾದಿರ್ ಶಾ, ದಿಲ್ಲೀವಾಲಾರ ಹತ್ಯಾಕಾಂಡಕ್ಕೆ. ಪವಿತ್ರ ಸ್ಥಳದಿಂದ ಅಪವಿತ್ರ, ಭೀಭತ್ಸ, ಹತ್ಯಾಕಾಂಡಕ್ಕೆ ಆದೇಶವಿತ್ತು, ರಕ್ತಪಾತವನ್ನು ನೋಡಿ, ಆನಂದಿಸಿದ, ಈ ಸುಲ್ತಾನ್‌ನನ್ನು ಇರಾನಿನ ಜನರು ಇವನ ಉಪಟಳ ತಾಳಲಾರದೆ, ಮುಂದೆ ಸೆರೆ ಹಿಡಿದು, ತಲೆ ಕತ್ತರಿಸಿ, ರಕ್ತ ಹೀರುತ್ತಾರೆ!

"ಏನಿದೆ ಈ ಮಸೀದಿಯಲ್ಲಿ ನೋಡುವಂತಹದ್ದು?"

ಕಪೂರ್ ಕೇಳಿದ.

"ನೋಡುವಂತಹದ್ದು ಏನೂ ಇಲ್ಲ! ನಿಜ. ಆದರೆ ತಿಳಿದುಕೊಳ್ಳುವಂತಹದ್ದು ಬೇಕಾದಷ್ಟಿದೆ!"

"ದಿಲ್ಲೀಯಲ್ಲಿ ಸುಮಾರು ೨೫೦ ಕ್ಕೂ ಹೆಚ್ಚಿನ ಸ್ಮಾರಕಗಳು ಇವೆ ಎಂದು ಹೇಳುತ್ತಾರೆ. ನಮಗೆ ತಿಳಿದಿರುವುದು ಕೇವಲ ಆರು ಅಥವಾ ಏಳು ಸ್ಮಾರಕಗಳು."

"ಪ್ರತಿಯೊಂದು ಸ್ಮಾರಕವೂ ಚಿತ್ರವಿಚಿತ್ರ ಕಥೆ ಹೇಳುತ್ತದೆ!"

"ಹೌದು! ಹೇಗೆ ಪ್ರತಿಯೊಬ್ಬ ಮನುಷ್ಯ ತನ್ನದೇ ಕಥೆ ಹೇಳುತ್ತಾನೆಯೋ ಹಾಗೇ ಪ್ರತಿ ಸ್ಮಾರಕವೂ ಕಥೆ ಹೇಳುತ್ತದೆ!..... ನೀವು ಹೌಜ್ ಖಾಸ್‌ನಲ್ಲಿರುವ ಕಳ್ಳರ ಕಂಭ ನೋಡಿದ್ದೀರಾ?"

"ನೋಡಿಲ್ಲಾ!"

"ಬನ್ನಿ ಹೋಗೋಣ!"

ಆಗಲೇ ಗಂಟೆ ಎರಡು ಹೊಡೆದಿತ್ತು.

ಮನೆಗೆ ಹೋಗಿ ಮಲಗಿ ನಿದ್ರೆ ಮಾಡುವುದನ್ನು ಬಿಟ್ಟರೆ, ಬೇರೆ ಕೆಲಸವಿರಲಿಲ್ಲ. ಕಪೂರ್‌ನ ಆಹ್ವಾನ ನಿರಾಕರಿಸುವಂತಿರಲಿಲ್ಲ.

ಕೆಂಪುಕೋಟೆಯ ಬಸ್ ನಿಲ್ದಾಣದಿಂದ, ದಕ್ಷಿಣ ದಿಲ್ಲೀಯಲ್ಲಿರುವ ಹೌಜ್ ಖಾಸ್‌ಗೆ ಬಸ್‌ನಲ್ಲಿ ಪ್ರಯಾಣ ಬೆಳೆಸಿದೆವು. ಅರ್ಧ ಗಂಟೆಯಲ್ಲೇ ಹೌಜ್ ಖಾಸ್‌ಗೆ ಬಂದು ಸೇರಿದೆವು. ಅಲ್ಲಿಂದ ಐದು ನಿಮಿಷದ ದಾರಿ, ಸವೆಸಿದ ನಂತರ, ಸುಂದರ ಇಕ್ಕೆಡೆ ಸುಂದರ ಮರಗಿಡಗಳಿಂದ ಆವೃತವಾದ, ದೊಡ್ಡ ದೊಡ್ಡ ಬಂಗಲೋಗಳಿರುವ ಬಡಾವಣೆಗೆ ಬಂದು ಸೇರಿದೆವು. ನಾಲ್ಕು ರಸ್ತೆಗಳು ಸೇರುವ ಒಂದು ಚೌಕಕ್ಕೆ ಬಂದಾಗ ಅರಿವಾಯಿತು ನಾವು ಕಳ್ಳರ ಕಂಭವಿರುವ ಸ್ಥಳಕ್ಕೆ ಬಂದಿದ್ದೇವೆ ಎಂದು.

"ಇದೇ ನೋಡಿ ಚೋರ್ ಮೀನಾರ್."

ಶತಮಾನಗಳ ಗಾಳಿ, ಮಳೆ, ಬಿಸಿಲಿಗೆ ಕಪ್ಪಾಗಿ ನಿಂತಿತ್ತು ಒಂದು ಬೃಹತ್ ಕಂಭ. ಕಂಭದ ಗಾತ್ರ ಸುಮಾರು ೧೫ ರಿಂದ ೨೦ ಅಡಿ ಸುತ್ತು ಅಳತೆ ಇದ್ದು, ಬೃಹದಾಕಾರವಾಗಿತ್ತು. 'ಕಳ್ಳರ ಕಂಭ'ವೆಂದು ಏಕೆ ಕರೆಯುತ್ತಾರೆ?

"ಕಂಭ ಉರೂಟಾಗಿದ್ದರೂ, ಮಧ್ಯೆ ಮಧ್ಯೆ ಗೂಡುಗಳಿವೆಯಲ್ಲಾ, ಒಂದೊಂದು ಸೈಜ್‌ಕಲ್ಲು ಗಾತ್ರದಷ್ಟು ಬಿರುಕು- ಅವುಗಳನ್ನು ಬೇಕಂತಲೇ ಖಾಲೀ ಬಿಟ್ಟಿರುತ್ತಾರೆ. ಕಳ್ಳಕಾಕರನ್ನು ಹಿಡಿದು, ಅವರ ರುಂಡ ಕಡಿದು, ಈ ಗೂಡುಗಳಲ್ಲಿ ಇರಿಸುತ್ತಿದ್ದರಂತೆ. ಜನರು ಈ ದೃಶ್ಯವನ್ನು ನೋಡಿ, ಹೆದರಿ ಕಂಗಾಲಾಗಿ ಅಪರಾಧ ಮಾಡುವುದನ್ನು ನಿಲ್ಲಿಸುತ್ತಾರೆಂಬ ನಂಬಿಕೆ ಸುಲ್ತಾನರಿಗೆ."

"ತರಹ ತರಹ ದಂಡನೆಗಳನ್ನು ವಿಧಿಸುತ್ತಿದರಲ್ಲವೇ ಆ ಕಾಲದಲ್ಲಿ?"

"ದಂಡನೆ ಎಷ್ಟು ಕ್ರೂರವಾಗಿದ್ದರೂ, ಕಳ್ಳತನ, ದುಷ್ಕಾರ್ಯ, ಅಪರಾಧಗಳು ಕಡಿಮೆಯಾದ ಲಕ್ಷಣಗಳು ಮಾತ್ರ ಇಲ್ಲ! ಅವು ಹೆಚ್ಚಾಗಿ, ದಂಡನೆಯ ಕ್ರೂರತನ ಕಡಿಮೆಯಾಯಿತೇನೋ ಅನ್ನಿಸುತ್ತದೆ!"

ನನ್ನ ಮುಖವನ್ನು ದಿಟ್ಟಿಸಿ ನೋಡಿದ ಕಪೂರ್.

"ದಂಡನೆ ಕ್ರೂರವಾಗಿರಬೇಕು ಎಂದು ನಿಮ್ಮ ಅನಿಸಿಕೆಯಾ?"

"ಹಾಗಲ್ಲ! ಈಗಿನ ದಂಡನೆ ಕ್ರಮ ಸುಧಾರಿಸಿದೆಯಲ್ಲವೆ? ಆಗಿನ ಕಾಲದ ಕಠಿಣ, ಕ್ರೂರ, ಅಮಾನುಷ ದಂಡನೆ ಈಗ ಇಲ್ಲ, ಅಲ್ಲವೆ?"

"ದಂಡನೆ ಕ್ರಮ ಸುಧಾರಿಸಿದೆ ಎಂದು ಮೇಲ್ನೋಟಕ್ಕೆ ಹೇಳಿದರೂ, ಪ್ರತಿ ಹಂತದಲ್ಲೂ-ಅಂದರೆ, ಅಪರಾಧಗಳನ್ನು ಹಿಡಿಯುವುದರಿಂದ, ಅವರ ತಪ್ಪು ಒಪ್ಪಿಗೆಯನ್ನು ಪಡೆದುಕೊಂಡು, ಶಿಕ್ಷೆ ವಿಧಿಸುವವರೆಗೂ ಹಿಂಸೆಯ ನೆರವು ಪಡೆಯುತ್ತಾರೆ, ಅಧಿಕಾರಿಗಳು. ಇದಕ್ಕೇನು ಹೇಳುತ್ತೀರಿ?"

ನಾನು ಅವನ ಪ್ರಶ್ನೆಗೆ ಉತ್ತರ ನೀಡುವ ಮುನ್ನವೇ ಅಲ್ಲೇ ಅಡ್ಡಾಡುತ್ತಿದ್ದ ಒಬ್ಬ ವ್ಯಕ್ತಿ ನಮ್ಮ ಬಳಿ ಬಂದು,

"ಏನನ್ನು ನೋಡುತ್ತಿದ್ದೀರಿ?" ಎಂದು ಕೇಳಿದ.

"ಚೋರ್‌ಮೀನಾರ್‌ನ್ನು ನೋಡುತ್ತಿದ್ದೇವೆ."

"ಇದನ್ನು ನೋಡಿ ಏನಾಗಬೇಕಾಗಿದೆ?" ಪಿಚಕ್ಕನೆ ಬಾಯಿಯಲ್ಲಿದ್ದ ತಂಬಾಕಿನ ಕೆಂಪು ರಸವನ್ನು ಉಗುಳಿದ ಅವನು. ಉಗುಳಿದ ತಂಬಾಕು ರಸ ಬಿದ್ದ ಸ್ಥಳ ಕೆಂಪಗೆ ರಕ್ತ ಕಾರಿದ ಹಾಗೆ ಕಾಣಬಂತು. ದಿಲ್ಲೀ ರಸ್ತೆಗಳಲ್ಲಿ ಇನ್ನೂ ರಕ್ತ ಹರಿಯುತ್ತಿದೆ ಎನ್ನಿಸಿತು! ಸಾಯಂಕಾಲದ ಹವಾ ಕುಡಿಯಲು ಅಡ್ಡಾಡುವ ಪಿಂಚಣಿ ತೆಗೆದುಕೊಂಡ, ಕೇಂದ್ರಸರಕಾರದ ನೌಕರನಂತೆ ತೋರಿದ ಆತ. ದಿಲ್ಲೀ ತುಂಬಾ ಈ ತರಹದ ಜನರನ್ನು ಕಾಣಬಹುದಾದ್ದರಿಂದ, ನಾನು ಊಹಿಸಿದ ಹಾಗೆ ಈ ವ್ಯಕ್ತಿ, ಆಮೇಲೆ ವಿಚಾರಿಸಿದಾಗ ನನ್ನ ಅನಿಸಿಕೆ ನಿಜವಾಗಿತ್ತು. "ಇದು ತೊಘಲಕ್ ಕಾಲದ ಸ್ಮಾರಕ. ಚಾರಿತ್ರಿಕವಾಗಿ ಬಹಳ ಪ್ರಮುಖತೆಯನ್ನು ಹೊಂದಿದೆ" ಎಂದೆ.

"ನಿಮಗೆ ಬೇರೆ ಕೆಲಸವಿಲ್ಲವೆ? ಈ ಸತ್ತಸ್ಮಾರಕಗಳನ್ನು ನೋಡಿ, ಹೇಗೆ ಬದುಕುತ್ತೀರಿ?"

ಸರಸರನೆ ನೆಡದು, ಮುಂದೆ ಹೋದ ಆ ವ್ಯಕ್ತಿಯನ್ನು ನೋಡುತ್ತಾ ನಾವಿಬ್ಬರೂ ಅಲ್ಲೇ ನಿಂತೆವು.

'ಸತ್ತ ಸ್ಮಾರಕಗಳು?' ಸತ್ತಸ್ಮಾರಕಗಳು ಸತ್ತವರ ಕಥೆ ಹೇಳುತ್ತವೆ. ಗತಕಾಲದ ಪಳೆಯುಳಿಕೆಗಳು ಅವು. ಅವುಗಳು ಹೇಳುವ ಕಥೆಗಳು ನಮ್ಮನ್ನು ರಂಜಿಸುವುದಲ್ಲದೇ

ನಮ್ಮ ಜೀವನವನ್ನು ಬದಲಾಯಿಸಲು ತಿದ್ದಿಕೊಳ್ಳಲು ಸಹಾಯ ಮಾಡಲು ಪ್ರಯತ್ನಿಸುವುದಿಲ್ಲವೇ? ಸತ್ತ ಸ್ಮಾರಕಗಳು ತಮ್ಮ ಕಥೆಗಳನ್ನು ಹೇಳಿ ಸತ್ತು ಸುಣ್ಣವಾಗಿದ್ದ ನಮ್ಮ ಜೀವನಕ್ಕೆ ಜೀವದಾನ ಕೊಡಬಹುದಲ್ಲವೆ?

ಪಿಚಕ್ಕನೆ ಉಗುಳು ತುಪ್ಪಿದ ಕಪೂರ್. ಉಗುಳು ಕೆಂಪಗಿತ್ತು. ಯಾವಾಗ ಇವನು ತಂಬಾಕು ಹಾಕಲು ಕಲಿತ? ಪಿಂಚಣಿ ಮನುಷ್ಯ ಈಗ ತಾನೆ ತಂಬಾಕು ಎಂಜಲು ಉಗಿದು, ಇವನಿಗೆ ಹೇಳಿಕೊಟ್ಟನೆ?

"ಯಾವಾಗ ಕಲಿತೆ ತಂಬಾಕು ಜಗಿಯುವುದು?"

"ತಲೆ ಬಲಿತು, ಬುದ್ಧಿ ಬೆಳದಾಗಿನಿಂದ ಅಂತ ಕಾಣುತ್ತೆ!"

ಅವನ ಕೆಂಪು ತುಟಿ ನನ್ನನ್ನು ನೋಡಿ ಅಣಕಿಸುತ್ತಾ ಇದೆ ಎಂದು ತೋರಿತು.

"ಬುದ್ಧಿ ಬೆಳೆಯದೇ ಇದ್ದುದರಿಂದಲೇ ಈ ತಂಬಾಕು ಜಗಿಯುವುದನ್ನು ಕಲಿತಿರಬೇಕು!"

ಕಪೂರ್ ಮಾರುತ್ತರ ಕೊಡದೆ, ಮತ್ತೊಮ್ಮೆ ತಂಬಾಕು ಎಂಜಲನ್ನು ಉಗಿದು, ದಿಲ್ಲೀಯ ನೆಲಕ್ಕೆ ರಕ್ತದ ಓಕಳಿಯಾಡಿದ.

"ಬನ್ನಿ ಹೋಗೋಣ ನಮ್ಮ ಮನೆಗೆ. ಮಾಲಾವೀಯನಗರದಲ್ಲಿದೆ ನಮ್ಮ ಮನೆ. ಇಲ್ಲಿಗೆ ಬಹಳ ಹತ್ತಿರ."

ಗಮನವಿಡುವುದು, ಸಭ್ಯತೆ, ಸೌಜನ್ಯ ತೋರಿಸು ವುದು, ಪರಹಿತಚಿಂತನೆ ಮಾಡುವುದು, ನಾಗರೀಕತೆಯ ಲಕ್ಷಣಗಳಲ್ಲವೆ?

ಅವನ ಮಾತಿಗೆ ಎದುರಾಡದೆ ಹೆಜ್ಜೆ ಹಾಕಿದೆ.

ದಿಲ್ಲೀ ರಸ್ತೆ ತುಂಬಾ ತಂಬಾಕು, ವೀಳಯದೆಲೆ, ಎಂಜಲುವಿನ ಕಲೆ, ದಿಲ್ಲೀ ಸಿಂಹಾಸನಕ್ಕೆ ರಕ್ತ ಚೆಲ್ಲಿದ ಸುಲ್ತಾನ್-ಬಾದ್‌ಶಹ, ಅಸಂಖ್ಯಾತ ಸೈನಿಕರ ರಕ್ತ ಚೆಲ್ಲಿದ ನೆನಪು ತರಿಸುವಂತಿತ್ತು. ಕಾಲಕಾಲಕ್ಕೆ ಸಾಂಕ್ರಾಮಿಕ ರೋಗ ಹರಡಿ, ಅಸಂಖ್ಯ ದಿಲ್ಲೀವಾಲರ ಹತ್ಯಾಕಾಂಡಕ್ಕೆ ಕಾರಣವಾದ ಈ ಪಾನ್‌ವಾಲರನ್ನು ಶಿಕ್ಷಿಸುವ ಕ್ರಮ ಏಕೆ ಕೈಗೊಂಡಿಲ್ಲ ವೆಂಬುದೇ ಅಚ್ಚರಿ ಹುಟ್ಟಿಸುವಂತಿತ್ತು. ಸುಲಿಗೆ, ಲೂಟಿ, ಧರಣಿ, ಹಿಂಸೆ ಹಾನಿಗಳಿಂದ ತತ್ತರಿಸಿದ ದಿಲ್ಲೀ, ಈಗ ಈ ಪಾನ್‌ವಾಲರ ಅಪರಮಿತ ಉತ್ಸಾಹದ ಪಾನ್ ಕಬಳಿಸುವುದರಿಂದ, ದಿಲ್ಲೀವಾಲರ ಆರೋಗ್ಯವನ್ನು ಲೂಟಿ ಮಾಡಿ, ಅವರನ್ನು ಹಿಂಸಿಸುತ್ತಾ ಇದ್ದಾರೆ. ಈ ಪಾನ್ ಜಗುವಿಕೆಯಿಂದ ಆಗುವ ಆರೋಗ್ಯ ಹಾನಿಯನ್ನು ತಪ್ಪಿಸುವುದಕ್ಕೆ ಯಾರ ಮೊರೆ ಹೋಗಬೇಕು? ದೇವರ ಮೊರೆ ಹೋಗುವುದು ಅಸಾಧ್ಯ! ಏಕೆಂದರೆ, 'Cleanliness is next to Godliness' ಎಂಬ ಇಂಗ್ಲಿಷ್ ಗಾದೆ ನಮಗೆ ಬಾಧೆಯಲ್ಲವೆ? ಶುಚಿತ್ವಕ್ಕಿಂತ ದೈವತ್ವ

ಮೇಲು ಎಂದು ನಾವು ನಂಬಿರುವುದು, ನಮ್ಮ ಪ್ರತಿ ದೇವಮಂದಿರಗಳು, ಯಾತ್ರಾ ಸ್ಥಳಗಳು ಎತ್ತಿ ತೋರಿಸಿದೆಯಲ್ಲವೆ?

ಕಪೂರ್‌ನ ಮನೆ ಮೊದಲನೆ ಮಹಡಿಯಲ್ಲಿದ್ದ ಕಾರಣ, ನಡೆದು ಸುಸ್ತಾಗಿದ್ದ ನನ್ನ ಕಾಲುಗಳು ಮೆಟ್ಟಿಲು ಹತ್ತಲು ತಕರಾರು ಮಾಡಿದವು. ತಕರಾರಿಗೆ ಬೆಲೆ ಕೊಡದೇ ಮೆಟ್ಟಿಲು ಹತ್ತಿದೆ, ಕಾಲಿಗೆ ಬುದ್ಧಿ ಹೇಳದೆ ಮನೆಯೊಳಗೆ ಹೊಕ್ಕಿದ ನಂತರ, ಹಾಲಿನಲ್ಲಿ ಆರಾಮ ಕುರ್ಚಿಯಲ್ಲಿ ಕುಳಿತ ಸುಮಾರು ೭೦ ವರ್ಷ ವಯಸ್ಸಿನ ವ್ಯಕ್ತಿ ಕಂಡರು. ಅವರ ಕಣ್ಣುಗಳು ತೀಕ್ಷ್ಣವಾಗಿದ್ದವು. ನನ್ನನ್ನೇ ದಿಟ್ಟಿಸಿ ನೋಡಿದವು. ಅವರ ಏಕಾಂತತೆಗೆ ಭಂಗ ತಂದ ಇವ ಯಾರು ಎಂಬ ದೂರುವ ದೃಷ್ಟಿಯಾಗಿತ್ತು ಅವರ ದೃಷ್ಟಿ.

ನನಗೆ ರೂಮಿನಲ್ಲಿ ಕುಳಿತುಕೊಳ್ಳುವಂತೆ ಹೇಳಿ ಒಳಗೆ ನಡೆದ ಕಪೂರ್. ಐದೇ ನಿಮಿಷದಲ್ಲಿ ಎರಡು ಲೋಟ ಟಾ ತಂದು ಒಂದು ಲೋಟವನ್ನು ನನ್ನ ಕೈಗೆ ನೀಡಿದ. ಟಾ ಹೀರುತ್ತಾ ಕೇಳಿದೆ ನಾನು:

"ನಿನ್ನ ಹೆಂಡತಿ ಎಲ್ಲಿ?"

"ಅವಳು ನಮ್ಮ ಮನೆಯಲ್ಲಿ ಇಲ್ಲ!"

"ಅಂದರೆ?" ಚಕಿತಗೊಂಡು ನಾನು ಕೇಳಿದೆ.

"ಬೇರೆ ಮನೆ ಮಾಡಿಕೊಂಡು ಇದ್ದಾಳೆ!"

"ನಿನ್ನ ತಮ್ಮ ರಾಕೇಶ್?"

"ಅವನು ತನ್ನ ಹೆಂಡತಿ ಮಗನ ಜೊತೆ ಬೇರೆ ಮನೆ ಮಾಡಿಕೊಂಡು ಇದ್ದಾನೆ."

"ಕಷ್ಟವೇ ಆಯಿತಲ್ಲ ನಿನಗೆ?"

"ಕಷ್ಟ ನನಗೇನಿಲ್ಲ; ತಂದೆಗೆ ಕಷ್ಟ. ಊಟದ ತೊಂದರೆ ಏನೂ ಇಲ್ಲ. ಹಿಟ್ಟು ಕೊಟ್ಟರೆ ರೊಟ್ಟಿ ಮಾಡಿಕೊಡುವವರು ಇದ್ದಾರೆ, ಧಾಭಾಗಳಲ್ಲಿ ಸಬ್ಜೀ ಸಿಗುತ್ತದೆ. ತಂದೆಗೆ ಊಟದ ಚಿಂತೆಗಿಂತ ಸಂಗಾತಿ ಚಿಂತೆ ಹೆಚ್ಚು. ಈ ಚಿಂತೆ ಹೋಗಲಾಡಿಸಲಿಕ್ಕೆ ನನ್ನಕೈಲಿ ಸಾಧ್ಯವಿಲ್ಲ. ಆದಷ್ಟು ಅವರಿಗೆ ನಾನು ಕಂಪನಿ ಕೊಡುತ್ತೇನೆ. ನನ್ನ ವ್ಯಾಪಾರ, ಫ್ಯಾಕ್ಟರೀ ವ್ಯವಹಾರ, ಇತರ ಎಲ್ಲಾ ವಿಷಯಗಳನ್ನು ಅವರ ಬಳಿ ಹೇಳಿ, ಚರ್ಚಿಸಿ ಆದಷ್ಟು ಅವರ ಏಕಾಂತತೆಯನ್ನು ದೂರ ಮಾಡಲಿಕ್ಕೆ ಪ್ರಯತ್ನಿಸುತ್ತೇನೆ. ಆದರೆ ಅವರಿಗೆ ಅದು ನೈವೇದ್ಯ ಆದ ತರಹ ಕಾಣುವುದಿಲ್ಲ. ಏನು ಮಾಡುವುದು?"

"ನಿನ್ನ ತಮ್ಮ ಇಲ್ಲಿ ಬಂದು ಇರಬಹುದಲ್ಲ?"

ಕಪೂರ್‌ನ ಖಾಸಗೀ ಜೀವನದ ಬಗ್ಗೆ ಕೈ ಬಾಯಿ ಹಾಕುವುದು ಸೂಕ್ತವಲ್ಲವೆಂದು ತಿಳಿದರೂ, ಬಾಯಿ ಹಾಕಿ ಆಗಿತ್ತು.

"ತಮ್ಮನ ವಿಷಯ ಹೇಳಿದರೆ, ಜಿಗುಪ್ಸೆ ಆಗುತ್ತದೆ. ತಂದೆ ಬಹಳ ಕಷ್ಟ ಪಟ್ಟಿದ್ದರು ಅವನನ್ನು ಓದಿಸಲಿಕ್ಕೆ. ನಾನು ಓದಲಿಲ್ಲ, ಬರೀ ಮೆಟ್ರಿಕ್. ಇವನನ್ನು ಓದಿಸಿ M.Sc. ಮಾಡಿಸಿದರು. ಡ್ರಗ್ ಇನ್ಸ್‌ಪೆಕ್ಟರ್ ಹುದ್ದೆಗೆ ಯಾರ ಯಾರ ಕಾಲನ್ನು ಹಿಡಿದ್ದು ಕೆಲಸ ಕೊಡಿಸಿದರು. ಮದುವೆ ಕೂಡ ನನ್ನ ಮದುವೆ ಹಾಗೆ ಆಗಲಿಲ್ಲ. ಒಳ್ಳೇ ಸಂಬಂಧ ನೋಡಿ ಮದುವೆ ಮಾಡಿದರು. ಮದುವೆಯಾದ ಮೂರೇ ತಿಂಗಳಿಗೆ ಬೇರೆ ಮನೆ ಮಾಡಿದ. ಅದಕ್ಕೂ ಬೇಜಾರು ಮಾಡಲಿಲ್ಲ ತಂದೆ. ಮನೆಗೆ ಬರುವುದು ಕಡಿಮೆ ಮಾಡಿದಾಗಲೂ ಅವರಿಗೆ ಬೇಸರವೆನಿಸಲಿಲ್ಲ. ಅವನು ಚೆನ್ನಾಗಿದ್ದನಲ್ಲಾ ಅಷ್ಟೇ ಅವರಿಗೆ ಸಂತೋಷ. ಅವನು ಕಾರ್ ಖರೀದಿಸಿದ. ಸುದ್ದಿ ತಿಳಿದ ಮೇಲೆ, ತಂದೆ ತಾಯಿ ಇಬ್ಬರೂ ನೆರೆಹೊರೆಯವರಿಗೆಲ್ಲಾ ಸಿಹಿ ಹಂಚಿದ್ದರು. ಅಷ್ಟು ಸಂತೋಷ! ಆದರೆ ಒಂದು ದಿನ ಕೂಡ, ಕಾರಿನಲ್ಲಿ ಕೂರಿಸಿಕೊಂಡು ತಂದೆತಾಯಿಯರನ್ನು ಕರೆದುಕೊಂಡು ಸುತ್ತಾಡಿ ಬರಲಿಲ್ಲ. ತಾಯಿಗೆ ಆಸೆ ಇತ್ತು, ಮಗನ ಕಾರಿನಲ್ಲಿ ಕುಳಿತು ಹರಿದ್ವಾರಕ್ಕೆ ಹೋಗಬೇಕು ಎಂದು. ಗಂಗೆ ಸ್ನಾನ ಮಾಡಿ, ಪುಣ್ಯ ಕಟ್ಟಿಕೊಳ್ಳೋಣ ಎಂದು ಬಹಳ ಆಸೆ ಇತ್ತು. ಕೊನೆಗೆ ನಾನೇ ಕರೆದುಕೊಂಡು ಹೋದೆ, ರೈಲಿನಲ್ಲಿ! ತಮ್ಮನ ಕಾರು ದಿಲ್ಲೀ ತಿರುಗಾಟದಲ್ಲಿ ಬ್ಯೂಸೀ ಆಗಿತ್ತು!......."

ಕಪೂರ್ ಮಾತು ನಿಲ್ಲಿಸಿ, ಚಾ ಹೀರಲು ತೊಡಗಿದ.

ಹಸನ್ಮುಖಿ ಕಪೂರ್ ಏಕೋ ನಗುವನ್ನು ಕಳೆದುಕೊಂಡು ಚಿಂತೆ ಮಾಡುವ ಹಾಗೆ ತೋರಿತು. ತಾಯಿಯನ್ನು ನೆನೆದು ಚಿಂತಿತನಾಗಿರಬಹುದೇ? ತಾಯಿಯನ್ನು ಕಳೆದುಕೊಂಡರೂ ತಂದೆಯನ್ನು ಜೋಪಾನವಾಗಿ ನೋಡಿಕೊಳ್ಳುತ್ತಿದ್ದಾನಲ್ಲಾ ಈತ. ಒಂದೇ ಒಡಲಲ್ಲಿ ಹುಟ್ಟಿದರೂ, ಇಬ್ಬರು ಸಹೋದರರಲ್ಲಿ ಎಷ್ಟು ವ್ಯತ್ಯಾಸ! ರಾಕೇಶ್ ವಿದ್ಯಾವಂತ, ಒಳ್ಳೇ ಕೆಲಸ, ಕೈ ತುಂಬಾ ಹಣ, ಚಿಕ್ಕ ಚೊಕ್ಕ ಸಂಸಾರ, ತಂದೆಯನ್ನು ಸಾಕಲಾರದೇ ಹೋಗುವಷ್ಟು ನೀಚನೇ? ಅವಿದ್ಯಾವಂತನೇ? ಅಸಂಸ್ಕೃತನೇ? ತಂದೆಯ ಈ ಸ್ಥಿತಿ ಯಾರಿಗಾದರೂ ಕನಿಕರ ಹುಟ್ಟುವಂತಾಗುತ್ತದೆ. ಅವರಿಗೆ ಸಾಂತ್ವನಕ್ಕಿಂತಲೂ, ಕನಿಕರಕ್ಕಿಂತಲೂ, ಊಟ ಉಪಚಾರಕ್ಕಿಂತಲೂ ಜೊತೆಗಾರರ, ಮಕ್ಕಳ, ಬಂಧುಗಳ, ಸ್ನೇಹಿತರ ಒಡನಾಟ ಅಗತ್ಯವಾಗಿದೆ ಎನ್ನಿಸಿತು. ವಯಸ್ಸಾದ ಮೇಲೆ ಎಲ್ಲಾ ಅವಶ್ಯಕತೆಗಳಿಗಿಂತ ಹೆಚ್ಚಿನ ಅವಶ್ಯಕತೆ ಒಡನಾಟದ ಅವಶ್ಯಕತೆ. ಇದಿಲ್ಲದಿದ್ದರೆ ಹುಚ್ಚು ಹಿಡಿಯುವುದು ಸ್ವಾಭಾವಿಕವಲ್ಲವೆ?

"ತಾಯಿ ಸತ್ತ ಮೇಲೆ, ಅವಳ ಅಸ್ತಿಯನ್ನು ತನ್ನ ಕಾರಿನಲ್ಲಿ ತೆಗೆದುಕೊಂಡು ಹೋಗಿ, ಹರಿದ್ವಾರದಲ್ಲಿ ಗಂಗೆಯಲ್ಲಿ ವಿಸರ್ಜಿಸಿದ. ಬದುಕಿದ್ದಾಗ ಅವಳನ್ನು ಕರೆದೊಯ್ದು ಗಂಗಾಸ್ನಾನ ಮಾಡಿಸಲಾಗಲಿಲ್ಲ ಅವನಿಗೆ!"

ಕಪೂರ್ ಮತ್ತೆ ಮಾತಾಡಲು ಶುರು ಹಚ್ಚಿದ. ಅವನ ಧ್ವನಿಯಲ್ಲಿ ವಿಷಾದದ ಛಾಯೆ ಇತ್ತು.

"ದೇಹ ಸುಟ್ಟು ಹೋಗಿತ್ತು. ಅಸ್ತಿ ಆಗಲೇ ಕಾಣಿಸುತ್ತಿತ್ತು. ಮತ್ತೆ ಅದನ್ನು ಸುಡುವುದೆಂದರೆ ಅದಕ್ಕೆ ಅರ್ಥವೇ ಇರಲಿಲ್ಲ!"

ಕಪೂರ್‌ನ ವ್ಯಥೆಯ ಕಥೆ ಕೇಳಿ ಕಸಿವಿಸಿಯಾಯಿತು. ಕಪೂರ್ ಎದ್ದು ಕುಡಿದು ಬರಿದಾಗಿದ್ದ ಚಾ ಲೋಟಗಳನ್ನು ತೆಗೆದುಕೊಂಡು ಒಳಗೆ ಹೋದ.

ನಾನು ಸುತ್ತಲೂ ಕಣ್ಣೋಡಿಸಿದೆ. ಒಂದು ದೊಡ್ಡ ಮಂಚವೊಂದು ಬಿಟ್ಟರೆ ಬೇರೇನು ಉಪಕರಣಗಳು ಕಾಣಲಿಲ್ಲ. ಗೋಡೆಗೆ ಅಂಟಿಕೊಂಡಿದ್ದ ಅಲ್‌ಮೈರಾ ಮುಚ್ಚಿತ್ತು. ಎಲ್ಲೂ ಯಾವ ತರಹದ ದೇವರ ಚಿತ್ರವಾಗಲೀ, ಮನುಷ್ಯರ ಭಾವಚಿತ್ರ ವಾಗಲೀ ನೇತಾಡುತ್ತಿರಲಿಲ್ಲ. ಏಕಾಂತವಾಸ ಅನುಭವಿಸುತ್ತಾ ಇದ್ದರೂ, ಎಲ್ಲರ ಹಾಗೆ ಸಿನಿಮಾ ನಟನಟಿಯರ ಭಾವಚಿತ್ರ, ಕ್ಯಾಲೆಂಡರ್‌ಗಳು ಕೂಡ ಕಂಡುಬರಲಿಲ್ಲ.

"ಗಂಗಾನದಿಯಲ್ಲಿ ಅಸ್ತಿ ವಿಸರ್ಜನೆ ಮಾಡಿ, ತಾನೂ ಅದರಲ್ಲಿ ಮಿಂದು ತನ್ನ ಸಕಲ ಪಾಪಕರ್ಮಗಳನ್ನು ಕಳೆದು ಮನೆಗೆ ಬಂದ ರಾಕೇಶ್. ಮನೆಗೆ ಬಂದು ಒಳಗೆ ಕಾಲಿಟ್ಟು, ಮಾಡಿದ ಕೆಲಸವೆಂದರೆ, 'ಹರಿದ್ವಾರಕ್ಕೆ ಹೋಗಿ ಬಂದ ಖರ್ಚಿನ ಬಾಬ್ತು ನಿನ್ನದು! ಸಾವಿರ ರೂಪಾಯಿ ನೀನು ನನಗೆ ಕೊಡಬೇಕು" ಎಂದು ನನ್ನನ್ನು ಕೇಳಿದ!"

ಅಯ್ಯೋ! ಎಂತಹ ನೀಚ ಈ ರಾಕೇಶ್ ಕಪೂರ್?

ತಾಯಿಯ ಅಸ್ತಿ ವಿಸರ್ಜನೆಯ ಖರ್ಚನ್ನು ಹೊರುವಷ್ಟು ಭಾರವಾಯಿತೆ ಅವಳ ಅಸ್ತಿ? ತಾಯಿ ತನ್ನ ಅಸ್ತಿಯನ್ನು ವಿಸರ್ಜಿಸಲು ಆಸ್ತಿಯನ್ನೇನಾದರೂ ಬಿಟ್ಟಿ ದ್ದಳೆ? ಬಿಟ್ಟಿದ್ದರೆ ಈ ಸ್ಥಿತಿ ಯಾಕೆ ಬರುತ್ತಿತ್ತು? ಆಸ್ತಿಗೋಸ್ಕರವಾದರೂ, ಅಸ್ತಿಯನ್ನು ವಿಸರ್ಜಿಸಿ ಖರ್ಚು ಮಾಡಿ, ಅವಳ ಆತ್ಮಕ್ಕೆ ಶಾಂತಿ ನೀಡುತ್ತಿದ್ದನೇನೋ!

"ನಿಮ್ಮ ತಾಯಿ ಬಳಿ ಹಣ, ಆಸ್ತಿ ಏನಾದರೂ ಇತ್ತೇ?"

"ಇತ್ತು. ಬೇಕಾದಷ್ಟಿತ್ತು. ಆದರೆ ಆ ಆಸ್ತಿ ನಮಗೆ ಯಾರಿಗೂ ಬೇಡ ವಾಗಿತ್ತು!"

ಈಗ ತುಂಬ ನಗು ನಗುತ್ತಿದ್ದ ಕಪೂರ್!

"ಮಕ್ಕಳ ಮೇಲಿನ ಅಪಾರ ಪ್ರೀತಿ! ಇದು ಬಿಟ್ಟು ಬೇರೆ ಯಾವ ಆಸ್ತಿಯೂ ಅವಳ ಬಳಿ ಇರಲಿಲ್ಲ!"

ತಾಯಿಯ ಈ ಆಸ್ತಿಗೆ ಬೆಲೆ ಕಟ್ಟುವರ್‍ಯಾರಾದರೂ ಇದ್ದಾರೆಯೇ ಈ ಪ್ರಪಂಚದಲ್ಲಿ?

"ಕತ್ತಿನಲ್ಲಿ ಒಂದು ಚಿನ್ನದ ಸರವಿತ್ತು. ಅದು ಯಾರು ತೆಗೆದುಕೊಂಡರೋ, ಯಾವ ಮಾಯೆಯಲ್ಲಿ ಅದು ಮಾಯವಾಯಿತೋ ಒಂದೂ ತಿಳಿಯದು. ಅಂತೂ ಅವಳ ಅಂತಿಮ ಸಂಸ್ಕಾರವಾಯಿತು. ನನಗೆ ತಿಳಿದು ಬಂದ ಹಾಗೆ ತಿಥಿ ಮಾಡಿದ. ರಾಕೇಶ್‌ನ್ನು ಯಾವುದಕ್ಕೂ ಕೇಳಲಿಲ್ಲ."

ಅಂದು ರಾಕೇಶ್ ನನ್ನ ಮನೆಗೆ ಬಂದು, ತಾಯಿ ಸತ್ತ ಸುದ್ದಿ ಹೇಳಿದ ನೆನಪು ಮರು ಕಳಿಸಿತು. ಸುರದ್ರೂಪಿ ಯುವಕ, ವಿದ್ಯಾವಂತ, ಸುಸಂಸ್ಕೃತ ಎಂದು ನೋಡಿದರೆ ತಿಳಿಯುವ ಮುಖಚರ್ಯೆ. ಯಾವ ಹುತ್ತದಲ್ಲಿ ಯಾವ ಹಾವು ಇದೆಯೊ?

ಇದನ್ನೆಲ್ಲಾ ನನಗೆ ಯಾಕೆ ಹೇಳುತ್ತಿದ್ದಾನೆ ಈ ಕಪೂರ್? ತನ್ನ ಒಡಲೊಳಗಿನ ಸಂಕಟವನ್ನು ಒದರಿ ಬರಿದು ಮಾಡಿ, ಸಂಕಟ ಪರಿಹಾರಕ್ಕೆ ಯತ್ನಿಸುತ್ತಿದ್ದಾನೆಯೊ? ಆದರೆ ಅವನ ಮುಖಚರ್ಯೆಯಲ್ಲಿ ಸಂಕಟಪಟ್ಟು ಮನಸ್ಸು ವ್ಯಗ್ರವಾಗಿರುವ ಹಾಗೆ ತೋರಿಬರಲಿಲ್ಲ. ನಗುಮುಖದ ಮುಖವಾಡ ಹಾಕಿಕೊಂಡ ಈ ಮನುಷ್ಯ ನಿಜಕ್ಕೂ ಸಂಕಟಪಟ್ಟೇ ಇದ್ದಿರಬೇಕು ಎನ್ನಿಸಿತು.

"ನಿನ್ನ ಹೆಂಡತಿ? ತಾಯಿಯ ಸಾವಿನ ಸುದ್ದಿ ಕೇಳಿ, ಬರಲಿಲ್ಲವೆ?"

"ಬಂದಳು, ನೋಡಿದಳು. ಕಣ್ಣೀರು ಹಾಕಿದಳು, ಹೋದಳು!"

ಬಹಳ ಸಲೀಸಾದ ಉತ್ತರ. ಸೊಗಸಾಗಿತ್ತು ಅವನ ಉತ್ತರದ ಅರ್ಥ!

ಸಹೋದರನ ಕಥೆ ಒಂದು ಬಗೆಯದ್ದಾದರೆ, ಹೆಂಡತಿಯ ಕಥೆ ಹೇಗೆ? ಗೂಢವೇ ಆಗಿದೆಯಲ್ಲಾ!

"ಹೆಂಡತಿಯನ್ನು ಯಾಕೆ ಬಿಟ್ಟೆ ಮಾರಾಯಾ?"

ದೂರಿದೆ ಅವನನ್ನು. ಹೆಂಡತಿಯನ್ನು ಅವನು ಬಿಟ್ಟನೋ, ಅವಳೇ ಇವನನ್ನು ಬಿಟ್ಟಳೋ ಎಂಬ ಅಂಶ ಅವನ ಬಾಯಿಯಿಂದ ಬಿಡಿಸುವ ನೆಪ ಒಡ್ಡಿ ಕೇಳಿದ ಪ್ರಶ್ನೆಯಾಗಿತ್ತು.

"ನಾನೂ ಬಿಡಲಿಲ್ಲ, ಅವಳೂ ಬಿಡಲಿಲ್ಲ! ಆದರೆ, ನಾವು ಒಟ್ಟಿಗಿಲ್ಲ. ಬೇರೆಯಾಗೂ ಇಲ್ಲ!"

ಒಗಟುಗಳು ನನಗೆ ಇಷ್ಟ. ನನ್ನ ಇಷ್ಟ ಕಪೂರ್‌ನಿಗೆ ಹೇಗೆ ತಿಳಿಯಿತು! ನೇರವಾಗಿ ಉತ್ತರ ಕೊಡದೆ ಒಗಟು ಸೇರಿಸಿ, ವಿಷಯವನ್ನು ಗೂಢವಾಗಿಸಿ ತಲೆಗೆ ಕಸರತ್ತು ನೀಡುತ್ತಾ ಇದ್ದಾನೆ ಈ ಖದೀಮಾ!

"ಸಾಕಪ್ಪಾ ನಿನ್ನ ಒಗಟಿನ ಉತ್ತರ! ನೇರವಾಗಿ ಹೇಳಬಾರದಾ?"

ಕಪೂರ್‌ನ ಕಣ್ಣಿನಲ್ಲಿ ತುಂಟತನ ಮಿಂಚಿತ್ತು.

"ಅದೊಂದು ದೊಡ್ಡ ಕಥೆ. ಇನ್ಯಾವಾಗಲಾದರೂ ಹೇಳುತ್ತೇನೆ!"

ಒಗಟಿನ ಗಂಟನ್ನು ಬಿಚ್ಚಲಿಕ್ಕೆ ಇಷ್ಟ ಪಡಲಿಲ್ಲ ಕಪೂರ್. ನಾನೂ ಒತ್ತಾಯಿಸ ಲಿಲ್ಲ.

"ಸರ್ದಾರ್ಜೀ ಭೇಟಿಯಾಗಿದ್ದನೆ? ತುಂಬಾ ದಿವಸಗಳಾದವು ಅವರನ್ನು ನೋಡದೆ." ಅಚಾನಕ್ಕಾಗಿ, ಸರ್ದಾರ್ಜೀಯ ನೆನಪಾಗಿ ಕೇಳಿದೆ.

"ಸರ್ದಾರ್ಜೀ?...... ಓ! ನಿಮಗೆ ಗೊತ್ತಿಲ್ಲವೆ? ಅವನು ಪಂಜಾಬ್‌ಗೆ ಹೋಗಿದ್ದಾನೆ."

"ಪಂಜಾಬಿಗೆ? ಯಾಕೆ?"

ಕಪೂರ್ ಸುಮ್ಮನಾದ. ಉತ್ತರ ಹೇಳಲಿಕ್ಕೆ ತಡವರಿಸುತ್ತಾ ಇರುವುದು ನನಗೆ ಮನವರಿಕೆಯಾಯಿತು. ನನ್ನ ಕುತೂಹಲ ಮಾತ್ರ ಹೆಚ್ಚುತ್ತಾ ಹೋಯಿತು.

"ಏನು ಸಮಾಚಾರ? ಯಾಕೆ ಉತ್ತರ ಕೊಡುತ್ತಿಲ್ಲಾ ನೀನು?"

"ಅಮೃತ್‌ಸರಕ್ಕೆ ಹೋಗಿದ್ದಾನೆ. ಆತಂಕವಾದಿಗಳ ಜೊತೆ ಕೂಡಿದ್ದಾನೆ ಎಂದು ತೋರುತ್ತದೆ."

ನನ್ನ ಎದೆ ಧಸಕ್ಕೆಂದಿತು.

ಸರ್ದಾರ್ಜೀ ಇಷ್ಟು ಬೇಗ ಆತಂಕವಾದಿಯಾಗಿ ಪರಿವರ್ತನೆಯಾಗಿಬಿಟ್ಟನೆ? ಖಾಲಿಸ್ಥಾನದ ಪರ ಸಹಾನುಭೂತಿ ಇರುವ ವಿಷಯ ನನ್ನ ಮನಸ್ಸಿಗೆ ಬಂದಿತ್ತು. ಆದರೆ ಇಷ್ಟು ಬೇಗ! ನಮಗೆ ಎಳ್ಳಷ್ಟೂ ಸುಳಿವು ಕೊಡದೆ ಆತಂಕವಾದಿ ಜೊತೆ ಸೇರಿದ್ದಾನಲ್ಲಾ!

"ನಿನಗೆ ಹೇಗೆ ತಿಳಿಯಿತು?" ಅನುಮಾನವಾಗಿತ್ತು ನನಗೆ.

"ಹೇಗೋ ತಿಳಿಯಿತು. ಅದರ ವಿಷಯ ಯಾಕೆ ಚರ್ಚೆ?"

ಇನ್ನು ಚರ್ಚೆಗೆ ಫಲವಿಲ್ಲವೆಂದು ಮನಗಂಡು, ಕುಳಿತಲ್ಲಿಂದ ಎದ್ದು ಹೊರ ಹೊರಟೆ. ಕಪೂರ್ ಹಿಂಬಾಲಿಸಿದ. ಬಸ್‌ನಿಲ್ದಾಣದವರೆಗೆ ಕಪೂರ್ ಜೊತೆಗೆ ಬಂದ. ದಾರಿಯಲ್ಲಿ ಇಬ್ಬರೂ ಮೌನವಾಗಿ ಹೆಜ್ಜೆ ಹಾಕಿದೆವು. ನನ್ನ ಮನಸ್ಸಿನಲ್ಲಿ ಸರ್ದಾರ್ಜೀ ಯದೇ ಧ್ಯಾನ!

ಈ ಸರ್ದಾರ್ಜೀಗಳು ಏಕೆ ವ್ಯವಸ್ಥಿತ ಸರಕಾರದ ಎದುರು ಹೋರಾಡುವ ಮನೋಭಾವ ಉಳ್ಳವರಾಗಿದ್ದಾರೆ? ಇವರ ಧರ್ಮದ ತತ್ವಗಳಾದರೂ ಏನು? ಗುರು ನಾನಕ್ ಇವರ ಆದಿ ಗುರುವಾಗಿದ್ದರೂ, ಅವನು ಪರಸ್ಪರ ಪ್ರೀತಿ ಸೌಹಾರ್ದತೆ, ಒಬ್ಬನೇ ದೇವರಲ್ಲಿ ನಂಬಿಕೆ ಇತ್ಯಾದಿ ಪ್ರತಿಪಾದಿಸಿದವನಲ್ಲವೆ? ಹಿಂದೂ-ಮುಸ್ಲಿಂ ಇಬ್ಬರ ಧರ್ಮಗಳಲ್ಲೂ ಏಕ ರೀತಿಯ ತತ್ವಗಳಿದ್ದು, ಒಬ್ಬನೇ ದೇವನಿದ್ದಾನೆಂಬ ಅಂಶವನ್ನು ಎತ್ತಿ ಹೇಳಿ, ತನ್ನ ಗುರುವಾಣಿಯಲ್ಲಿ ಸಾಧು-ಸಂತರ ಸೂಕ್ತಿಗಳ ತತ್ವ

ಗಳನ್ನು ಉದ್ಧರಿಸಿ ಹಾಡಿದ್ದಾನಲ್ಲವೇ? ತನ್ನ ನಂತರ, ತನ್ನ ಸಂತತಿಯವರು ಗುರುಪೀಠ ಅಲಂಕರಿಸಕೂಡದೆಂಬ ನಿಯಮ ಪಾಲಿಸಿ, ತನ್ನ ಶಿಷ್ಯನನ್ನು ಗುರುಪೀಠವನ್ನು ಅಲಂಕರಿಸುವಂತೆ ವ್ಯವಸ್ಥೆ ಮಾಡಿದನಲ್ಲವೆ? ಇಂತಹ ಪವಿತ್ರ ಪಂಥದಲ್ಲಿ ಗುರುಪೀಠ ಅಲಂಕರಿಸಿದವರಲ್ಲಿ ತಮ್ಮ ಜೀವವನ್ನೇ ಬಲಿದಾನ ನೀಡಿದ ಗುರುಗಳು ಪ್ರಾಯಶಃ ಯಾವುದೇ ಧರ್ಮದಲ್ಲಿ ಕಾಣಸಿಗಲಿಕ್ಕಿಲ್ಲ. ಗುರುಪೂಜೆ, ವ್ಯಕ್ತಿ ಪೂಜೆ, ಮೂರ್ತಿ ಪೂಜೆ ತ್ಯಜಿಸಿದ ಈ ಪಂಥ, ಗುರುಗ್ರಂಥವನ್ನು ಪೂಜಿಸುವ ಮಹಾನ್ ಪಂಥವಾಗಿ ಮೆರೆದಿದೆಯಲ್ಲವೆ? ಗ್ರಂಥಪ್ರಿಯರು ಬರಿದೇ ಪೂಜಿಸಿ ತೃಪ್ತಿಪಡುವ ಕಾರ್ಯ ಮಾಡುವ ಬದಲು ಗ್ರಂಥವನ್ನು ಓದಿ ಪೂಜಿಸಿ ಅದರಂತೆ ನಡೆಯುವ ಪರಿಪಾಠ ಈ ಸಿಖ್‌ರಿಗಲ್ಲದೆ ಇನ್ನಾರಿಗೆ ಇದೆ? ತಮ್ಮ ಧರ್ಮಕ್ಕೆ ಸಂಕಟ ಬಂದಾಗ, ಕೈ ಕಟ್ಟಿ ಕುಳಿತು, ಹೇಡಿಯಂತೆ ತಲೆಕೊಡುವ ಪರಿಪಾಠ ಇಟ್ಟುಕೊಳ್ಳದೆ, ಸಿಂಹದಂತೆ ಗರ್ಜಿಸಿ, ಕೈಗೆ ಕತ್ತಿ ಹಿಡಿದು ಹೋರಾಡಿ ಧರ್ಮರಕ್ಷಣಾ ಕಾರ್ಯ ಎಸಗಿದ ಈ ಸಿಖ್‌ರು ವೀರರಲ್ಲವೆ? ಗುರುಗೋವಿಂದಸಿಂಗ್‌ರ ಈ ಮಹಾನ್ ಕಾರ್ಯ ಒಂದು ಜನಾಂಗ ವನ್ನೇ ಬಲಿಷ್ಠ ಜನಾಂಗವನ್ನಾಗಿ ಮಾಡಿದ ಕಾರ್ಯವಾಗಿದೆಯಲ್ಲವೇ? ಇಂತಹ ಜನಾಂಗ ಏಕೆ ಮತ್ತೆ ತಡಪಡಿಸುತ್ತಿದೆ? ಇಂದು ಎಂತಹ ಸಂಕಟ ಒದಗಿ ಬಂದಿದೆ? ತಮ್ಮ ಧರ್ಮ ಅಳಿದು ಹೋಗುತ್ತಿದೆ ಎಂಬ ಭಯವೇ? ಮಹಾರಾಜಾ ರಂಜಿತ್ ಸಿಂಗ್ ಕಟ್ಟಿದ ಪಂಜಾಬ್ ರಾಜ್ಯ ತಮ್ಮದೇ ರಾಜ್ಯವಾಗಬೇಕೆಂಬ ಹೆಬ್ಬಯಕೆಯೆ? ತಮ್ಮ ವಿಶಿಷ್ಟವಾದ ಧರ್ಮ, ನೀತಿ, ನಡತೆ, ರೀತಿ-ರಿವಾಜುಗಳನ್ನು ಕಾಪಾಡಿಕೊಳ್ಳಲು ಪ್ರತ್ಯೇಕ ರಾಜ್ಯದ ಬಯಕೆ ಉಂಟಾಗಿದೆಯೆ? ಶಾಂತಿ, ಅಹಿಂಸೆ, ಭಕ್ತಿ ಜ್ಞಾನ, ಕರ್ಮ ಮಾರ್ಗಗಳನ್ನು ಅನುಸರಿಸಿ, ಮೋಕ್ಷ ಪಡೆಯುವ ಧರ್ಮ ಪಾಲನೆಗೆ ತಿಲಾಂಜಲಿ ನೀಡಿ, ಹಿಂಸಾತ್ಮಕ ಮಾರ್ಗಗಳಿಗೆ ಶರಣು ಹೋಗಲು ಕಾರಣವಾದರೂ ಏನು?

ಈ ಸರ್ದಾರ್ಜೀ ಭಯೋತ್ಪಾದಕನಾಗಲು ಬಲವಂತವಾದ ಕಾರಣ ಇರಲೇ ಬೇಕಷ್ಟೆ!

ಭರ್ ಎಂದು ಒಬ್ಬ ಸ್ಕೂಟರ್ ಸವಾರ ನನ್ನ ಹಿಂದೆಯೇ ಬಂದು ಗಕ್ಕನೆ ಬ್ರೇಕ್ ಹಾಕಿ ನಿಲ್ಲಿಸಿದ. ಬ್ರೇಕ್‌ನ ಶಬ್ದ ಕೇಳಿ ಗಾಬರಿಯಾಗಿ ಹಿಂತಿರುಗಿ ನೋಡಿದೆ.

"ಸಾಯಬೇಕೆಂದು ಮಾಡಿದ್ದೀರಾ? ರಸ್ತೆ ಮಧ್ಯದಲ್ಲಿ ನಡೆದುಹೋಗುವ ನಿಮಗೆ ಏನಂತ ಬೈಯ್ಯುವುದು?"

ತಲೆಗೆ ಪಗಡಿ ಹಾಕಿದ್ದ ಅವನು ಸಿಖ್‌ನಾಗಿದ್ದ.

"ನೋಡಲಿಕ್ಕೆ ಸಭ್ಯರಂತೆ ಕಾಣುತ್ತೀರಾ, ನಿಮಗೆ ಬೈಯ್ಯಲಿಕ್ಕೂ ಮನಸ್ಸಾಗುವು ದಿಲ್ಲ!"

"ಕಮೀನೇ, ಕುತ್ತೇ, ಬದ್ಮಾಶ್ ಅಂತ ಬೈದು ಹೋಗಬಾರದೇ? ಸುಮ್ಮನೆ ಭಾಷಣ ಬಿಗಿಯುತ್ತಾ ನಿಂತಿದೀಯಲ್ಲಾ!"

ಕಪೂರ್ ನಗುತ್ತಾ ಸ್ಕೂಟರ್ ಸವಾರನನ್ನು ಛೇಡಿಸಿದ.

"ಕ್ಷಮಿಸಿ! ನಾನು ಯಾವುದೋ ಗುಂಗಿನಲ್ಲಿದ್ದೆ. ಗಮನಿಸಲಿಲ್ಲ!"

ಕ್ಷಮೆ ಯಾಚಿಸಿದೆ ಸಿಖ್‌ನನ್ನು. ನಿಜಸ್ಥಿತಿಯನ್ನು ಅವನಿಗೆ ಹೇಳಿದರೆ ಅವನು ನಕ್ಕಾನು! ಸಿಖ್‌ನಿಗೇ ಸಿಖ್‌ರ ಬಗ್ಗೆ ಅವರ ಧರ್ಮದ ಬಗ್ಗೆ, ಅವರ ನಡೆ ನುಡಿಗಳ ಬಗ್ಗೆ ಚಿಂತಿಸುತ್ತಾ ಇದ್ದು, ಅವನ ಸ್ಕೂಟರ್‌ಗೆ ಸಿಕ್ಕಿ ಹಾಕಿಕೊಳ್ಳುವಂತಾಗಿತ್ತು ಎಂದು ಹೇಳಿದರೆ, ಅವ ನಂಬಿಯಾನೆ? ನಂಬಿದರೂ ನನ್ನನ್ನು ಸುಮ್ಮನೆ ಬಿಟ್ಟಾನೆಯೇ? ಸುಮ್ಮನೆ ಬಿಟ್ಟರೂ, ಕೊನೇ ಪಕ್ಷ ನನ್ನ ಬಗ್ಗೆ ಕನಿಕರಗೊಳ್ಳದಿರುವವನೆ?

ಸ್ಕೂಟರ್ ಸ್ಟಾರ್ಟ್ ಮಾಡಿ, ಸಿಖ್ ಮಹಾಶಯ ಹೊರಡಲು ಅನುವಾದ.

ನಾನು ಅವನ ಕೂಡ ಜಗಳವಾಡದೆ ಚರ್ಚೆ ಮೊಟಕುಗೊಳಿಸಿದ್ದು, ಕ್ಷಮೆ ಯಾಚಿಸಿದ್ದು ಅವನಿಗೆ ಆಶ್ಚರ್ಯವಾಗಿರಬೇಕು. ನನ್ನ ಮುಖವನ್ನು ನೋಡಿ, ಏನೋ ಹೇಳಬೇಕೆಂದು ಬಾಯಿ ತೆರೆಯುವ ಮುನ್ನ ಕಪೂರ್ ನುಡಿದಿದ್ದ.

"ಬೈಯ್ಯಲಿಕ್ಕೇ ನಾಚಿಕೆಯೆ? ಅಥವಾ ಉದಾಸೀನವೇ?"

ಕಪೂರ್ ಕಾಲುಕೆರೆದು ಜಗಳಕ್ಕೆ ಆಹ್ವಾನ ನೀಡುತ್ತಾ ಇದ್ದ. ಈ ದಿನ ಏನಾಗಿದೆ ಇವನಿಗೆ? ಯಾಕೆ ಈ ತರಹ ನಡವಳಿಕೆ?

"ಕ್ಷಮೆ ಕೇಳಿದ ಮೇಲೆ ಬೈದು ಜಗಳ ಕಾಯಬೇಕೆ ಇವರ ಹತ್ತಿರ? ಆದರೆ ನೀನು ಮಾತ್ರ ಬದ್ಮಾಶ್, ಚೋರ್!"

ಕಪೂರ್‌ಗೆ ಬೈಗಳ ಇತ್ತು, ಮರುಗಳಿಗೆಯಲ್ಲೇ ಸ್ಕೂಟರ್ ಓಡಿಸಿ ಮಾಯವಾಗಿದ್ದ.

ಕಪೂರ್ ಜೋರಾಗಿ ನಕ್ಕು, ನುಡಿದ,

"ಅವನು ಈ ದಿನ ಬೈಯ್ಯದೇ ಹೋಗಿದ್ದರೆ, ರಾತ್ರಿ ನಿದ್ರೆ ಮಾಡುತ್ತಿರಲಿಲ್ಲ. ಬೈಗುಳದ ಹಾಡು ಹೇಳದಿದ್ದರೆ, ನಿದ್ರೆಯಾದರೂ ಹೇಗೆ ಬರುತ್ತದೆ?"

ಬಸ್ ನಿಲ್ದಾಣಕ್ಕೆ ಬಂದು ಸೇರಿದೆವು. ಕರೋಲ್ ಬಾಗ್ ಕಡೆ ಹೋಗುವ ಬಸ್ ಹಿಡಿದು, ಕಪೂರ್‌ನನ್ನು ಬೀಳ್ಕೊಟ್ಟೆ. ಬಸ್‌ನಲ್ಲಿ ವಿಪರೀತ ನೂಕು ನುಗ್ಗಲಿದ್ದರೂ, ನೇತಾಡುವಷ್ಟು ಜಾಗ ಸಿಕ್ಕಿತು. ಮುಂದೆ ನಿಂತಿದ್ದವ ತನ್ನ ಸಂಗಾತಿಯೊಡನೆ ಜೋರಾಗಿ ಹರಟುತ್ತಿದ್ದ. ಬೇಡ ಬೇಡವೆಂದರೂ, ಅವನ ಮಾತುಗಳು ಕಿವಿಗೆ ಅಪ್ಪಳಿಸುತ್ತಿದ್ದವು.

"ದಿಲ್ಲೀ ಶಹರ್‌ನ ಬಸ್‌ಗಳಲ್ಲಿ ಪ್ರಯಾಣ ಮಾಡುವುದು ಕ್ಷೇಮಕರ ಅಲ್ಲ!"

"ಯಾಕೆ?" ಅವನ ಸಂಗಾತಿ ಕೇಳಿದ.

"ಬಾಂಬ್ ಇಟ್ಟಿರುತ್ತಾರೆ!"

"ಬಾಂಬ್? ಬಸ್‌ನಲ್ಲಿ ಯಾಕೆ ಬಾಂಬ್ ಸಾಗಿಸುತ್ತಾರೆ?"

"ಸಾಗಿಸುವುದಿಲ್ಲವೋ ಬೆಪ್ಪೆ! ಇಡುತ್ತಾರೆ. ಇಟ್ಟು ಸಿಡಿಸುತ್ತಾರೆ!"

"ಹೌದಾ! ಬಾಂಬ್ ಇಟ್ಟು ಬಸ್‌ನ್ನು ಸುಡುತ್ತಾರಾ? ಯಾಕೆ?"

"ಯಾಕೆ ಅಂದರೆ ಜನರಿಗೆ ಸಾವು ನೋವಾಗಲೀ ಅಂತ!" ವಿವರಿಸಿದ ಆತ.

"ಮತ್ತೆ ಬಾಂಬ್ ಬಸ್‌ನಲ್ಲಿಟ್ಟು ಬಸ್ ಸುಡುತ್ತಾರೆ ಎಂದೆಯಲ್ಲಾ!"

ಸಂಗಾತಿಯ ಮಾತು ಕೇಳಿ ಬಸ್‌ನಲ್ಲಿ ಕುಳಿತಿದ್ದವರೆಲ್ಲಾ ಮುಸಿ ಮುಸಿ ನಗ ಹತ್ತಿದ್ದರು.

"ಎಂತಹ ಮೂರ್ಖ ನೀನು! ನನ್ನ ಮಾನಮಾರ್ಯದೆ ತೆಗೀತಾ ಇದ್ದೀಯಲ್ಲಾ!" ಸಿಡುಕಿದ ಆತ.

"ಬಸ್‌ಗೆ ಬಾಂಬ್ ಹಾಕಿದರೆ, ಜನರು ಸಾಯುವುದಿಲ್ಲವೇ? ನಿನಗೆ ಅಷ್ಟು ತಿಳಿಯುವುದಿಲ್ಲವೇ?"ಮತ್ತೆ ಸಿಡುಕಿದ ಆತ.

"ಹಾಗಾದರೆ ಬಸ್‌ನಲ್ಲಿ ಪ್ರಯಾಣ ಮಾಡುವುದೇ ತಪ್ಪಲ್ಲಾ! ನಡೆದು ಹೋಗೋಣ ಬಾ!"

ಹೆದರಿಕೆ ಆದ ಹಾಗಿತ್ತು ಅವನಿಗೆ. ಅವನ ಮುಖವನ್ನೇ ದೃಷ್ಟಿಸಿದೆ. ಎಳೇ ಪ್ರಾಯದ ವ್ಯಕ್ತಿ ಹಳ್ಳಿಯಿಂದ ದಿಲ್ಲೀಗೆ ಬಂದ ಹಾಗೆ ತೋರುತ್ತಿದ್ದ. ಅವನ ಹಿಂದೀ ಹರಿಯಾಣದ ಹಿಂದೀ ಹಾಗೆ ತೋರುತ್ತಿತ್ತು. "ಹೆದರಬೇಡ! ಏನೂ ಆಗೋದಿಲ್ಲ! ಇನ್ನೇನು ಸ್ವಲ್ಪ ದೂರ!"

ಸಂತಯಿಸಿದ ಆತ.

"ಬಾಂಬ್ ಯಾತರಲ್ಲಿ ಇಟ್ಟಿರುತ್ತಾರೆ?"

ಮತ್ತೆ ಪ್ರಶ್ನೆ ಶುರುವಾಯಿತು.

"ಟಿಫನ್ ಕ್ಯಾರಿಯರ್‌ನಲ್ಲಿ!"

ಯಾರೋ ಕೂಗಿದರು! ಜನ ನಗಲಿಕ್ಕೆ ಶುರು ಹಚ್ಚಿದರು.

"ಸೂಟ್‌ಕೇಸ್‌ನಲ್ಲಿ!"

ಇನ್ನೊಬ್ಬ ಕೂಗಿದ! ಮತ್ತೆ ನಗು.

"ನೋಡು! ಅಲ್ಲೊಬ್ಬ ಸೂಟ್‌ಕೇಸ್ ಹಿಡಿದುಕೊಂಡಿದ್ದಾನೆ. ಅದರಲ್ಲಿ ಬಾಂಬ್ ಇಟ್ಟಿದ್ದಾನೆ, ಅಲ್ಲವೇ?"

"ನೀನು ಸುಮ್ಮನೆ ಬಾಯಿ ಮುಚ್ಚಿಕೊಂಡು ಇರುತ್ತೀಯಾ?" ಆತ ಗದರಿಸಿದ.

"ಹೌದು! ಹೌದು! ಸೂಟ್‌ಕೇಸ್‌ನಲ್ಲಿ ಬಾಂಬ್! ಸೂಟ್‌ಕೇಸ್‌ನಲ್ಲಿ ಬಾಂಬ್! ಸೂಟ್‌ಕೇಸನ್ನು ಬಿಚ್ಚಿ ನೋಡಿ!"

ಸಂಗಾತಿ ಜೋರಾಗಿ ಕಿರುಚಲಾರಂಭಿಸಿದ. ಜನ ಹುಚ್ಚೆದ್ದು ನಗಲಾರಂಭಿಸಿದರು. ಸೂಟ್‌ಕೇಸ್‌ನ್ನು ಕೈಯಲ್ಲಿ ಹಿಡಿದ ವ್ಯಕ್ತಿಯ ಮುಖ ಕೋಪದಿಂದ ಕೆಂಡದಂತೆ ಕೆಂಪಾಯಿತು.

"ಬದ್ಮಾಶ್!ನಾನು ಯಾರು ಅಂದುಕೊಂಡಿದ್ದೀಯ. ಸರಕಾರೀ ಅಧಿಕಾರಿ ನಾನು! ಕೆಲಸ ಮುಗಿಸಿ, ಮನೆಗೆ ಹೋಗುತ್ತಾ ಇದ್ದೇನೆ! ತಿಳಿತೇನು?"

"ಯಾರಿಗೆ ಗೊತ್ತು? ನೀನು ಅಧಿಕಾರಿ ಆದರೆ ಸೂಟ್‌ಕೇಸ್‌ನಲ್ಲಿ ಬಾಂಬ್ ಇರಬಾರದೇ?"

ಸಂಗಾತಿ ಗಟ್ಟಿಯಾಗಿ ಒದರಿದ.

ಬಸ್‌ನಲ್ಲಿ ಗಲಾಟೆ ಶುರುವಾಯಿತು.

"ಇಳಿಸಿರಿ ಅವನನ್ನು! ಬದ್ಮಾಶ್!"

"ಬಾಯಿಗೆ ಬಂದ ಹಾಗೆ ಮಾತನಾಡುತ್ತಾನೆ. ಇಳಿಸಿರಿ! ಇಳಿಸಿರಿ!"

ಬಸ್ ಗಕ್ಕನೆ ನಿಂತಿತು.

"ಏನು ಗಲಾಟೆ?"

ಚಾಲಕ ಜೋರಾಗಿ ಕೇಳಿದ.

'ಥೂ! ನಿನ್ನಿಂದ ನನ್ನ ಮಾನ ಹೋಯಿತು. ಬಾ! ಇಳೀ ಕೆಳಗೆ!"

ಆತ ಬಲವಂತದಿಂದ, ತನ್ನ ಸಂಗಾತಿಯನ್ನು ಕೈ ಹಿಡಿದು, ಬಸ್‌ನಿಂದ ಕೆಳಗೆ ಇಳಿಸಿ, ಹೊರಟುಹೋದ. ಆಗಲೇ ಕತ್ತಲು ಆವರಿಸಿತ್ತು ಹೊರಗಡೆ.

ಬಸ್ ನಿಧಾನವಾಗಿ ಚಲಿಸತೊಡಗಿತು. ಸ್ವಲ್ಪವೇ ದೂರ ಸಾಗಿರಬಹುದು. 'ಢಮ್" ಎಂದು ಕಿವುಡುಗಚ್ಚುವ ಶಬ್ದ ಕೇಳಿತು. ನಾನು ಕೆಳಗೆ ಬಿದ್ದಿದ್ದೆ. ನನ್ನ ಮೇಲೆ ಕೆಲವರು ಬಿದ್ದಿದ್ದರು. ಎಲ್ಲೆಲ್ಲೂ ಕೂಗಾಟ, ಗೋಳಾಟದ ಶಬ್ಧದ ನಡುವೆ ಯಾರೋ ನನ್ನ ದೇಹವನ್ನು ಎಳೆದು ಬಸ್‌ನ ಹೊರಗೆ ಹಾಕಿದ್ದರು!ಮೆಲ್ಲನೆ ಎದ್ದು ನೋಡಿದಾಗ, ಬಸ್‌ನಿಂದ ಹೊಗೆಯ ಪರದೆ ಹರಡಿ ಎಲ್ಲವನ್ನೂ ಮರೆ ಮಾಡಿತ್ತು. ನನಗೆ ಮೂರ್ಛೆ ಹೋಗಿತ್ತು. ನನಗೆ ಅರಿವು ಬಂದಾಗ ಆಸ್ಪತ್ರೆಯ ಮಂಚದ ಮೇಲೆ ಮಲಗಿದ್ದೆ!

# 9

"ಸಾಬ್! ನಾನು ಬದುಕಿ ಬಂದದ್ದೇ ದೇವರ ದಯದಿಂದ!" ಸಾಗೂ, ತನ್ನ ಬಟ್ಟಲು ಕಣ್ಣುಗಳನ್ನು ಇನ್ನಷ್ಟು ಬಟ್ಟಲಾಕಾರ ಮಾಡಿ, ನಡುಗುವ ಧ್ವನಿಯಲ್ಲಿ ಉಸಿರಿದ.

ಸಾಗು ಹೆದರುವುದೇ? ಹೆದರಿ ಮಾತನಾಡುವುದೆ? ಅವನ ಧ್ವನಿ ಹೆದರಿ ಕಂಪಿಸಿದ ಹಾಗೆ ತೋರುತ್ತಿತ್ತು!

"ಭಾನುವಾರವಾದ್ದರಿಂದ ಫಿಲ್ಮ್ ನೋಡೋಣವೆಂದು ಥಿಯೇಟರ್‌ಗೆ ಹೋಗಿದ್ದೆ!"

"ಎಲ್ಲಿ? ದಿಲ್ಲೀಯಲ್ಲೇ?" ಕೇಳಿದೆ.

"ಇಲ್ಲ; ಸೋನೇಪತ್‌ನಲ್ಲಿ!"

"ಆಮೇಲೆ ಏನಾಯಿತು?"

"ಹಳೇ ಥಿಯೇಟರ್! ಹೊಸಾ ಫಿಲ್ಮ್! ಫಿಲ್ಮ ಮಾತ್ರ ಬಹಳ ಚೆನ್ನಾಗಿತ್ತು!"

"ಫಿಲ್ಮ್ ಚೆನ್ನಾಗಿದ್ದ ಮೇಲೆ, ನೋಡಿ ಆನಂದಿಸಿರಬೇಕು!"

"ಚೆನ್ನಾಗಿತ್ತು! ಆನಂದಿಸಿದೆ. ಖುಷಿ ಪಟ್ಟೆ. ಎಲ್ಲಾ ಸರಿ! ಆದರೆ ಜೀವದಿಂದ ಹೊರಬಂದಿದ್ದೆ ಒಂದು ದೊಡ್ಡ ಗಂಡಾಂತರದಿಂದ ತಪ್ಪಿಸಿಕೊಂಡು ಬಂದ ಹಾಗೆ ಆಯಿತು!"

ಸಣ್ಣಗೆ ನಡುಗಿದ ಸಾಗೂ!

ಥಿಯೇಟರ್‌ಗೆ ಬೆಂಕಿ ಬಿತ್ತೆ!ಬಾಂಬ್ ಹಾಕಿದರೆ? ಇವನು ಯಾಕೆ ಹೀಗೆ ನಡುಗುತ್ತಾ ಇದ್ದಾನೆ? ಎಂತಹ ಗಂಡಾಂತರದಿಂದ ಪಾರಾಗಿ ಬಂದಿದ್ದಾನೆ ಈತ?

"ಹಳೇ ಥಿಯೇಟರ್ ಸಾಬ್ ಅದು; ಖುರ್ಚಿಗಳೆಲ್ಲಾ ಮುರಿದು ಹೋಗಿದ್ದವು. ಮೊಳೆಗಳು ಎದ್ದು ಬಂದುಬಿಟ್ಟಿದ್ದವು. ಕುಳಿತೊಡನೆ ಪಿರ್‍ರ್‌ಗೆ ಚುಚ್ಚಿದವು ಮೊಳೆಗಳು. ಬಹಳ ಕಷ್ಟಪಟ್ಟು, ಸಾವರಿಸಿಕೊಂಡು, ಕುಳಿತೆ. ಆದರೆ ಮೊಳೆಗಳು ಬಿಡಲೇ ಇಲ್ಲ ನನ್ನನ್ನು. ಫಿಲ್ಮ್ ಎಷ್ಟು ಚೆನ್ನಾಗಿತ್ತೆಂದರೆ ಅದನ್ನು ನೋಡಿ ಆನಂದಿಸಿ ನಕ್ಕರೆ, ಹಾಳಾದ್ದು ಮೊಳೆ ತಿವಿಯುತ್ತಿದ್ದವು ನನ್ನನ್ನು! ಒಳ್ಳೇ ಕಾಮಿಕ್ ಸೀನ್ ನೋಡಿ, ನಕ್ಕರೆ, ಮೊಳೆಗಳು ಚುಚ್ಚುತ್ತಿದ್ದವು. ಈ ಮೊಳೆಗಳ ದೆಸೆಯಿಂದ ಫಿಲ್ಮ್ ಕಾಮಿಡಿ ಯಾದರೂ ನನ್ನ ಪಾಲಿಗೆ ಟ್ರಾಜಿಡಿಯಾಯಿತು!"

"ಇಷ್ಟೇ ಏನು? ಮೊಳೆಗಳಿಂದ ಪಾರಾಗಿ ಬಂದಿದ್ದೇ ಗಂಡಾಂತರದಿಂದ ಪಾರಾಗಿದ್ದ ಹಾಗೆ ಆಯಿತಾ ನಿನಗೆ?"

ಆಶ್ಚರ್ಯದಿಂದ ಕೇಳಿದೆ.

"ಬರೀ ಮೊಳೆಯಿಂದ ಚುಚ್ಚಿಸಿಕೊಂಡು ರಕ್ತ ಚೆಲ್ಲಿ ಬಂದಿದ್ದರೆ ನನಗೆ ಯಾಕಿಷ್ಟು ಸಂಕಟ?"

"ಮತ್ತೇನು ವಿಷಯ, ಬೇಗ ಹೇಳಬಾರದೆ?ನಾನು ಮನೆಗೆ ಹೋಗಬೇಕು" ಅವಸರಿಸಿದೆ ನಾನು. ಅಂದಿನ ಕೆಲಸವಾಗಿತ್ತು. ಬೇಗೆ ಬಾಗಿಲು ಹಾಕಿ ಮನೆಗೆ ಸೇರುವ ಆತುರ ನನಗೆ. ಈ ಸಾಗೂ ಭೂತನಂತೆ ನನ್ನ ಹಿಂದೆ ಬಿದ್ದಿದ್ದ.

"ಫಿಲ್ಮ್ ಮುಗಿದು, ನಾನು ಮೇಲಕ್ಕೆ ಎದ್ದು ಹೊರಕ್ಕೆ ಬಂದರೆ, ಎಲ್ಲರೂ ನನ್ನನ್ನ ನೋಡಿ ನಗುವವರೆ!"

"ಏಕೆ? ಏನಾಯಿತು?"

"ನನ್ನ ಪ್ಯಾಂಟ್‌ನ ಹಿಂಬದಿಯನ್ನು ಮೊಳೆಗಳು ಹರಿದು ಚಿಂದಿ ಮಾಡಿದ್ದುವು!"

ನನಗೆ ನಗು ಬಂದರೂ, ನಗದೆ ಯೋಚಿಸತೊಡಗಿದೆ. ಚಿಂದಿ ಮಾಡಲಿಕ್ಕೆ ಮೊಳೆಗಳು ಮೊಸಳೆಯಾಗಿದ್ದವೆ? ಸಾಗುವಿನ ಮಾತನ್ನು ನಂಬುವುದು ಹೇಗೆ ಸಾಧ್ಯ?

"ನನಗೆ ಅಸಾಧ್ಯ ಕೋಪ ಬಂತು!"

ಅವನ ಧ್ವನಿ ಇನ್ನೂ ನಡುಗುತ್ತಲೇ ಇತ್ತು.

" 'ಯಾರು ಈ ಥಿಯೇಟರ್ ಮೇನೇಜರ್! ಕರೀರಿ ಅವನನ್ನು!' ಎಂದು ಕಿರುಚಿದೆ. ನನ್ನ ಕಿರಿಚಾಟ ಕೇಳಿ, ಮೇನೇಜರ್ ಓಡಿ ಬಂದ. ನನ್ನ ಅಹವಾಲನ್ನು ಕೇಳಿ ಅವ ಜೋರಾಗಿ ನಕ್ಕುಬಿಟ್ಟ!"

"ಅವನು ನಗದೇ ಏನು ಮಾಡುತ್ತಾನೆ?" ಕೇಳಿದೆ ನಾನು, ನಗುತ್ತಾ.

"ಅವನು ನಕ್ಕ; ಆದರೆ ನಾನು ನಗಲಿಲ್ಲ. ನನಗೆ ಭಯಂಕರ ಸಿಟ್ಟು ಬಂದಿತ್ತು. ಬೈದೆ ನಮ್ಮ ಭಾಷೆಯಲ್ಲಿ ಏನೇನು ಬೈಗುಳವಿದೆಯೋ ಅವೆಲ್ಲಾ ಉಪಯೋಗಿಸಿದೆ."

ಸಾಗೂವಿಗೆ ಕೋಪ ಬಂದು, ಬೈಗುಳವನ್ನು ಉಪಯೋಗಿಸಿದ ಎಂದರೆ ನಂಬಲು ಸಾಧ್ಯವಾಗಿತ್ತು. ಸಾಕ್ಷಾತ್ ಸಂಯಮಮೂರ್ತಿ ತಲೆ ಎತ್ತಿ ಗಾಂಭೀರ್ಯದಿಂದ ಸಾಗುವ ಮದಗಜದಂತೆ ಕಾಣುವ ಈ ಸಾಗೂ ಕೋಪಗೊಂಡನೆಂದರೆ, ದಿಲ್ಲೀ ಶಹರಿನ ಮೇಲೆ ಹಿಮಾಲಯದ ಹಿಮವೃಷ್ಟಿಯಾದಷ್ಟೇ ಅಸಾಧ್ಯದ ಮಾತಾಗಿತ್ತು!

" 'ಯಾಕೆ ಹಾಗೆ ಬಡಕೊಳ್ಳುತ್ತೀಯಾ?ನಿನ್ನ ಮೇಲೆ ಯಾರಾದರೂ ಗುಂಡು ಹಾರಿಸಿದರೆ? ಅಥವಾ ಬಾಂಬ್ ಹಾಕಿದರೆ?"

ಮೇನೇಜರ್ ಗುಂಡು, ಬಾಂಬ್ ಎಂದು ಹೇಳಿದಾಗ, ನನ್ನ ಮಿದುಳು ಮಿಂಚಿನಂತೆ ಕೆಲಸ ಮಾಡಿತು. 'ಗುಂಡು ಹಾರಿಸಲಿಲ್ಲ; ಬಾಂಬ್ ಎಸೆಯಲಿಲ್ಲ. ಆದರೆ

ನಾನು ಗುಂಡು ಬಾಂಬ್ ಎರಡನ್ನೂ ಹಾರಿಸಬಲ್ಲೆ!' ಬಾಯಿಯಿಂದ ಮಾತು ಹೊರಹೊಮ್ಮಿದ ಕೂಡಲೇ, ಮೇನೇಜರ್ ಸ್ಥಬ್ಧನಾದ. ಬಾಯಿಯಿಂದ ಸೊಲ್ಲೇ ಇಲ್ಲ."

ಸಾಗೂವಿನ ಬಾಯಿಯಿಂದ ಬಾಂಬ್ ಸಿಡಿಸುವ ಭಯಹೂಡುವಿಕೆಯ ಮಾತುಗಳು!

" 'ನಿನಗೆ ಏನು ಬೇಕು?' ಕೇಳಿದ ಅವನು.

'ನನಗೆ ಹೊಸಾ ಪ್ಯಾಂಟ್ ಅಥವಾ ಹಣದ ಪರಿಹಾರ'

'ಯಾಕೆ?' ಎಂದು ಕೇಳಿದ. ನನ್ನ ಹರಿದ ಪ್ಯಾಂಟ್ ತೋರಿಸಿದೆ.

'ಹೇಗೆ ಹರಿಯಿತು?'

'ನಿಮ್ಮ ಸೀಟಿನ ಮೊಳೆಗಳು! ನೋಡಿ!' ಎಂದು ಸೀಟಿನ ಮೊಳೆಗಳನ್ನು ತೋರಿಸಿದೆ.

'ಬೇರೆ ಯಾರ ಪ್ಯಾಂಟ್ ಹರಿಯದೇ ನಿಮ್ಮ ಪ್ಯಾಂಟ್ ಹರಿದಿದ್ದು ಆಶ್ಚರ್ಯ!'

'ನನಗೂ ಆಶ್ಚರ್ಯ! ಅವರೆಲ್ಲಾ ಕಬ್ಬಿಣದ ಪ್ಯಾಂಟ್ ಹಾಕಿಕೊಂಡು ಬಂದಿರ ಬಹುದು!'

'ಎಷ್ಟು ಹಣ ಬೇಕು?'

'ಇನ್ನೂರು ರೂಪಾಯಿ!'

'ಚೆಕ್ ಬೇಕಾ? ಅಥವಾ ಕ್ಯಾಶ್ ಬೇಕಾ' ಅಂದ.

'ಕ್ಯಾಶ್' ಎಂದೆ.

'ತೆಗೆದುಕೋ!' ಎಂದು ಹೇಳಿ ಹಣ ಕೈಗೆ ಇತ್ತ.

"ಇಷ್ಟು ಬೇಗ ಕ್ಲೇಷ ಪರಿಹಾರವಾಯಿತಲ್ಲ ಎಂದು ನನಗೆ ಸಂತಸವಾದರೂ ಮನಸ್ಸಿನೊಳಗೆ ಭಯ ತುಂಬಿತ್ತು. ಹಣ ತೆಗೆದುಕೊಂಡು ಹೊರಹೊರಟೆ. 'ನಿಲ್ಲು!' ಕೂಗಿದ ಮೇನೇಜರ್! ನಿಂತೆ. 'ಪ್ಯಾಂಟ್ ಬಿಚ್ಚು!' ಎಂದ.

'ಯಾಕೆ?'

'ಪ್ಯಾಂಟ್‌ನ ಹಣ ಕೊಟ್ಟಾಯಿತಲ್ಲ, ಈಗ ಈ ಪ್ಯಾಂಟ್‌ನ ಒಡೆಯ ನಾನು!' ಅಂದ. ದಿಕ್ಕೇ ತೋಚಲಿಲ್ಲ ನನಗೆ. ಪ್ಯಾಂಟ್ ಬಿಚ್ಚಿಟ್ಟು ಕಾಚಾದಲ್ಲಿ ಮನೆಗೆ ಹೋಗುವುದು ಹೇಗೆ? ಒಳ್ಳೇ ಉಪಾಯ ಮಾಡಿದನಲ್ಲಾ ಮೇನೇಜರ್! ಬಿಚ್ಚದಿದ್ದರೆ ರೂಪಾಯಿ ನಷ್ಟ! ಬಿಚ್ಚಿದರೆ ಹಣದ ಲಾಭ, ಮಾನನಷ್ಟ! ಮಾನ ಹೋದರೂ ಪರ ವಾಗಿಲ್ಲ, ಹಣ ನಷ್ಟ ಮಾಡಿಕೊಳ್ಳಬಾರದು ಎಂದು ಯೋಚಿಸಿದೆ.'

ಮಾತು ನಿಲ್ಲಿಸಿದ ಸಾಗೂ. ಅಲ್ಲೇ ಇರಿಸಿದ ನೀರಿನ ಲೋಟ ತೆಗೆದು ನೀರು ಕುಡಿದು ಸುಧಾರಿಸಿಕೊಂಡ.

"ನಾನು ಬ್ಯಾಂಕ್ ನೌಕರ. ಬೇಕಾದರೆ, ಬ್ಯಾಂಕ್ ಗ್ಯಾರಂಟೀ ಕೊಡುತ್ತೇನೆ. ನಮ್ಮ ಮೇನೇಜರ್‌ನ ಕೇಳಿ ನಿಮಗೆ ಅವರ ಗ್ಯಾರಂಟೀ ಕೊಡಿಸುತ್ತೇನೆ' ಅಂತ ಹೇಳಿದೆ. ಆದರೆ ಅವನು ಕೇಳಲೇ ಇಲ್ಲ.

"ಮನೆಗೆ ಹೋಗಿ ಪ್ಯಾಂಟ್ ಬಿಚ್ಚಿ ಕೊಡುತ್ತೇನೆ" ಎಂದೆ. ಅವ ಕೇಳಲಿಲ್ಲ! 'ಈಗಲೇ ಈ ಕ್ಷಣ ಇಲ್ಲೇ!' ಕೂಗಿದ. ಜನ 'ಹೋ' ಎಂದು ಬೊಬ್ಬೆ ಹೊಡೆದು ನಗ ಹತ್ತಿದರು. ನನ್ನ ಮೈ ಉರಿದು ಬೆಂಕಿ ಹಾಗಾಯಿತು. ನಾನು ಪ್ಯಾಂಟ್ ಬಿಚ್ಚಿ ಪೇಚಾಡುವುದನ್ನು ನೋಡಲು ಎಷ್ಟು ಕಾತುರರಾಗಿದ್ದಾರೆ ಇವರು! ಇವರಿಗೆಲ್ಲಾ ಬಾಂಬ್ ಹಾಕಿ ಸುಡಬೇಕು ಎನ್ನಿಸಿತು.

"ಅವರು ನೋಡುತ್ತಿದ್ದಂತೆಯೇ ಪ್ಯಾಂಟ್ ಕಳಚಿ, ಮೇನೇಜರ್ ಮುಖದ ಮೇಲೆ ಬಿಸಾಕಿ, ಥಿಯೇಟರ್ ಹೊರಗೆ ಬಂದೆ. ಜನ 'ಹೋ!' ಎಂದು ಕೂಗಾಡಿದರು. ನಾನು ಲೆಕ್ಕಿಸಲಿಲ್ಲ!"

ನನ್ನ ಬಾಯಿ ಹೆಬ್ಬಾಗಿಲು ಆಗಿತ್ತು. ಎಂತಹ ಪ್ರಾಣಿ! ಹಣಕ್ಕಾಗಿ ಮಾನ ತ್ಯಾಗ ಮಾಡಿದನಲ್ಲಾ! ದೇಶಕ್ಕಾಗಿ ಪ್ರಾಣತ್ಯಾಗ ಮಾಡುವವರ ಬಗ್ಗೆ ಓದಿ ತಿಳಿದಿದ್ದೆ. ಮಾನತ್ಯಾಗ ಮಾಡುವವನ ಪ್ರತ್ಯಕ್ಷ ದರ್ಶನವಾಯಿತಲ್ಲಾ!

"ನೀನು ಬಾಂಬ್ ಸಿಡಿಸುತ್ತೇನೆ ಎಂದು ಹೆದರಿಸಿದೆಯಲ್ಲಾ ಆ ಮೇನೇಜರ್‌ಗೆ, ಅವನು ನಂಬಿಬಿಟ್ಟನೇ?"

"ನಂಬಿದನೋ ಬಿಟ್ಟನೋ! ಹೆದರಿಸಿದೆನಲ್ಲಾ! ಬಾಂಬ್ ಹಾಕ್ತೀನಿ ಅಂತ ಯಾರೂ ಹೆದರಿಸಿ ಬಾಂಬ್ ಹಾಕೋದಿಲ್ಲ! ಬಾಂಬ್ ಹಾಕಿದ ಮೇಲೆ ನಾನು ಹಾಕಿದೆ ಅಂತ ಹೇಳೋದಿಲ್ಲ! ಅಲ್ಲವೇ?"

ಅಂದು ಬಸ್‌ನಲ್ಲಿ ಬಾಂಬ್ ಸಿಡಿದು, ಬಸ್ ಭಸ್ಮವಾಗಿ, ನಾನು ಜ್ಞಾನ ತಪ್ಪಿ ನೆಲಕ್ಕುರುಳಿ ಜಕಂ ಆಗಿ ಆಸ್ಪತ್ರೆ ಸೇರಿ, ಒಂದು ವಾರ. ಹಾಸಿಗೆಯಲ್ಲಿ ಮಲಗಿ, ಕುಂಟುತ್ತಾ ಮನೆಗೆ ಬಂದು, ಬ್ಯಾಂಕಿಗೆ ಹಾಜರಾಗಿದ್ದೆ.

ಬಾಂಬ್ ಸಿಡಿಸಿದವ ಯಾರೆಂಬುದನ್ನು ಪೊಲೀಸರು ಹುಡುಕುತ್ತಲೇ ಇದ್ದರು. ಅವರು ಭಯೋತ್ಪಾದಕರು ಎಂದು ಘೋಷಿಸಿದ್ದರು. ಬಾಂಬ್ ಎಲ್ಲಿಟ್ಟಿದ್ದರು ಎಂಬುದಕ್ಕೆ ಉತ್ತರವಾಗಿ, ಸೂಟ್‌ಕೇಸ್‌ನಲ್ಲಿಲ್ಲ ಎಂಬ ಸುದ್ದಿ ತಿಳಿದು ನನಗೆ ನೆಮ್ಮದಿ ತಂದಿತ್ತು. ಸರಕಾರೀ ನೌಕರನ ಬಳಿ ಇದ್ದ ಸೂಟ್‌ಕೇಸ್ ದಿಟವಾಗಲೂ ಬಾಂಬ್ ಹೊಂದಿರಲಿಲ್ಲ. ಹಾಗಾದರೆ ಬಾಂಬ್ ಎಲ್ಲಿ ಅಡಗಿಸಿದ್ದರು? ಬಾಂಬ್

ಸಿಡಿಯುವ ಮುನ್ನ ಇಬ್ಬರು ಪ್ರಯಾಣಿಕರು ಬಸ್‌ನಿಂದ ಇಳಿದು ಹೋಗಿದ್ದ ವಿಷಯ ಪೊಲೀಸರ ಗಮನಕ್ಕೆ ಬಂದಿತಂತೆ. ಅವರನ್ನು ಹುಡುಕುವುದರಲ್ಲಿ ತಮ್ಮ ಶ್ರಮ ವನ್ನೆಲ್ಲಾ ವಿನಿಯೋಗಿಸುತ್ತಿದ್ದಾರಂತೆ.

ಆ ಇಬ್ಬರು ಪ್ರಯಾಣಿಕರು ಯಾರು?

ನನ್ನ ಮುಂದೆ ನಿಂತು ಹರಟೆ ಹೊಡೆಯುತ್ತಿದ್ದ ಇಬ್ಬರು ಪ್ರಯಾಣಿಕರು ಯಾರು? ಅವರೇ ಭಯೋತ್ಪಾದಕರಾಗಿದ್ದಿರಬಹುದು? ಛೆ! ಛೆ! ಅವರು ಎಷ್ಟು ಮುಗ್ಧರ ಹಾಗೆ ಕಾಣುತ್ತಿದ್ದರು! ಅವರ ಮಾತು, ಅವರ ನಡತೆ, ಹಾವ-ಭಾವ, ಮುಗ್ಧತೆಯನ್ನು ಸಾರಿ ಹೇಳುತ್ತಿತ್ತು. ಆದರೆ, ಅವರೇ ಭಯೋತ್ಪಾದಕರಾಗಿದ್ದರೆ, ಎಂತಹ ಉಪಾಯ ಮಾಡಿದ್ದರು? ಎಂತಹ ಅಪಾಯದ ಉಪಾಯ? ಕೈಯಲ್ಲಿ ಬಾಂಬ್ ಹಿಡಿದು, ಬಸ್‌ನಲ್ಲಿದ್ದವರಿಗೆಲ್ಲಾ ತಾವು ಎಂತಹ ಸರಳ ನಿಷ್ಕಳಂಕ ಗಾಂಪರು ಎಂದು ನಂಬಿಸಿ, ಕೊನೆಗೆ ಬಾಂಬ್ ಸಿಡಿಸಿದರಲ್ಲಾ!

"ಸಾಬ್! ಬಾಂಬ್ ಸಿಡಿದು ನೀವು ಬಚಾವಾಗಿದ್ದು ಆಶ್ಚರ್ಯವಲ್ಲವೇ?"

ನನ್ನ ಸಾವು ಸಂಭವಿಸಲಿಲ್ಲವೆಂದು ಬೇಸರವಾಗಿದೆಯೊ? ಖದೀಮ ಸಾಗೂ! ನನ್ನ ಸಾವನ್ನು ಬಯಸಿ ನಿರಾಶೆಗೊಂಡು, ಈ ರೀತಿ ನನ್ನನ್ನು ಪ್ರಶ್ನಿಸಿದನೇ?

"ದೇವರ ದಯೆ! ಬಚಾವ್ ಆಗಿಬಿಟ್ಟೆ! ನನ್ನಮೇಲೆ ಹಿಂದೆ ಮುಂದೆ ಇದ್ದವರು ಬಿದ್ದರು. ಒಂದು ರೀತಿ ನಾನು ಬಸ್‌ನಲ್ಲಿ ಸೀಟ್ ಸಿಗದೇ ನಿಂತಿದ್ದು ನನಗೆ ಒಳ್ಳೆಯ ದಾಯಿತು."

"ಸೀಟ್ ಸಿಕ್ಕಿದ್ದರೆ ನೇರ ದೇವಲೋಕಕ್ಕೆ ಹೋಗಬಹುದಾಗಿತ್ತು, ಅಲ್ಲವೇ?"

ಮತ್ತೆ ಅದೇ ರಾಗ! ಇವನು ಯಾಕೆ ನನ್ನ ಸಾವನ್ನು ಅಪೇಕ್ಷಿಸುತ್ತಿದ್ದಾನೆ? ನನ್ನಿಂದ ಏನು ತಪ್ಪಾಗಿದೆ ಇವನಿಗೆ?

"ಹೌದು! ರಾಜೇಂದ್ರನಗರ್‌ಗೆ ಹೋಗದೆ ನೇರಾ ದೇವನಗರ್‌ಗೆ ಹೋಗು ತ್ತಿದ್ದೆ!"

ಸಾಗೂವಿನ ಕಣ್ಣುಗಳು ಮಿನುಗಿದವು. ಅವನ ಬಿಳೀ ಬಕ್ಕ ತಲೆ ಸೂರಿನ ಮೇಲಿಂದ ನೇತಾಡುತ್ತಿದ್ದ ಟ್ಯೂಬ್‌ಲೈಟ್‌ನ ಬೆಳಕಿಗೆ ಹೊಳೆಯುತ್ತಿದ್ದವು. ಬಿಳೀ ಬಕ್ಕ ತಲೆಯನ್ನು ನನ್ನ ಮುಖದ ಬಳಿ ಬಾಗಿಸಿ, ಮೆಲ್ಲನೆ ನುಡಿದ,

"ಬಾಂಬ್ ಸಿಡಿತದಿಂದ ಪೆಟ್ಟಾಗಿದ್ದು ಒಂದು ರೀತಿ ಒಳ್ಳೆಯದಾಯಿತು, ಅಲ್ಲವೇ?"

"ಹೇಗೆ?" ಅಚ್ಚರಿಯಾಯಿತು ನನಗೆ.

"ನಿಮಗೆ ಪರಿಹಾರ ದೊರೆಯುತ್ತದಲ್ಲವೇ?"

ಪರಿಹಾರದ ಬಗ್ಗೆ ನಾನು ಯೋಚನೆ ಮಾಡಿರಲೇ ಇಲ್ಲ; ಅದು ಸಿಗುವ ಹಾಗೆ ಇರಲಿಲ್ಲ. ಕೈ ಕಾಲು ಊನವಾಗಿ ಹೆಳವನಾಗಿರಲಿಲ್ಲ, ಪರಿಹಾರ ಪಡೆದುಕೊಳ್ಳಲಿಕ್ಕೆ! ಸರಕಾರೀ ಆಸ್ಪತ್ರೆಯಲ್ಲಿ ಚಿಕಿತ್ಸೆ ದೊರೆತಿದ್ದೇ ದೊಡ್ಡ ಉಪಕಾರವಾಗಿತ್ತು. ಈ ಉಪಕಾರಕ್ಕಿಂತ ಇನ್ನು ಎಂತಹ ಉಪಹಾರ, ಪರಿಹಾರ? "ನೀನು ಪ್ಯಾಂಟ್ ಹರಿದು ಕೊಂಡು, ಪರಿಹಾರ ಪಡೆದ ಹಾಗೆ ನಾನು ಚರ್ಮ ಹರಿದುಕೊಂಡು ಪರಿಹಾರ ಪಡೆಯ ಬೇಕೆಂದು ನಿನ್ನ ಅಭಿಪ್ರಾಯವೇ?"

"ಸಾಬ್ ನಿಮಗೆ ಒಂದು ವಿಷಯ ಹೇಳಲು ಮರೆತಿದ್ದೆ! ಪ್ಯಾಂಟ್ ಹರಿದು ಹೋದದ್ದಕ್ಕೆ ನನಗೆ ಬೇಸರವಾಗಲಿಲ್ಲ. ಆ ಮೇನೇಜರ್ ನನ್ನ ಪ್ಯಾಂಟ್ ಕೇಳಿದ್ದಕ್ಕೂ ನನಗೆ ಬೇಸರವಾಗಲಿಲ್ಲ, ನಾನು ಪ್ಯಾಂಟ್ ಬಿಚ್ಚಿ, ಬರೀ ಕಾಚಾದಲ್ಲಿ ಬಂದಿದ್ದಕ್ಕೂ ಬೇಸರವಿಲ್ಲ!..... ಆದರೆ........"

ಮಾತು ನಿಲ್ಲಿಸಿದ ಸಾಗೂ. ನನ್ನ ಸಾವನ್ನು ಬಯಸುತ್ತಾ ಇರುವ ಇವನು ಏನು ಯೋಚನೆ ಮಾಡಲಿಕ್ಕೆ ಶುರು ಹಚ್ಚಿದ್ದಾನೆ?

"ಆದರೆ ಆ ಪ್ಯಾಂಟ್ ಬಹಳ ಹಳೆಯದಾಗಿದ್ದು ಬಿಸಾಡಬೇಕೆಂದು ಮಾಡಿದ್ದೆ. ಆ ಪ್ಯಾಂಟ್‌ನ್ನು ಮೇನೇಜರ್‌ಗೆ ಕೊಡಬೇಕಾಗಿ ಬಂತಲ್ಲಾ ಎಂದು ಬೇಸರ ವಾಯಿತು!"

ಈ ಸಾಗೂವನ್ನು ಚಪಾತಿಗೆ ಸೇರಿಸಿ ತಿನ್ನುವ ಮನಸ್ಸಾಯಿತು.

ಟೆಲಿಫೋನ್ ಶಬ್ದ ಮಾಡಿತು. ಹಲೋ ಹೇಳಿದೆ. ಆ ಕಡೆಯಿಂದ ಡೀ.ಎಮ್. ರಾಜಕುಮಾರ ಮಾತನಾಡುತ್ತಿದ್ದ.

"ಶಾಮಲಾಲ್‌ನ ಪ್ರಪೋಸಲ್‌ನ್ನು ಯಾಕ್ರೀ ಕಳಿಸಲಿಲ್ಲ?"

ಕೋಪಗೊಂಡಿದ್ದ ಅವ. ಅವನ ಗಡಸು ಧ್ವನಿ ಗುಟ್ಟುರಟ್ಟು ಮಾಡಿತ್ತು.

"ಈ ಶಾಮಲಾಲ್‌ನ ದೆಸೆಯಿಂದ ನಮ್ಮ ನೌಕರರಿಗೆ ಚಾರ್ಜುಶೀಟ್ ಆಗಿದೆ. ಇನ್‌ಕಮ್-ಟ್ಯಾಕ್ಸ್‌ನವರು ರೈಡ್ ಬೇರೆ ಮಾಡಿದ್ದಾರೆ!"

ರಾಗ ಎಳೆದೆ. ಸಾಯಂಕಾಲದ ಸೋತೇ ರಾಗ ಅದು. ಕೇಳುವವರಿಗೆ ತಲೆ ಕೆಡಿಸುವ ರಾಗ.

"ನಾಳೆ ನನ್ನ ಆಫೀಸ್‌ಗೆ ಬನ್ರೀ. ಮಾತಾಡಬೇಕು ನಿಮ್ಮ ಹತ್ತಿರ!" ಎಂದು ಅಪ್ಪಣೆ ಕೊಟ್ಟ, ರಾಜಕುಮಾರ್.

ಚೇರ್‌ಮನ್‌ನ ಸಹೋದರ ಇವ. ಇವನ ಮಾತು ಕೇಳದಿದ್ದರೆ ರಾಜ್ಯದಿಂದ ಗಡೀಪಾರ್ ಮಾಡಿ, ದೂರದ ಗಡೀ ಪ್ರದೇಶದ ಕುಗ್ರಾಮಕ್ಕೆ ಎತ್ತಿ ಹಾಕಿ ಬಿಡುತ್ತಾನೆ, ಮಹಾರಾಜಕುಮಾರ!

"ಯಾರು ಸಾಬ್?"ಸಾಗೂ ಕೇಳಿದ ಉತ್ಸುಕತೆಯಿಂದ.

"ಸರ್ಕಲ್ ಆಫೀಸ್‌ನಿಂದ" ಉದಾಸೀನದಿಂದ ಹೇಳಿದೆ.

"ಪರಿಹಾರ ಕೊಡುತ್ತಾರಾ?"

ನನಗೆ ಪರಿಹಾರ ಸಿಕ್ಕಿದರೆ, ಇವನಿಗೆ ಅದರಲ್ಲಿ ಒಂದು ಅಂಶ ದೊರೆಯಬಹುದೆಂಬ ಆಶಯ ಇಟ್ಟುಕೊಂಡು, ಇಷ್ಟೆಲ್ಲಾ ಪ್ರಶ್ನೆಗಳನ್ನು ಹಾಕುತ್ತಿದ್ದಾನೆಯೆ?

"ಹೌದು! ಪರಿಹಾರ ಕೊಡುತ್ತಾರೆ! ನಿಮಗೂ ಅದರಲ್ಲಿ ಒಂದು ಭಾಗ ಕೊಡುತ್ತೇನೆ!"

ಅವನು ಬಾಯಿ ಬಿಟ್ಟ. ಸೊಗಸಾದ ಈ ಬಿಳೀ ಹಲ್ಲುಗಳನ್ನು ಪ್ರದರ್ಶಿಸಿದ. ಮುಂದೆ ಬಾಗಿದ್ದ ಮುಖವನ್ನು ಇನ್ನೂ ಮುಂದಕ್ಕೆ ಬಾಗಿಸಿದ.

"ಹೌದಾ ಸಾಬ್! ಎಷ್ಟು ಕೊಡುತ್ತಾರಂತೆ ಪರಿಹಾರ?"

"ಪರಿಹಾರವಾಗಿ ನನಗೆ ಇಲ್ಲಿಂದ ಅಸ್ಸಾಂಗೆ ವರ್ಗ ಮಾಡುತ್ತಾರಂತೆ. ಅದರಲ್ಲಿ ನಿನಗೆ ಒಂದು ಭಾಗ ನೀಡುವಂತೆ ಕೇಳುತ್ತೇನೆ. ಅಂದರೆ ಕೊನೇ ಪಕ್ಷ ಅರ್ಧ ದೂರ, ಬಿಹಾರ್‌ಗೆ ನಿನ್ನನ್ನು ವರ್ಗ ಮಾಡುವಂತೆ ಕೋರುತ್ತೇನೆ. ನಿನ್ನ ಅಭಿಪ್ರಾಯವೇನು?"

ಉತ್ತರ ನೀಡಲು ಸಾಗೂ ಅಲ್ಲಿರಲಿಲ್ಲ!

ಮಾರನೆಯ ಬೆಳಿಗ್ಗೆ ಸರ್ಕಲ್ ಆಫೀಸ್‌ನಲ್ಲಿ ಡೀ.ಎಮ್. ರಾಜಕುಮಾರ್ ನನ್ನು ಭೇಟಿ ಮಾಡಿದೆ.

"ಪ್ರಪೋಸಲ್ ಕಳುಹಿಸಲಿಕ್ಕೆ ಯಾಕೆ ತರಲೆ ಮಾಡುತ್ತಾ ಇದ್ದೀರಾ?"

ಎದುರು ಚೆಂದದ ಮಾತನ್ನಾಡಿ, ಹಿಂದಿನಿಂದ ಬೆನ್ನಿಗೆ ಬಾಕು ಹಾಕಬೇಕು ಎಂದು ಉಪದೇಶ ಸಾರಿದ ಈ ಮಹಾತ್ಮ ಇಂದು ಯಾಕೆ ಸಿಟ್ಟಿನಿಂದ ನನ್ನ ಎದೆ ತಿವಿಯುತ್ತಿದ್ದಾನೆ? ತನ್ನ ಉಪದೇಶ ತಾನೇ ಮರೆತು ಬೆಣ್ಣೆಯ ಮಾತಿನ ಬದಲು ಕೆಂಡದ ಉಂಡೆ ಉರುಳಿಸುತ್ತಿದ್ದಾನಲ್ಲಾ! ಸಿಟ್ಟು ನೆತ್ತಿಗೇರಿದಾಗ, ನಿಜ ಸ್ವರೂಪದ ಗುಟ್ಟು ಬಯಲಾಗಿ, ಮಹಾತ್ಮರ ಉಪದೇಶ ದೇಶಾಂತರಕ್ಕೆ ಓಡಿಹೋಗುತ್ತದೆಯಲ್ಲವೇ?

"ಶ್ಯಾಮಲಾಲ್‌ನ ದೆಸೆಯಿಂದ ನಮ್ಮ ಶಾಖೆಯ ನೌಕರರಿಗೆ ತೊಂದರೆ ಆಗಿದೆ. ಅದೂ ಅಲ್ಲದೆ ಅವನ ಮೇಲೆ ಇನ್‌ಕಮ್ ಟ್ಯಾಕ್ಸ್‌ನವರು ಧಾಳಿ ಮಾಡಿ, ಕೇಸ್ ಹಾಕಿದ್ದಾರೆ. ಅಂತಹವರಿಗೆ ಸಾಲ ಕೊಡುವುದು ಅಂದರೆ ತಪ್ಪಾಗುವುದಿಲ್ಲವೇ ಸಾರ್!"

ಚೇರ್‌ಮನ್‌ನ ಸಹೋದರ ಅಂದಮೇಲೆ ಪ್ರಚಂಡ ಶಕ್ತಿಶಾಲಿ, ಅರಿ ಭಯಂಕರ! ಎಲ್ಲರೂ ಹೆದರುವವರೆ! ಆದರೆ ಶ್ಯಾಮಲಾಲ್‌ನ ಸಾಲದ ಪ್ರಪೋಸಲ್

ಶಿಫಾರಸ್ಸು ಮಾಡಿ, ಅವ ಮೋಸ ಮಾಡಿದರೆ, ಕೊಟ್ಟ ಹಣ ವಾಪಸ್ಸು ಬರದಿದ್ದರೆ, ಶಿಫಾರಸ್ಸು ಮಾಡಿದ ನನ್ನನ್ನು ಸಿಕ್ಕಿಸಿಹಾಕಿ ಬಿಡುವುದಿಲ್ಲವೇ ಈ ರಾಜಕುಮಾರ! ಆಗ ನನ್ನ ಸಹಾಯಕ್ಕೆ ಬರುತ್ತಾನೆಯೇ ಈ ಮಹಾತ್ಮಾ! ಎದುರಿನಿಂದ ಚಂದದ ಮಾತನಾಡಿ, ಹಿಂದಿನಿಂದ ಬೆನ್ನಿಗೆ ಬಾಕು ಹಾಕುವವನಲ್ಲವೇ? ಮುಂದಾಲೋಚನೆಯಿಂದ ಕೆಲಸ ಮಾಡಿದರೆ, ಮುಂದಾಗುವುದನ್ನು, ಈಗಲೇ ಎದುರಿಸಿ, ತಪ್ಪಿಸಿಕೊಳ್ಳಬಹುದಲ್ಲವೇ?

"ಟಾಟಾ, ಬಿರ್ಲಾ ಕಂಪನಿಗಳ ಮೇಲೆ ಇನ್‌ಕಮ್‌ಟ್ಯಾಕ್ಸ್‌ನವರು ಛಾಪಾ ಹಾಕುತ್ತಲೇ ಇರುತ್ತಾರೆ. ಅವರಿಗೆ ಬ್ಯಾಂಕ್‌ರ್‌ಗಳು ಸಾಲ ಕೊಡುವುದನ್ನು ನಿಲ್ಲಿಸುತ್ತಾರೆಯೆ?"

ರಾಜಕುಮಾರ ಕೇಳಿದ ಪ್ರಶ್ನೆ! ಈ ಪ್ರಶ್ನೆಗೆ ಹೇಗೆ ಉತ್ತರಿಸುವುದು?

"ನೀನೊಬ್ಬ ಬೆಪ್ಪ! ಟಾಟಾ ಬಿರ್ಲಾ ಎಲ್ಲಿ! ಶ್ಯಾಮಲಾಲ್ ಎಲ್ಲಿ? ಎಂತಹ ಹೋಲಿಕೆ? ಅವರು ರಾಷ್ಟ್ರಪ್ರೇಮಿ ಉದ್ಯಮಿಗಳು, ಇವ ಹೇಳಿ ಕೇಳಿ ಒಬ್ಬ ಸಾಮಾನ್ಯ ವ್ಯಾಪಾರಸ್ಥ!ಲಕ್ಷಾಂತರ ಜನರಿಗೆ ಕೆಲಸ ನೀಡಿ, ನಿರುದ್ಯೋಗ ನಿವಾರಿಸುತ್ತಿರುವ ಮೇಧಾವಿಗಳು ಅವರಾದರೆ, ಇವ ಹಣ ಗಳಿಸಿ, ತಾನೊಬ್ಬನೇ ಸುಖಿಯಾಗಿರಬೇಕೆಂಬ ಮಹತ್ತರ ಆಸೆ ಇಟ್ಟಿಕೊಂಡಿರುವವ. ಅವರಾದರೋ ಸ್ವಂತಕ್ಕಾಗಿ ಹಣ ಮಾಡುವ ಆಸೆಯಿಲ್ಲದ ಪುಣ್ಯಜೀವಿಗಳು. ಇವನೋ ತನ್ನ ಸುಖಕ್ಕೆ ಬೇರೊಬ್ಬರ ಸುಖವನ್ನು ಬಲಿಕೊಟ್ಟು ಠಕ್ಕತನದಿಂದ ಜೀವನ ನಡೆಸುತ್ತಿರುವ ಪಾಪಿ!" ಎಂದು ಹೇಳುವ ಎಂದು ಬಾಯಿ ತೆರೆದೆ ನಾನು,

"ಶ್ಯಾಮಲಾಲ್‌ನಿಂದ ನಮ್ಮ ಶಾಖೆಯ ಹಲವಾರು ನೌಕರರಿಗೆ ತೊಂದರೆಯಾಗಿದೆ. ಕೆಲಸ ಕಳೆದುಕೊಳ್ಳುವ ಸ್ಥಿತಿಯಲ್ಲಿದ್ದಾರೆ ಸಾರ್! ಇವನಿಗೆ ಸಹಾಯ ಮಾಡು ಅಂತೀರಾ?' ಎಂದು ಹೇಳಿ, ನನ್ನ ರಾಗವನ್ನು ಬೇರೆಯಾಗಿ ಹಾಡಿದೆ.

ಸಿಗರೇಟ್ ತೆಗೆದು ಬಾಯಿಗೆ ಅಂಟಿಸಿ, ನಿಧಾನವಾಗಿ ಅದಕ್ಕೆ ಬೆಂಕಿ ಹತ್ತಿಸಿದ. 'ಉಫ್' ಎಂದು ಹೊಗೆ ಬಿಟ್ಟ, ನನ್ನ ಮುಖದ ಮೇಲೆ. ಸಧ್ಯ! ತಂಬಾಕು-ಎಲೆ ಹಾಕುವ ಅಭ್ಯಾಸವಿಲ್ಲ ಇವನಿಗೆ! ಇದ್ದಿದ್ದರೆ ನಾನು ಆಡಿದ ಮಾತಿಗೆ ಉತ್ತರವಾಗಿ, ನನ್ನ ಮುಖಕ್ಕೆ ಉಗುಳುತ್ತಿದ್ದನೋ ಏನೋ!

'ಉಫ್' ಎಂದು ಮತ್ತೆ ಹೊಗೆಯನ್ನು ಊದಿದ ನನ್ನ ಮುಖಕ್ಕೆ! ಸುರುಳಿ-ಸುರುಳಿಯಾಗಿ ಹೊಗೆ ಸುತ್ತಿತು ನನ್ನ ಮೂಗಿಗೆ. ಹೊಗೇ ಸೊಪ್ಪಿನ ಹೊಗೆಯ ವಾಸನೆ ನನಗೆ ಪ್ರಿಯ. ಸಿಗರೇಟ್ ಸೇದದಿದ್ದರೂ, ಸಿಗರೇಟ್‌ನ ವಾಸನೆ ನನಗೆ ಸುವಾಸನೆ. 'ಗಮ್' ಎಂದು ಅಪ್ಪಳಿಸುತ್ತಿದ್ದ ಹೊಗೆಯ ಸುವಾಸನೆ ಆಸ್ವಾದಿಸುತ್ತಾ

ರಾಜ ಕುಮಾರನ ಮುಖವನ್ನೇ ನೋಡುತ್ತಾ ಕುಳಿತೆ.

ಅರ್ಧ ಸಿಗರೇಟ್ ಸೇದಾದ ಮೇಲೆ, ಅದನ್ನು ಮೇಜಿನ ಮೇಲಿದ್ದ ಆಷ್-ಟ್ರೇಯಲ್ಲಿಟ್ಟು ಚೆನ್ನಾಗಿ ಅದುಮಿದ ಅಡನ್ನು, ನನ್ನ ಮುಖವನ್ನೇ ನೋಡುತ್ತಾ. ನನ್ನನ್ನು ಅದೇ ರೀತಿ ಅದುಮಿ, ನನ್ನಲ್ಲಿದ್ದ ಕಾವನ್ನು ಆರಿಸಿ, ಹಿಪ್ಪಿಹಿಂಡಿ, ತುಂಡು ತುಂಡು ಮಾಡುವವನ ಹಾಗೆ ತೋರಿತು ನನಗೆ ಅವನ ಮುಖಭಾವ.

"ಹಾಗಾದರೆ ನೀವು ಪ್ರಪೋಸಲ್ ಶಿಫಾರಸ್ಸು ಮಾಡಲಿಕ್ಕೆ ಇಷ್ಟಪಡುವುದಿಲ್ಲ!"

ಗಟ್ಟಿಯಾಗಿ ಸಿಗರೇಟ್‌ನ್ನ ತುಂಡನ್ನು ಮತ್ತೊಮ್ಮೆ ಅದುಮಿ ಚೆನ್ನಾಗಿ ತೀಡಿದ. ಅದು ತನ್ನ ಕೈಕಾಲು ಹೊಟ್ಟೆ ಎಲ್ಲಾ ಕಳೆದುಕೊಂಡು, ತಂಬಾಕು ಪುಡಿ, ಹುಡಿಹುಡಿಯಾಗಿ ರಕ್ತವಿಲ್ಲದ ಮಾಂಸದ ತುಂಡಿನಂತೆ ಹೊರಬಂತು.

"ಸಾರ್! ಈ ಶ್ಯಾಮಲಾಲ್‌ನ ಮೇಲೆ ನಿಮಗೆ ಏಕಿಷ್ಟು ಆಸಕ್ತಿ?"

ಬಾಂಬ್ ಒಂದನ್ನು ಸಿಡಿಸಿದೆ. ಸಣ್ಣ ಬಾಂಬ್ ಅದು. ಆದರೆ ಬ್ಯಾಂಕ್ ಅಧಿಕಾರಿಗಳ ತಲೆ ಸಿಡಿಯುವ ಶಕ್ತಿಯುತವಾದ ಬಾಂಬ್!

ಒಬ್ಬ ಬ್ಯಾಂಕ್ ಅಧಿಕಾರಿ ಗ್ರಾಹಕರ ಮೇಲೆ ವಿಶೇಷ ಆಸಕ್ತಿ, ಪ್ರೀತಿ ವಿಶ್ವಾಸಗಳನ್ನು ತೋರಿಸಿದರೆ, ನೋಡುವವರ ಕಣ್ಣುಗಳಿಗೆ , ಆ ಅಧಿಕಾರಿ, ಗ್ರಾಹಕನಿಂದ ಪ್ರಯೋಜನ ಪಡೆದಿದ್ದಾನೆಂದೇ ಮನವರಿಕೆ. 'ಈಚಲ ಮರದ ಕೆಳಗೆ ಕುಳಿತು ಹಾಲು ಕುಡಿಯುತ್ತಿರುವ' ಹಾಗೆ ಆಗುತ್ತದೆ ಅವನ ಸ್ಥಿತಿ! ಹಾಗಾದರೆ, ಗ್ರಾಹಕರ ಬಗ್ಗೆ ವಿಶೇಷ ಆಸಕ್ತಿ ಇಡಬಾರದೇ? ಇಡಬೇಕು, ಇಡಲೇಬೇಕು! ವೃತ್ತಿಪರವಾದ ಆಸಕ್ತಿ, ವ್ಯಕ್ತಿಪರವಾದ ಆಸಕ್ತಿಯಲ್ಲ!

ಈ ರಾಜಕುಮಾರ ವೃತ್ತಿಪರವಾದ ಆಸಕ್ತಿ ಇಟ್ಟಿದ್ದಾನೆಯೋ ಅಥವಾ ವ್ಯಕ್ತಿಪರವಾದ ಆಸಕ್ತಿ ಇಟ್ಟಿರುತ್ತಾನೆಯೋ ಎಂಬುದನ್ನು ಪರೀಕ್ಷಿಸುವುದೇ ನನ್ನ ಇಚ್ಛೆಯಾಗಿತ್ತು.

"ಅವನ ಮೇಲೆ ನನಗೇನು ಆಸಕ್ತಿ ಇಲ್ಲ!"

ನಿಧಾನವಾಗಿ ಹೇಳಿ, ಮತ್ತೊಂದು ಸಿಗರೇಟ್ ಹೊರತೆಗೆದ. ಅದಕ್ಕೆ ಬೆಂಕಿಯನ್ನು ಸಾವಕಾಶವಾಗಿ ತಗುಲಿಸಿದ. 'ಉಫ್' ಎಂದು ಬಹಳ ನಿಧಾನವಾಗಿ ಹೊಗೆಯನ್ನು ಮೂಗಿನ ಹೊಳ್ಳೆಯಿಂದ ಬಿಡತೊಡಗಿದ. ಬಾಯಿ ಮಾತ್ರ ಬಿಡಲಿಲ್ಲ. ಕೋಪವನ್ನು ಹತ್ತಿಕ್ಕಿ ಹೇಗೆ ನನ್ನ ಬೆನ್ನಿಗೆ ಬಾಕು ಹಾಕುವುದು ಎಂದು ಯೋಚಿಸುತ್ತಿರಬೇಕು. ಬೆಣ್ಣೆ ಮಾತು ನನ್ನ ಕಣ್ಣೆದುರು ಉರುಳಿ, ನಾನು ಜಾರುವಂತೆ ಮಾಡಿ, ಮೇಲೆ ಏಳಲು ಪ್ರಯತ್ನಿಸುವಾಗ, ಬೆನ್ನಿಗೆ ಬಾಕುಹಾಕುವುದು ಖಂಡಿತ!

"ಮನೆಗೆ ಒಂದು ಬೆಳಿಗ್ಗೆ ಬಂದಿದ್ದ. ನಾನು ಇನ್ನೂ ಎದ್ದೇ ಇರಲಿಲ್ಲ. ಎಂದಿನಂತೆ ಕುಡಿದು-ಮಲಗುವಾಗ ರಾತ್ರಿ ಬಹಳ ಹೊತ್ತಾಗಿತ್ತು. ಇವ ಬಂದು ಎಬ್ಬಿಸಿದಾಗ ಬೆಳಿಗ್ಗೆ ಎಂಟು ಗಂಟೆಯಾಗಿತ್ತು. ಎದ್ದು ವಿಚಾರಿಸಿದಾಗ, ಪರಿಚಯ ಹೇಳಿ ಸಹಾಯ ಮಾಡಬೇಕೆಂದು ಕೇಳಿಕೊಂಡ. ಅವನ ವ್ಯಾಪಾರ ಸಂಪೂರ್ಣ ಸ್ಥಗಿತಗೊಂಡಿದೆ, ಬ್ಯಾಂಕಿನ ಸಹಕಾರವಿಲ್ಲದೆ. ಅವನ ಇಂಪೋರ್ಟ್ ಬ್ಯೂಸಿನೆಸ್ ನಿಂತುಹೋಗಿ ನಷ್ಟ ಅನುಭವಿಸುತ್ತಾ ಇದ್ದಾನಂತೆ. ಕನಿಕರಗೊಂಡು ನಾನು ಸಹಾಯ ಮಾಡುತ್ತೇನೆಂದು ಒಪ್ಪಿಗೆ ನೀಡಿದೆ. ಅಷ್ಟೇ!"

ದೀರ್ಘವಾಗಿತ್ತು ಅವನ ವಿವರಣೆ! ನನ್ನ ಬಾಂಬ್ ಕೆಲಸ ಮಾಡಿತ್ತು. ಅವನ ಕೈಕಾಲು ಮುರಿದು, ಭಗ್ನವಾಗಿತ್ತು. ಉಸಿರು ಅಡಗಿ ಕ್ಷೀಣವಾಗಿತ್ತು. ಬಾಂಬ್ ಸಿಡಿದು ಬೆಂಕಿಯ ಹೊಗೆ ಮೂಗು ಬಾಯಿಯಿಂದ ಬರುತ್ತಲೇ ಇತ್ತು. ಅವನ ಸ್ಥಿತಿಯನ್ನು ನೋಡಿ ಕನಿಕರಗೊಂಡು, ಮೇಲೆದ್ದು ಹೋಗಿ, ಕಪಾಟಿನಲ್ಲಿದ್ದ ಗ್ಲಾಸ್ ಹೂಜಿಯಿಂದ ನೀರನ್ನು ಲೋಟಕ್ಕೆ ಬಗ್ಗಿಸಿ, ಅವನ ಮುಂದೆ ಇರಿಸಿದೆ. ಅವನು ಅದನ್ನು ತೆಗೆದುಕೊಂಡು ತುಟಿಗೆ ಇಟ್ಟಕೊಂಡು ನಿಧಾನವಾಗಿ ನೀರನ್ನು ಹೀರತೊಡಗಿದ. ಒಂದು ಕೈಯಲ್ಲಿ ಸಿಗರೇಟ್ ತುಂಡನ್ನು ಹಿಡಿದೇ ಇದ್ದ, ಸಂಕಲ್ಪವನ್ನು ಹಿಡಿದ ಹಾಗೆ.

ಅವನಿಗೆ ವಿದಾಯ ಹೇಳಿ ಹೊರಬಂದಾಗ, ನೆನಪಾಯಿತು. ತಮಿಳು ಡಿಜೀಎಮ್‌ನನ್ನು ಭೇಟಿ ಮಾಡಿ ಬಹಳ ದಿನಗಳೇ ಆಗಿದ್ದವು. ಡೀ.ಎಮ್‌ನನ್ನು ನೋಡಿ, ಅವನನ್ನು ನೋಡದಿದ್ದರೆ, ಮಂತ್ರಿಯನ್ನು ನೋಡಿ, ರಾಜಕುಮಾರನಿಗೆ ನಮಸ್ಕರಿಸಿ, ಮಹಾರಾಜನಿಗೆ ಉದ್ದಂಡ ನಮಸ್ಕಾರ ಹಾಕದಿದ್ದರೆ, ರಾಜದ್ರೋಹದ ಅಪಾದನೆ ಮಾಡಿದಂತಾಗುವುದಿಲ್ಲವೇ? ಸಾಮಾನ್ಯ ಪ್ರಜೆಗಳು ಕಪ್ಪಕೊಡುವುದಲ್ಲದೇ, ಸೌಜನ್ಯತೆಯ ಚಿನ್ನೆಯಾದ ನಮಸ್ಕಾರಗಳನ್ನು ಒಪ್ಪಿಸುವುದು ಎಷ್ಟು ಕ್ಷೇಮಕರ!

"ಏನು ಬಂದಿದ್ದು?" ವಿಚಾರಿಸಿದ ತಮಿಳು ಬಂಟ.

ಬಂದ ವಿಷಯ ಹೇಳಿ ವಿವರಿಸಿದೆ.

'ಪ್ರಪೋಸಲ್‌ನ್ನು ಶಿಫಾರಸ್ಸು ಮಾಡಬೇಡ. ತೊಂದರೆಯಾಗುತ್ತೆ ನಿನಗೆ!"

ಹೆದರಿಸಿದ ಬಂಟ! ಇವನ ಕೈ ಕೆಳಗೆ ದುಡಿಯುವನಾದರೂ ಡಿ.ಎಮ್. ರಾಜಕುಮಾರ; ಡೀ.ಜೀ. ಎಮ್. ಕೇವಲ ಕಮಾಂಡರ್-ಇನ್- ಚೀಫ್! ಡೀ.ಎಮ್. ಚೇರ್‌ಮನ್ ಬಾದಶಹಾನ ಸಹೋದರ ಎಂಬ ವಿಷಯ ತಿಳಿದರೂ, ಈ ಬಂಟ ಇಷ್ಟು ಧೈರ್ಯದಿಂದ ನನಗೆ ಆದೇಶ ನೀಡುತ್ತಿದ್ದಾನಲ್ಲಾ!

ಅವನಿಗೆ ವಿದಾಯ ಹೇಳಿ, ಇನ್ನೊಬ್ಬ ಅಧಿಕಾರಿಯನ್ನು-ಅವನು ಎ.ಜೀ.ಎಮ್- ಭೇಟಿ ಮಾಡಿದೆ.

"ಪ್ರಪೋಸಲ್ ಕಳಿಸಿರಿ. ನಿಮ್ಮ ಗಂಟೇನು ಹೋಗುತ್ತದೆ? ಶಿಫಾರಸ್ಸು ಮಾಡುವವರು ನೀವು, ಒಪ್ಪಿಗೆ ಕೊಡುವವರು ನಾವು. ಪಾರ್ಟಿ ಫೈಲ್ ಆದರೆ, ನಿಮ್ಮದೇನು ತಪ್ಪು?"

"ಪಾರ್ಟಿ ಬಗ್ಗೆ ತಿಳಿದಿದ್ದರೂ, ಆತ ಯೋಗ್ಯನಲ್ಲ ಎಂದು ತಿಳಿದಿದ್ದರೂ, ಅವನ ಸಾಲದ ಪ್ರಪೋಸಲ್ ಶಿಫಾರಸ್ಸು ಮಾಡಿ, ಮುಂದೆ ಹೆಚ್ಚು-ಕಮ್ಮಿ ಆದರೆ, ನಾನು ತಾನೇ ಹೊಣೆ ಅದಕ್ಕೆ!"

"ನೋಡ್ರೀ! ಹೊಣೆಗಾರಿಕೆ ತಪ್ಪಿಸಿಕೊಳ್ಳಲಿಕ್ಕೆ ಆಗೋದಿಲ್ಲ ಈ ಕೆಲಸಕ್ಕೆ ಬಂದ ಮೇಲೆ. ಕೆಲಸ ಬೇಕು, ಪ್ರಮೋಶನ್ ಬೇಕು, ಹುದ್ದೆ ಬೇಕು, ಹೊಣೆಗಾರಿಕೆ ಬೇಡ ಎಂದರೆ ಹೇಗೆ ಆಗುತ್ತದೆ?"

ಉಪದೇಶ ನೀಡಲಿಕ್ಕೆ ಶುರುಮಾಡಿದ ಏ.ಜೀ. ಎಮ್. ಎಲ್ಲರೂ ಉಪದೇಶ ನೀಡುವವರೆ! ಕೆಲಸ ಮಾಡುವವರು ಮಾತ್ರ ಕಡಿಮೆ! ಅದೂ ಉಪದೇಶವೆಂದರೆ, ಕಂಡವರ ಮಕ್ಕಳನ್ನು ಬಾವಿಗೆ ಹಾಕಿ ಆಳ ನೋಡುವವ ಉಪದೇಶ! ಈ ಅಯೋಗ್ಯ ಅಧಮ, ಅನರ್ಹ, ದುರುಳ, ಸ್ವಾರ್ಥಿ, ಶ್ಯಾಮಲಾಲ್‌ನಿಗೆ ಸಾಲ ಕೊಟ್ಟರೆ ನನ್ನನ್ನು ನರಕಕ್ಕೆ ತಳ್ಳಿ, ತಾವು ಕೇಕೆ ಹಾಕಿ ನಗುತ್ತಾರೆ ಈ ನೀಚರು! ಇವರ ಮಾತನ್ನು ನಂಬಿ ಕೆಲಸ ಮಾಡಿದರೆ, ಕೇಡಾಗುವುದು ಕಟ್ಟಿಟ್ಟ ಬುತ್ತಿ! ಆದರೆ ಈ ಸಂಕಷ್ಟದಿಂದ ತಪ್ಪಿಸಿ ಕೊಳ್ಳುವುದು ಹೇಗೆ? ಈ ದುರುಳರ ಕಪಿಮುಷ್ಟಿಯಿಂದ ಪಾರಾಗುವುದು ಹೇಗೆ? ರಾಜ ಕುಮಾರ ರಾತ್ರಿಯೆಲ್ಲಾ ಕುಡಿದು, ಬೆಳಿಗ್ಗೆ ಆಫೀಸ್‌ನಲ್ಲಿ ಅಮಲಿನಲ್ಲಿ ನಮ್ಮ ಮೇಲೆ ಹಾರಾಡಿ, ತನ್ನ ಜೊತೆಗೆ ನಮ್ಮನ್ನು ಪಾಪಕೂಪಕ್ಕೆ ತಳ್ಳುತ್ತಾನಲ್ಲಾ! ಈ ರಾಜಕುಮಾರ ನಿಗೆ ದಿನವಿಡೀ ಕುಡಿಯಲಿಕ್ಕೆ ಹಣವಾದರೂ ಎಲ್ಲಿಂದ ದೊರೆಯುತ್ತದೆ? ವಿದೇಶೀ ವಿಸ್ಕಿಯೇ ಬೇಕು ಇವನಿಗೆ! ಶ್ಯಾಮಲಾಲ್‌ನಂತಹ ಹತ್ತಾರು ಗ್ರಾಹಕ ಸ್ನೇಹಿತರು ಇರುವಾಗ ವಿದೇಶೀ ವಿಸ್ಕೀ ಇವನ ಮನೆಯ ಮುಂದೆ ಉರುಳು ಸೇವೆ ಮಾಡಿಸುತ್ತಿರ ಬೇಕು ಬಾಟ್ಲೀಗಳಿಂದ!

"ನನ್ನ ಮುಖವನ್ನೇ ದುರುಗುಟ್ಟಿ ನೋಡುತ್ತಿದ್ದೀರಲ್ಲಾ? ಏನಾಗಿದೆ ನಿಮಗೆ? ಮೈ ನೆಟ್ಟಗಿದೆಯಾ?" ಏ.ಜೀ. ಎಮ್. ಕೇಳಿದ ಗಡುಸಾಗಿ.

ಗಡಿಬಿಡಿಯಿಂದ ಮೇಲಕ್ಕೆದ್ದೆ, ಹೊರಡಲು ಅನುವಾಗಿ.

"ದೊಡ್ಡ ಅಧಿಕಾರಿಗಳು, ತಮಗೆ ಇಷ್ಟವಾದುದನ್ನು ಹೇಳಿದರೆ, ಅದರಂತೆ ಮಾಡುವುದನ್ನು ಕಲಿಯಿರಿ! ಅದರಿಂದ ಅವರಿಗೆ ಅನುಕೂಲವಾದರೆ, ನಿಮಗೂ ಅನುಕೂಲದ ಜೊತೆಗೆ ಕ್ಷೇಮ!"

ಮತ್ತೆ ಉಪದೇಶ! ಈ ದೇಶದಲ್ಲಿ ಉಪದೇಶಗಳನ್ನು ಪುಕ್ಕಟೆಯಾಗಿ ದೊರಕು

ವಷ್ಟು ವಸ್ತು ಬೇರೆ ಇಲ್ಲವೆನ್ನಬಹುದು. ವೇದಕಾಲದಿಂದ ಶುರುವಾದ ಈ ಉಪದೇಶ ಪ್ರವೃತ್ತಿ, ಜೈನರು, ಬುದ್ಧರು, ಇಸ್ಲಾಮಿಗಳು, ಸಿಖ್‌ರು ಮತ್ತು ಈಗೀಗ ಅನೇಕ ಸ್ವಾಮಿಗಳು, ಆಚಾರ್ಯರು, ಸಂತರು ನಡೆಸಿಕೊಂಡು ಬರುತ್ತಲೇ ಇದ್ದಾರೆ! ಇದು ಎಂದಿಗೆ ಮುಕ್ತಾಯವಾಗುತ್ತದೆಯೋ ಆ ದೇವರಿಗೇ ಗೊತ್ತು!

ಶಾಖೆಗೆ ಬಂದಾಗ ಗೊಂದಲದ ಗೊಂಡಾರಣ್ಯಕ್ಕೆ ನುಗ್ಗಿದ ಹಾಗೆ ಆಯಿತು. ನೌಕರರು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತು ಕೆಲಸ ಮಾಡುವ ದೃಶ್ಯ ಕಾಣಬರಲಿಲ್ಲ. ಗುಂಪು ಗುಂಪಾಗಿ ನಿಂತು ಹರಟೆ ಹೊಡೆಯುವ ದೃಶ್ಯ ಒಂದು ಕಡೆ ಕಂಡರೆ, ಇನ್ನೊಂದು ಕಡೆ, ಪಕೋಡ, ಸಮೋಸ ಮೆಲ್ಲುತ್ತಾ ನಿಂತಿರುವ ಹೆಣ್ಣು ನೌಕರರ ದೃಶ್ಯ ಕಂಡು ಬಂತು. ಒಂದು ಟೇಬಲ್ ಸುತ್ತಲೂ ಕೆಲವರು ಕುಳಿತು ಇಸ್ಪೀಟು ಆಡುತ್ತಾ ಇದ್ದರು. ಇದು ಏನು ಬ್ಯಾಂಕೇ ಅಥವಾ ಇಸ್ಪೀಟು ಕ್ಲಬ್ಬೇ! ಗೋಡೆಗೆ ತೂಗು ಹಾಕಿದ್ದ ಗಡಿಯಾರ ನೋಡಿದೆ. ೨ ಗಂಟೆಗೆ ಇನ್ನು ಹತ್ತು ನಿಮಿಷ ಇತ್ತು. ಊಟದ ಸಮಯ ೨ ಗಂಟೆಯಿಂದ ೨.೩೦ ರವರೆಗೆ ಎಂದು ತಿಳಿದಿದ್ದರೂ, ಹತ್ತು ನಿಮಿಷ ಮುಂಚೆಯೇ ಕೆಲಸ ನಿಲ್ಲಿಸಿ ಆಟಕ್ಕೆ ಶುರು ಹಚ್ಚಿದ್ದರು ಈ ಪಟಿಂಗರು. ಇವರಿಗೆ ಸಮಯಪ್ರಜ್ಞೆಯೇ ಇಲ್ಲವಲ್ಲಾ! ಶಿಸ್ತು ಮೊದಲೇ ಇಲ್ಲದ ಇವರು ಸಂಬಳ ತೆಗೆದುಕೊಂಡಿದ್ದಕ್ಕೆ ನಿಷ್ಠೆಯಿಂದ ಕೆಲಸ ಮಾಡುತ್ತಿಲ್ಲವಲ್ಲಾ ಈ ಅನಿಷ್ಟರು! ಮನಸ್ಸು ರೋಸಿ, ಕೋಪದಿಂದ ಉರಿಯಿತು.

"ಎಲ್ಲರೂ ಅವರವರ ಸ್ಥಳದಲ್ಲಿ ಹೋಗಿ ಕುಳಿತು ಕೆಲಸ ಮಾಡಿರಿ. ಇಲ್ಲದೇ ಹೋದರೆ ಮುಂದಿನ ಕ್ರಮ ತೆಗೆದುಕೊಳ್ಳುತ್ತೇನೆ!" ಎಂದು ಹೇಳಿ ನನ್ನ ಕ್ಯಾಬಿನ್‌ಗೆ ಬಂದು ಕುಳಿತೆ.

ನನ್ನ ಬೆದರಿಕೆಗೆ ಪ್ರತಿಕ್ರಿಯೆ ಏನು ಎಂದು ಕುಳಿತಲ್ಲಿಂದ ಕ್ಯಾಬಿನ್ ಗ್ಲಾಸ್ ಗೋಡೆಯಿಂದ ಕಾಣುವ ದೃಶ್ಯ ನೋಡತೊಡಗಿದೆ.

ಯಾರೂ ತಮ್ಮ ಸ್ಥಳದಿಂದ ಕದಲಲಿಲ್ಲ! ತಮ್ಮ ಕಾರ್ಯಕಲಾಪಗಳನ್ನು ಮಾಡುತ್ತಾ, ಜೋರಾಗಿ ಕೂಗುತ್ತಾ, ಹರಟುತ್ತಾ, ತಿನ್ನುತ್ತಾ, ಇಸ್ಪೀಟು ಆಡುತ್ತಾ ಮಜದಲ್ಲಿದ್ದರು. ಇವರನ್ನು ತಿದ್ದುವುದು ಹೇಗೆ? ಬಲಿತು ಹೆಮ್ಮರವಾಗಿ ಬೆಳೆದ ಇವರನ್ನು ಹೇಗೆ ಪಳಗಿಸುವುದು? ಕೆಲಸದಲ್ಲಿ ಶ್ರದ್ಧೆ ಇಲ್ಲದ ಪ್ರಬುದ್ಧರು, ಸಂಸ್ಥೆಗೆ ನಿಷ್ಠೆಯಿಲ್ಲದ ಅನಿಷ್ಟರು, ಗ್ರಾಹಕರಿಗೆ ಸೇವೆ ನೀಡದ ಸೇರಿಗೆ ಸವ್ವಾಸೇರು ಎನ್ನುವ ಸೇಡು ಮನೋಭಾವದ ಕೆಡುಕರು, ಹೇಗೆ ಸುಸಂಸ್ಕೃತ ಜನಾಂಗಕ್ಕೆ ಸೇರಿದವರಾಗುತ್ತಾರೆ?

ಮಾತುಕತೆಯ ಯಜ್ಞದಿಂದಲೇ ಈ ಪಿಡುಗನ್ನು ನಿವಾರಿಸಬೇಕೆಂದು

ತೀರ್ಮಾನಿಸಿ, ಸಾಯಂಕಾಲ ಐದು ಗಂಟೆಗೆ, ಮುಖಂಡರನ್ನು ಕರೆದೆ. ಯಥಾ ಪ್ರಕಾರ, ಅವರನ್ನು ಕುಳ್ಳಿರಿಸಿ ಕಾಫಿ ತರಿಸಿ ಉಪಚರಿಸಿದೆ. ಬೆಣ್ಣೆ ಮಾತನಾಡಿ ಅವರ ಮನಸ್ಸು ಒಲಿಸಿಕೊಳ್ಳಲು ಪ್ರಯತ್ನಿಸಿದೆ.

"ಆಫೀಸ್‌ನಲ್ಲಿ ಕೆಲಸದ ವೇಳೆಯಲ್ಲಿ, ಇಸ್ಪೀಟ್ ಆಟ ಆಡುವುದು ಸರಿಯಲ್ಲ. ನೀವು ನಿಮ್ಮ ಸಹೋದ್ಯೋಗಿಗಳಿಗೆ ದಯಮಾಡಿ ಸೂಕ್ತ ರೀತಿಯಲ್ಲಿ ಬುದ್ಧಿವಾದ ಹೇಳಿ."

"ಹತ್ತು ನಿಮಿಷ ಲಂಚ್ ವೇಳೆ ಮೊದಲೇ ಆಟ ಆಡಿದರೆ ನಿಮ್ಮ ಗಂಟೇನು ಹೋಗುತ್ತದೆ?"

ಸರ್ದಾರ್ಜೀ ನೇತಾ ನನ್ನನ್ನು ಉದ್ರೇಕಿಸಲು ಪ್ರಯತ್ನಿಸುತ್ತಿರುವುದು ನನಗೆ ಹೊಳೆಯಿತು.

"ನನ್ನ ಗಂಟು ಹೋಗುವುದಿಲ್ಲ! ಆದರೆ, ನಿಮ್ಮ ಸಹೋದ್ಯೋಗಿಗಳ ಸಂಬಳದ ಗಂಟು ಮಾತ್ರ ಹೋಗುತ್ತದೆ!"

"ಹೆದರಿಸುತ್ತಾ ಇದ್ದೀರಾ?" ಧ್ವನಿ ಏರಿಸಿದ ನೇತಾ!

"ಹೆದರಿಸುತ್ತಾ ಇಲ್ಲ; ವಿಷಯ ತಿಳಿಸುತ್ತಾ ಇದ್ದೇನೆ. ಕೆಲವು ವೇಳೆ ಕೆಲವು ವಿಷಯಗಳು ಮರೆತುಹೋಗುವ ಸಾಧ್ಯತೆ ಇರುತ್ತದೆ. ಅಲ್ಲವೇ?"

"ಅದೆಲ್ಲಾ ಈಗ ಯಾಕೆ? ಹೋಗಲಿ ಬಿಡಿ! ಆದರೆ ನೀವು ಇಷ್ಟು ಸ್ಟ್ರಿಕ್ಟ್ ಆದರೆ, ಕೆಲಸ ಆಗುವುದು ಕಷ್ಟ. ಶಿಸ್ತು ಎಂದು ಹೇಳಿ, ಹತ್ತು ನಿಮಿಷ ಲೇಟಾಗಿ ಬರುವ ಹಾಗಿಲ್ಲ, ಮೊದಲೇ ಹೋಗುವ ಹಾಗಿಲ್ಲ, ಮೊದಲೇ ಊಟ ಮಾಡುವ ಹಾಗಿಲ್ಲ! ಇದೆಂತಹ ಶಿಸ್ತು! ಒಳ್ಳೇ ಮಿಲಿಟರಿ ಶಿಸ್ತಾಗಿದೆಯಲ್ಲ ನಿಮ್ಮ ಬ್ಯಾಂಕ್‌ನಲ್ಲಿ! ನಮಗೆ ಎಲ್ಲೋ ಮಿಲಿಟರಿ ಕ್ಯಾಂಪ್‌ನಲ್ಲಿ ಕೆಲಸ ಮಾಡುತ್ತಿರುವ ಭಾವನೆ!"

ಮತ್ತೊಬ್ಬ ಮುಖಂಡ ಸಾಹನೀ ಆಕ್ಷೇಪಿಸಿದ.

"ಮಿಲಿಟರಿ ಶಿಸ್ತು ಹೇರುತ್ತಾ ಇದ್ದೇನೆ! ಅಲ್ಲವಾ?"

"ಹೌದು!" ಒಕ್ಕೊರಲಿನಿಂದ ಹೇಳಿದರು ಇಬ್ಬರೂ.

"ಇಂಗ್ಲಿಷ್‌ನಲ್ಲಿ ಡಿಸ್‌ಪ್ಲೀನ್ ಅಂದರೆ ಶಿಸ್ತು ಎಂಬ ಪದಕ್ಕೆ ಅರ್ಥ ಒಂದೇ. ಆದರೆ ಇಂಗ್ಲಿಷ್ ಭಾಷೆಯಲ್ಲಿ ಮಿಲಿಟರಿ ಡಿಸ್‌ಪ್ಲೀನ್ ಎಂದು ಎಲ್ಲೂ ತಿಳಿಸಿಲ್ಲ. ತಿಳಿದಿದೆಯಾ ನಿಮಗೆ?" ಗಲಿಬಿಲಿಗೊಂಡರು ಅವರು.

ನಾನು ಮುಂದುವರೆದೆ "ಆಯಾಯ ಸಂಸ್ಥೆ, ರಾಜ್ಯ ದೇಶ, ಜನಾಂಗದವರಲ್ಲಿ ವಿವಿಧ ರೀತಿಯಲ್ಲಿ ಶಿಸ್ತನ್ನು ಕಾಪಾಡಿಕೊಂಡು ಬರುತ್ತಾರೆ. ನಮ್ಮ ಬ್ಯಾಂಕ್‌ನಲ್ಲಿ, ಎಲ್ಲಾ ಸಂಘ ಸಂಸ್ಥೆ, ಉದ್ಯಮಗಳಲ್ಲಿರುವಂತೆ, ಶಿಸ್ತನ್ನು ಕಾಪಾಡಿಕೊಂಡು, ಕೆಲವು

ನಿಯಮಗಳನ್ನು ಜಾರಿಗೆ ತಂದು ಅದರಂತೆ ನಡೆದುಕೊಂಡು ಬರುವಂತೆ ಹೇಳಿಕೊಂಡಿದ್ದಾರೆ!"

ಮುಖಂಡರು ಮೌನದಿಂದಿದ್ದರು. ನನಗೆ ಭಯವಾಗತೊಡಗಿತು. ಇವರು ಸುಮ್ಮನಿದ್ದು, ಯಾವ ಪ್ರತಿಕ್ರಿಯೆಯಂತೂ ತೋರಿಸದಿದ್ದರೆ ದುರಂತ ನನಗಾಗಿ ಕಾದಿದೆ ಎಂದು!

"ಬೆಳಿಗ್ಗೆ ಹತ್ತರಿಂದ ಸಾಯಂಕಾಲ ಐದು ಗಂಟೆಯವರಿಗೆ, ನಿಷ್ಠೆಯಿಂದ, ಶಿಸ್ತಿನಿಂದ, ಜಾಗರೂಕತೆಯಿಂದ, ಜವಾಬ್ದಾರಿಯಿಂದ ಕೆಲಸ ಮಾಡಿ ಎಂದು ಬ್ಯಾಂಕ್ ಮೇನೇಜ್‌ಮೆಂಟ್ ಕೇಳುವುದು ತಪ್ಪೇ?"

ಮಾತಿಲ್ಲ, ಉಸಿರಿಲ್ಲ! ಮೌನಾವತಾರ! ನನ್ನ ಭಯ ಹೆಚ್ಚಾಗುತ್ತಾ ಬಂತು. ವಿಪ್ಪತ್ತು ಖಂಡಿತವಾಗಿ ಕಾಯುತ್ತಾ ಇದೆ!

"ಸಮಯ ಹಾಳು ಮಾಡಿದರೆ ನಿಮಗೂ ನಷ್ಟ, ಬ್ಯಾಂಕ್‌ಗೂ ನಷ್ಟ, ಏನಂತೀರಿ?"

ಉತ್ತರವಿಲ್ಲ.

"ಈಗ ನೋಡಿ! ಮೊನ್ನೆ ಹನ್ನೆರಡು ಗಂಟೆಗೆ ಲೇಡಿ ಕ್ಲರ್ಕ್ ಪರ್ಮಿಶನ್ ಇಲ್ಲದೆ ಮನೆಗೆ ಹೋಗಿ ಬಿಟ್ಟಳು. ಮೂರು ಗಂಟೆಗೆ ವಾಪಸ್ಸು ಬಂದಳು. ಕಾರಣ ಕೇಳಿದರೆ, 'ಮನೆಗೆ ಮಗು ಶಾಲೆಯಿಂದ ಬರುವ ಸಮಯವಾಗಿತ್ತು. ಆದ್ದರಿಂದ ಹೋಗಿದ್ದೆ!' ಎಂದಳು. 'ಕೆಲಸದ ಸಮಯದಲ್ಲಿ ಹಾಗೆ ಹೋದರೆ, ಗ್ರಾಹಕರಿಗೆ ತೊಂದರೆಯಾಗುವು ದಿಲ್ಲವೇ?' ಎಂದು ಕೇಳಿದರೆ, "ನನಗೆ ಏನೂ ಮಾಡಲಿಕ್ಕೆ ಆಗುವುದಿಲ್ಲ!'ಎಂದಳು. ಸಿಟ್ಟು ಬಂದಿತು ನನಗೆ. 'ನಿನ್ನ ಮೇಲೆ ಕ್ರಮ ಜರುಗಿಸುತ್ತೇನೆ ಗೊತ್ತಾಯಿತಾ?'ಎಂದು ಹೆದರಿಸಿದೆ. ಅದಕ್ಕೆ ಅವಳು 'ನೀವು ಏನು ಬೇಕಾದರೂ ಮಾಡಿ' ಎಂದು ಹೇಳಿದಳು. 'ಸರಿ! ಹಾಗಾದರೆ ನಾನು ನೋಡಿಕೊಳ್ಳುತ್ತೇನೆ, ನೀವು ಇನ್ನು ಹೋಗಬಹುದು!' ಎಂದು ಹೇಳಿದೆ. ಈಗ ಹೇಳಿ, ಅವಳು ಈ ರೀತಿ ಕೆಲಸದ ಮಧ್ಯದಲ್ಲಿ ಮನೆಗೆ ಹೋದರೆ, ಅವಳ ಕೆಲಸ ಮಾಡುವವರು ಯಾರು? ಗ್ರಾಹಕರಿಗೆ ಹೇಳುವವರು ಯಾರು?"

"ಲೇಡೀ ಕ್ಲರ್ಕ್ ಪಂಜಾಬೀ ಬ್ಯಾಂಕ್‌ನಿಂದ ಈ ಬ್ಯಾಂಕ್‌ಗೆ ಬಂದವಳು. ಅಲ್ಲಿ ಅವಳಿಗೆ ಆ ಸೌಲಭ್ಯ ಇತ್ತು. ಇಲ್ಲಿ ಕೂಡ ಆ ಸೌಲಭ್ಯ ಬೇಕು ಎಂದು ಕೇಳಿಕೊಳ್ಳುತ್ತಿದ್ದಾಳೆ."

ಸಾಹನೀ ಬಾಯಿ ಬಿಟ್ಟ! ಈತನೂ ಆ ಪಂಜಾಬೀ ಬ್ಯಾಂಕ್‌ನ ನೌಕರನಾಗಿದ್ದ ನಷ್ಟೆ! ಅವಳ ಮೇಲೆ ಅನುಕಂಪ ಇರುವುದರಲ್ಲಿ ಆಶ್ಚರ್ಯವೇನೂ ಇರಲಿಲ್ಲ.

ಆದರೆ ಆ ಪಂಜಾಬೀ ಬ್ಯಾಂಕ್‌ನಲ್ಲಿ ದೊರೆಯುತ್ತಿದ್ದ ಸೌಲಭ್ಯ ನಮ್ಮ ಬ್ಯಾಂಕ್‌ನಲ್ಲಿ ದೊರೆಯಬೇಕೆಂದರೆ, ಅದೂ ನೀಡಲಾಗದ ಸೌಲಭ್ಯ, ಯಾವ ನೌಕರನಿಗೂ, ಯಾವ ಸಂಸ್ಥೆ ಸಂಘಗಳಲ್ಲೂ ದೊರೆಯದ ಸೌಲಭ್ಯ, ಇವಳಿಗೆ ನೀಡಿ, ಅಶಿಸ್ತಿಗೆ ನಾಂದಿ ಹಾಕಿ, ಬ್ಯಾಂಕ್ ದಿವಾಳಿ ಆಗುವಂತೆ ಮಾಡುವುದೆ?

"ಇಸ್ಪೀಟ್ ಆಟ ಬ್ಯಾಂಕ್ ಆವರಣದಲ್ಲಿ ಆಡುವುದು ಸರಿಯೆ?"

"ಇಸ್ಪೀಟು ಆಟವನ್ನು ಈ ಶಾಖೆ ತೆರೆದಾರಂಭದಿಂದಲೂ ಆಡುತ್ತಾ ಬಂದಿದ್ದೇವೆ. ಯಾವ ಮೇನೇಜರ್ ಸಾಹೇಬರೂ ಇದಕ್ಕೆ ಅಡ್ಡಿ ಮಾಡಲಿಲ್ಲ! ನಿಮ್ಮದೇನು ಅಡ್ಡಿ?" ಸರ್ದಾರ್ಜೀ ನೇತಾ ಗುಡುಗಿದ.

"ಊಟದ ವೇಳೆಯಲ್ಲಿ ಆಡಿ, ಆದರೆ ಹಣ ಇಟ್ಟು ಆಡಿದರೆ ಅದು ಜುಗಾರಿ ಆಗುತ್ತದೆ. ಬ್ಯಾಂಕ್ ಆವರಣದಲ್ಲಿ ಆಡಿ, ಮೇಲಾಧಿಕಾರಿಗಳಿಗೆ ತಿಳಿದರೆ, ಮುಂದೆ ಆಗುವ ಪರಿಣಾಮಗಳಿಗೆ ನಾನು ಜವಾಬ್ದಾರನಲ್ಲ!"

ಸರ್ದಾರ್ಜೀ ನೇತಾ ಕನಲಿ ಕೆಂಡವಾದ! ಕುರ್ಚಿಯಿಂದ ಎದ್ದು ಕೂಗಿದ.

"ದೂರು ಕೊಡುತ್ತೀರಾ? ಕೊಡಿ! ನಾವು ನೋಡುತ್ತೇವೆ! ನಾವು ಹೆದರುವುದಿಲ್ಲ!"

ಅವನ ಬೊಬ್ಬೆಗೆ ಅವನ ಹಲವಾರು ಶಿಷ್ಯರು ಓಡಿ ಬಂದರು. ಒಳಗೆ ಬಂದು ಅವನ ಹಿಂದೆ, ಪಕ್ಕದಲ್ಲಿ ನಿಂತರು ಅವನ ಕಾವಲಿಗೆ!

"ಯಾರಿಗೆ ದೂರು ಕೊಡುತ್ತೀರಾ? ಪೊಲೀಸರಿಗೆ ದೂರು ಕೊಡುತ್ತೀರಾ? ಕೊಡಿ! ನೋಡೇ ಬಿಡುತ್ತೇನೆ!"

ಗುಂಪಿನಲ್ಲಿದ್ದ ದಪ್ಪಗಂಟಲಿಗ ಕೂಗಿದ. ಈ ಲಾಲ್‌ನಿಗೆ ಹೆದರದೇ ಹೋದರೂ, ಅವನ ಗಂಟಲಿಗೆ ಹೆದರಲೇಬೇಕಾಗಿತ್ತು. ಹಿಂದೀ ಚಿತ್ರಪಟದಲ್ಲಿನ ಖ್ಯಾತ ಖಳನಾಯಕನ ಗಂಟಲಿನಂತಿತ್ತು ಅವನ ಗಂಟಲು. ಗಂಟಲಷ್ಟೇ ದೊಡ್ಡ ಪೀಪಾಯಿ ಬಾಯಿಯಿಂದ ಹೊರಟ ಶಬ್ಧ ಎಂತಹವರನ್ನು ಗಾಬರಿಗೊಳಿಸುವಂತಿತ್ತು. ದೊಡ್ಡ ಬಾಯಿ ತೆರೆದು, ಬ್ಯಾಂಕ್ ಹಾಲ್‌ನ ಉದ್ದಕ್ಕೂ ತನ್ನ ಉದ್ದ ನಾಲಿಗೆಯನ್ನು ಚಾಚಿ, ಎಲ್ಲರನ್ನೂ ಹೊಡೆದೆಬ್ಬಿಸಿ ದಾಂಧಲೆಯ ಗೊಂದಲವೆಬ್ಬಿಸಿ, ಇತರ ನೌಕರರು ಮತ್ತು ಗ್ರಾಹಕರಿಗೆ ತ್ರಾಸ ಕೊಟ್ಟು ಸಂತಸಪಡುತ್ತಿದ್ದ. ಇವನ ಅಬ್ಬರಕ್ಕೆ ಗಬ್ಬರ್ ಸಿಂಗ್ ಧ್ವನಿ ಗೂಡಿಸುತ್ತಿದ್ದರು ಇವನ ಸಹೋದ್ಯೋಗಿಗಳು. 'ಅಬ್ಬರ ಕಡಿಮೆ ಮಾಡು ಮಹರಾಯಾ' ಎಂದರೆ, ನನ್ನ ಮಾತಾಡುವ ಹಕ್ಕನ್ನು ಕಿತ್ತುಕೊಳ್ಳ ಬಯಸುವುದಾ? ಎಂದು ನನ್ನ ಮೇಲೆ ಹರಿಹಾಯುತ್ತಿದ್ದ. ಇವನ ಗಂಟಲು ಹರಿದು ಮೂರಾಬಟ್ಟೆಯಾಗಬಾರದೇ ಎಂದು ನಾನು ಹಲಬುತ್ತಿದ್ದೆ. ಇವನ ಮಹಾಗಂಟಲ

ಹಿರಿಮೆಯಷ್ಟೇ, ಮಾಡುವ ಕೆಲಸ ಹಿರಿದಾಗಿದ್ದಿದ್ದರೆ, ಇವನ ಗಾರ್ಧಭ ಗಂಟಲಿಗೆ ಮಂಗಳಾರತಿ ಎತ್ತಿ ಪೂಜೆ ಮಾಡಬಹುದಾಗಿತ್ತು. ಕೆಲಸ ಹೊಲಸು ಮಾಡಿ, ಇಡೀ ದಿನ ಬ್ಯಾಂಕಿನ ವಾತಾವರಣವನ್ನು ತನ್ನ ಉಬ್ಬು ಹಲ್ಲಿನಿಂದ ದುರ್ನಾತ ಹೊರಡಿಸಿ, ಖಲುಶಿತಗೊಳಿಸುತ್ತಿದ್ದ.

"ನಾವು ಆಡುವುದು ಬ್ರಿಡ್ಜ್ ಗೇಮ್, ಇಸ್ಪೀಟ್ ಅಲ್ಲ. ಬ್ರಿಡ್ಜ್ ಅಂತರಾಷ್ಟ್ರೀಯ ಗೇಮ್? ಗೊತ್ತಿದೆಯೇನು?"

ಲಾಲ್ ತನ್ನ ಉಬ್ಬು ಹಲ್ಲನ್ನು ಮುಂದಕ್ಕೆ ಚಾಚಿ, ಡಂಗೂರ ಹೊಡೆದ.

ನಾನು ಉತ್ತರಿಸಿದೆ, ಸುಮ್ಮನಾದೆ. ನನ್ನ ಉತ್ತರ ನನಗೇ ಮುಳುವಾಗಿ, ನನ್ನನ್ನು ಎಲ್ಲಿ ಚುಚ್ಚಿ ಹಿಂಸಿಸುತ್ತಾರೋ ಎಂಬ ಆತಂಕ ಉಂಟಾಯಿತು. 'ಪೊಲೀಸ್' ಎಂಬ ಪದ ನನ್ನ ಬಾಯಿಯಿಂದ ಬರದೇ ಹೋದರೂ, ಅವರು ಅದನ್ನು ನನ್ನ ಬಾಯಿಯಿಂದ ಬಂತೆಂದು ನೆಪ ಒಡ್ಡಿ ಹಾರಾಡುತ್ತಿದ್ದ ಇವರನ್ನು ಹೇಗೆ ಸಂಭಾಳಿಸುವುದು? ಮಾತು ಕತೆಯಾಡಿ ಸಮಸ್ಯೆ ಬಗೆಹರಿಸಿಕೊಳ್ಳೋಣವೆಂದರೆ, ಸಮಸ್ಯೆಯ ಗಾತ್ರ ಗಳಿಗೆಗಳಿಗೆಗೂ ವೃದ್ಧಿಗೊಳ್ಳುತ್ತಾ, ನನ್ನನ್ನೇ ಹೊಡೆದು ಹಿಂಸಿಸು ವಂತೆ ತೋರುತ್ತದೆಯಲ್ಲಾ! ಸಮಸ್ಯೆ ವೃದ್ಧಿಯಾಗುವುದನ್ನೂ ತಪ್ಪಿಸುವ ದಾರಿ ಯಾವು ದಯ್ಯಾ ದೇವಾ ಎಂದು ಬೇಡಿ ಕೊಳ್ಳಲು ಪ್ರಾರಂಭಿಸಿದೆ. ನನ್ನ ಮೇಲೆ ಯಾಕಿಷ್ಟು ಕೋಪ? ಮೇನೇಜ್‌ಮೆಂಟ್ ತಪ್ಪು ಮಾಡಿದರೆ, ನನ್ನ ಮೇಲೆ ವೈಯುಕ್ತಿಕವಾಗಿ ಯಾಕೆ ಕೋಪ ಮಾಡಿಕೊಳ್ಳಬೇಕು. ಶಿಸ್ತು ಪಾಲಿಸಿರಿ ಎಂದರೆ ಕೋಪವೇಕೆ? ನಿಷ್ಠೆಯಿಂದ ಕೆಲಸ ಮಾಡಿರಿ ಎಂದರೆ ಮರಣದಂಡನೆ ವಿಧಿಸಿದಷ್ಟು ಘೋರವಾಗಿ ತೋರುತ್ತದೆಯಲ್ಲಾ ಇವರಿಗೆ! ಶಿಸ್ತು, ನಿಯಮ, ನಿಷ್ಠೆ-ಇವರ ನಿಘಂಟಿನಲ್ಲಿ ಕಾಣದ ಪದಗಳೇ! ಛೆ! ಇವರನ್ನು ಈ ವಿಷಯದಲ್ಲಿ ತಪ್ಪು ಹುಡುಕುವುದು ವ್ಯರ್ಥವಲ್ಲವೇ? ಪ್ರಾಚೀನ ಕಾಲದಿಂದಲೂ, ನಮ್ಮ ಪೂರ್ವಿಕರು, ಶಿಸ್ತು, ನಿಯಮ, ನಿಷ್ಠೆಯನ್ನು ಶ್ರದ್ಧೆಯಿಂದ ಪಾಲಿಸಿಕೊಂಡು ಬಂದಿದ್ದಾರೆಯೆ? ಹಾಗೆ ಪಾಲಿಸಿದ್ದರೆ ನಾವು ಏಕೆ ಪರಕೀಯರ ದಾಸರಾಗ ಬೇಕಾಗುತ್ತಿತ್ತು. ಶಿಸ್ತಿನ ಜೊತೆಗೆ ಐಕ್ಯತೆ, ರಾಷ್ಟ್ರೀಯತೆಗಳ ಅಭಾವ ನಮ್ಮ ಹಿರಿಯರಿಗಿಲ್ಲದ ಕಾರಣ ನಾವು ಈ ಸ್ಥಿತಿಗೆ ಬರಲು ಕಾರಣ ವಾಯಿತಷ್ಟೆ! ಹಿರಿಯರ ಗುಣಗಳು ನಮ್ಮ ರಕ್ತದಲ್ಲಿ ಇಂದಿಗೂ ಹರಿಯುತ್ತಿದೆಯಷ್ಟೆ!

"ಶಿಸ್ತಿನಿಂದ, ನಿಷ್ಠೆಯಿಂದ, ಶ್ರದ್ಧೆಯಿಂದ ನೀವು ಕೆಲಸ ಮಾಡದಿದ್ದರೆ, ಮುಂದಿನ ಆಗು-ಹೋಗುಗಳಿಗೆ ನಾನು ಜವಾಬ್ದಾರನಲ್ಲ. ಎಚ್ಚರಿಕೆ ನೀಡಲಿಲ್ಲವೆಂದು ಆಮೇಲೆ ಆಕ್ಷೇಪಿಸಬೇಡಿ!"

ಎತ್ತರದ ಧ್ವನಿಯಲ್ಲಿ, ಗುಂಪಿನ ಮಹಾಧ್ವನಿಯನ್ನು ಮೀರಿಸಿ ಕೂಗಿದೆ.

"ಜೋರು, ಜಬೆರ್‌ದಸ್ತ್ ಮಾಡುತ್ತೀರಾ?"

ಒಕ್ಕರಲಿನಿಂದ ಕೂಗಿದರು ಎಲ್ಲರೂ! ಐಕ್ಯತೆ ಇತ್ತು ಇವರಲ್ಲಿ!

"ಈ ಬ್ಯಾಂಕ್‌ನ್ನು, ಪಂಜಾಬೀ ಬ್ಯಾಂಕ್‌ನ್ನು ಮುಳುಗಿಸಿದಂತೆ ಮುಳುಗಿಸಲು ನಾನು ಬಿಡುವುದಿಲ್ಲ!" ಗಂಟಲು ಹರಿಯುವಂತೆ ಕೂಗಿದೆ!

"ನಡೆಯಿರಿ ಹೊರಗೆ! ಸಾಕು ನಿಮ್ಮ ಕಿರಿಚಾಟ!" ಎಂದು ಹೇಳಿ ನಾನೇ ಎದ್ದು ಹೊರಕ್ಕೆ ನಡೆದೆ!

ಮಾರನೆಯ ದಿನ ಬೆಳಿಗ್ಗೆ ಆಫೀಸ್‌ಗೆ ಬಂದಾಗ, ನನ್ನ ವಿರುದ್ಧ ಅಪಜಯ ಘೋಷ ನಡೆಯಿತು.

"ಮೇನೇಜರ್ ಮುರ್ದಾಬಾದ್!"

"ಮೇನೇಜರ್ ಕುತ್ತೇ, ಕುನ್ನೀ!"

ಯಾರೋ ಮಾಡಿದ ತಪ್ಪಿಗೆ ನನಗೆ ಸಹಸ್ರನಾಮ!

ಬ್ಯಾಂಕ್ ನೌಕರರ ಈ ಕ್ಷಾತ್ರತೆ, ಪಂಜಾಬಿನಲ್ಲಿ ಜರುಗುತ್ತಿರುವ ಕಾಳಗದ ಕಾರಣವೇ? ಇವರ ಮನೋಭಾವಕ್ಕೆ ಬ್ಯಾಂಕ್ ಮೇನೇಜ್‌ಮೆಂಟ್ ಕಾರಣವೇ? ಆದರೆ ಯಾವುದೇ ಕಾರಣವಾದರೂ, ಇವರಿಗೆ ದುಡಿಯುವ ಸ್ವಾಭಿಮಾನ ಕಡಿಮೆಯಾಗಿ, ಒಡಿದಾಡುವ ದುರಭಿಮಾನ ಹೆಚ್ಚುವುದಕ್ಕೆ, ಕಾರಣವೇನು? ಬ್ಯಾಂಕ್ ಮೇನೇಜ್‌ಮೆಂಟ್, ಸಿಕ್ಕಸಿಕ್ಕಿದವರ ಮೇಲೆ ತಪ್ಪಿನ ಹೊರೆ ಹೊರಿಸಿ, ಚಾರ್ಜ್‌ಶೀಟ್ ಎಂಬ ಬೆಂಕಿ ಒರಗೆ ಹಚ್ಚಿ, ಹೊತ್ತಿ ಉರಿಯುತ್ತಿರುವ ಬೆಂಕಿಯನ್ನು ಆರಿಸಲು ಅಗ್ನಿಶಾಮಕನೆಂದು ನನ್ನನ್ನು ಕರೆದು, ಹರಿಸಿ ಆರಿಸಿ ಬಾ ಎಂದು ಕಳುಹಿಸಿದ ಈ ಬ್ಯಾಂಕ್ ಮೇನೇಜ್‌ಮೆಂಟ್ ತುಂಬಾ ಶಾಣ್ಯೆ! ಅಗ್ನಿಶಾಮಕ ವಾಹನದಲ್ಲಿ ನೀರೇ ಇಲ್ಲವಲ್ಲ ಬೆಂಕಿ ಆರಿಸುವುದಕ್ಕೆ ಅಂದರೆ ಜಮುನಾ ನದಿಯ ತುಂಬಾ ಹರಿಯುತ್ತಿದ್ದ ಕೊಚ್ಚೆ ನೀರು ಸಾಲದೆ ನಿನಗೆ ಎನ್ನುವ ಈ ಮೂರ್ಖರನ್ನು ಒಡಿದು ಚಚ್ಚಿ ಹಾಕುವ ರೋಷ ಉಂಟಾಯಿತು ನನಗೆ!

"ತೆಗೆದುಕೊಂಡು, ಸಹಿ ಹಾಕಿ ಒಂದು ಕಾಪಿ ನಮಗೆ ಕೊಡಿ!"

ಪಂಜಾಬೀ ನೇತಾ ನನ್ನ ಮುಂದೆ ನಿಂತು ಮನವಿ ಪತ್ರವನ್ನು ಬಿಡಿಸಿ ಹಿಡಿದ.

ನನ್ನ ಕುರ್ಚಿಯಲ್ಲಿ ಕುಳಿತುಕೊಳ್ಳುವುದೇ ತಡ, ಧರಣಿ ಹೂಡಿದ್ದ ನೌಕರರು ನಮ್ಮ ಕೂಗುವಿಕೆ, ಗದರುವಿಕೆ, ಬೆದರುವಿಕೆಗಳನ್ನು ಬಂದ್ ಮಾಡಿ, ನನ್ನ ಮುಂದೆ ನಿಂತಿದ್ದರು, ಅವರಲ್ಲಿ ಸಾಗೂ ಇದ್ದಾನೆಯೇ ಎಂದು ನನ್ನ ಕಣ್ಣುಗಳು ಹುಡುಕಿದವು. ಅವ ಕಾಣಲಿಲ್ಲ.

ಮನವಿ ಪತ್ರಕ್ಕೆ ಸಹಿ ಹಾಕಿ ಅವರಿಗೆ ಒಂದು ಕಾಪಿ ನೀಡಿದೆ. ಎಲ್ಲರೂ ಮಾತ ನಾಡದೆ ತಮ್ಮ ತಮ್ಮ ಸ್ಥಳಗಳಿಗೆ ಹೋಗಿ ಕೂತು ಕೆಲಸ ಮಾಡತೊಡಗಿದರು. ಅವರ ಮುಖಗಳಲ್ಲಿ ನಿರಾಶೆಯ ಛಾಯೆ ಸುಳಿದಿತ್ತು. ನಾನು ಸಹಿ ಮಾಡದೆ ತಕರಾರು ಮಾಡಬಹುದು, ಅಥವಾ ಉಪದೇಶದ ರಾಗ ಹಾಡಬಹುದು, ಅಥವಾ ವಾಕ್‌ಬಾಣ ಅವರ ಮೇಲೆ ಬಿಡಬಹುದು, ಅಥವಾ ಅವರ ಮುಖಂಡರನ್ನು ಕೂರಿಸಿ, ಚಾ ತರಿಸಿ, ಕುಡಿಸಿ, ಮನವಿ ಹಿಂತೆಗೆದುಕೊಳ್ಳುವಂತೆ ಅವರ ಮನ ಒಲಿಸುವಂತೆ ಬೆಣ್ಣೆಯಂತೆ ಮಾತನಾಡಬಹುದು, ಅಥವಾ ಮನವಿ ಪತ್ರದ ಬಗ್ಗೆ ಒಂದು ಚರ್ಚಾಕೂಟವನ್ನು ಕರೆದು, ಭಾಷಣ ಸಾಮರ್ಥ್ಯದ ಪ್ರದರ್ಶನಕ್ಕೆ ಅನುಕೂಲಮಾಡಿಕೊಡಬಹುದು, ಅಥವಾ ಮನವಿ ಪತ್ರ ಓದಿ, ಸೂರು ಹಾರುಹೋಗುವ ಹಾಗೆ ಕಿರುಚಾಡಿ, ಅವರಿಗೆಲ್ಲಾ ವಾಚಾಮಗೋಚರವಾಗಿ ಬೈದುದರ ಪರಿಣಾಮ, ಮತ್ತೊಂದು ಮನವಿ ಪತ್ರ ನೀಡುವ ಆಸ್ಪದ ದೊರಕಬಹುದೆಂದು ಎಣಿಸಿದ್ದರೇನೋ! ಆದರೆ, ನಾನು ಸಾವಧಾನದಿಂದ ಮನವಿ ಪತ್ರ ತೆಗೆದುಕೊಂಡು, ಅದನ್ನು ಓದ ತೊಡಗಿದ್ದು, ಅವರಿಗೆ ನಿರಾಶೆಯ ಜೊತೆಗೆ ಬೇಸರವೂ ಆಯಿತೆಂದು ತೋರಿತು. ಆದರೆ ಸದ್ದಿಲ್ಲದೆ ಕೆಲಸ ಮಾಡುತ್ತಿದ್ದ ಅವರ ಕಣ್ಣುಗಳು ನನ್ನ ಮೇಲೆ ಆಗಾಗ ಮಿಂಚಿನಂತೆ ಹಾಯಿಸಿ, ನನ್ನ ಪ್ರತಿಕ್ರಿಯೆಗಾಗಿ ಕಾಯುತ್ತಿದ್ದವು.

ನಾನು ಓದತೊಡಗಿದೆ. ನನ್ನ ಮೇಲೆ ಹಲವಾರು ಸಾಮಾನ್ಯ ರೀತಿಯ ಅಪವಾದ ಗಳನ್ನು ಹೊರಿಸಿದ್ದರು. ಬಹಳ ಶಿಸ್ತಿನ ವರ್ತನೆಯಿಂದ, ಶಾಖೆಯ ವಾತಾವರಣ ಕಲುಶಿತವಾಗಿರುವಿಕೆ; ಶಾಖೆಯ ನೌಕರರಿಗೆ ಜಬರ್ದಸ್ತಾಗಿ ಮಾತಾಡುವಿಕೆ;ನೌಕರರ ಸೌಕರ್ಯದ ಬಗ್ಗೆ ಗಮನಹರಿಸದೇ ಇರುವುದು; ಕುಡಿಯಲಿಕ್ಕೆ ನೀರು, ತಿನ್ನಲಿಕ್ಕೆ ಸರಿಯಾದ ಸ್ಥಳ ಮುಂತಾದ ಸೌಕರ್ಯಗಳ ಅಭಾವ; ಸ್ತ್ರೀ ಕಾರಕೂನರ ಜೊತೆ ಅಚಾತುರ್ಯ ನಡವಳಿಕೆ!

ಕೊನೆಯ ಅಪವಾದ ಓದಿ ನನ್ನ ಮುಖ ಕೆಂಪಾಯಿತು! ಮೈ ಉರಿದು ಬೆಂಕಿ ಆಯಿತು! ಸುಳ್ಳು ಅಪವಾದ ಹೊರಿಸಿ, ನನ್ನ ಮರ್ಯಾದೆಯ ಕೊಲೆ ಮಾಡಲು ಯತ್ನಿಸುತ್ತಿರುವ ನೌಕರರ ಮೇಲೆ ಅಸಾಧ್ಯ ಕೋಪ ಉಂಟಾಯಿತು. ಆದರೆ, ಈಗ ಕೋಪ ಪ್ರದರ್ಶಿಸಿದರೆ, ನೌಕರರ ಉದ್ದೇಶ ಸಫಲ ಆಗುತ್ತದೆ ಎಂಬ ವಿಷಯ ಮನವರಿಕೆ ಆಗಿ, ಮನವಿ ಪತ್ರವನ್ನು ತೆಗೆದು ಬದಿಗಿರಿಸಿ, ಮೇಜಿನ ಮೇಲಿಟ್ಟೆ, ಯಾವುದೋ ಫೈಲ್ ತೆಗೆದು ಅದರಲ್ಲಿದ್ದ ಪೇಪರ್‌ನ್ನು ಓದುವವನಂತೆ ನಟಿಸ ತೊಡಗಿದೆ. ನಟನೆ ಶುರುವಾಗಿ ನನ್ನ ಮನಸ್ಸು ಅಂದಿನ ಘಟನೆ ಬಗ್ಗೆ ಯೋಚಿಸ ತೊಡಗಿದೆ.

ನಾನು ನೆನೆಸಿದ ಹಾಗೆ ಆಯಿತು. ನನ್ನ ಮೇಲೆ ಈ ಬಾರಿ ಬಲವಾದ ಬಾಂಬ್ ಸಿಡಿಸಿದ್ದರು. ಈ ಹಿಂಸಾಚಾರದಿಂದ ಯಾರು ಯಾರಿಗೆ ಲಾಭವೋ, ನಷ್ಟವೋ ಕಾಲವೇ ಹೇಳಬೇಕು. ಈ ಬಾಂಬ್‌ನಿಂದ ನಿನಗೆ ಫಾಸಿಯಾಗುವುದು ಖಂಡಿತವೆಂದು ಮನ ಹೇಳತೊಡಗಿತು. ಹೆಂಗಸಿನ ಜೊತೆ ಅಚಾತುರ್ಯ ನಡೆತೆಯೆಂದರೆ, ಬಹಳ ಗಂಭೀರವಾದ ಅಪವಾದವೆಂದು ನಮ್ಮ ಮೇನೇಜ್‌ಮೆಂಟ್ ತೀರ್ಮಾನಿಸಿ ನನಗೆ ಕಠಿನೀರಿನ ಶಿಕ್ಷೆ ನೀಡೇ ನೀಡುತ್ತಾರೆಂಬ ಭಯ ಉಂಟಾಯಿತು. 'ಎದುರು ಚಂದ ಮಾತನಾಡಿ, ಹಿಂದೆ ಬಾಕು ಹಾಕಬೇಕ್ರೀ' ಎಂದು ಉಪದೇಶಿಸಿದ ಡೀ.ಎಮ್. ರಾಜಕುಮಾರ ನನ್ನ ಮೇಲೆ ಸಿಟ್ಟಾಗಿ, ಕಠಿಣ ಸಜೆ ವಿಧಿಸುವುದು ಖಂಡಿತ!

"ಈ ಶಾಖೆ ಶುರುವಾದ ನಂತರ ಪ್ರತೀ ಮೇನೇಜರ್‌ಗೆ ತೊಂದರೆ ಉಂಟಾಗಿದೆ. ಒಬ್ಬನಿಗೆ ಡಿಸ್‌ಮಿಸ್ ಆದರೆ, ಮತ್ತೊಬ್ಬ ಸತ್ತೇ ಹೋದ. ಇನ್ನೊಬ್ಬನಿಗೆ ಸಸ್ಪೆಂಡ್ ಆಗಿ, ಡಿಮೋಶನ್ ಆಯಿತು. ಈಗ ನಿಮ್ಮ ಬಾರಿ! ಏನಾಗುವುದೋ ನೋಡಬೇಕು!"

ಸಾಗೂ ನನ್ನ ಮುಂದೆ ನಿಂತು ಶಕುನ ನುಡಿಯುತ್ತಿದ್ದ.

"ಲೇಟಾಗಿ ಬಂದೆಯಾ?"

ಕೋಪ ಅದುಮಿಟ್ಟು ಕೇಳಿದೆ.

"ಲೇಟಾಗಿಲ್ಲ ಸಾಬ್! ಆಗಲೇ ಬಂದೆ. ಗಲಾಟೆ ನೋಡಿದೆ. ಬಜಾರ್ ಕಡೆ ಹೋಗಿ ತಿರುಗಾಡಿ ಬಂದೆ. ರಜ ಹಾಕಿದ್ದೇನೆ!" ಎಂದ ನಗುತ್ತಾ.

ಅವನು ನವಿರಾಗಿ ಉಪಾಯವಾಗಿ ಗಲಾಟೆಯಿಂದ ತಪ್ಪಿಸಿಕೊಂಡಿದ್ದ. ಧರಣಿ ಹೊಡದೇ ಈಗ ನನ್ನ ಮುಂದೆ ಒಂಟಿ ಧರಣಿ ಮಾಡಿ, ಕಾಸು ಹೊಡೆದುಕೊಂಡು ಹೋಗುವ ನೆಪದಲ್ಲಿದ್ದಾನೆ ಎಂದು ನಾನು ಎಚ್ಚರವಹಿಸಿದೆ.

"ಏನು ಬೇಕು ನಿನಗೆ? ರಜ ಅಂದಮೇಲೆ ಯಾಕೆ ಬಂದೆ. ಮನೆಗೆ ಹೋಗ ಬಹುದಲ್ಲ!" ಕಾರವಾಗಿ ಹೇಳಿದೆ.

"ಸೋನೇಪತ್‌ಗೆ ಸಾಯಂಕಾಲವೇ ರೈಲು. ಅಲ್ಲಿಯವರೆಗೆ ಕಾಯಬೇಕು."

"ರೈಲ್ವೇ ಸ್ಟೇಷನ್‌ನಲ್ಲಿ ಕಾಯಿ! ಇಲ್ಲಿ ಯಾಕೆ ಕಾಯುತ್ತಾ ಇದ್ದೀಯಾ?"

"ಈ ಬಜಾರ್ ಶಾಖೆ ಹುಟ್ಟಿದಾಗಿನಿಂದ ಏನಾದರೊಂದು ಅನಾಹುತ ಜರುಗುತ್ತಲೇ ಇರುತ್ತದೆ ಸಾಬ್! ಮೇನೇಜರ್‌ಗಳಿಗಂತೂ ಕೇಡು ತಪ್ಪಿದ್ದಲ್ಲ!"

ನನ್ನ ಮೇಲೆ ಸೇಡು ತೀರಿಸಿಕೊಳ್ಳುವುದಕ್ಕೆ ಈ ಕೇಡಿನ ಬಲೆ ಬೀಸುತ್ತಿದ್ದಾನಲ್ಲಾ ಈ ಸಾಗೂ!

"ಒಂದು ಪೂಜೆ ಮಾಡಿಸಿಬಿಡಿ ಸಾಬ್!"

"ಪೂಜೆ! ಯಾರಿಗೆ?"

"ಶಾಖೆಗೆ! ಗಣಪತಿ ಹೋಮ-ಪೂಜೆ ಮಾಡಿಸಿದರೆ, ಈ ಶಾಖೆಗೆ, ಇಲ್ಲಿ ಕೆಲಸ ಮಾಡುವವರಿಗೆ ಕೇಡಾಗುವುದಿಲ್ಲ!"

ಹೌದು! ಯಾಕೆ ಮಾಡಿಸಬಾರದು? ನನ್ನ ಮೇಲೆ ಹದ್ದಿನಂತೆ ಎರಗಿ ಬಂದ ಈ ಕೇಡನ್ನು ಗಣಹೋಮದಿಂದ ಓಡಿಸಬಾರದೇಕೆ? ಅದಕ್ಕೆ ಮೊದಲು ಈ ಸಾಗೊ ಎಂಬ ಪೀಡೆಯನ್ನು ಓಡಿಸಬೇಕೆಂದು ಬಗೆದು ಹೇಳಿದೆ:

"ಗಣ ಹೋಮ ಮಾಡಿಸೋಣವಂತೆ! ಈಗ ನನಗೆ ಕೆಲಸವೆಂಬ ಹೋಮ ನಡೆಸಲಿಕ್ಕೆ ನೀನು ಅಡ್ಡಿ ಮಾಡದೆ, ಹೋಗಿ ರೈಲ್ವೇ ಸ್ಟೇಷನ್‌ನಲ್ಲಿ ಮಲಗಿಕೋ!"

"ಸಾಬ್! ಗಣಪತಿ ಹೋಮಕ್ಕೆ ಪೂಜಾರಿಯನ್ನು ಗೊತ್ತುಮಾಡಬೇಕು. ನನಗೆ ಒಂದು ನೂರು ರೂಪಾಯಿ ಕೊಟ್ಟರೆ, ಸೋನೇಪತ್‌ನಿಂದ ಒಬ್ಬ ಒಳ್ಳೆಯ ಪೂಜಾರಿಯನ್ನು ಕರೆದುಕೊಂಡು ಬರುತ್ತೇನೆ."

"ಈಗ ನಾನೇ ನಿನ್ನ ಪೂಜಾರಿ! ನಿನಗೆ ಪೂಜೆ ಮಾಡಿ, ಮಂಗಳಾರತಿ ಎತ್ತಿ, ಗಂಗಾನದಿಯಲ್ಲಿ ಮುಳುಗಿಸಿಬಿಡುತ್ತೇನೆ!"

ಕಣ್ಣು ಬಟ್ಟಲು ಮಾಡಿದ ಸಾಗೂ!

"ನಿಮಗೆ ಕೋಪ ಬಂದೆದೆಯಾ? ಹಣ ಕೇಳಿದರೆ ಯಾಕೆ ಅಷ್ಟು ಕೋಪ? ಹಣ ಕೊಡದಿದ್ದರೆ ಬೇಡ! ಹೋಗಲಿ ಬಿಡಿ! ಒಂದು ಚೆಕ್ ಕೊಟ್ಟಿಡಿ!"

ಕೋಪ ಮಾಡಿ ಬೈದು ಹೊರಗೆ ಅಟ್ಟಿದರೆ, ಇದೇ ಅವಕಾಶಕ್ಕೆ ಕಾಯುತ್ತಾ ಕುಳಿತಿರುವ ಅವನ ಸ್ನೇಹಿತರು ಇನ್ನೊಂದು ಮನವಿ ಪತ್ರ ಅರ್ಪಿಸುತ್ತಾರೆ ನನಗೆ!

"ನಮ್ಮ ಊರಿನವನೇ ಆದ ನನ್ನ ಸ್ನೇಹಿತ, ದಿಲ್ಲೀಯ ಒಂದು ಶಾಖೆಯಲ್ಲಿ ಕೆಲಸ ಮಾಡುತ್ತಾ ಇದ್ದಾನೆ. ಅವನು ಪಾರ್ಟ್‌ಟಾಯಿಮ್ ಪೂಜಾರಿ ಕೆಲಸ ಮಾಡಿಸುತ್ತಾನೆ. ನನಗೆ. ಅಂದರೆ, ಪುಕ್ಕಟೆ ಕೆಲಸ ಮಾಡುತ್ತಾನೆ. ನಿನ್ನ ಸಹಾಯ ಸದ್ಯಕ್ಕೆ ಬೇಡ. ದಯಮಾಡಿ ಹೊರಡು!"

ಕುಗ್ಗಿದ ಮನಸ್ಸಾದರೂ, ಆದಷ್ಟು ತಗ್ಗಿದ ಧ್ವನಿಯಲ್ಲಿ, ಮುಖದಲ್ಲಿ ಬಲವಂತದ ನಗೆಯನ್ನು ತಂದುಕೊಂಡು, ಅವನಿಗೆ ಅನುರೋಧಿಸಿದೆ.

ಸಾಗೂ ಹತಾಶನಾಗುವ ಪ್ರಾಣಿಯಲ್ಲವೆಂದು ನನಗೆ ಅರಿವಾಗತೊಡಗಿತು.

"ದಕ್ಷಿಣೆ ನೀಡದೆ, ಪೂಜೆ ಮಾಡಿಸಿಕೊಂಡರೆ, ದೇವರು ಒಲಿಯುವುದಿಲ್ಲ ಸಾಬ್! ನಿಮ್ಮ ಸ್ನೇಹಿತ ಒಳ್ಳೇ ಪೂಜಾರಿ ಇರಬಹುದು. ಆದರೆ ಒಳ್ಳೇ ಸ್ನೇಹಿತ ಎಂದೂ ಒಳ್ಳೇ ಪೂಜಾರಿಯಾಗಲಾರ. ಒಳ್ಳೇ ಪೂಜಾರಿ ಎಂದೂ ಒಳ್ಳೇ ಸ್ನೇಹಿತನಾಗುತ್ತಾನೆ!"

ಇವನು ದಕ್ಷಿಣೆಯಿಲ್ಲದೆ ಜಾಗ ಕದಲಿಸದ ಹಾಗೆ ಕಂಡುಬರಲಿಲ್ಲ. ಒಳ್ಳೇ ಪಿಡುಗಾಯಿತಲ್ಲ! ಇದಕ್ಕೆ ಏನು ಉಪಾಯ ಮಾಡುವುದು? ಪಲಾಯನ ಸೂತ್ರ! ಇದೇ ಒಳ್ಳೇ ಉಪಾಯ!

ಟೆಲಿಫೋನ್ ಕೈಗೆ ತೆಗೆದುಕೊಂಡು, ಶಾಖೆಯ ಪ್ರಮುಖ ಗ್ರಾಹಕನಾದ ಗುಪ್ತಾಜೀಗೆ ಫೋನ್ ಮಾಡಿದೆ. ಅವನಿಗೆ, ಗೋಡೌನ್ ಇನ್ಸ್‌ಪೆಕ್ಷನ್ ಮಾಡಲಿಕ್ಕೆ ಬರುತ್ತಿದ್ದಾನೆ ಎಂದು ಹೇಳಿ ಫೋನ್ ಕೆಳಗೆ ಇಟ್ಟು, ಹೊರ ನಡೆದೆ. ಮಾತಿಲ್ಲದೆ ಹೊರನಡೆದ ನನ್ನನ್ನು ನೋಡಿ ಸಾಗು ಕೇಳಿಸದೆಯೂ ಕೇಳಿಸದಂತೆ ನುಡಿದ: 'ಈ ಶಾಖೆಯ ಮೇನೇಜರ್‌ಗಳಿಗೆಲ್ಲಾ ಕೇಡಾಗಿದೆ. ನಿಮ್ಮ ಸರತಿ ಈಗ ಬಂದಿದೆ. ಅನುಭವಿಸಿ!"

ಗುಪ್ತಾಜೀ ನನ್ನನ್ನು ನೋಡಿದೊಡನೆ ಗಾಬರಿಯಾದ.

"ತಾವು ಆರೋಗ್ಯದಿಂದಿದ್ದೀರಾ?" ನನ್ನ ಕಳೆಗುಂದಿದ ಮುಖ ನೋಡಿ ಅವನಿಗೆ ಅನುಮಾನವಾಗಿದ್ದರಲ್ಲಿ ಸಂಶಯವಿರಲಿಲ್ಲ. ನನ್ನ ಮನಸ್ಸಿನಲ್ಲಿ ಜರು ಗುತ್ತಿದ್ದ ಆಂತಕದಾಟ ಅವನಿಗೆ ಹೇಗೆ ಹೇಳುವುದು? ಪ್ರಪಂಚದ ಶೇಕಡ ಮೂವತ್ತ ರಷ್ಟು ಜನರು ಈ ಕಾಯಿಲೆಯಿಂದ ನರಳುತ್ತಿದ್ದಾರೆಂದ ಮೇಲೆ ನನ್ನದೇನು ದೊಡ್ಡ ವಿಷಯ?

"ಬಸ್ ಬಾಂಬ್ ಅಪಘಾತದಿಂದ ನೀವು ಪಾರಾಗಿದ್ದು ದೈವ ಕೃಪೆ! ಏನಂತೀರಾ?"

ಗುಪ್ತಾಜೀ, ಆಗರ್ಭ ಶ್ರೀಮಂತ. ತಾಮ್ರ, ಹಿತ್ತಾಳೆ ಮುಂತಾದ ಖನಿಜಗಳ ವ್ಯಾಪಾರದಿಂದ ಸಂಪತ್ತಿನ ಅಂತಸ್ತು ಏರಿ, ಬಜಾರಿನಲ್ಲೇ ಒಬ್ಬ ಗಣ್ಯ ವ್ಯಕ್ತಿ ಎನಿಸಿದ್ದ. ಈತ, ಬಹಳ ಸಂಭಾವಿತ, ವಿನಯಶೀಲ, ನಿಗರ್ವಿ, ಸ್ನೇಹಜೀವಿ ವ್ಯಾಪಾರಿ ಯಾಗಿದ್ದನೆಂದರೆ, ನನಗೆ ಆಶ್ಚರ್ಯ ಉಂಟಾಗಿತ್ತು. ಹಣ ಮತ್ತು ನಿಗರ್ವಿತನ ಒಟ್ಟಿಗೆ ಕಂಡುಬರುವುದು ವಿರಳ! ಪ್ರಾಯಶಃ ಗುಪ್ತಾಜೀಯ ದೈವಭಕ್ತಿ ಇದಕ್ಕೆ ಕಾರಣವಾಗಿರಬಹುದೇ? ಒಳ್ಳೆಯದಾಗಲಿ, ಕೆಡಕಾಗಲೀ, ದೈವವೇ ಕಾರಣವೆಂಬ ನಂಬಿಕೆಯನ್ನು ತನ್ನ ಎಲ್ಲಾ ಸ್ನೇಹಿತರ ಮೇಲೆ ಸಿದ್ಧಾಂತದ ರೂಪವಾಗಿ ಹೇರಲು ಹಿಂದೆ ಮುಂದೆ ನೋಡುತ್ತಿರಲಿಲ್ಲ.

"ನಿಮ್ಮ ಗೋಡೌನ್ ಪರೀಕ್ಷೆ ಮಾಡೋಣವೇ?"

'ಬನ್ನಿ' ಎಂದು ಒಳಗೆ ಕರೆದೊಯ್ದ. ಗೋಡೌನ್ ಸಾಮಾನುಗಳಿಂದ ಭರ್ತಿ ಯಾಗಿತ್ತು. ಎಲ್ಲಾ ಸರಿಯಾಗಿದೆ ಎಂದು ಖಾತ್ರಿಯದೊಡನೆ ಹೊರಗೆ ಬಂದು ಕುಳಿತೆ. ಅವನು ತರಿಸಿದ ಚಾ ಕುಡಿಯುತ್ತಾ, ನಿಧಾನವಾಗಿ ಕೇಳಿದೆ ಅವನನ್ನು,

"ನಮ್ಮ ಶಾಖೆಯ ಹಿಂದಿನ ಮೇನೇಜರ್‌ಗಳೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಹಿಂಸೆ ಅನುಭವಿಸಿದ್ದಾರಂತೆ. ನಿಜವೇ?"

ಗುಪ್ತಾಜೀ ನಮ್ಮ ಶಾಖೆಯ ಹಳೇ ಗ್ರಾಹಕ, ಮತ್ತು ಗಣ್ಯ ಗ್ರಾಹಕ, ಅಂದ ಮೇಲೆ ಅವನ ಮಾತುಗಳನ್ನು ನಂಬಬಹುದಷ್ಟೆ!

"ಯಾಕೆ? ನಿಮಗೆ ತಿಳಿದಿರಲಿಲ್ಲವೇ? ಬೇನಸೀಬ್ ಶಾಖೆ, ಇದು. ಇಲ್ಲಿಗೆ ಮೇನೇಜರ್ ಆಗಿ ಬಂದವರೆಲ್ಲಾ ಕೇಡು ಅನುಭವಿಸಿದ್ದಾರೆ! ಆದರೆ, ನೀವು ಹೆದರ ಬೇಡಿ. ದೇವರಲ್ಲಿ ನಂಬಿಕೆ ಇಟ್ಟು ಕೆಲಸ ಮಾಡಿ. ಎಲ್ಲವೂ ಸರಿಹೋಗುತ್ತದೆ."

ನನಗೆ ಸಮಾಧಾನ ಮಾಡಲೆತ್ನಿಸಿದ. ಆದರೂ ಅವನ ಹೇಳಿಕೆಯಿಂದ ನನ್ನ ಮನಸ್ಸು ಹೋಯ್ದಾಡತೊಡಗಿತು. ನನ್ನ ಗತಿ ಏನು? ಶಾಖೆಯಲ್ಲಿ ನನ್ನ ವಿರುದ್ಧ ನಡೆಯುತ್ತಿರುವ ಸಮರ ನಿರ್ಣಾಯಕ ಯುದ್ಧವಾಗಿ ನನ್ನ ತೇಜೋವಧೆಯಾಗಿ ಪರಿಣಮಿಸುತ್ತದೆಯೇ? ಈ ಮೊದಲು ಬಸ್‌ನಲ್ಲಿ ಬಾಂಬ್ ದಾಳಿಗೆ ತುತ್ತಾಗಿ ಬದುಕಿ ಉಳಿದು ಬಂದದ್ದು ನನ್ನ ಪತ್ನಿಯ ಪೂಜಾಫಲವೇ? ಇದಕ್ಕೂ ಮೊದಲು, ಪೂರ್ವ ಚಿಹ್ನೆಯಂತೆ, ಚಾಂದನೀ ಚೌಕ್‌ನಲ್ಲಿ ಸೈಕಲ್ ರಿಕ್ಷಾದವನು ನನ್ನ ಕೈಬೆರಳಿಗೆ ಡಿಕ್ಕಿ ಹೊಡೆದು, ದಿಲ್ಲೀ ರಸ್ತೆಯಲ್ಲಿ ನನ್ನ ರಕ್ತದ ಕಣ ಬೀಳುವಂತೆ ಮಾಡಿ, ನನ್ನ ಹೆಸರನ್ನು ಚರಿತ್ರೆಯಲ್ಲಿ ಬರೆಯುವಂತೆ ಮಾಡಿದ್ದನಲ್ಲೀವೇ ?

ಶಾಖೆಗೆ ವಾಪಸ್ಸು ಬಂದೆ. ದಾರಿಯಲ್ಲಿ ಶ್ಯಾಮಲಾಲ್‌ನ ಪ್ರಪೋಸಲ್‌ದೇ ಚಿಂತೆ ತಲೆ ತುಂಬಾ ಆವರಿಸಿಕೊಂಡಿತ್ತು. ಶಿಫಾರಸ್ಸು ಮಾಡದಿದ್ದರೆ, ರಾಜಕುಮಾರನ ಸಿಟ್ಟು ಎದುರಿಸಬೇಕು; ಶಿಫಾರಸ್ಸು ಮಾಡಿದರೆ, ಡಿಜೀಎಮ್ ನನ್ನ ತಲೆ ತೆಗೀತಾನೆ! ಡಿಜೀಎಮ್‌ಗೆ ಹೆದರದೆ ಶಿಫಾರಸ್ಸು ಮಾಡಿದರೆ, ಶಾಖೆಯ ನೌಕರರ ಆಕ್ರೋಶ ಎದುರಿಸಬೇಕಾಗುವುದು ಖಂಡಿತ! ಗುಂಡಿನೇಟಿನಿಂದ ಗಾಯಗೊಂಡ ಹುಲಿ, ರೊಚ್ಚಿ ಗೆದ್ದು ಸಿಕ್ಕಿಸಿಕ್ಕಿದವರ ಮೇಲೆ ಹಾರುವಂತೆ, ನೌಕರರು ಈ ಅವಕಾಶವನ್ನು ಉಪಯೋ ಗಿಸಿಕೊಂಡು ನನ್ನ ಮೇಲೆ ಹಾರಿ ಕೊಂದೇ ಬಿಡುವರು!

ಇಷ್ಟೊಂದು ಆತಂಕ, ಆಸೆ, ಆಕಾಂಕ್ಷೆಗಳನ್ನು ನನ್ನ ಎದೆಯಲ್ಲಿ ಇರಿಸಿಕೊಂಡರೆ, ಅವು ನನ್ನನ್ನು ಜಗ್ಗಿಸಿ, ಬಗ್ಗಿಸಿ, ನೆಲಕಚ್ಚುವಂತೆ ಮಾಡದೇ ಇರುತ್ತವೆಯೊ? ಬಿಸಿಲ ಝಳದಿಂದ, ಮೈಯಿಂದ ಹರಿಯುತ್ತಿದ್ದ ಬೆವರನ್ನು ಒರೆಸಿಕೊಂಡು, ಕುರ್ಚಿ ಯಲ್ಲಿ ಕುಳಿತೊಡನೆ ಕುಡಿಯಲು ನೀರಿನ ಅವಶ್ಯಕತೆ ಅರಿವಾಯಿತು. ಈ ಸುಡು ಬಿಸಿಲಿನ ಉರಿಗೆ ಆಗುವ ಬಾಯಾರಿಕೆ ಅನುಭವಿಸುವವರಿಗೇ ಗೊತ್ತು ಅದರ ತೀವ್ರತೆ. ಮರಳುಗಾಡಿಗೆ ಹೋಗಬೇಕಾಗಿಲ್ಲ ಅದರ ತೀವ್ರತೆಯನ್ನು ಅನುಭವಿಸುವುದಕ್ಕೆ, ಹತ್ತಿರದ ದಿಲ್ಲೀಯೇ ಸಾಕು! ಈ ದಿಲ್ಲೀಯನ್ನು ರಾಜಧಾನಿಯನ್ನಾಗಿ ಏಕೆ

ಆರಿಸಿದರು? ವರ್ಷದಲ್ಲಿ ಎರಡೇ ಋತುಗಳನ್ನು ಕಾಣುವ ದಿಲ್ಲಿ ದೇಶದ ರಾಜಧಾನಿಯಾಗಲಿಕ್ಕೆ ಯೋಗ್ಯವೇ? ವರ್ಷದ ಆರು ತಿಂಗಳು ಸುಡುಬಿಸಿಲಿನಲ್ಲಿ ಬೆಂದು ಬೆಂಡಾಗುವ ಜನ, ತಾಪ ತಾಳಲಾರದೇ ತಲೆ ಕೆಟ್ಟು, ಒಬ್ಬರಿಗೊಬ್ಬರು ಹೊಡೆದಾಡಿ, ಬಿಸಿರಕ್ತದ ಹೊಳೆ ಹರಿಸಿ, ಅದರಲ್ಲಿ ಮಿಂದು, ಇನ್ನಷ್ಟು ಬೆಂದು, ಮತ್ತಷ್ಟು ಬಿಸಿರಕ್ತ ಹರಿಸಿ ಸಾಯುವ ದಿಲ್ಲೀವಾಲರ ಚರಿತ್ರೆ ಎಷ್ಟು ಕೊಂಡಾಡಿದರೂ ಸಾಲದು! ಆರು ತಿಂಗಳು ಮೈ ಕೊರೆಯುವ ಚಳಿಗೆ ಹೆದರಿ, ಹಾಸಿಗೆಯನ್ನೇ ಹೊದ್ದಿಕೆಯಾಗಿ ಹೊದ್ದು ಕೊಂಡು, ಹಿಮದ ಕರಡಿಗಳ ಹಾಗೆ, ನಿಸ್ತೇಜವಾಗಿ ಬಿದ್ದುಕೊಂಡು, ಕಾಲ ಕಳೆಯುವ ದಿಲ್ಲೀವಾಲರ ಜೀವನದ ಸೊಗಸು ನೋಡೇ ಅನುಭವಿಸಬೇಕು. ಪ್ರಾಯಶಃ ಈ ಸುಖ ಸಂಪತ್ತನ್ನು ಅನುಭವಿಸಿಯೇ, ತೊಘಲಕ್ ಸುಲ್ತಾನ್ ತನ್ನ ರಾಜಧಾನಿಯನ್ನು ದಿಲ್ಲೀಯಿಂದ ದೇವಗಿರಿಗೆ ಸ್ಥಳಾಂತರಿಸಿದ್ದು! ದಿಲ್ಲೀವಾಲರಿಗೆ ಬರಿದೇ ಎರಡು ಋತುಗಳ ಪರಿಚಯದ ಜೊತೆಗೆ ಬಿರುಗಾಳಿ-ಮಳೆಗಾಲದ ಪರಿಚಯ ಮಾಡುವ ಪ್ರಯತ್ನ ವಿಫಲಗೊಂಡಿದ್ದು, ದೇಶದ ಗಡಿಯಾಚೆಯಿಂದ ಬೀಸಿದ ಆಕ್ರಮಣಕಾರರ ಚಂಡಮಾರುತದಿಂದ! ನದಿ ನೀರಿನಿಂದ ತುಂಬಿ ಹರಿಯುತ್ತಿದ್ದರೂ, ದಂಗೆ, ಹಿಂಸೆ, ಯುದ್ಧಗಳಿಂದ ಉಂಟಾದ ರಕ್ತಧಾರೆ ಯಮುನಾ ನದೀ ಸೇರಿ ನೀರು ಕೆಂಪಾಗಿ, ಕಲುಷಿತವಾಗಿ, ರಾಡಿಯಾಗಿ, ಅಪವಿತ್ರವಾಗಿ ಇಂದಿಗೂ ಹರಿಯುತ್ತಿದೆ. ಈ ನೀರು ಕುಡಿದು ಜನರು ಮತ್ತಷ್ಟು ಮತ್ತೇರಿ ಮೈ-ಮನಸ್ಸಿನೊಳಗೆ ಹುದುಗಿದ್ದ ಕ್ರೂರಾಣು ಗಳನ್ನೂ ನೂರ್ಮಡಿಸಿ, ರಕ್ತದ ಓಕಳಿಯಾಟ, ಬಹಳ ಹುಮ್ಮಸ್ಸಿನಿಂದ ನಡೆಸು ತ್ತಿದ್ದಾರಲ್ಲವೆ? ಈ ರಕ್ತ ಕಣ್ಣೀರನ್ನು ನಾನು ಕುಡಿಯಬೇಕೆ? ದಿಲ್ಲೀಯಲ್ಲಿದ್ದ ಮೇಲೆ ದಿಲ್ಲೀವಾಲಾನಾಗುವುದೇ ಕ್ಷೇಮ!

ಬೆಲ್ ಹೊಡೆದು ಜವಾನನನ್ನು ಕರೆದೆ. ಒಳಗೆ ಬಂದ ಒಬ್ಬ. ಅವನು ಆಗಂತುಕನಾಗಿದ್ದ. ನೋಡಲಿಕ್ಕೆ ಸುಂದರನಾಗಿದ್ದ. ತೆಳ್ಳಗಿದ್ದರೂ, ಆರು ಅಡಿ ಎತ್ತರದ ಆಜಾನುಬಾಹು! ಯಾರೀತ?

"ನಾನು ಹೊಸ ಜವಾನ ಸಾಬ್! ಪಂಜಾಬೀ ಬ್ಯಾಂಕ್‌ನವನು!" ನವಜವಾನ್ ಶೀವಿಯಿಂದ ಹೇಳಿದ.

ಜವಾನರ ಸಂಖ್ಯೆ ಕಡಿಮೆ ಇದ್ದ ನನ್ನ ಶಾಖೆಗೆ ಒಬ್ಬ ಹೊಸ ಜವಾನನನ್ನು ಕಳುಹಿಸಿದ್ದರು ನಮ್ಮ ಬ್ಯಾಂಕ್‌ನವರು. ಸಂತೋಷವಾಯಿತು ನನಗೆ. ಬೆಲ್ ಎಷ್ಟು ಹೊಡೆದರೂ ಕೇಳಿಸಿದರೂ ಕೇಳಿಸದಂತೆ ಎಲ್ಲೋ ಅವಿತುಕೊಂಡು ಕೆಲಸ ಮಾಡು ವವರ ಹಾಗೆ ನಟಿಸುವವರೇ ಆಗಿದ್ದ ಶಾಖೆಯ ಜವಾನರ ಕೈಲಿ ಕೆಲಸ ತೆಗೆದು ಕೊಳ್ಳುವುದು, ಮರಳುಗಾಡಿನಲ್ಲಿ ಎಷ್ಟು ಆಳ ಕೊರೆದರೂ ನೀರು ಸಿಗದೆ ಪರಿತಾಪ

ಪಡುವ ಸ್ಥಿತಿಯಾಗಿತ್ತು ನನಗೆ! "ಒಂದು ಲೋಟ ನೀರು ತೆಗೆದುಕೊಂಡು ಬಾಪ್ಪ!"

ನಯವಾಗಿ ಹೇಳಿದೆ.

ಕೆಂಪಗಿನ ಕೋಲು ಮುಖ, ಎರಡು ಅಂಗುಲ ಉದ್ದ ಆಯಿತು. ಕೆಂಚು ಕೂದಲಿನ ಗಡ್ಡ ಮತ್ತಷ್ಟು ಕೆಂಚಗಾಗಿ ನಿಮಿರಿ ನಿಂತವು. ಅವನ ಗಡಸು ಮುಖ ನೋಡಿ, ಬಾಯಾರಿದ್ದ ನನ್ನ ಬಾಯಿ ಭಯದಿಂದ ಒಣಗಿ ಬೆಂಗಾಡಾಯಿತು.

"ನಮ್ಮ ಬ್ಯಾಂಕಿನಲ್ಲಿ ಯಾರಿಗೂ ನೀರು ಕೊಡುವ ಕೆಲಸ ನಾನು ಮಾಡಿಲ್ಲ ಸಾಬ್! ನೀರು ಕೊಡುವ ಕೆಲಸ ನನ್ನದಲ್ಲ!"

ಕ್ಯಾಬಿನ್‌ನ ಬಾಗಿಲನ್ನು ರಭಸದಿಂದ ತೆಗೆದು, ನನ್ನ ಮುಖದ ಮೇಲೆ ಅಷ್ಟೇ ರಭಸದಿಂದ ಹೊಡೆದು ಬಾಯಿಗೆ ನೀರಿಡಿಸದೆ, ಮುಖಕ್ಕೆ ನೀರಿಳಿಸಿ ಹೊರಟುಹೋದ ಜಾಟ್ ಮಹಾರಾಜಾ!

ಇದೆಂತಹ ಉದ್ಧಟತನ! ಯಾಕೆ ಇಷ್ಟು ಅಹಂಕಾರ, ಒಣಪ್ರತಿಷ್ಠೆ? ಎಂತಹ ದುರಂಕಾರಿ ಈತ?

ಅವಮಾನದಿಂದ ಮನಸ್ಸು ಕುದಿಯಿತು. ಬೆಳಗಿನಿಂದ ಒಂದರ ಮೇಲಿಂದ ಒಂದರಂತೆ ಕಂಟಕದ ಬಿರುಗಾಳಿಯ ಹೊಡೆತಗಳಿಂದ ತತ್ತರಿಸಿದ ನನ್ನ ಮನಸ್ಸು ಈ ಹೊಸ ಪಿಡುಗಿನಿಂದ ರೋಸಿಹೋಯಿತು. ಕಾಲಕಾಲಕ್ಕೆ ಎರಗಿ ಬರುವ ಮಹಾ ಪಿಡುಗುಗಳಾದ, ಕಾಲರಾ, ಡೆಂಗ್ಯೂ, ಮೆನ್‌ಗೈಟಿಸ್ ಕಾಯಿಲೆಗಳ ತರಹ, ನನ್ನ ಶಾಖೆಗೆ ಈ ಹೊಸ ಹೊಸ ಪಿಡುಗುಗಳು ಎರಗಿ ಬಂದು, ನನಗೆ ಅವುಗಳ ಶಾಖ ತಟ್ಟಿಸಿ, ಘಾಸಿ ಮಾಡುತ್ತದೆಯಲ್ಲಾ! ಸತತವಾಗಿ ಕಾಡುತ್ತಿರುವ ಈ ಪೀಡೆಗಳನ್ನು ನಿವಾರಿಸಲು ಯಾರ ಮೊರೆ ಹೋಗುವುದು? ಗುಪ್ತಾಜೀ ತಿಳಿಸಿದಂತೆ ದೈವದ ಮೊರೆ ಹೋಗುವುದೇ ಸೂಕ್ತವೆಂದೆನಿಸಿತು. ತಲೆ ಎತ್ತಿ ಸುತ್ತಲೂ ಕಣ್ಣು ಹಾಯಿಸಿದೆ. ಯಾವ ದೇವರ ಪಟವೂ ಕಾಣಿಸಲಿಲ್ಲ! ಗೋಡೆಗಳ ಮೇಲೆ ದೇವರ ಪಟ ಯಾಕೆ ತೂಗಿಸಲಿಲ್ಲ? ದೇವರು ಎಲ್ಲಿಲ್ಲ? ದೇವರ ಪಟವೇಕೆ, ಅವನನ್ನು ನೆನೆದು, ಪ್ರಾರ್ಥಿಸಿ, ಆರಾಧಿಸುವುದಕ್ಕೆ? ಕಣ್ಣು ಮುಚ್ಚಿ ಪ್ರಾರ್ಥಿಸಿದೆ!

ಪ್ರತ್ಯಕ್ಷನಾದ ಸಾಗೂ!

ಇವ ದೇವರ ತರಹ ಸರ್ವಾಂತಯಾಮಿ. ಇದ್ದಕ್ಕಿದ್ದ ಹಾಗೆ ಪ್ರತ್ಯಕ್ಷ ವಾಗುತ್ತಾನೆ, ಅಂತರ್ಧಾನವಾಗುತ್ತಾನೆ, ಆದರೆ ಆಪದ್ಬಾಂಧವನ ಅವತಾರ ಮಾತ್ರ ಅಲ್ಲ!

"ಮನೆಗೆ ಹೋಗಲಿಲ್ಲವೆ?"

"ಬಹಳ ಬಿಸಿಲು ಹೊರಗಡೆ! ಎಲ್ಲಿ ತಿರುಗಾಡಲಿಕ್ಕೆ ಹೇಗಿದ್ದಿರಿ ಸಾಬ್?"

ಪ್ರಶ್ನೆಗೆ ನೇರ ಉತ್ತರ ನೀಡುವ ಅಭ್ಯಾಸ ತಪ್ಪಿ ಹೋಗಿತ್ತು ಇವನಿಗೆ!

"ತಣ್ಣಗೆ ಕುಡಿಯಲಿಕ್ಕೆ ಕೂಲ್ ಡ್ರಿಂಕ್ಸ್ ತರಿಸಿದರೆ ಹಾಯಾಗುತ್ತಿತ್ತು ಸಾಬ್!"

ಮಿಂಚಿನಂತೆ ಕೆಲಸ ಮಾಡಿತು ನನ್ನ ತಲೆ!

"ಹೋಗಿ ತಣ್ಣಗಿನ ನೀರು ತೆಗೆದುಕೊಂಡು ಬಾ ಮೊದಲು! ಆಮೇಲೆ ಕೂಲ್ ಡ್ರಿಂಕ್ಸ್ ಕುಡಿಯೋಣವಂತೆ!"

ಮೆಲ್ಲನೆದ್ದ ಕುರ್ಚಿಯಿಂದ. ಹೊರಗೆ ಹೋಗಿ, ಎರಡು ಲೋಟ ನೀರು ತಂದಿಟ್ಟ ನನ್ನ ಮುಂದೆ.

ಸಾಧುವಿನ ವೇಷ ಧರಿಸಿ, ಭಕ್ತರ ಆಧ್ಯಾತ್ಮ ದಾಹವನ್ನು ತಣಿಸುವ ಕಥೆ ಕೇಳಿದ ನಾನು, ಸಾಗುವಿನ ವೇಷ ಧರಿಸಿ, ನನ್ನ ಪರಮಾರ್ಥದ ದಾಹವನ್ನು ತಣಿಸಲಿಕ್ಕೆ ಅವತರಿಸಿದನೆಂದು ಬಗೆದು, ಅವನಿಗೆ ದಕ್ಷಿಣೆಯನ್ನು ನೀಡಲು ನಿರ್ಧರಿಸಿದೆನು.

'ಟ್ರಿಣ್' ಎಂದು ಬಡಿಯಿತು ಟೆಲಿಫೋನ್.

"ಏನ್ರೀ ಇದು ನಿಮ್ಮ ಗೋಳು? ನಿಮ್ಮ ಮೇಲೆ ಇನ್ನೊಂದು ದೂರು ಬಂದಿದೆಯಲ್ರೀ!"

ಡೀ.ಎಮ್. ರಾಜಕುಮಾರ ರೇಗುತ್ತಿದ್ದ ಆ ತುದಿಯಿಂದ.

ಸಿಬ್ಬಂದಿಗಳು ನೀಡಿದ್ದ ಮನವಿ ಪತ್ರದ ಒಂದು ನಕಲು, ಈಗಾಗಲೇ ಅವನ ಕೈ ಸೇರಿಯಾಗಿತ್ತು.

ಎಷ್ಟು ಬೇಗ, ನಿಷ್ಠೆಯಿಂದ, ಜವಾಬ್ದಾರಿಯಿಂದ, ಕಾರ್ಯವೆಸಗಿದ್ದಾರೆ! ಮನವಿ ಪತ್ರವನ್ನು ಎಕ್ಸ್‌ಪ್ರೆಸ್ ವೇಗದಲ್ಲಿ ಹೆಡ್ ಆಫೀಸಿಗೆ ಮುಟ್ಟಿಸುವಂತೆ, ತಮ್ಮ ತಮ್ಮ ಬ್ಯಾಂಕ್‌ಕಾರ್ಯಗಳನ್ನು ಅಷ್ಟೇ ವೇಗದಲ್ಲಿ ಮಾಡಿ ಮುಗಿಸುವಂತಿದ್ದರೆ, ಈ ಬವಣೆಗಳ ಹೊರೆಯೇ ಹೊರಬೇಕಾಗಿರಲಿಲ್ಲ ನಾನು! ಈ ಮನವಿ ಪತ್ರದ ಅಗತ್ಯವೂ ಕಾಣುತ್ತಿರಲಿಲ್ಲ!

"ಮಾತಾಡ್ರೀ ಮಿಸ್ಟರ್!" ಎಚ್ಚರಿಸಿದ ರಾಜಕುಮಾರ.

"ಸಮಸ್ಯೆಗಳನ್ನು ಬಗೆಹರಿಸಲು ಮುಖಂಡರನ್ನು ಮಾತುಕತೆಗೆ ಕರೆಸಿ, ಸಾವಧಾನದಿಂದ ಮಾತನಾಡಿದೆ ಸಾರ್! ನೀವು ಅಪ್ಪಣೆ ಕೊಡಿಸಿದ ಹಾಗೆ, ಎದುರು ಚಂದ ಮಾತನಾಡಿ, ಹಿಂದೆ....."

"ಅವರು ನಿಮ್ಮ ಬೆನ್ನಿಗೆ ಬಾಕು ಹಾಕಿಬಿಟ್ಟರು ಅಲ್ಲವೇನ್ರೀ?"

ಅರೆ! ನಾನು ಹೇಳಬೇಕೆಂದು ಮಾಡಿದ್ದನ್ನು ಇವನೇ ಒದರುಬಿಟ್ಟನಲ್ಲಾ!

ಹೌದು! ನಾನು ಅವರ ಬೆನ್ನಿಗೆ ಬಾಗುವುದರ ಮೊದಲೇ ಅವರು ನನ್ನ ಬೆನ್ನಿಗೆ ಬಾಕು ಹಾಕಿಬಿಟ್ಟಿದ್ದರು!

"ಸಮಯ ಅವಕಾಶ, ಎಲ್ಲಾ ನೋಡಿಕೊಂಡು ಬಾಕು ಹಾಕಬೇಕ್ರೀ! ಎದುರು ಚಂದ ಮಾತನಾಡಿ ಹಿಂದೆ ಬಾಕು ಹಾಕಬೇಕು ಅಂದರೆ, ಯಾವಾಗಲೂ ಒಂದೇ ರೀತಿ, ಮೊದಲು ಚಂದ ಮಾತನಾಡಿ ಬಾಕು ಹಾಕಬೇಕು ಅಂತ ಮಾಡಿದರೇನ್ರೀ?"

ಹಿಂದಿನ ದಿನ, ಕುಡಿತ ಜಾಸ್ತಿಯಾಗಿದ್ದಿರಬೇಕು. ಅವನ ಧ್ವನಿ ಗೊಗ್ಗರವಾಗಿ ನಡುಗುತ್ತಿತ್ತು.

"ನೀವೇ ಹೇಳಿದ್ದರಲ್ಲಾ ಸಾರ್! ಎದುರು ಚಂದ ಮಾತಾಡಿ......."

"ಥತ್! ಸುಮ್ಮನಿರ್ರಿ!" ಗದರಿಸಿದ ಡೀ.ಎಮ್.

"ಚಂದ ಮಾತನಾಡದೇ ಏನೂ ಮಾತನಾಡದೇ ಬಾಕು ಹಾಕುವುದು ಕಲಿಯಿರಿ!"

"ಟಪ್!" ಎಂದು ಟೆಲಿಫೋನ್ ಇಟ್ಟ ಶಬ್ದ ನನ್ನ ಕಿನ್ನಿಗೆ ಹೊಡೆದ ಹಾಗೆ ಆಯಿತು.

ಎಂತಹ ನೌಕರೀ ಹಿಡಿದನಪ್ಪಾ ನಾನು! 'ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆ ಮೇಲು' ಎಂಬ ಪದ ಕೇಳಿದ್ದ ನಾನು, ಈ ಹೊಲಸು ನೌಕರಿಗಿರಿ ಬಿಟ್ಟು, ರೈತಗಿರಿ ಮಾಡುವುದು ಒಳ್ಳೆಯದಲ್ಲವೇ? ಎಂದು ಪೇಚಾಡಿದೆ. ಇದ್ದಕ್ಕಿದ್ದಂತೆ ಅಕೌಂಟೆಂಟ್ ವರ್ಮಾನ ಜ್ಞಾಪಕ ಬಂತು. ಕರೆಸಿದೆ ಅವನನ್ನು. ಅವನೇ ಅಲ್ಲವೇ ಹೇಳಿದ್ದು: ಪಂಜಾಬೀಗಳು ಧೈರ್ಯವಂತರನ್ನು ಕಂಡರೆ, ಗೌರವ ನೀಡುತ್ತಾರೆ! ಪುಕ್ಕಲರನ್ನು ನೋಡಿದರೆ ಕೋಳಿ ಕತ್ತು ಮುರಿದಂತೆ ಮುರಿದು ತಿಂದು ಮುಕ್ಕುತ್ತಾರೆ! ನಾನು ಧೈರ್ಯ ಯಾಕೆ ಮಾಡಬಾರದು?

"ಬಾಯಿ ಹರುಕ ಲಾಲ್ ಎಲ್ಲಿ ಹೋಗಿದ್ದಾನೆ?"

"ಗೊತ್ತಿಲ್ಲ ಸಾಬ್!" ಎಂದ ವರ್ಮಾ.

"ಇನ್ನೂ ನಾಲ್ಕು ಗಂಟೆ! ಹೇಳದೆ ಕೇಳದೆ ಮನೆಗೆ ಹೋದನೇ?"

"ಗೊತ್ತಿಲ್ಲ ಸಾಬ್!"

"ಈ ದಿನ ಅವನು ಎಷ್ಟು ಕೆಲಸ ಬಾಕಿ ಇಟ್ಟಿದ್ದಾನೆ, ಎಷ್ಟು ಮುಗಿಸಿದ್ದಾನೆ-ಲೆಕ್ಕ ತೆಗೆದುಕೊಂಡು ಬನ್ನಿ."

ಆಜ್ಞಾಪಿಸಿದೆ. ವರ್ಮಾ ನಸುನಗುತ್ತಾ ಹೊರಗೆ ಪೋದ.

ಸಾಗೂ ನನ್ನ ಮುಖವನ್ನೇ ನೋಡುತ್ತಾ ಕುಳಿತ. ನನ್ನ ಮುಖದ ಚರ್ಯೆ ನೋಡಿ, ಕಂಗಾಲಾಗಿರಬೇಕು. ಮಾತಿಲ್ಲದೇ ಕುಳಿತಿದ್ದ.

ಸ್ವಲ್ಪ ಹೊತ್ತಿನಲ್ಲೇ ವರ್ಮಾ ಬಂದು ನನ್ನ ಕೈಗೆ ಒಂದು ಚೀಟಿ ನೀಡಿದ.

೫ ಬಿಲ್‌ಗಳನ್ನು ನಮೂದಿಸಿ, ೨ ಡಿ.ಡಿಗಳನ್ನು ಬರೆದು, ಮೂವತ್ತು ಬಿಲ್‌ಗಳನ್ನು ರಿಜಿಸ್ಟರ್‌ನಲ್ಲಿ ದಾಖಲು ಮಾಡದೆ ಬಾಕಿ ಬಿಟ್ಟು ಮನೆಗೆ ಹೋಗಿದ್ದ ಖದೀಮ ಲಾಲ್!

"೫ ಗಂಟೆ ಸಮಯದಲ್ಲಿ ಬರೀ ಐದು ಬಿಲ್ ದಾಖಲು ಮಾಡಿ, ೨ ಡಿ.ಡಿ ಬರೆದು ಇದ್ದರ ಮೇಲೆ, ಒಂದು ಗಂಟೆ ಮುಂಚೆ, ಅನುಮತಿ ಪಡೆಯದೇ ನಿರ್ಗಮಿಸಿದ್ದಾನೆ' ಈ ರೀತಿ ಟೈಪ್ ಮಾಡಿಸಿ, ರಿಪೋರ್ಟ್‌ನ್ನು ಹೆಡ್ ಆಫೀಸಿಗೆ ಕಳುಹಿಸಿರಿ!"

ಅಪ್ಪಣೆ ಕೊಟ್ಟೆ. ವರ್ಮನಿಗೆ ನನ್ನ ಅಪ್ಪಣೆ ಮತ್ತು ತೀರ್ಮಾನಸದ ಗಂಟೇವಾಲನ ಸಿಹಿ ತಿಂದಷ್ಟೇ ಸಂತೋಷವಾಗಿತ್ತು ಎಂದು ಅವನ ನಗುಮುಖವೇ ಹೇಳುತ್ತಿತ್ತು!

ಇನ್ನೊಂದು ಕಾಳಗ ಶುರುವಾಗಿತ್ತು! ಕಾಳಗದ ಕಹಳೆ ಊದುವ ಮೊದಲೇ ಸಾಗೂ ಅಂತರ್ಧಾನನಾಗಿದ್ದ! ಬಾಕುವನ್ನು ಬೆನ್ನಿಗೆ ಹಾಕದೇ, ಎಗರಿ ಮೈಮೇಲೆ ಬಂದ ಪಿಡುಗಿನ ಎದೆಗೇ ತಿವಿದಿದ್ದೆ!

ಮಾರನೆ ಬೆಳಿಗ್ಗೆ ಶಾಖೆಗೆ ಬಂದಾಗ, ನಾನು ಎಣಿಸಿದಂತೆ, ನನಗಿಂತ ಮೊದಲೇ ಮುಖಂಡರು ಹಾಜರಿದ್ದರು ನನಗಾಗಿ ಕಾಯುತ್ತಾ.

"ಇದು ಏನು?" ಹಿಂದಿನ ದಿನ, ಲಾಲ್‌ನ ಬಗ್ಗೆ ಬರೆದಿದ್ದ ರಿಪೋರ್ಟ್‌ನ್ನು ನನ್ನ ಮುಂದೆ ಇರಿಸಿ, ಕೇಳಿದ ಸರ್ದಾರ್ಜೀ ನೇತಾ.

"ನೀವು ಇದನ್ನು ಓದಿದ್ದೀರಾ?"

"ಓದಿದ ಮೇಲೆ ನಿಮ್ಮಲ್ಲಿಗೆ ಬಂದಿದ್ದು!"

"ಓದಿದ ಮೇಲೆ ನಿಮಗೆ ಅರ್ಥ ಆಗಿರಬೇಕಲ್ಲ. ನಾನು ಓದಿ ನಿಮಗೆ ಅರ್ಥ ಹೇಳಬೇಕೇನು?"

ನುಂಗುವಂತೆ ನೋಡಿದರು ಇಬ್ಬರೂ!

"ಈ ರಿಪೋರ್ಟನ್ನು ವಾಪಸ್ಸು ತೆಗೆದುಕೊಳ್ಳಿರಿ!"

"ವಾಪಸ್ಸು? ನಾನು ಆಗಲೇ ಒಂದು ನಕಲು ಹೆಡ್ ಆಫೀಸ್‌ಗೆ ಕಳುಹಿಸಿ ಆಯಿತಲ್ಲಾ!"

ಇಬ್ಬರೂ ಒಬ್ಬರ ಮುಖ ಒಬ್ಬರು ನೋಡಿಕೊಂಡು ಒಟ್ಟಿಗೆ ಕೇಳಿದರು:

"ಇಷ್ಟು ಬೇಗ?" ನಾನು ದೇಶಾವರಿ ನಗೆ ನಕ್ಕು ಉತ್ತರಿಸಿದೆ.

"ನನ್ನ ವಿರುದ್ಧ ನಿಮ್ಮ ಮನವಿ ಪತ್ರ ಎಷ್ಟು ಬೇಗ ಹೆಡ್‌ಆಫೀಸಿಗೆ ತಲುಪಿತೋ ಅಷ್ಟೇ ಬೇಗ ನನ್ನ ರಿಪೋರ್ಟ್ ಕೂಡ ತಲುಪಿತು."

"ರಿಪೋರ್ಟ್‌ನ್ನು ವಾಪಸ್ಸು ತರಿಸಿಕೊಳ್ಳಿರಿ!"

ಆಜ್ಞೆ ಮಾಡಿದ ಸರ್ದಾರ್ಜೀ ನೇತಾ.

"ನಿಮ್ಮ ಮನವಿ ಪತ್ರವನ್ನು ವಾಪಸ್ಸು ತೆಗೆದುಕೊಳ್ಳಿ ಎಂದು ನಾನು ಕೇಳುತ್ತಾ ಇಲ್ಲವಲ್ಲಾ!"

"ನೀವು ರಿಪೋರ್ಟ್ ವಾಪಸ್ಸು ತೆಗೆದುಕೊಳ್ಳದಿದ್ದರೆ, ವಾತಾವರಣ ಬಿಗಡಾಯಿಸಿ, ನೀವು ಇಲ್ಲಿ ಕೆಲಸ ಮಾಡಲು ಕಷ್ಟವಾಗುತ್ತದೆ!"

ಇವನ ಬೆದರಿಕೆಗೆ ಹೆದರಿದರೆ, ಹೆದರಿಕೆಯ ಕುರುಹು ತೋರಿಸಿದರೂ ನನ್ನನ್ನೂ ಕೊಚ್ಚಿ ತುಳಿದು ಬಿಡುವುದು ಖಂಡಿತ! ವರ್ಮಾನ ಮಾತು ಜ್ಞಾಪಕಕ್ಕೆ ಬಂದಿತು. ಪಂಜಾಬೀಗಳು ಪುಕ್ಕಲರನ್ನು ತೆಂಗಿನಕಾಯಿ ತುರಿದಂತೆ ತುರಿದುಬಿಡುತ್ತಾರೆ!

"ಕೆಲಸ ಶುರು ಮಾಡುವ ಸಮಯವಾಯಿತು. ದಯವಿಟ್ಟು ಎದ್ದು ಹೋಗಿ ಕೆಲಸ ಮಾಡಿ."

"ಹಾಗಾದರೆ ನೀವು ರಿಪೋರ್ಟ್ ವಾಪಸ್ಸು ತೆಗೆದುಕೊಳ್ಳುವುದಿಲ್ಲ!"

ಗರ್ಜಿಸಿದ ಸರ್ದಾರ್ಜೀ!

"ಈ ರಿಪೋರ್ಟ್‌ನ್ನು ಟಪ್ಪಾಲ್ ಟ್ರೇನಲ್ಲಿಡಿ. ಇಂದೇ ಕಳುಹಿಸಬೇಕಾದುದಿಲ್ಲ. ನಿಧಾನವಾಗಿ ರವಾನೆಯಾಗಲಿ. ಯಾಕೆಂದರೆ, ಒಂದು ಎಡ್ವಾನ್ಸ್ ಕಾಪಿ ಕಳುಹಿಸಿಯಾಗಿದೆ." ನಗುತ್ತಾ ಹೇಳಿದೆ.

ನನಗೆ ಅರಿವಿತ್ತು. ನಾನು ಸಿಟ್ಟು, ಅದುಮಿಟ್ಟು, ಬಲವಂತದ ನಗು ಹೊರೆ ಹಾಕಿದರೆ, ಸರ್ದಾರ್ಜೀ ಸಿಟ್ಟು ಮುಗಿಲಿಗೇರುತ್ತದೆ ಎಂದು. ಸಿಟ್ಟಿನ ಕಿಚ್ಚು ಹೆಚ್ಚಾದರೆ, ಅದು ಅವನನ್ನೇ ಧ್ವಂಸ ಮಾಡುತ್ತದೆ! ನನಗೇನು ನಷ್ಟ?

ಬಹಳ ಕಷ್ಟದಿಂದ ಕುರ್ಚಿಯಿಂದ ಎದ್ದರು ಇಬ್ಬರೂ. ನಿಧಾನವಾಗಿ ಹೊರಗೆ ಹೊರಟರು. ಬಾಗಿಲೆಳೆದು ಹೊರಗೆ ಹೋದೊಡನೆ ಸಾಹನೀ ಒಳಗೆ ಸರ್ರನೆ ನನ್ನ ಬಳಿ ಬಂದು, ಪಿಸುಗುಟ್ಟಿದ:

"ಸಾಬ್! ತಾವು ಹಿರಿಯರು, ನಮ್ಮ ತಂದೆ ತರಹ. ನಾವು ಮಕ್ಕಳ ಹಾಗೆ. ಏನೋ ತಪ್ಪು ಮಾಡಿದೆವು. ಆ ರಿಪೋರ್ಟ್ ವಾಪಸ್ಸು ತೆಗೆದುಕೊಂಡುಬಿಡಿ!"

ಅವನ ಕಳಕಳಿಯ ಅನುರೋಧ ನನಗೆ ಅಚ್ಚರಿಯುಂಟಾಗಿತ್ತು. ಇವನನ್ನು ನಂಬುವುದು ಹೇಗೆ? ಇವನ ಮರಳು ಮಾತಿಗೆ ನಂಬಿ, ರಿಪೋರ್ಟ್ ವಾಪಸ್ಸು ತೆಗೆದುಕೊಂಡರೆ, ಸರ್ದಾರ್ಜೀ ಮೀಸೆ ತಿರುಗಿಸಿ, ಮೇನೇಜರ್‌ಗೆ ಹೆದರಿಸಿ, ರಿಪೋರ್ಟ್ ವಾಪಸ್ಸು ತೆಗೆದುಕೊಳ್ಳುವಂತೆ ಮಾಡಿದೆ ಎಂದು ತಿರುಗಿದರೆ? ಕಾಳಗ ಶುರುವಾಗಿದೆ. ಸಂಧಿಯ ಪ್ರಶ್ನೆಯೇ ಇಲ್ಲ! ಶತ್ರುವನ್ನು ಬಲಿ ಹಾಕಿದಾಗಲೇ ಶಾಂತಿಯ ಲಾಭ!

"ನೋಡ್ರೀ ನೇತಾಜೀ! ನಾನು ನಿಮ್ಮ ತಂದೆಯೂ ಅಲ್ಲ, ನೀವು ನನ್ನ ಮಕ್ಕಳು ಅಲ್ಲ. ಇಲ್ಲಿ ನಾನು ವೃತ್ತಿಯಿಂದ ಮೇನೇಜರ್, ನೀವು ನೌಕರರು. ಅಷ್ಟೇ! ನಾನು ನನ್ನ ವೃತ್ತಿ ಮಾಡುತ್ತೇನೆ. ಅದಕ್ಕೆ ಬ್ಯಾಂಕ್‌ನವರು ಸಂಬಳ ನೀಡುತ್ತಾರೆ. ನೀವು ನಿಮ್ಮ ಕೆಲಸ ಮಾಡಿ, ಅದಕ್ಕೆ ಸೂಕ್ತ ಸಂಬಳ ನೀಡುತ್ತಾರೆ ಬ್ಯಾಂಕ್‌ನವರು."

ನನ್ನ ಭಾಷಣ ಇವನ ಮೇಲೆ ಯಾವ ಪರಿಣಾಮ ಉಂಟು ಮಾಡಲಿಲ್ಲ.

"ಒಳ್ಳೆಯ ಮಾತಿನಲ್ಲಿ ನಿಮಗೆ ಸೂಚಿಸುತ್ತಿದ್ದೇನೆ. ಪರಿಸ್ಥಿತಿ ಬಿಗಾಡಿಯಿಸುವ ಮುನ್ನ ಎಚ್ಚೆತ್ತುಕೊಳ್ಳುವುದು ನಿಮಗೇ ಕ್ಷೇಮ. ಆಮೇಲೆ ಪಶ್ಚಾತ್ತಾಪ ಪಡಬೇಡಿ!"

ನನಗೆ ನಗು ಬಂತು. ಪಶ್ಚಾತ್ತಾಪ ಏತಕ್ಕೆ ಪಡಬೇಕು? ಯಾರಿಗಾಗಿ ಪಶ್ಚಾತ್ತಾಪ ಪಡಬೇಕು? ಕಾಳಗದಲ್ಲಿ ಸೋತರೆ ಪಶ್ಚಾತ್ತಾಪ ಪಡುವ ಪ್ರಮೇಯವೇ ಇರುವು ದಿಲ್ಲ, ಏಕೆಂದರೆ ಕಾಳಗದಲ್ಲಿ ಸೋಲುವ ಸಂಭವವೇ ಇಲ್ಲ. ಕಾಳಗದಲ್ಲಿ ಮನ ಸ್ಥೈರ್ಯವೇ ಮುಖ್ಯವಾಗಿರುವಾಗ, ವೈರಿಗಳ ಸಂಖ್ಯಾಬಲವೇನು ಮಾಡಬಲ್ಲವು?

"ನಿಮಗೆ ಎಷ್ಟು ಮಕ್ಕಳು?"

ಗಲಿಬಿಲಿಯ ಈಡು ಹೊಡೆದಿದ್ದೆ ಅವನ ತಲೆಗೆ. ಎಚ್ಚರತಪ್ಪಿ ಬೀಳುವ ಹಾಗೆ ತೂರಾಡಿದ.

ಪಶ್ಚಾತ್ತಾಪದ ಪ್ರಶ್ನೆಗೆ ಉತ್ತರವಾಗಿ ತನಗೆ ಮಕ್ಕಳೆಷ್ಟು ಎಂಬ ಪ್ರಶ್ನೆ ಅವನಿಗೆ ಗಲಿಬಿಲಿ ಉಂಟಾಗಲಿ ಎಂದೇ ಒಂದು ಈಡು ಹೊಡೆದಿದ್ದೆ.

"ಮೂರು!"

"ಪಂಜಾಬೀ ಬ್ಯಾಂಕ್‌ನಲ್ಲಿ ಪೆನ್ ಹಿಡಿದೇ ಇರಲಿಲ್ಲ ಅಲ್ಲವೇ?"

ಉತ್ತರವೀಯಲಿಲ್ಲ ಸಾಹನೀ. ಉತ್ತರದ ನಿರೀಕ್ಷೆಯನ್ನು ಮಾಡಲಿಲ್ಲ ನಾನು.

"ನಿಮ್ಮ ಮಕ್ಕಳಿಗೂ ಪೆನ್ ಹಿಡಿಯಲು ಕಲಿಸಿರಲಿಕ್ಕಿಲ್ಲ ಅಲ್ಲವೇ?"

ಏಟು ಬಲವಾಗಿರಲಿಕ್ಕೂ ಸಾಕು! ತತ್ತರಿಸಿದ ಸಾಹನೀ. ಬಾಗಿಲನ್ನು ಭದ್ರವಾಗಿ ಹಿಡಿದ. ನನ್ನ ಮುಖವನ್ನೇ ತಿನ್ನುವಂತೆ ನೋಡಿದ. ಅವನ ಬೆಕ್ಕಿನ ಕಣ್ಣು ತೀಕ್ಷ್ಣ ವಾಗಿದ್ದರೂ, ಹುಲಿಯ ಧೈರ್ಯವಿರಲಿಲ್ಲ ನನ್ನನ್ನು ತಿನ್ನಲು. ನಿಧಾನವಾಗಿ ಹೆಜ್ಜೆ ಇಡುತ್ತಾ ಹೊರಗೆ ಹೋದ. ಅವನ ಸ್ಥಿತಿಯನ್ನು ನೋಡಿ ಒಂದು ಕ್ಷಣ ನನ್ನ ಎದೆ ಕರಗಿ ನೀರಾಯಿತು. ಛೆ! ಇದು ಯುದ್ಧವಲ್ಲವೇ? ಯುದ್ಧದಲ್ಲಿ ಕನಿಕರದ ಕರೆಗೆ ಓಗೊಟ್ಟರೆ ನನ್ನ ಆಕ್ರಂದನಕ್ಕೆ ಕನಿಕರಿಸುವವರು ಯಾರು? ಆದರೆ ನನಗೆ ಪಶ್ಚಾತ್ತಾಪ ವಾಗತೊಡಗಿತ್ತು. ನನಗೆ ಈಗಲೇ ಪಶ್ಚಾತ್ತಾಪವಾಗಿದೆ ಎಂದು ಹೇಳಲೆ? ಸಾಹನೀಯ ಅಸಹನೀಯ ಪರಿಸ್ಥಿತಿಯನ್ನು ನೋಡಿ, ನನಗೆ ಪಶ್ಚಾತ್ತಾಪವಾಗಿದೆ ಎಂದು ಘೋಷಿಸಲೆ?

ಮಾರನೆಯ ಬೆಳಿಗ್ಗೆ ಶಾಖೆಗೆ ಬಂದಾಗ, ಸಾಹನೀ ಕಾಯುತ್ತಾ ಇದ್ದ ನನಗಾಗಿ. ನಾನು ಕುರ್ಚಿಯಲ್ಲಿ ಕುಳಿತೊಡನೆ, ನನ್ನ ಆಹ್ವಾನಕ್ಕೂ ಕಾಯದೆ, ಮುಂದಿದ್ದ ಕುರ್ಚಿ ಎಳೆದು ಕುಳಿತ.

"ನಿನ್ನೆ ದಿನ ನನ್ನ ಖಾಸಗೀ ಜೀವನದ ಬಗ್ಗೆ ನೀವು ಕೈ ಹಾಕಿದ್ದು ಸರಿಯಲ್ಲ!"

ಬೆಕ್ಕಿನ ಕಣ್ಣಿನ ತೀಕ್ಷ್ಣತೆಯನ್ನು ತೀವ್ರಗೊಳಿಸುವ ಸಾಹಸ ಮಾಡಿದ್ದ ಸಾಹನೀ.

"ನನ್ನ ಮಕ್ಕಳು ಪೆನ್ ಹಿಡಿಯುವುದಕ್ಕೂ, ನಮ್ಮ ಬ್ಯಾಂಕಿನ ಕೆಲಸಕ್ಕೂ ಯಾವ ಸಂಬಂಧ?"

ಸಾಹನೀ ಕಾಳಗಕ್ಕೆ ಸಿದ್ಧನಾಗೇ ಬಂದಿರುವುದು ಅರಿವಾಯಿತು ನನಗೆ. ಅವನಿಗೆ ಹೊಡೆದ ಈಡು ಕೆಲಸ ಮಾಡಿತ್ತು;ಆದರೆ ಘಾಯ ಮರ್ಮ ಸ್ಥಾನ ಮುಟ್ಟಿ ಅವನ ಇತಿಶ್ರೀಯಾಗಿರಲಿಲ್ಲ!

"ಬಹಳ ಆಶ್ಚರ್ಯವಾಗಿದೆಯಲ್ಲ ನಿಮ್ಮ ವಾದ? ನೆನ್ನೆ ದಿನ 'ನೀವೆ ತಂದೆ ನಾವೇ ಮಕ್ಕಳು' ಎಂದು ನನ್ನ ಕೈಕಾಲು ಹಿಡಿದು ರಮಿಸಲಿಕ್ಕೆ ಬಂದಿದ್ದಿರಿ! ನಾನು ತಂದೆ ಹೌದೆಂದಿದ್ದರೆ, ನೀವು ಮಕ್ಕಳಾಗುತ್ತಿದ್ದಿರಾ? ಹಾಗೆಂದಿದ್ದರೆ ಅದು ಬ್ಯಾಂಕ್‌ನ ಕೆಲಸಕ್ಕೆ ಸಂಬಂಧವಿರುತ್ತಿತ್ತೆ? ಬ್ಯಾಂಕ್‌ನಲ್ಲಿ ಕೆಲಸ ಮಾಡುವುದನ್ನು ಬಿಟ್ಟು 'ನೀವು ತಂದೆ ನಾವು ಮಕ್ಕಳು' ಅಂದರೆ ನನ್ನ ಖಾಸಗೀ ಜೀವನವನ್ನು ಬ್ಯಾಂಕ್‌ಗೆ ತಂದ ಹಾಗೆ ಆಗುವುದಿಲ್ಲವೆ?"

ಮೂಕನಾದ ಸಾಹನೀ!

"ಪೆನ್ ಹಿಡಿಯುವುದನ್ನು ಮಕ್ಕಳಿಗೆ ಚೆನ್ನಾಗಿ ಕಲಿಸಿದರೆ, ನಾಳೆ ಅವರು ನೌಕರೀ ಮಾಡುವಾಗ ಅದನ್ನು ಚೆನ್ನಾಗಿ ಉಪಯೋಗಿಸುತ್ತಾರೆ!"

ಕಣ್ಣಿನ ತೀಕ್ಷ್ಣತೆ ಕುಗ್ಗಿ ನೀರಾಗಿತ್ತು!

"ಬೇಜಾರು ಮಾಡಿಕೊಳ್ಳಬೇಡಿ ಸಾಹನೀ! ಯುದ್ಧರಂಗದಲ್ಲಿ ನಾಯಕನಿಗೆ ಗನ್, ಪಿಸ್ತೂಲ್ ಹಿಡಿದು ಕಾದಾಡಲಿಕ್ಕೆ ಬರದಿದ್ದರೆ, ಸಾಮಾನ್ಯ ಸೈನಿಕ ಹೇಗೆ ತಾನೇ ಅವನನ್ನು ಹಿಂಬಾಲಿಸಿ ಕಾದಾಡುತ್ತಾನೆ?"

ಸಾಹನೀಯ ಕತ್ತು ಮುರಿದು ಕೆಳಗೆ ಜೋತಾಡುವ ಹಾಗೆ ತೋರಿತು ನನಗೆ.

"ಹೋಗಿ ಕೆಲಸ ಮಾಡಿ, ಸಮಯ ಆಯಿತು!"

ಬಹಳ ಕಷ್ಟಪಟ್ಟು ಕುರ್ಚಿಯಿಂದ ಮೇಲಕ್ಕೆದ್ದು ಹೊರಗೆ ಹೋದ ಸಾಹನೀ.

ಅವನ ಬೆನ್ನನ್ನು ನೋಡಿ ಕುಳಿತ ನಾನು ನನ್ನ ಮುಂದೆ ನಿಂತ ಒಂದು ದಪ್ಪನೆ ಹೆಂಗಸು ನಿಂತಿದ್ದು ಗೊತ್ತಾಗಲೇ ಇಲ್ಲ.

"ಸಾಬ್!" ಕಿರುಚಿದಳು ಅವಳು.

"ಆಂ!" ಎಂದು ಎಚ್ಚೆತ್ತು ಅವಳ ಮುಖ ನೋಡಿದೆ.

"ನನ್ನ ಚೆಕ್ ಪಾಸ್ ಮಾಡುವುದಿಲ್ಲವಂತೆ ಸಾಬ್!"

"ಯಾಕೆ?"

"ನನಗೆ ಸಹಿ ಹಾಕುವುದಕ್ಕೆ ಬರುವುದಿಲ್ಲ ಸಾಬ್!"

"ಹೆಬ್ಬೆಟ್ಟು ಹಾಕಬಹುದಲ್ಲಾ!"

"ಹಾಕಿದೆ."

"ಯಾರ ಚೆಕ್ ಇದು?"

"ನಮ್ಮ ಮೇನೇಜರ್ ಸಾಬ್ ಕೊಟ್ಟಿದ್ದು!"

ಚೆಕ್ಕನ್ನು ಕೈಯಲ್ಲಿ ತೆಗೆದು ನೋಡಿದೆ. 'ಬೇರರ್' ಚೆಕ್ ಅದು. ಕ್ರಾಸ್ ಆಗಿರಲಿಲ್ಲ. ಯಾರು ಬೇಕಾದರೂ ಹಣ ತೆಗೆದುಕೊಳ್ಳಬಹುದಾಗಿತ್ತು, ಈ ಚೆಕ್ ನೀಡಿ. ಹಾಗಾದರೆ, ಈ ಚೆಕ್ ಪಾಸ್ ಮಾಡಲಿಕ್ಕೆ ಏಕೆ ತೊಂದರೆ? ಲೆಡ್ಜರ್ ಸೂಪರ್ ವೈಸರ್‌ನ್ನು ಕರೆಸಿದೆ. ಅವನೊಬ್ಬ ಜೈನ್. ಬಹಳ ನಿಧಾನಸ್ಥ, ಸಂಪ್ರದಾಯಸ್ಥ, ಮಿತ ಭಾಷಿ, ಎಲ್ಲರೊಡನೆ ನಗುನಗುತ್ತಾ ಮಾತುಕತೆಯಾಡುತ್ತಾ, ತನ್ನ ಕೆಲಸ ತಾನು ಮಾಡಿಕೊಂಡು ಹೋಗುವವ. ಇವನಿಗೆ ಏನು ಬಂತು ರೋಗ?

"ಈ ಚೆಕ್ ಪಾಸ್ ಮಾಡಲು ನಿಮಗೆ ಏನು ತೊಂದರೆ ಆಗಿದೆ?"

"ನನಗೇನು ತೊಂದರೆ ಇಲ್ಲ ಸಾಬ್!"

"ಹಾಗಾದರೆ ಇವಳಿಗೆ ಯಾಕೆ ತೊಂದರೆ ಕೊಡುತ್ತಿದ್ದೀರಿ?"

ಜೈನ್ ಉತ್ತರ ಕೊಡುವ ಮುನ್ನ, ಆಕೆ ಉತ್ತರ ನೀಡಿದಳು.

"ಸಾಬ್! ಪ್ರತಿ ತಿಂಗಳು ನಾನು ಈ ಚೆಕ್ ಹಿಡಿದು ಬರುತ್ತೇನೆ. ಇದು ನನ್ನ ಸಂಬಳ. ಈ ಮನುಷ್ಯ ಪ್ರತೀ ಬಾರಿ ನನಗೆ ತ್ರಾಸ ಕೊಟ್ಟು ಹಣ ಕೊಡಿಸುತ್ತಾನೆ. ನನ್ನನ್ನು ಕಂಡರೆ ಇವನಿಗೆ ಕೋಪ! ಯಾಕೆ ಅಂತ ಗೊತ್ತಿಲ್ಲ!"

"ನಿನ್ನ ಮೇಲೆ ಕೋಪ ಮಾಡಿ ನಾನು ಗಳಿಸಬೇಕಾದ್ದು ಏನಿದೆ? ಪ್ರತಿ ಸಾರಿ, ನಿನ್ನ ಹೆಬ್ಬೆಟ್ಟನ್ನು ಬೇರೆಯವರಿಂದ ದೃಢೀಕರಿಸಿ ತೆಗೆದುಕೊಂಡು ಬರುವುದಿಲ್ಲ. ಆದ್ದರಿಂದ ನಾನು ನಿನಗೆ ಹಣ ಕೊಡಲಿಕ್ಕೆ ಆಗುವುದಿಲ್ಲ!"

"ಈಕೆಯ ಹೆಬ್ಬೆಟ್ಟನ್ನು ನೀವೇ ದೃಢೀಕರಿಸಬಹುದಲ್ಲವೇ? ಹೇಗಿದ್ದರೂ ನಿಮ್ಮ ಮುಂದೆ ತನ್ನ ಹೆಬ್ಬೆಟ್ಟನ್ನು ಹಾಕುತ್ತಾಳಲ್ಲಾ!"

"ಸಾಬ್! ಇವಳ ಹೆಬ್ಬೆಟ್ಟನ್ನು ನಾನು ದೃಢೀಕರೀಸಿದರೆ, ನಾನೇ ಹಣ ತೆಗೆದು ಕೊಂಡುಬಿಟ್ಟೆ ಎಂದು ಈಕೆ ದೂರು ಕೊಟ್ಟರೆ ನಾನು ಫಡ್ಡಾ!"

"ಎಂತಹ ಮಾತು ಆಡ್ತೀರಾ ನೀವು? ಹತ್ತು ವರ್ಷಗಳಿಂದ ಸಂಬಳ ತೆಗೆದು ಕೊಳ್ಳುತ್ತಾ ಇದ್ದೇನೆ. ಈ ತರಹ ಯಾರು ಹೇಳಲಿಲ್ಲ!"

ಮುಖ ಸಿಂಡರಿಸಿ, ಕ್ಯಾಕರಿಸಿ ಉಗುಳುವ ಹಾಗೆ ನೋಡಿದಳು ಆಕೆ. ಕಸಗುಡಿಸಿ, ಸಾರಿಸಿ, ಶಿಸ್ತಾಗಿರಿಸುವ ಕೆಲಸ ಆಕೆಯದು, ಒಂದು ಲಾಯರ್ ಆಫೀಸ್‌ನಲ್ಲಿ. ಸಂಬಳ ಹಣದ ರೂಪದಲ್ಲಿ ಕೊಡುವ ಬದಲು, ಚೆಕ್ ಮುಖಾಂತರ ನೀಡುವ ಪರಿಪಾಠ ಇಟ್ಟುಕೊಂಡಿದ್ದ ಆ ವಕೀಲ! ಕೆಲಸ ಮಾಡದಿದ್ದರೂ ಸಂಬಳ ಸಿಗದಂತೆ ಮಾಡುವ ನಮ್ಮ ಬ್ಯಾಂಕಿನ ಗುಮಾಸ್ತ!

ಕಷ್ಟಪಟ್ಟು ದುಡಿಯುವ ಈಕೆಗೆ ಸಂಬಳ ಸಿಗದಿದ್ದರೆ ಊಟ ಸಿಗುವುದಿಲ್ಲ. ಯಾಕೆ ತೊಂದರೆ ಕೊಡುತ್ತೀರಾ ಈಕೆಗೆ?"

"ಈಕೆಗೆ ಊಟ ಸಿಗುವ ಹಾಗೆ ಮಾಡಲಿಕ್ಕೆ ಹೋಗಿ ನನಗೆ ಊಟ ಸಿಗದಿದ್ದರೆ?"

ಹೆಬ್ಬೆಟ್ಟು ಗುರುತಿಸಿ, ಇದು ಇಂತಹವರ ಹೆಬ್ಬೆಟ್ಟು ಎಂದು ನಮೂದಿಸಿ ತನ್ನ ಸಹಿ ಹಾಕಲಿಕ್ಕೆ ತಕರಾರು ಮಾಡುತ್ತಿದ್ದ ಈ ಗುಮಾಸ್ತನ ಮಸ್ತಿ ಕಂಡು, ಅವನ ಮೇಲೆ ಕುಸ್ತಿ ಆಡುವ ಹುಮ್ಮಸ್ಸು ಉಂಟಾಯಿತು!

ಚೆಕ್ ಹಿಂಬದಿಯಲ್ಲಿ ಆಕೆ ಹಾಕಿದ್ದ ಹೆಬ್ಬೆಟ್ಟಿನ ಕೆಳಗೆ ನಾನು ಸಹಿ ಹಾಕಿ, ಜೈನ್ ಗುಮಾಸ್ತನಿಗೆ ಚೆಕ್ ಪಾಸ್ ಮಾಡುವಂತೆ ಆದೇಶ ನೀಡಿ, ಅವರನ್ನು ಸಾಗು ಹಾಕಿದೆ. ಮನಸ್ಸು ಹುಳಿ ಹುಣಸೆಕಾಯಿ ತಿಂದ ಹಾಗೇ ಆಗಿತ್ತು. ಸಿಟ್ಟಿನಿಂದ ಹಲ್ಲುಗಳು ಹುಳಿ ಹಿಡಿದು ಕಟಕಟ ಕಡಿಯತೊಡಗಿದವು.

'ರಪ್' ಎಂದು ಜವಾನ ಆ ದಿನದ ತಪ್ಪಾಲನ್ನು ನನ್ನ ಮೇಲೆ ಬಿಸಾಡಿ ಹೋದ. "ಎಂತಹ ಪೊಗರು ಈ ಜಾಟ್‌ನಿಗೆ?" ಎಂದು ಮನದಲ್ಲೇ ಬೈದೆ. ಒಂದೊಂದಾಗಿ, ಲಕೋಟೆಗಳನ್ನು ಬಿಡಿಸಿ, ಓದತೊಡಗಿದೆ. ಹೆಡ್ ಆಫೀಸ್‌ನಿಂದ ಬಂದ ಒಂದು ಲಕೋಟೆಯಲ್ಲಿ ಅವರು ಏರ್ಪಡಿಸಿದ ಒಂದು ಸಮ್ಮೇಳನದಲ್ಲಿ ನನಗೆ ಭಾಗವಹಿಸಲು ಆಮಂತ್ರಣವಿತ್ತಿದ್ದರು. ಸಮ್ಮೇಳನದ ಉದ್ದೇಶ 'ಬ್ಯಾಂಕ್‌ನಲ್ಲಿ ಖರ್ಚು ಕಡಿಮೆ ಮಾಡಿ, ಆದಾಯ ಹೇಗೆ ಹೆಚ್ಚಿಸುವುದು?'

ಶಾಖೆಯ ಬಿಸಿ ವಾತಾವರಣದಿಂದ ಒಂದು ದಿನ ಮಟ್ಟಿಗೆ ತಪ್ಪಿಸಿಕೊಂಡು, ೫ ಸ್ಟಾರ್ ಹೋಟೆಲ್‌ನ ತಂಪಾದ ವಾತಾವರಣದಲ್ಲಿ ಉಂಡು ತಿಂದು ತೇಗಿ ಸ್ನೇಹಿತ ರೊಡನೆ ಮಾತಾಡಿ, ಅಧಿಕಾರಿಗಳಿಂದ, 'ಬ್ಯಾಂಕ್‌ನಲ್ಲಿ ಮಿತವ್ಯಯ ಹೇಗೆ ಸಾಧಿ ಸುವುದು?' ಎಂಬ ಬಗ್ಗೆ ಉದ್ದುದ್ದ ಭಾಷಣ ಕೇಳಿ, ಹಾಯಾಗಿ ಸಮಯ ವ್ಯರ್ಥ ಮಾಡುವುದಕ್ಕೆ ಆಹ್ವಾನಿಸಿದ್ದಕ್ಕೆ, ಬ್ಯಾಂಕ್ ಮೇನೇಜ್‌ಮೆಂಟ್‌ಗೆ ಮನಸ್ಸಿನಲ್ಲೇ ಅಡ್ಡಬಿದ್ದೆ.

ಸಿಬ್ಬಂದಿಗಳು ನನ್ನ ಮೇಲೆ ಆರೋಪಿಸಿ ಸಲ್ಲಿಸಿದ ಮನವಿ ಪತ್ರಕ್ಕೆ ಸೂಕ್ತ ಟಿಪ್ಪಣಿಗಳನ್ನು ಬರೆದು, ಅವರ ಎಲ್ಲಾ ಆರೋಪಗಳೂ ನಿರಾಧಾರವೆಂದೂ, ಆಧಾರ ವಿದ್ದಿದ್ದರೆ ಅವರು ನೀಡಲಿ, ಅದಕ್ಕೆ ತಕ್ಕ ಉತ್ತರ ಆಮೇಲೆ ನೀಡುತ್ತೇನೆ ಎಂದು ಬರೆದು ಹೆಡ್ ಆಫೀಸ್‌ಗೆ ರವಾನೆ ಮಾಡಿದೆ. ಅಷ್ಟರಲ್ಲಿ ಸಾಯಂಕಾಲ ೬ ಗಂಟೆ ಯಾಗಿತ್ತು. ಸಿಬ್ಬಂದಿಗಳೆಲ್ಲಾ ಹೊರಟುಹೋಗಿದ್ದರು. ಆಫೀಸರ್‌ಗಳು ಮಾತ್ರ ಎಂದಿ ನಂತೆ, ಸಿಬ್ಬಂದಿಗಳು ಬಾಕಿ ಕೆಲಸವನ್ನು ಮುಗಿಸುತ್ತಾ ಕುಳಿತಿದ್ದರು. ಸಿಬ್ಬಂದಿಗಳು ತಿಂದು ಉಂಡು ಬಿಸಾಡಿದ್ದ ಎಲೆ ಎತ್ತಿ ಗುಡಿಸಿ, ಸಾರಿಸುವ ಕೆಲಸವಾಗಿತ್ತು. ಈ ಗುಡಿಸಿ ಸಾರಿಸುವ ಕಾರ್ಯವನ್ನು ಅವರಿಂದಲೇ ಯಾಕೆ ಮಾಡಿಸಬಾರದು?

ಶಿಸ್ತಿನ ಕ್ರಮ ಜರುಗಿಸಿದಾಗಲೇ ಚಳುವಳಿಯ ಚಳಿಯಿಂದ ನಡುಗು ವಂತಾಗಿತ್ತು. ಚಳುವಳಿಯನ್ನು ಹತ್ತಿಕ್ಕಲು ಶಿಸ್ತನ್ನು ಕೈದು ಮಾಡಿದರೆ, ಅವರ ಮಸ್ತಿಯ ಬಿಸಿ ಜ್ವರದ ತಾಪದಿಂದ ನರಳಬೇಕಾಗುತ್ತಿತ್ತು. ಕೊಳ್ಳಿ ತೆಗೆದುಕೊಂಡು ತಲೆ ತುರಿಸಿಕೊಂಡ ಹಾಗೆ ಆಗಿತ್ತು ನನ್ನ ಸ್ಥಿತಿ!

ಶಿಸ್ತು, ಶ್ರದ್ಧೆಗಳನ್ನು ಕಂಡರೆ ಯಾಕಿಷ್ಟು ಕೋಪ ತಾಪ? ಕೊಟ್ಟ ಕೆಲಸ, ಶ್ರದ್ಧೆಯಿಂದ ಮಾಡಿ ಸಂಬಳ ಪಡೆದುಕೊಳ್ಳಲಿಕ್ಕೆ ಯಾಕಿಷ್ಟು ವಿರೋಧ? ಕೆಲಸ ಮಾಡಲಿಕ್ಕೆ ಮೊಂಡತನವೇತಕ್ಕೆ? ಮೇನೇಜ್‌ಮೆಂಟ್ ತಪ್ಪು ಮಾಡಿದರೆ, ತಮ್ಮ ವಿರೋಧವನ್ನು ಮೈಗಳ್ಳತನ, ಸೋಮಾರಿತನ, ಹಠಮಾರಿತನ, ನಿಷ್ಠುರತನ, ಉದ್ಧಟ ತನಗಳಿಂದ ತೋರಿಸಿ ಜೀವನವನ್ನು ಜುಗುಪ್ಸೆ, ಅಸಹ್ಯ ಹೇಸಿಗೆಗಳಿಂದ ತುಂಬಿಸಿ ಬಳಲುತ್ತಾ ಇದ್ದಾರಲ್ಲಾ! ಅವಿಧೇಯತೆ, ಆಜ್ಞೋಲ್ಲಂಘನೆಗಳ ಸರ್ಪಮಾಲೆ ಕತ್ತಿ ಗೇರಿಸಿ, ತಮ್ಮ ಜೀವಮಾನವಿಡೀ ಅಹಂಕಾರ, ಸಿಟ್ಟು, ಸೆಡವು, ಮದ, ದುರಹಂಕಾರ ದಿಂದ ನರಳುತ್ತಾ ಇದ್ದಾರಲ್ಲವೆ? ಈ ಮೊಂಡತನಕ್ಕೆ ಮದ್ದಿಲ್ಲವೇ? ಆದರೆ 'ಮೊಂಡ ನನ್ನು ಕೊಂದವರಿಲ್ಲ, ನಾಯಿಯನ್ನು ತಿಂದವರಿಲ್ಲ' ಎಂಬಂತೆ ಈ ಮೊಂಡರನ್ನು ಸರಿಪಡಿಸುವುದು ಹೇಗೆ? ಈ ಹಗೆತನ, ವಿರೋಧ ದೇಶದ ಶತಮಾನಗಳ ದಾಸ್ಯದ ವಿರುದ್ಧವೇ? ಇನ್ನೊಬ್ಬರ ಅಡಿಯಾಳಾಗಿ ಬದುಕದೇ, ಸ್ವತಂತ್ರ ಜೀವನ ನಡೆಸುವ ಪ್ರಯತ್ನದ ಸಂಭ್ರಮವೇ? ಅಥವಾ ಉತ್ತರ-ದಕ್ಷಿಣ ಭೇದ-ಭಾವದ ಪ್ರತೀಕವಾಗಿ, ದಕ್ಷಿಣ ಭಾರತೀಯರು ದಿಲ್ಲೀವಾಲರ ಮೇಲೆ ದಬ್ಬಾಳಿಕೆ ನಡೆಸುತ್ತಿದ್ದಾರೆಂಬ ಸಂಶಯವೇ? ದಕ್ಷಿಣದ ಭಾಷೆ, ಸಂಸ್ಕೃತಿ, ಶೈಲಿ, ರೀತಿ, ಧಾಟಿ, ಉತ್ತರ ದಿಕ್ಕಿಗೆ ಮಹಾಪೂರವಾಗಿ ಹರಿದು ಅದರಲ್ಲಿ ಕೊಚ್ಚಿ ಹೋಗುವರೆಂಬ ಭಯವೇ? ದಕ್ಷಿಣ ದವರ ಅಚ್ಚುಕಟ್ಟುತನ, ಶಿಸ್ತು, ಸಂಯಮ, ಬುದ್ಧಿಸೂಕ್ಷ್ಮತೆ, ವಿಚಾರಶೀಲತೆ, ವಿವೇಚನಾಶಕ್ತಿ, ಪರಿಜ್ಞಾನ, ದೂರದೃಷ್ಟಿ ಅವರಿಗೆ ಅಚ್ಚರಿಯ ಕಿಚ್ಚೆಬ್ಬಿಸಿ, ಹೊಟ್ಟೆ

ಕಿಚ್ಚಿನ ಮೊಟ್ಟೆ ಕೋಳಿಯಾಗಿದ್ದಾರೆಯಾ? ಅವರ ಮನಸ್ಸಿನ ಅಂತರಾಳದಲ್ಲಿ ಇದರ ಬಗ್ಗೆ ಗೌರವ ಏರ್ಪಟ್ಟಿದರೂ ಹೊರಗೆ ತೋರ್ಪಡಿಸಲಿಕ್ಕೆ ಬಿಗುಮಾನದ ಸೋಗು ಹಾಕಿ ಪ್ರಯಾಸ ಪಡುತ್ತಿದ್ದಾರೆಯೇ?

"ಜೈನ ಈ ದಿನದ ಕೆಲಸ ಮಾಡದೇ ಹಾಗೇ ಮನೆಗೆ ನಡೆದು ಬಿಟ್ಟಿದ್ದಾನೆ!"

ವರ್ಮಾ ನಗುತ್ತಾ ನೀಡಿದ ಕಂಪ್ಲೇಂಟ್!

"ಯಾಕಂತೆ?" ಗಾಬರಿಯಾಗದೆ, ನಗುತ್ತಾ ಇದ್ದಾನಲ್ಲಾ ಇವ!

"ಹೆಬ್ಬೆಟ್ಟಿಗೆ ಎಟೆಸ್ಟ್ ಮಾಡಲಿಕ್ಕೆ ನೀವು ಹೇಳಿದ್ದು ಅವನಿಗೆ ಬೇಸರವಾಗಿದ್ದಿರ ಬೇಕು!"

ಒಬ್ಬ ಅನಕ್ಷರಸ್ಥ ಹೆಂಗಸಿಗೆ ಸಹಾಯ ಮಾಡಲಿಕ್ಕೆ ಹೇಳಿದ್ದು, ಜೈನ್‌ನಿಗೆ ಅಸಹಕಾರ ಚಳುವಳಿ ಮಾಡಲಿಕ್ಕೆ ಪ್ರೇರೇಪಿಸಿತೆ? ಅವನ ಪ್ರಾಣಕ್ಕೆ ಅಥವಾ ಮಾನಕ್ಕೆ ಸಂಚಕಾರ ತಂದೊಡ್ಡಲಿಲ್ಲವಲ್ಲ! ಆ ಹೆಂಗಸಿಗೆ ತ್ರಾಸು ಕೊಟ್ಟು, ಮನಃಶಾಂತಿ ಕೆಡಿಸಿ, ಅವಳಿಂದ ಶಾಪ ಹಾಕಿಸಿ ಕೊಂಡಿದ್ದರ ಪರಿಣಾಮ, ಅಸಹಕಾರ ಚಳುವಳಿ! ಅವಳಿಗೆ ಸೂಕ್ತ ರೀತಿಯಲ್ಲಿ ಸೇವೆ ನೀಡದಿದ್ದರೂ ಪರವಾಗಿರಲಿಲ್ಲ. ಆದರೆ ಕೆಲಸವೇಕೆ ಬಾಕಿ ಇಟ್ಟ ಈ ಜೈನ್ ಮಹಾಶಯ? ನನ್ನ ವಿರುದ್ಧ ಕತ್ತಿ ಮಸೆಯಲಿಕ್ಕೆ, ನಾನಾದರೂ ಅವನಿಗೆ ಏನು ಮಾಡಿದೆ? ಹೆಬ್ಬೆಟ್ಟಿಗೆ ಅವನದೇ ಸಾಕ್ಷಿ ಬೇಕೆಂದು ಒತ್ತಾಯಿಸ ಲಿಲ್ಲವಲ್ಲ! ನಾನೇ ಸಾಕ್ಷಿ ಹಾಕಿ, ಆ ಹೆಂಗಸಿಗೆ ಹಣ ಕೊಡಿಸಿದ್ದೇ ತಪ್ಪಾಯಿತೇ? ಈ ಅಪರಾಧಕ್ಕೆ ಎಂತಹ ಕ್ರೂರ ಶಿಕ್ಷೆ ಜೈನ್‌ನಿಂದ ನನಗೆ? ಅವನು ಬಾಕಿ ಇಟ್ಟ ಕೆಲಸ ನಾನೇ ಮಾಡಬೇಕು!

"ಲೆಡ್ಜರ್ ತೆಗೆದುಕೊಂಡು ಬನ್ನಿರಿ. ಪೋಸ್ಟ್ ಮಾಡಿದ ಸ್ಲಿಪ್‌ಗಳನ್ನು ಚೆಕ್ ಮಾಡುತ್ತೇನೆ."

ವರ್ಮಾ ತಂದಿಟ್ಟ ಲೆಡ್ಜರ್‌ಗಳನ್ನು 'ಚೆಕ್ ಮಾಡಿ ಮುಗಿಸುವ ಹೊತ್ತಿಗೆ ಏಳು ಗಂಟೆ ಹೊಡೆದಿತ್ತು. ಗಡಿಯಾರದ ಗಂಟೆ ಬಾರಿಸುವ ಜೊತೆಗೆ ಟೆಲಿಫೋನ್ ಗಂಟೆಯೂ ಬಾರಿಸಿ, ತನ್ನ ಇರವನ್ನು ತೋರಿಸಿತು. ಆ ಕಡೆಯಿಂದ ಕಪೂರ್ ಮಾತಾಡುತ್ತಿದ್ದ. ಬಹಳ ದಿನಗಳಾಗಿತ್ತು ಅವನ ಧ್ವನಿ ಕೇಳದೇ.

"ಸರ್ದಾರ್ಜೀ ಬಂದಿದ್ದಾನೆ ನಿಮ್ಮನ್ನು ಭೇಟಿ ಮಾಡಬೇಕೆಂದು ಬಯಸಿದ್ದಾನೆ. ಎಲ್ಲಿ ಸಿಗುತ್ತೀರಿ?"

ಯೋಚಿಸಲಿಕ್ಕೆ ಸಮಯವಿಲ್ಲ.

"ಕನ್ನಾಟ್ ಪೇಸ್‌ನಲ್ಲಿನ ನಮ್ಮ ಪ್ರಧಾನ ಕಛೇರಿಯ ಬಳಿ ಆಗಬಹುದಾ?"

"ಆಗಬಹುದು! ತಕ್ಷಣ ಹೊರಡಿ!" ಎಂದು ಆದೇಶ ನೀಡಿದ ಕಪೂರ್.

ಲಗುಬಗೆಯಿಂದ ಕುರ್ಚಿಯಿಂದ ಎದ್ದು, ವರ್ಮನಿಗೆ ವಿದಾಯ ಹೇಳಿ, ಹೊರಟೆ. ಸರ್ದಾರ್ಜೀಯನ್ನು ನೋಡುವ, ಮಾತಾಡಿಸುವ ತವಕ ಎದೆಯ ತುಂಬ ಹರಡಿಕೊಂಡಿತ್ತು. ಆತಂಕವಾದಿಯಾದ ನಂತರ ಸರ್ದಾರ್ಜೀ ಹೇಗೆ ಕಾಣಿಸಿ ಕೊಳ್ಳುತ್ತಾನೆ? ಅವನಲ್ಲಿ ಯಾವ ತರಹದ ಬದಲಾವಣೆ ಕಾಣಬಹುದು? ನನ್ನನ್ನು ನೋಡುವ ತವಕ ಏಕೆ ವ್ಯಕ್ತಪಡಿಸಿದ್ದಾನೆ? ನನ್ನ ಬಗ್ಗೆ ಭರವಸೆ ಇಟ್ಟಿರುವ ಹಾಗೆ ತೋರುತ್ತದೆಯಲ್ಲವೇ? ಭರವಸೆಯೋ? ಪ್ರೀತಿಯೋ? ವಿಶ್ವಾಸವೋ? ಮನದಲ್ಲಿ ಪ್ರಶ್ನೆಗಳು ಗೂಡು ಕಟ್ಟಲು ಶುರುಮಾಡಿದ್ದವು.

ಕನ್ನಾಟ್ ಪ್ಲೇಸ್‌ಗೆ ತಲುಪಬೇಕಾದರೆ, ಆಟೋರಿಕ್ಷಾ ಹಿಡಿಯುವುದೇ ಸುಲಭ ಉಪಾಯ. ಅದು ಬಿಟ್ಟರೆ, ಸೈಕಲ್‌ರಿಕ್ಷಾ. ಆದರೆ ಕೇವಲ ಒಂದು ರೂಪಾಯಿಗೆ ಎರಡು ಕಿಲೋಮೀಟರ್ ದೂರ ಪೆಡಲ್ ಮಾಡುವ ಈ ಸೈಕಲ್ ರಿಕ್ಷಾವಾಲರನ್ನು ಕಂಡಾಗ, ದೇಶದ ಕಡುಬಡತನದ ಬಗ್ಗೆ ಕನಿಕರದ ಜೊತೆಗೆ ಸಿಟ್ಟೂ ನೆತ್ತಿಗೇರಿ, ನನ್ನ ಹತಾಶತನಕ್ಕೆ ನನ್ನನ್ನೇ ಹಳಿಯತೊಡಗುವಂತಾಗುತ್ತಿತ್ತು. ಮೊಘಲ್ ಸಾಮಂತರನ್ನು ಹೊತ್ತು ಸುಸ್ತಾಗಿ ಪಳೆಯುಳಿಕೆಯಾತಿದ್ದ ಗಾಡಿಯನ್ನು ಎಳೆದು ನಮ್ಮನ್ನು ಹೊರಲಾರದೆ ಹೊತ್ತು, ನೂಕುನುಗ್ಗಲಿನ ರಸ್ತೆಯಲ್ಲಿಯ ಅವ್ಯವಸ್ಥೆಯ ಅಶಿಸ್ತಿನ ಅತೃಪ್ತಿಯ ಜನಜಂಗುಳಿಗಳ ಮಧ್ಯೆ ಜಾಗ ಸೀಳಿಕೊಂಡು, ಮುನ್ನುಗ್ಗಿ ಸಾಗಲಾರದೇ ಸಾಗುವ ಟಾಂಗಾ ಕುದುರೆಯನ್ನು ನೋಡಿದರೆ ಬೇಸರವಾಗುತ್ತಿತ್ತು ಅದರ ಮೂಕ ಬವಣೆಯನ್ನು! ಕೇವಲ ನಾಲ್ಕು ಜನರನ್ನು ಹೊರುವ ಈ ಕುದುರೆ ಎಂಟು ಜನರನ್ನು ಹೊತ್ತು, ತನ್ನ ಯಜಮಾನನಿಗೆ ಹನ್ನೆರಡು ರೂಪಾಯಿ ಬಾಡಿಗೆ ದುಡಿದು, ಅದರಲ್ಲಿ ಕಾಲು ಭಾಗದಷ್ಟೂ ತನ್ನ ಹೊಟ್ಟೆಗೆ ಹಾಕದ ಅವನ ಕೃಪಣತನಕ್ಕೆ ಕಣ್ಣೀರು ಹಾಕುವ ದೃಶ್ಯ ನೋಡುವವರ ಕಣ್ಣಿನಲ್ಲಿ ನೀರು ಬರಿಸುವಂತಹದು.

ಟಾಂಗಾದಿಂದ ಇಳಿದು, ಕನ್ನಾಟ್ ಪ್ಲೇಸ್‌ನ ದಕ್ಷಿಣಕ್ಕಿರುವ ಪಾರ್ಲಿಮೆಂಟ್ ರಸ್ತೆಯಲ್ಲಿರುವ ನಮ್ಮ ಕೇಂದ್ರ ಕಛೇರಿಗೆ ಹೋಗಲು, ಚಕ್ರವ್ಯೂಹಾಕಾರದ ಈ ಮಳಿಗೆಗಳನ್ನು ಸುತ್ತುವರೆದ ರಸ್ತೆಗುಂಟ ನಡೆಯದೆ, ಮಧ್ಯದಲ್ಲಿರುವ ವಿಶಾಲ ಉದ್ಯಾನವನ-ಹುಲ್ಲುಗಾವಲು-ಪಾಲಿಕಾ ಬಜಾರ್‌ಗಳನ್ನು ದಾಟಿ, ನಡೆದೆ. ರಾಜಧಾನಿ ದಿಲ್ಲೀಯನ್ನು, ಮೊಘಲರು ತಮ್ಮ ಕೋಟೆ ಕೊತ್ತಲ, ಗೋರಿಗಳಿಂದ ಸಿಂಗರಿ ಸಿದ್ದಾರೆ. ಇಂಗ್ಲಿಷ್‌ರು ಬಜಾರ್, ಮಳಿಗೆಗಳ ಸಾಲು, ಬೃಹತ್ ಸೌಧಗಳಿಂದ ಸಿಂಗರಿಸಿ, ತಮ್ಮ ಸಾರ್ವಭೌಮತ್ವಕ್ಕೆ ನಾಂದಿ ಹಾಡಿದ್ದರು. ಕರ್ನಾಟ್ ಪ್ಲೇಸ್‌ನ ಚಕ್ರವ್ಯೂಹದಲ್ಲಿ ಓಡಾಡಿ, ನೂರಾರು ಮಳಿಗೆಗಳಲ್ಲಿ ಮಾರಲಿಕ್ಕೆಂದು ಇಟ್ಟ ವಸ್ತುಗಳ ಪ್ರದರ್ಶನದ ನೋಟವನ್ನು ಸವಿಯುವುದರಲ್ಲಿ ಒಂದು ಅಪೂರ್ವ ಅನುಭವ. ಇಲ್ಲಿ,

ಚಾಂದನೀ ಚೌಕ್, ಅಜಮಲ್ ಖಾನ್ ರಸ್ತೆಗಳಲ್ಲಿ ಕಾಣುವ ಜನಜಂಗುಳಿ, ಗಂಟಲು ಬೀರಿ ಚೀರಾಡುವ ರಸ್ತೆ ಬದಿ ವ್ಯಾಪಾರಸ್ಥರಾಗಲೀ, ಎಲ್ಲೆಲ್ಲೂ ಬಿಸಾಡಿದ, ಉರಳಾಡುವ, ಹೊರಳಾಡುವ ಹೊಲಸು ವಾಸನೆ ಬೀರುವ ಕಚಡಾ ವಸ್ತುಗಳಾಗಲೀ, ಕಾಣ ಬರುವುದಿಲ್ಲ. ವಿದೇಶೀ ಯಾತ್ರಿಕರು ಹೆಚ್ಚಾಗಿ ಕಂಡು ಬರುವ ಈ ಚಕ್ರವ್ಯೂಹದಲ್ಲಿ ಬೆಲೆಯ ವಿಷಯದಲ್ಲಿ ಚೌಕಾಸೀ ಮಾಡದೆ, ಕೇಳಿದಷ್ಟು ಹಣ ತೆತ್ತು, ನಲಿಯುತ್ತಾ ಹಾರಾಡುತ್ತಾ ಸಾಗುವ ವಿದೇಶೀಯರನ್ನು ನೋಡುವ ಸೌಭಾಗ್ಯ ಕಂಡು, ಕರುಬಿ ಮೂಲೆಯಲ್ಲಿ ಹಸೀ ಮೂಲಂಗಿಯನ್ನು ಮಾರುವ ಹೆಂಗಸಿನೊಂದಿಗೆ ಅರ್ಧ ಗಂಟೆ ಚರ್ಚಿಸಿ, ಒಂದು ರೂಪಾಯಿ ಮೂಲಂಗಿ ಕೊಂಡು ಹೋಗುವ ದಿಲ್ಲೀವಾಲರನ್ನು ಕಾಣಬಹುದು!

ಕೇಂದ್ರ ಕಛೇರಿಯ ಮುಂದೆ ನಿಂತ ಕಪೂರ್‌ನನ್ನು ದೂರದಲ್ಲೇ ನೋಡಿ ನಗುತ್ತಾ ಅವನ ಬಳಿ ಸಾಗಿದೆ. ಅವನ ಬಳಿ ಯಾರೋ ಆಗುಂತಕ ಮಾತನಾಡುತ್ತಾ ನಿಂತಿದ್ದ.

"ಬಹಳ ಸಮಯವಾಯಿತೇ ಬಂದು?" ಕೇಳಿದೆ.

"ಇಲ್ಲ. ಈಗ ಬಂದೆವು!"

"ಸರ್ದಾರ್ಜೀ ಬರಲಿಲ್ಲವೇ?"

ಸರ್ದಾರ್ಜೀ ಬರದೇ ಇದ್ದುದು ನನಗೆ ನಿರಾಶೆಯಾಗಿತ್ತು. ಅವನನ್ನು ಕಾಣಲೆಂದೇ ಕಾತುರ; ಆತುರದಿಂದ ಬಂದ ನನಗೆ, ಬೇಸರವಾಗಿತ್ತು.

"ಇಗೋ! ಇಲ್ಲೇ ಇದ್ದಾನಲ್ಲಾ ನಿಮ್ಮ ಸರ್ದಾರ್ಜೀ!"

ಪಕ್ಕದಲ್ಲಿ ನಿಂತಿದ್ದ ವ್ಯಕ್ತಿಯ ಕಡೆ ಕೈ ತೋರಿ ಹೇಳಿದ ಕಪೂರ್!

ಆಶ್ಚರ್ಯದ ಜೊತೆಗೆ ಸಂತೋಷವು ಆಗಿತ್ತು ನನಗೆ!

ತಲೆಯಲ್ಲಿ ಸರ್ದಾರ್ಜೀ ಪೇಟ ಇಲ್ಲ! ತಲೆಗೂದಲು ತೆಗೆದು, ನೀಟಾಗಿ ಕ್ರಾಪ್ ಬಿಟ್ಟಿದ್ದಾನೆ ಸರ್ದಾರ್ಜೀ! ಹುಲುಸಾಗಿ ಬೆಳೆದಿದ್ದ ಗಡ್ಡ ಮಾಯವಾಗಿ, ಎಳೇ ಕನ್ಯೆಯ ಕೆನ್ನೆಯಾಗಿ ಕೆಂಪು ಮಿಶ್ರಿತ ಬಿಳೀ ಬಣ್ಣದ ಹಾಲುಗೆನ್ನೆಯನ್ನು ತೋರಿಸುತ್ತಾ ಹುಸುನಗುತ್ತಾ ನಿಂತಿದ್ದ ಸರ್ದಾರ್ಜೀ!

ಸಫಾರಿ ಸೂಟ್ ಹಾಕಿ ಜಬರ್ದಾಗಿ ನಿಂತಿದ್ದ ಇವನನ್ನು ನೋಡಿದರೆ, ಯಾರದೋ ಲಗ್ನದ ರಿಸೆಪ್ಷನ್‌ಗೆ ಹೊರಡಲು ಅನುವಾಗಿದ್ದಾನೆಂದು ಅರಿಯ ಬಹುದಾಗಿತ್ತು.

ಅವನ ಹತ್ತಿರ ಸಾಗಿ, ಅವನ ಎರಡು ಕೈ ಹಿಡಿದು ಬರಸೆಳೆದು ಎದೆಗೆ ಆನಿಸಿ ಕೊಂಡೆ. ಅವನನ್ನು ನೋಡಿ ನಿಜವಾಗಿಯೂ ಆನಂದವಾಗಿತ್ತು. ಅವನು ಧಾರಾಳವಾಗಿ

ಬಳಸಿದ್ದ ಸೆಂಟಿನ ಸುವಾಸನೆ ನನ್ನ ಮೂಗಿಗೆ ಬಡಿದಾಗ, ಅವನಿಂದ ಬಿಡಿಸಿಕೊಂಡು ಕೇಳಿದೆ:

"ಹೇಗಿದ್ದೀರಿ?"

"ನೀವೇ ಹೇಳಿ?" ನಗು ಮಾಸಿರಲಿಲ್ಲ ಅವನ ಮುಖದಲ್ಲಿ. ಚಹರೇ ಬದಲಿದ್ದರೂ ಧ್ವನಿ ಬದಲಾಗಿರಲಿಲ್ಲ. ಅವನ ಮುಖ ಆರೋಗ್ಯವಂತಿಕೆಯನ್ನು ಢಂಗೂರ ಬಡಿದು ಸಾರಿ ಹೇಳುತ್ತಿತ್ತು.

"ಇದೇನು ಅವತಾರ?"

"ರಸ್ತೆಯಲ್ಲಿ ನಿಂತು ವಿವರಿಸುವ, ಚರ್ಚಿಸುವ ವಿಷಯವಲ್ಲ ಇದು! ಬನ್ನಿ ಹೋಗುವ!" ಕೈ ಹಿಡಿದು ಎಳೆದುಕೊಂಡು ಹೋದ.

ಆತಂಕವಾದಿಗಳಿಗೆ ದುಗುಡ, ಆತಂಕ, ಆವೇಶವಿರುವುದಿಲ್ಲವೇ? ಇವನೆಂತಹ ಆತಂಕವಾದಿ? ಮದುವೆ ಮನೆಗೆ ಹೋಗುವ ನೆಂಟನಂತಿದ್ದಾನಲ್ಲಾ! ಸೋಜಿಗದ ಸೆರೆಯಲ್ಲಿ ಸಿಕ್ಕಿಹಾಕಿಕೊಂಡಿತ್ತು ನನ್ನ ಮನಸ್ಸು.

ಹತ್ತಿರದಲ್ಲೇ ಇದ್ದ ಒಂದು ಚಾ ಹೋಟೆಲ್‌ಗೆ ಹೋಗಿ ಚಾ ಕುಡಿಯತೊಡಗಿದೆವು.

"ನಿಮ್ಮ ಕತೆ ಶುರು ಮಾಡಿರಲ್ಲ?" ಎಂದೆ.

"ಶ್ಶ್ಯ....." ಎಂದು ತುಟಿಗೆ ಬೆರಳಿಟ್ಟು, ನನ್ನ ತುಟಿ ಬಂದು ಮಾಡಿದ!

ವಿಷಯ ಗೂಢವಾಗಿದೆ! ಚಾ ಹೋಟೆಲ್‌ನಲ್ಲಿ ಚರ್ಚಿಸುವಂತಹುದಲ್ಲ. ಮಾತನಾಡದೆ, ಚಾ ಹೀರತೊಡಗಿದೆ. ಆದರೆ, ಮನಸ್ಸು ಮಾತ್ರ ಎಲ್ಲೆಲ್ಲೋ ಓಡತೊಡಗಿತ್ತು. ಈತ ಬರೀ ಆತಂಕವಾದಿಯಷ್ಟೇ ಅಲ್ಲ, ಭಯಂಕರ ಭಯೋತ್ಪಾದಕನೂ ಆಗಿದ್ದಿರಬೇಕು. ಈತನ ಸಂಗಡ ಸಮಯ ಕಳೆದಿದ್ದು ಸಂಬಂಧಪಟ್ಟ ಅಧಿಕಾರಿಗಳಿಗೆ ಅರಿವಾದರೆ ನನ್ನ ಗತಿ ಏನು? ಪುಕ್ಕಲುತನ ನಿಧಾನವಾಗಿ ನನ್ನ ಮನಸ್ಸಿನಲ್ಲಿ ಹೊಕ್ಕಿ ಮನೆ ಮಾಡತೊಡಗಿತ್ತು. ಛೆ! ಈ ಸರ್ದಾರ್ಜೀ ಮುಂದೆ ನನ್ನ ಪುಕ್ಕುಲುತನ ತೋರಿಕೊಂಡರೆ, ನನ್ನ ಮರ್ಯಾದೆ ಮೂರು ಕಾಸಾಗುತ್ತದೆ. ಮತ್ತೆ ಆತನಿಗೆ ನಮ್ಮ ಬಗ್ಗೆ ಇರುವ ಭಾವನೆಗಳಿಗೆ ಪುಷ್ಟಿ ಇಟ್ಟಂತೆ ಆಗುತ್ತದೆ. ನಾವು ಪುಕ್ಕಲರು ಎಂದು ಅವನಿಗೆ ರುಜುವಾತು ಮಾಡಿಕೊಡುವುದೇ? ಆತಂಕವಾದಿ, ಭಯೋತ್ಪಾದಕನಾಗುವುದರಲೀ, ಅವುಗಳ ಬಿರುದು ಪಡೆಯುವುದಿರಲಿ, ಆ ಹೆಸರನ್ನು ಕೇಳಿದರೆ ನಡುಗುವ ಸ್ಥಿತಿಯಲ್ಲಿದ್ದೆ ನಾನು.

ಚಾ ಹೀರಿ ಮೂವರೂ ಹೊರಗೆ ಬಂದು ಎದುರಿಗೆ ಇರುವ ಪಾರ್ಕ್ ಒಳಗೆ ಹೆಜ್ಜೆ ಹಾಕಿದೆವು. ಆಗಲೇ ಕತ್ತಲಾಗಿ, ಜನರೆಲ್ಲಾ ಪಾರ್ಕ್‌ನ್ನು ಖಾಲಿ ಮಾಡತೊಡ

ಗಿದ್ದರು. ಸುತ್ತಲೂ ಕಣ್ಣೋಡಿಸುತ್ತಾ ಸಮೀಪದ ಒಂದು ಮರದ ಬುಡದ ಬಳಿ ಬಂದು ಸೇರಿ ಅಲ್ಲೇ ಕುಳಿತೆವು.

"ಈಗ ಹೇಳಿ ನಿಮ್ಮ ಕಥೆ!"

"ಇವನ ಕಥೆ ಮುಗಿಯದ ಕಥೆ! ಬದುಕ್ಕಿ ಬಂದಿದ್ದೇ ಒಂದು ದೊಡ್ಡ ಕಥೆ. ಸತ್ತಿದ್ದರೆ ಒಂದೇ ಪದದಲ್ಲಿ ಮುಗಿಸಬಹುದಾಗಿತ್ತು ಇವನ ಕಥೆ"

ಕಪೂರ್‌ನ ಮಾತು ಕೇಳಿ ಸರ್ದಾರ್ಜೀಗೆ ಕೋಪ ಬಂದು, ವಾಗ್ವಾದ ಶುರುವಾಗುವ ಶಂಕೆಪಟ್ಟ ನಾನು, ಅವನ ಮುಖವನ್ನೇ ದಿಟ್ಟಿಸಿ ನೋಡಿದೆ. ಆದರೆ, ಸರ್ದಾರ್ಜೀ ಕಪೂರ್‌ನ ಮಾತಿಗೆ ಬೆಲೆ ಕೊಡದೆ ಸುಮ್ಮನಿದ್ದ. ಅವನ ಮನಸ್ಸಿನಲ್ಲಿ ಏನು ನಡೆದಿದೆ ಎಂದು ತಿಳಿಯಲು ಸಾಧ್ಯವಿಲ್ಲದಾಗಿತ್ತು. ಗಂಟೆ ಎಂಟು ಹೊಡೆದು, ದಿಲ್ಲೀಯ ರಾತ್ರಿ ಜೀವನ ಶುರುವಾಗಿತ್ತು. ಮಳಿಗೆಗಳಿಂದ ವಿದ್ಯುತ್ ಬೆಳಕು ಝಳಝಳಿಸುತ್ತಿದ್ದವು. ಒಂದರ ಹಿಂದೆ ಒಂದರಂತೆ ಕಾರು, ಬಸ್, ಸ್ಕೂಟರ್ ಗಳ ಓಡಾಟ ನಿಂತಿರಲಿಲ್ಲ. ಅವಗಳಿಂದ ಹೊಮ್ಮಿದ ಬೆಳಕು, ನಮ್ಮ ಮೈಮೇಲೆಲ್ಲಾ ಹರಿದು, ಬೆಳಕಿನ ಸ್ನಾನವಾಗತೊಡಗಿತ್ತು. ರಸ್ತೆಕಡೆ ಕಣ್ಣು ಹಾಯಿಸಿದಾಗಲೆಲ್ಲಾ, ಬೆಳಕಿನ ಕಿರಣಗಳು, ಸೂಜಿಯಂತೆ ಚುಚ್ಚಿ ಕಣ್ಣು ಮುಚ್ಚುವಂತೆ ಮಾಡಿ, ತಮ್ಮ ಬಲವನ್ನು ತೋರ್ಪಡಿಸಿ, ಸರಕ್ಕನೆ ಮರೆಯಾಗುತ್ತಿದ್ದವು. ಅವುಗಳ ಹೊಡೆತವನ್ನು ತಡೆಯಲಾರದೆ ಕತ್ತನ್ನು ತಿರುಗಿಸಿ ಎದುರಿಗೆ ಕುಳಿತ ಸರ್ದಾರ್ಜೀಯ ಮುಖ ನೋಡತೊಡಗಿದೆ. ಸರ್ದಾರ್ಜೀಯ ಕಣ್ಣುಗಳಿಗೆ, ಬೆಳಕಿನ ರಶ್ಮಿಗಳ ತೀಕ್ಷ್ಣತೆ ಯಾವ ತರಹದ ಕೇಡು ಉಂಟಾಗುವುದಿಲ್ಲವೇ? ಅವನ ಕಣ್ಣಿನ ತೀಕ್ಷ್ಣತೆ, ಕಾರು ಬೆಳಕಿನ ತೀಕ್ಷ್ಣತೆಯನ್ನು ತಡೆಯಬಲ್ಲವದಾಗಿದೆಯಾ? ಅವನ ಸುಂದರ ಮುಖದಲ್ಲಿ ಉತ್ಕಾಂಶೆ, ಘನಗಂಭೀರ ಕೆಚ್ಚೆದೆಯ ವಿಶ್ವಾಸಗಳ ಕಳೆ ಹರಡಿ, ಮಹತ್ಕಾರ್ಯ ಸಾಧಿಸಿದ ಚಹರೆ ಎದ್ದು ಕಾಣುತ್ತಿತ್ತು. ಸೀಖ್‌ರ ಸ್ವಭಾವತಃ ಗುಣಗಳಾದ ದಿಟ್ಟತನ, ಸಾವಿಗಂಜದೆಯ ಮೊಂಡು ಧೈರ್ಯ ಇವನಲ್ಲಿ ಕಾಣಬಹುದಾಗಿತ್ತು.

"ಈ ರಾತ್ರಿ ನಾನು ಅಮೃತಸರಕ್ಕೆ ಹೋಗಬೇಕು!"

ಸರ್ದಾರ್ಜೀ ಬಾಯಿ ಬಿಟ್ಟಿದ್ದ. ಆದರೆ ಅವನು ತನ್ನ ಕಥೆ ಹೇಳುವುದನ್ನು ಬಿಟ್ಟು, ಅಮೃತಸರಕ್ಕೆ ಹೋಗುವ ಮಾತನ್ನು ಆಡುತ್ತಾ ಇದ್ದಾನಲ್ಲಾ!

"ಇಷ್ಟು ಬೇಗ?" ಆತಂಕವೂ ಆಗಿತ್ತು ನನಗೆ. ಅಮೃತಸರದಲ್ಲಿ ಬಿಂದ್ರನ್ ವಾಲೆಯ ಹಾವಳಿ ಹೋಳಿಯಾಟದ ಹಾಗೆ ಜರುಗುತ್ತಿತ್ತು. ಭಯೋತ್ಪಾದಕರ ದೆಸೆಯಿಂದ ಪಂಜಾಬಿನಲ್ಲಿ ಆತಂಕ ಉತ್ಪತ್ತಿಯಾಗಿ, ಸುತ್ತಮುತ್ತ ಪ್ರದೇಶಗಳಲ್ಲಿ ಅದರ ಬಿಸಿ ಮುಟ್ಟತೊಡಗಿತ್ತು. ಅಸಹಾಯಕರಷ್ಟೇ ಅಲ್ಲ, ಬಲಿಷ್ಟ, ಜನರ ಪ್ರಾಣ

ಹಾನಿಯಿಂದಾಗಿ, ಮನೆ ಮನೆಗಳಲ್ಲಿ, ರಸ್ತೆರಸ್ತೆಗಳಲ್ಲಿ, ಹಾಡಹಗಲಿನಲ್ಲೇ ರಕ್ತದ ಓಕುಳಿ ಚೆಲ್ಲಾಡಿ, ಜನರು ಮುಂಬರುವ ಆಪತ್ತಿಗೆ ಮೈ-ಬಾಯಿ ಕಾದಿಟ್ಟು ಕುಳಿತಿದ್ದರು.

"ನಾನು ಗಡ್ಡ ತೆಗೆದು ಹಾಕಿದ್ದು ಯಾಕೆ ಎಂದು ನೀವು ಕೇಳಲಿಲ್ಲ?"

ಭಯೋತ್ಪಾದಕನಾದ ಮೇಲೆ ಗಡ್ಡ ತೆಗೆಯದೇ ಹೋದರೆ, ಅವನ ಜೀವವನ್ನು ತೆಗೆಯುವುದು ಖಂಡಿತ! ಈ ವಿಷಯದಲ್ಲಿ ಯಾವ ಗೂಢವಿದೆ?

"ಅವರಿಗೆ ನಿನ್ನ ಕಥೆ ಬೇಕು; ನಿನ್ನ ಗಡ್ಡದ ಕಥೆಯಲ್ಲ!" ಕಪೂರ್ ನಗಾಡಿದ.

ಗಡ್ಡ ತೆಗೆದು, ಗುಡ್ಡ ಬೆಟ್ಟ ಹತ್ತಿ, ನೆರೆ ಬಂದ ಹೊಳೆ ಹಾಯ್ದು ಹೊಟ್ಟೆ ಬಟ್ಟೆ ಕಟ್ಟಿ, ಕಾಯಿಲೆ ಕಸಾಲೆ ನರಳಿ, ಪೊಲೀಸ್‌ರ ಕೈಲಿ ಸಿಕ್ಕಿ, ಅವರ ಕೈಯಿಂದ ಮರಣ ಯಾತನೆ ಅನುಭವಿಸಿ, ಬದುಕಿ ಉಳಿದು ಬಂದನೆ?ತಾನು ಪಟ್ಟ ಕಷ್ಟಪಾಡು ಗಳನ್ನು, ಜೀವದ ಹಂಗುತೊರೆದು ಹೊಡೆದಾಡಿದ ಅನುಭವಗಳ ಕಥನಗಳನ್ನು ಹೇಳುವ ಉತ್ಸುಕತೆ ತೋರದೆ ಅಮೃತಸರಕ್ಕೆ ಪ್ರವಾಸ ಹೊರಡುವ ಠೀವಿಯಲ್ಲಿ ಕುಳಿತಿದ್ದಾನಲ್ಲಾ ಈ ಸರ್ದಾರ್ಜೀ!

"ಸೂಟ್‌ಕೇಸ್‌ನಲ್ಲಿ ಬಾಂಬ್ ಇಟ್ಟು ಬಸ್ ಉಡಾಯಿಸಿದೆಯಾ?"

ಬಸ್ ಸ್ಫೋಟದ ನನ್ನ ಅನುಭವ ನೆನಪಾಯಿತು ನನಗೆ.

"ಇನ್ನೂ ಅಂತಹ ಕೆಲಸಕ್ಕೆ ನನ್ನನ್ನು ಉಪಯೋಗಿಸಿಕೊಂಡಿಲ್ಲ. ಲೆಕ್ಕಪತ್ರ ಬರೆಯುವುದು ಇತ್ಯಾದಿ ಮಾಡುತ್ತಲಿದ್ದೇನೆ."

"ಆ ಕೆಲಸ ಇಲ್ಲೇ ಮಾಡಬಹುದಾಗಿತ್ತಲ್ಲ! ಚಾಕ್‌ಲೇಟ್ ಕಂಪನಿ ಕೆಲಸ ಚೆನ್ನಾಗಿಯೇ ಇತ್ತಲ್ಲಾ?"

"ನನ್ನ ಗುರಿ ಸಾಧಿಸಲಿಕ್ಕೆ ಇದು ಮೊದಲ ಹೆಜ್ಜೆ. ಹೆಜ್ಜೆಹೆಜ್ಜೆ ಇಟ್ಟು ಮೇಲೇರ ಬೇಕಾದದ್ದು ನನ್ನ ಧರ್ಮ!"

"ನಿನ್ನ ಗುರಿ ಏನು?"

"ನಿಮಗೆ ತಿಳಿದಿದ್ದೂ ನನಗೆ ಈ ಪ್ರಶ್ನೆ ಹಾಕುವುದರಲ್ಲಿ ಯಾವ ಅರ್ಥವೂ ಇಲ್ಲ!"

ಅವನ ಧ್ವನಿಯಲ್ಲಿ ಸ್ವಲ್ಪ ಖಾರ ತುಂಬಿತ್ತು. ಈ ಭಯೋತ್ಪಾದಕರೆಲ್ಲಾ ತಮ್ಮ ಧ್ಯೇಯದ ಪೂರೈಕೆಗೆ, ತಾವು ತೆಗೆದುಕೊಂಡಿರುವ ಆಣೆಯ ಹೊಣೆಗೆ ತಮ್ಮ ಹೊಣೆಗಾರಿಕೆಯ ಕಾರ್ಯಕ್ಕೆ ಕರ್ತವ್ಯನಿಷ್ಠೆ ಇಟ್ಟಿರುವುದು ನನಗೆ ಅರಿವಿತ್ತು. ಆತಂಕ ವಾದಿಯಾಗಲು ಮೈ ಮನಸ್ಸು ತನ್ನ ಜೀವನವನ್ನು ಮುಡಿಪಿಟ್ಟ ಈ ಸರ್ದಾರ್ಜೀ ಆತಂಕವಾದ ವೃತ್ತಿಗೆ ರಹಸ್ಯವೇ ಜೀವಾಳವಾಗಿರಬೇಕಾದಾಗ ತನ್ನ ಗುಟ್ಟಿನ ಜೀವನ ವನ್ನು ನನಗೆ ಮುಚ್ಚುಮರೆಯಿಲ್ಲದೆ ಹೇಳಿಯಾನೆಯೆ? ಹಾಗೆ ಹೇಳಲು ಹೊರಟರೆ

ತನ್ನ ವೃತ್ತಿಗೆ ದ್ರೋಹ ಬಗೆಯುವಂತಾಗುವುದಿಲ್ಲವೇ? ದ್ರೋಹದ ಮಾತಿರಲಿ, ತನ್ನ ಜೀವಕ್ಕೆ ಸಂಚಕಾರ ತಂದೊಡ್ಡುವಂತಾಗುವುದಿಲ್ಲವೇ? ಅವನಿಗೆ ಅವಮಾನಕರವಾದ ಬೇಜವಾಬ್ದಾರಿ ಪ್ರಶ್ನೆಗಳನ್ನು ಹಾಕಿ ಅವನ ಮನಸ್ಸನ್ನು ನೋಯಿಸಿದರೆ ಏನು ಪ್ರಯೋಜನ?

"ನನಗೆ ತಿಳಿದ ಹಾಗೆ, ನಿಮ್ಮ ಗುರಿ ಖಾಲೀಸ್ಥಾನ ಸ್ಥಾಪಿಸುವುದು ಅಲ್ಲವೇ?"

"ಖಾಲೀಸ್ಥಾನ ಸ್ಥಾಪಿಸುವುದಕ್ಕೆ ಹೋಗಿ, ತಲೆ, ಜೇಬು, ಮನೆ, ಮಠ ಎಲ್ಲಾ ಖಾಲೀ ಮಾಡಿಕೊಳ್ಳುತ್ತಾರೆ ಇವರು ಅಷ್ಟೆ!"

ಹಗುರವಾಗಿ ಮಾತನಾಡಿದ ಕಪೂರ್‌ನ ಮಾತಿಗೆ, ಸರ್ದಾರ್ಜೀ ಉರಿದು ಬಿದ್ದ.

"ನಿನ್ನ ತಲೆ ಒಡೆದು ಹೂತು ಬಿಡುತ್ತೇನೆ!"

ಅವನ ಗಡಸು ಧ್ವನಿಗೆ ನಾನು ಬೆಚ್ಚಿಬಿದ್ದೆ. ಸರ್ದಾರ್ಜೀಗೆ ದಿಟವಾಗಲೂ ಕೋಪ ಬಂದಿತ್ತು. ಈ ಕಪೂರ್‌ನಾದರೂ ಏಕೆ ಈ ಸೂಕ್ಷ್ಮ ವಿಷಯವನ್ನು ಇಷ್ಟು ಹಗುರವಾಗಿ ತೆಗೆದುಕೊಳ್ಳಬೇಕು? ಕಪೂರ್‌ನ ಬಗ್ಗೆ ಬೇಸರವಾಗಿ, ಮನಸ್ಸಿನಲ್ಲೇ ಅವನಿಗೆ ಹಿಡಿಶಾಪ ಹಾಕಿದೆ.

"ನನ್ನ ತಲೆ ಒಡೆದರೆ ನಿನಗೆ ಖಾಲೀಸ್ಥಾನ ಸಿಗುತ್ತದೆಯಾ? ಸಿಗುವುದಾದರೆ ಒಡೆದುಬಿಡು!"

ಕಪೂರ್‌ಸ್ವಲ್ಪವೂ ವಿಚಲತನಾಗದೇ, ಉತ್ತರವಿತ್ತ.

"ನಿನ್ನ ತಲೆ ಮಾತ್ರವಲ್ಲ, ನಿನ್ನಂತಹ ಸಾವಿರಾರು ತಲೆಗಳನ್ನು ಒಡದೇ ಖಾಲೀಸ್ಥಾನ ಸ್ಥಾಪಿಸುತ್ತೇವೆ."

ವಿಷಯ ಯಾಕೋ ಗಂಭೀರವಾಗಿ, ವಾತಾವರಣ ಬಿಸಿಯಾಗತೊಡಗಿತ್ತು. ಇವರಿಬ್ಬರ ಮಧ್ಯ ನಾನು ಸಿಕ್ಕಿಹಾಕಿಕೊಂಡು ಒದ್ದಾಡುವುದು ಸಾಧ್ಯವೇ ಎಂಬ ಪ್ರಶ್ನೆ ಕಾಡತೊಡಗಿತು. ನನ್ನ ವೃತ್ತಿಯಲ್ಲಿ ಸಾಕಷ್ಟು ಸಂಕಟ ದಿನವಹೀ ಎದುರಿಸುತ್ತಿದ್ದ ನಾನು, ಈ ರಾಜಕೀಯ ಸಂಕಟದ ಗಾಳಿಯಲ್ಲಿ ಸಿಕ್ಕಿ ಹಾಕಿಕೊಳ್ಳಲು ಮನಸ್ಸು ಹಿಂದೇಟು ಹಾಕತೊಡಗಿತ್ತು. ಆದರೆ, ಈ ಗಂಭೀರ ರಾಜಕೀಯ ಸಮಸ್ಯೆಯನ್ನು, ಒಬ್ಬ ಆತಂಕವಾದಿಯ ಬಾಯಿಯಿಂದಲೇ ಅರಿಯುವುದೆಂದರೆ, ಅದು ನನ್ನ ಪಾಲಿಗೆ ಅದೃಷ್ಟದ ದೇಣಿಗೆಯಲ್ಲವೇ? ಇಂತಹ ಸದವಕಾಶ ಮುಂದೆ ದೊರೆಯುವುದು ಸಾಧ್ಯವೇ?ಸ್ವಲ್ಪ ಧೈರ್ಯವಹಿಸಿ, ಈ ಪಂಜಾಬೀ ಸರದಾರಜೀಯನ್ನು ಎದುರಿಸಿ, ಅವನ ಬಾಯಿಯಿಂದಲೇ ನನ್ನ ಈ ಸಮಸ್ಯೆಯ ಜ್ಞಾನದಾಹವನ್ನು ಆರಿಸಿಕೊಳ್ಳಬಾರದೇಕೆ?

"ಈ ಖಾಲೀಸ್ಥಾನ ಸಮಸ್ಯೆಯನ್ನು, ಶಾಂತಿ ರೀತಿಯಿಂದ ಬಗೆಹರಿಸಿಕೊಳ್ಳ

ಬಹುದಲ್ಲವೇ? ಯಾಕೆ ಈ ಆತಂಕ, ಆಕ್ರೋಶ, ಅಶಾಂತಿ, ಅನ್ಯಾಯ, ಭಯ, ಹಿಂಸೆಗಳ ಉಪಯೋಗ ಮಾಡಿಕೊಳ್ಳಬೇಕು?"

ಸರದಾರ್‌ಜೀ, ನನ್ನ ಮುಖವನ್ನೇ ದುರುಗಟ್ಟಿ ನೋಡಿದ, ಪಕ್ಕನೇ ಅವನ ಕಣ್ಣಿನ ಮೇಲೆ ಬಿದ್ದ ಹಾದು ಹೋದ ಕಾರಿನ ಬೆಳಕಿಗೆ, ಒಂದು ಕ್ಷಣ ಕಣ್ಣುಗಳನ್ನು ಚಿಕ್ಕದು ಮಾಡಿ, ಹೇಳಿದ,

"ಅಹಿಂಸೆಯಿಂದ ಯಾವ ರಾಜ್ಯದ ಉದಯವಾಗಿದೆ? ಯಾವ ದೇಶ ಸ್ವತಂತ್ರ ಗೊಂಡಿದೆ?"

"ಯಾಕೆ? ನಮ್ಮ ದೇಶದ ಸ್ವಾತಂತ್ರ್ಯ ಅಹಿಂಸಾ ಮಾರ್ಗದಿಂದ ಪಡೆಯಲಿಲ್ಲವೇ?" ಆಶ್ಚರ್ಯದ ಧ್ವನಿಯಲ್ಲಿ ಕೇಳಿದೆ ನಾನು.

"ನೀವು ಹಿಂದೂಗಳು ಹೇಳಿಕೊಳ್ಳುವ ಮಾತುಗಳು ಅವು! ನಾವು ಆ ರೀತಿ ಹೇಳಿಕೆ ನೀಡುವುದಿಲ್ಲ! ಯಾಕೆಂದರೆ, ಸ್ವಾತಂತ್ರಕ್ಕೆ ಸಿಖ್ಖರು ನೀಡಿದ ಕಾಣಿಕೆ ಬರೀ ಜೈಲ್‌ಗೆ ಭರ್ತಿಯಾದದ್ದಲ್ಲ. ನಮ್ಮ ರಕ್ತ ಚಲ್ಲಿ ಸ್ವಾತಂತ್ರ ಚಳುವಳಿಯಲ್ಲಿ ಭಾಗವಹಿಸಿದ್ದೇವೆ".

"ಹಿಂದೂಗಳು ತಮ್ಮ ರಕ್ತ ಚೆಲ್ಲಲಿಲ್ಲವೆಂದು ನೀನು ಹೇಳುವಿಯಾ?"

ಕಪೂರ್ ಬಾಯಿ ಹಾಕಿದ.

"ಸುಮಾರು ಐದು ಸಾವಿರ ಭಾರತೀಯರು, ಸ್ವಾತುತ್ರ ಹೋರಾಟದಲ್ಲಿ ತಮ್ಮ ಪ್ರಾಣ ತೆತ್ತರು. ಅವರಲ್ಲಿ ಸೀಖ್ಖರ ಸಂಖ್ಯೆ ಎಷ್ಟು ಗೊತ್ತೇನು?"

ಸರದಾರ್‌ಜೀ ಅಬ್ಬರಿಸಿದ. ಅವನ ಅಬ್ಬರಿಕೆಗೆ ನನ್ನ ಎದೆ ಬಡಿತ ಒಂದು ಕ್ಷಣ ನಿಂತಹಾಗೆ ಆಯಿತು. ನಾನು ಉತ್ತರ ಕೊಡದೆ ಸುಮ್ಮನಾದೆ.

"ಮೂರು ಸಾವಿರದ ಏಳು ನೂರು!"

ನನ್ನ ಉಸಿರುನಿಂತು ಹೋಗುವಷ್ಟು ಆತಂಕಪಟ್ಟೆ.

"ದೇಶದ ಜನಸಂಖ್ಯೆಯ ಒಂದೂವರೆಯಷ್ಟು ಸಂಖ್ಯೆಯಲ್ಲಿರುವ ಸಿಖ್ಖರ ಕೊಡುಗೆ ಅಲ್ಪವೇ? ಹೇಳಿರಿ?..... ಯಾಕೆ ಸುಮ್ಮನಾದಿರಿ?..... ರಕ್ತ ಚಲ್ಲದೆ, ಹಿಂಸಾಚಾರ ಮಾಡದೇ, ಸ್ವಾತಂತ್ರ್ಯಗಳಿಸಿದರೇನು?"

ಅವನ ಅಬ್ಬರ ಹೆಚ್ಚುತ್ತಲೇ ಹೋಯಿತು.

"ನಿಮಗೆ ಸೀಖ್ಖರ ಇತಿಹಾಸ ತಿಳಿದಿಲ್ಲ ಅಂತ ತೋರುತ್ತದೆ. ಅದಕ್ಕೆ ಹೀಗೆ ಪ್ರಶ್ನೆ ಕೇಳುತ್ತೀರಾ? ಅದರಲ್ಲೂ ಮದರಾಸೀಗಳಿಗೆ ಸೀಖ್ಖರ ಬಗ್ಗೆ, ಅವರ ಚರಿತ್ರೆ, ಧರ್ಮ, ನಡವಳಿಕೆ, ಆಚರಣೆ, ಗೊತ್ತೇ ಇಲ್ಲ!"

ನಾನು ಮೂಕನಾಗಿ ಅವನ ಮಾತುಗಳನ್ನು ಕೇಳುತ್ತಾ ಕುಳಿತೆ.

"ಕೇವಲ ಶೇಕಡ ಒಂದೂವರೆ ಜನಸಂಖ್ಯೆ ಹೊಂದಿರುವ ಸಿಖ್ಖರು, ತಮ್ಮ ಸಂಖ್ಯೆಗೆ ಮೀರಿ ದೇಶಕ್ಕಾಗಿ ಬಲಿದಾನ ಮಾಡಿದರು. ಹಿಂದೂಗಳಲ್ಲಿ ಎಷ್ಟು ಜನ ಪ್ರಾಣ ಕಳೆದುಕೊಂಡರು? ಎಷ್ಟು ಜನ ಜೈಲಿಗೆ ಹೋದರು ? ಇಂಡಿಯನ್ ನೇಶನಲ್ ಆರ್ಮಿಯಲ್ಲಿ ಹೋರಾಡಿದ ವೀರರಲ್ಲಿ, ಸಿಖ್ಖರ ಸಂಖ್ಯೆ ಶೇಖಡ ಅರವತ್ತಕ್ಕೂ ಹೆಚ್ಚು ಇತ್ತು. ಗೊತ್ತಿದೆ ಏನು ನಿಮಗೆ?"

ಬಂದೂಕುಗಳ ಗುಂಡುಗಳ ಹೊಡೆತಗಳಿಗಿಂತ ತೀವ್ರವಾಗಿತ್ತು ಸರದಾರ್‌ಜೀ ಉಪಯೋಗಿಸುತ್ತಿದ್ದ ಅಂಕಿ ಅಂಶಗಳ ಹೊಡೆತ!

"ಸಿಖ್ಖರು, ಮೊಘಲ್‌ರ ವಿರುದ್ಧ ಹೋರಾಡದಿದ್ದರೆ, ಆಫ್ಘನ್‌ರು ಇಡೀ ಉತ್ತರ ಭಾರತದ ಬಾದಶಹರಾಗಿ ಆಳುತ್ತಿದ್ದರು. ಮಹಾರಾಜಾ ರಣಜಿತ್‌ಸಿಂಗ್ ಪಂಜಾಬ್‌ನಲ್ಲಿ ಹುಟ್ಟಿ, ಆಳದಿದ್ದರೆ, ಕಾಬುಲ್‌ನ್ನು ತನ್ನ ಕೈವಶ ಮಾಡಿಕೊಳ್ಳದಿದ್ದರೆ, ಯಾವಾಗಲೋ ಆಫ್ಘನ್‌ರ ಕೈಲಿ ಭಾರತ ಸಿಕ್ಕಿ ನುಚ್ಚುನೂರಾಗುತ್ತಿತ್ತು!"

ಅವನ ಮುಖವನ್ನೇ ನೋಡುತ್ತಿದ್ದ ನನಗೆ, ಭಯದಿಂದ ಸಣ್ಣಗೆ ಕಂಪಿಸಿದೆ. ಅವನ ಮುಖ ಉದ್ವೇಗದಿಂದ ಬಿಗಿದುಕೊಂಡಿತ್ತು. ಕೋಪ, ತಾಪ, ದ್ವೇಷದ ಕಿಡಿ ಅವನ ಕಣ್ಣಿನಿಂದ ಸಿಡಿಯುತ್ತಿತ್ತು.

ಕಪೂರ್‌ನ ಮುಖದ ಕಡೆ ಕಣ್ಣು ಹಾಯಿಸಿದೆ. ಅವನು ತಲೆ ಎತ್ತಿ, ಆಕಾಶದ ಕಡೆ ನೋಡುತ್ತಾ ಕುಳಿತಿದ್ದ. ಸರ್ದಾರ್ಜೀಯ ಮಾತಿನ ಕಿಡಿಗಳು ಅವನಿಗೆ ತಾಗ ಲಿಲ್ಲವೇ? ದಿಲ್ಲೀ ಆಕಾಶದಲ್ಲಿ ಕಾಣದಿರುವ ನಕ್ಷತ್ರಗಳನ್ನು ಎಣಿಸಲಿಕ್ಕೆ ಪ್ರಯತ್ನ ಪಟ್ಟಿದ್ದಾನೆಯೇ?

"ಗುರು ಅರ್ಜುನ್ ದೇವರು ೧೬೦೬ರಲ್ಲಿ , ೧೭೦೮ರಲ್ಲಿ ಗುರು ಗೋವಿಂದ್ ಸಿಂಗ್‌ರು ತಮ್ಮ ಪ್ರಾಣವನ್ನೇ ಬಲಿದಾನ ಮಾಡಿದರು. ಯಾತಕ್ಕಾಗಿ? ಯಾರಿಗಾಗಿ? ಏಕೆ? ಹಿಂದೂಗಳ ರಕ್ಷಣೆಗೆ ಮತ್ತು ದೇಶದ ಹಿತಕ್ಕೆ, ಜನರ ಮೇಲೆ ನಡೆಯುತ್ತಿದ್ದ ಅತ್ಯಾಚಾರ ಅನ್ಯಾಯಗಳ ವಿರುದ್ಧಕ್ಕೆ? ಗೊತ್ತಿದೆ ಏನು ನಿಮಗೆ?"

"ಆತ್ಮಗೌರವದಿಂದ ಬದುಕದಿದ್ದರೆ, ನಾವು ಏನು ತಿನ್ನುತ್ತೇವೆಯೋ ಅದಕ್ಕೆ ಅರ್ಹರಲ್ಲ" ಎಂದು ನಮ್ಮ ಆದಿ ಗುರು ನಾನಕ್ ಹೇಳಿದ್ದಾರೆ. ಆತ್ಮಗೌರವ, ನ್ಯಾಯ, ನೀತಿಧರ್ಮಗಳ ಪಾಲನೆಯೇ ಸಿಖ್‌ಧರ್ಮದ ಮೂಲತತ್ವ. ಎಲ್ಲಿ ನಮ್ಮ ಆತ್ಮಗೌರವಕ್ಕೆ ಧಕ್ಕೆಯಾಗುವುದೋ, ಎಲ್ಲಿ ಯಾರು ಅನಾಚಾರ ಅಪಚಾರ ಎಸಗು ತ್ತಾರೋ, ಅವರ ವಿರುದ್ಧ ಹೋರಾಡುತ್ತೇವೆ. ನಮ್ಮ ಪ್ರಾಣ ತೊರೆದು ಹೋರಾಡು ತ್ತೇವೆ. ಇದು ಖಂಡಿತ, ಇದು ದಿಟ! ಇದರಲ್ಲಿ ಯಾವ ತರಹದ ಸಂಶಯವೂ ಇಲ್ಲ!"

ಭ್ರಾಂತಿಗೊಳಿಸುವ ಕ್ರೋಧ, ಗಾಬರಿಗೊಳಿಸುವ ಆಕ್ರೋಶ, ಆತಂಕ, ವಿಸ್ಮಯಗೊಳಿಸುವ ಮನಸ್ಸಿನಾಳದಿಂದ ಬಂದ ಉಮ್ಮಳ, ಸರ್ದಾರ್ಜಿಯ ಬಾಯಿಯಿಂದ ಹೊಮ್ಮಿದ ಮಾತುಗಳಾಗಿದ್ದವು. ಶತಮಾನಗಳಿಂದ, ವಿವಿಧ ಪರಿಸ್ಥಿತಿ, ವಿವಿಧ ಸಂಸ್ಕೃತಿ, ವಿವಿಧ ಚಕ್ರಾಧಿಪತ್ಯ, ವಿವಿಧ ರಾಜ್ಯ ಪದ್ಧತಿ, ವ್ಯವಸ್ಥೆ, ಶಾಸನ, ಆಡಳಿತ, ವಿವಿಧ ಧರ್ಮ ಪ್ರಭುತ್ವ, ಅರಾಜಕತೆ, ಅನಾಯಕತ್ವ, ಕ್ರಾಂತಿ, ದಂಗೆ, ತುರ್ತು ಪರಿಸ್ಥಿತಿಗಳನ್ನು ಸತತವಾಗಿ ಎದುರಿಸಿ ಹೋರಾಡಿ ಬಂದ ಈ ಸಿಖ್‌ರನ್ನು ಸರ್ದಾರ್ಜೀ ನಿಜವಾಗಲೂ ಪ್ರತಿಬಿಂಬಿಸಿದ್ದಾನೆಯೆ? ಅಥವಾ ಪ್ರತಿನಿಧಿಸಿದ್ದಾನೆಯೆ? ಅಥವಾ ಪ್ರತಿಭಟಿಸುತ್ತಿದ್ದಾನೆಯೆ?

"ತ್ಯಾಗ ಮಾಡಿದ್ದೀರಾ? ಬಲಿದಾನ ಮಾಡಿದ್ದೀರಾ! ಒಪ್ಪಿಕೊಂಡಿದ್ದೇವಲ್ಲಾ! 'ಇಲ್ಲ' ಎಂದು ಯಾರು ಹೇಳುತ್ತಾರೆ? ಈಗ ನಿನಗೇನು ಬೇಕು? ಬಲಿದಾನ ಮಾಡಿದ್ದಕ್ಕೆ ಪ್ರತಿಫಲ ಬೇಕೆ?"

ಆಕಾಶ ನೋಡುತ್ತಲೇ ನುಡಿದ ಕಪೂರ್. ಮುಖವನ್ನು ಕೆಳಗೆ ಮಾಡಲಿಲ್ಲ ಅವ!

"ಪ್ರತಿಫಲ ಕೇಳಲಿಕ್ಕೆ ನಾವೇನು ಭಿಕ್ಷುಕರೇ?"

ಉತ್ತರ ಥಟ್ಟನೆ ನೀಡಿದ್ದ ಸರ್ದಾರ್ಜೀ.

"ಪ್ರತಿಫಲ ಕೇಳಿದರೂ, ಬಲಿದಾನಕ್ಕೆ ಬೆಲೆ ಇಲ್ಲವಾಗುತ್ತಿತ್ತು. ಅಲ್ಲವಾ?"

ಯಾರೂ ಉತ್ತರ ಕೊಡಲಿಲ್ಲ.

"ಪ್ರತಿಫಲ ಬೇಡ. ಸರಿ! ಈಗ ಯಾಕೆ ಹೊಡೆದಾಡುತ್ತಿದ್ದೀಯಾ? ನಿಮಗೆ ಸ್ವತಂತ್ರವಿಲ್ಲವೆ? ನಿಮ್ಮ ಸ್ವಾತಂತ್ರವನ್ನು ಯಾರಾದರೂ ಕಸಿದುಕೊಂಡಿದ್ದಾರೆಯಾ? ನಿಮ್ಮ ಮೇಲೆ ಬೇರೆಯವರು ಆಳುತ್ತಿದ್ದಾರೆಯೆ?"

ಕಪೂರ್‌ನ ಸ್ವಾಭಾವಿಕವಾದ ಹಗುರವಾದ ಮಾತುಗಾರಿಕೆಯಲ್ಲಿ ಸ್ವಲ್ಪ ಬಿಸಿ ಮುಟ್ಟಿಸಿದ್ದ.

"ಬ್ರಿಟಿಷ್ ಪಾರ್ಲಿಮೆಂಟ್ ಪಾಸ್ ಮಾಡಿದ ಕಾನೂನು 'ಟ್ರಾನ್ಸ್‌ಫರ್ ಆಫ್ ಪವರ್ ಆಕ್ಟ್, ೧೯೪೭'ನನ್ನು ಓದಿದ್ದೀರಾ? ಅದರಲ್ಲಿ ಇಂಡಿಯಾ ಸರಕಾರ ಬಂದು ಸಂಯುಕ್ತ ಸರಕಾರವಾಗಿತ್ತು. ಮೂರು ವಿಷಯಗಳಲ್ಲಿ ಅಂದರೆ, ಸಾರಿಗೆ, ರಕ್ಷಣೆ, ಮತ್ತು ವಿದೇಶಿಯ ವಿಚಾರಗಳಲ್ಲಿ ಮಾತ್ರ ತನ್ನ ಅಧಿಕಾರ ಚಲಾಯಿಸಬಹುದು ಎಂದು ಹೇಳಿದೆ. ಇದಕ್ಕೆ ಎಲ್ಲಾ ರಾಜಕೀಯ ಮುಖಂಡರು ಒಪ್ಪಿದ್ದರು. ಸಿಖ್‌ರಿಗೆ, ಮುಸ್ಲಿಮ್‌ರಿಗೆ ಸಿಕ್ಕ ಹಾಗೆ ಸ್ವಾತಂತ್ರ ರಾಷ್ಟ್ರ ಬೇಕಿರಲಿಲ್ಲ. ಅವರಿಗೆ ತಮ್ಮದೇ ಆದ ಸ್ವಯಂ ಅಧಿಕಾರದ ರಾಜ್ಯ ಬೇಕಿತ್ತು. ಅಷ್ಟೆ! ಆದರೆ ನಮಗೆ ಸಿಕ್ಕಿದ್ದು ಏನು?

ದಾಸ್ಯ! ಮುಸ್ಲಿಮ್‌ರ ಅಂತರ್ಯುದ್ಧದ ಬೆದರಿಕೆ, ಇಂಗ್ಲಿಷ್‌ರ ಕುಟಿಲತನ; ಹಿಂದೂ ಬನಿಯಾಗಳಿಗೆ ದಿನವಿಡೀ ಹರತಾಳ ಬಂದ್‌ಗಳಿಂದಾದ ನಷ್ಟಕಷ್ಟ; ಹೀಗೆ ಮುಂದುವರೆ ಯುತ್ತಾ ಹೋದರೆ, ತಮ್ಮ ಕೈಗೆ ಅಧಿಕಾರ ತಮ್ಮ ಜೀವಮಾನದಲ್ಲಿ ಸಿಗುವ ಹಾಗೆ ಕಾಣುವುದಿಲ್ಲ ಎಂದು ಅಳುತ್ತಾ ಕುಳಿತ, ಮುದುಕರಾಗಿ ನಿಶ್ಶಕ್ತರಾಗಿ, ಅನಾರೋಗ್ಯ ದಿಂದ ನರಳುತ್ತಾ ಇದ್ದ ಹಿಂದೂ ರಾಜಕೀಯ ನಾಯಕರುಗಳು, ದೇಶದ ವಿಭಜನೆಗೆ ಒಪ್ಪಿದರು. 'ದೇಶದ ವಿಭಜನೆ ನನ್ನ ಶರೀರದ ವಿಭಜನೆ' ಎಂದು ಹೇಳಿಕೆ ಇತ್ತ ಗಾಂಧಿ ಯಾಕೆ ಒಪ್ಪಿಗೆ ನೀಡಿದರು?......"

ಉಸಿರು ಕಟ್ಟುವ ಬಿಸಿ ವಾತಾವರಣದಲ್ಲಿ, ಒಡಬಡನೆ ಮಾತನಾಡಿದ ಸರ್ದಾರ್ಜೀ ಒಮ್ಮೆಲೆ ಸ್ಥಬ್ದನಾದ.

ಇವ, ಒಮ್ಮಿಂದೊಮ್ಮೆಲೆ ಮಹಾತ್ಮಾ ಗಾಂಧೀ ಮೇಲೆಯೇ ತನ್ನ ಕಿಡಿ ಕಾರಿ ಬಿಟ್ಟನಲ್ಲ! ಆದರೆ ಅವನು ಹೇಳಿದ್ದರಲ್ಲಿ ತಪ್ಪಿದೆಯಾ? ಗಾಂಧಿಜೀ ದೇಶದ ವಿಭಜ ನೆಗೆ ಒಪ್ಪಿದ್ದು ಸರಿಯೆ? ತಮ್ಮ ಮಾತನ್ನು ತಾವೇ ನುಂಗಿಬಿಟ್ಟರಲ್ಲವೇ?

"ಯೂರೋಪ್‌ನಲ್ಲಿ ಜರ್ಮನ್‌ರೊಡನೆ ಕಾದಾಡಲಿಕ್ಕೆ ಭಾರತೀಯರನ್ನು ಸೈನ್ಯಕ್ಕೆ ಸೇರಿರಿ ಎಂದು ಹೇಳಿಕೆ ಇತ್ತರು. ಯಾಕೆ? ಬ್ರಿಟಿಷ್‌ರು ನಮಗೆ ಸ್ವಾತಂತ್ರ ಯುದ್ಧವಾದ ನಂತರ ನೀಡುತ್ತೇವೆ ಎಂದರು. ಗಾಂಧಿಜೀ ಅವರನ್ನು ನಂಬಿದರು. ನಮ್ಮನ್ನು ನಂಬಲಿಲ್ಲ. ಸೈನ್ಯಕ್ಕೆ ಸೇರಿರಿ ಎಂದು ಹೇಳದೆ ದೇಶದ ಸ್ವಾತಂತ್ರಕ್ಕೆ ಹೋರಾಡಿರಿ ಎಂದಿದ್ದರೆ ದೇಶಕ್ಕೆ ಮೊದಲೇ ಸ್ವಾತಂತ್ರ್ಯ ದೊರೆಯುತ್ತಿತ್ತು!" ಕಣ್ಣುಗಳು ಕಿಡಿ ಕಾರುತ್ತಿದ್ದವು. ಮಾತು ಮುಂದುವರೆಸಿದ. "ಮುಸ್ಲಿಮರು, ಪಾಕಿಸ್ಥಾನ ಗೆದ್ದ ಮೇಲೆ 'ಹಂಸ್ತೇ ಹಂಸ್ತೇ ಲೆಯೆ ಪಾಕಿಸ್ಥಾನ್; ಲಡ್ತೇ ಲಡ್ತೇ ಲೇಂಗೇ ಹಿಂದೂಸ್ಥಾನ್' ಎಂದು ಹಾಡಿ, ಹಾರಾಡಿದರು. ಅವರು ನಮ್ಮ ವಿರುದ್ಧ ಯುದ್ಧ ಮಾಡಿದರು. ಯುದ್ಧದಲ್ಲಿ ಸತ್ತವರು, ಬಲಿದಾನ ಕೊಟ್ಟವರು, ಹೋರಾಡಿದವರು ಸಿಖ್‌ರು! ವಿಭಜನೆಗೆ ನೀವುಗಳು ಒಪ್ಪಿದ ಹಾಗೆ ನಾವು ಒಪ್ಪಿರಲಿಲ್ಲ! ವಿಭಜನೆಯಿಂದ ಆದ ನಷ್ಟ ಸಿಖ್‌ರಿಗೆ! ಪಂಜಾಬಿನ ನಮ್ಮ ಮನೆ, ಮಠ, ಫಲವತ್ತಾದ ಹೊಲ, ಗದ್ದೆ, ಗುರುನಾನಕ್ ಜನ್ಮಸ್ಥಳ, ನಗ ನಾಣ್ಯ, ಎಲ್ಲವನನ್ನೂ ತೊರೆದು ಓಡಿ ಬಂದಿದ್ದು ಸಿಖ್‌ರು! ರಕ್ತಕಾಂಡ ದಂಗೆಯಲ್ಲಿ ಲಕ್ಷಾಂತರ ಜನರ ಸಾವು ಆಗಿದ್ದು ಸಿಖ್‌ರದ್ದು! ಇಡೀ ಊರು, ಕೇರಿ, ಹಳ್ಳಿಯಲ್ಲಿನ ಸೀಖ್‌ರನ್ನು ಹಿಡಿದು ಕೊಂದರು. ಇದಕ್ಕೆ ಕಾರಣ ಸಿಖ್‌ರೇ?"

"ಹಿಂದೂಗಳು ಸಾಯಲೇ ಇಲ್ಲವೇ? ಕಷ್ಟ-ನಷ್ಟ ಅನುಭವಿಸಲೇ ಇಲ್ಲ ಎಂದು ನಿನ್ನ ಹೇಳಿಕೆಯಾ?" ಕಪೂರ್ ವ್ಯಗ್ರನಾಗಿ ಕೇಳಿದ.

"ಹಿಂದೂಗಳು ಬದುಕಿದ್ದರೂ ಸತ್ತಂತೆಯೆ! ಶತಮಾನಗಳಿಂದಲೂ ಅವರು ಸತ್ತಂತೆಯೇ ಜೀವಿಸುತ್ತಿದ್ದಾರೆ. ಪೃಥ್ವೀರಾಜ್ ಚೌಹಾನ್ ಯುದ್ಧದಲ್ಲಿ ಸೋತ ನಂತರ ಯಾವ ಯುದ್ಧದಲ್ಲಿ ಅವರು ಸೋಲಲಿಲ್ಲ ಹೇಳಿ ನೋಡೋಣ? ಮುಸ್ಲೀಂರು ಹಿಂದುಗಳನ್ನು ಯಾವ ರೀತಿ ನೋಡಿಕೊಂಡಿದ್ದರೆಂದು ನಿಮಗೆ ತಿಳಿದಿದೆಯಾ?"

'ಹಿಂದೂಗಳು ನೆಲದ ಮಣ್ಣಿನ ತರಹ, ಬೆಳ್ಳಿ ಕೇಳಿದರೆ ಚಿನ್ನ ನೀಡುವವರು; ಬಾಯಿ ತೆಗೆ, ಉಗಿಯಬೇಕು ಎಂದರೆ, ತಾವಾಗಿಯೇ ಬಾಯಿ ತೆಗೆಯುವವರು; ದೇವರು ಹಿಂದೂಗಳನ್ನು ಗುಲಾಮರನ್ನಾಗಿಸಲೆಂದೇ ಸೃಷ್ಟಿಸಿದ್ದಾನೆ,'.... ಇವೆಲ್ಲಾ ಮುಸ್ಲಿಂರು ಮಾಡಿ ತೋರಿಸಿದ ರೀತಿ. ಸಿಖ್‌ರು ಇದರ ವಿರುದ್ಧ ದಂಗೆ ಎದ್ದು ಹೋರಾಡಿ, ರಾಜ್ಯ ಕಟ್ಟಿದ ವೀರರು. ಈಗ ಹೇಳಿ, ನಾವು ನಮ್ಮದೇ ಆದ ರಾಜ್ಯ ಕಟ್ಟಬೇಕೆಂದರೆ, ನಿಮ್ಮ ಅಡ್ಡಿ ಯಾಕೆ?"

ನಾವು ನಿರುತ್ತರರಾದೆವು. ಕನ್ನಾಟ್ ಸರ್ಕಸ್‌ನ ಸುತ್ತಲೂ ಓಡಾಡುವ ವಾಹನ ಶಬ್ದಗಳನ್ನು ಆಲೈಸುತ್ತಾ ಕುಳಿತೆ. ಸರ್ದಾರ್ಜೀಗೆ ನುಡಿದ ಮಾತುಗಳು ನನ್ನನ್ನು ಚುಚ್ಚಿ ಘಾಸಿಗೊಳಿಸಿದ್ದವು. 'ದೇವರು ಹಿಂದೂಗಳನ್ನು ಗುಲಾಮರೆಂದೇ ಸೃಷ್ಟಿಸಿದ್ದಾನೆ' ಹಾಗಾದರೆ ನಾವು ಅಷ್ಟು ಹೇಡಿಗಳೇ? ಅಷ್ಟು ಪುಕ್ಕಲುತನದವರೇ?

"ಈ ಸಿಖ್‌ರೆಂದರೆ ಯಾರು? ಅವರೇನು ಹೊರದೇಶದಿಂದ ಬಂದವರೆ?"

ಕಪೂರ್ ಬುಡಕ್ಕೆ ಕೈ ಹಾಕಿದ.

"ಸಿಖ್‌ರೆಂದರೆ, ನೂರಕ್ಕೆ ೮೦ ರಷ್ಟು ಹಿಂದೂಗಳು. ಅವರಲ್ಲಿ ಹಿಂದೂ ರಕ್ತ ಹರಿಯುತ್ತಿದೆ. ಹಿಂದೂ ಹೆಸರಿಟ್ಟುಕೊಂಡು, ವೇದಾಂತದ ತತ್ವವಾದ 'ದೇವರೊಬ್ಬನೇ' ಎಂದು ಕೊಂಡಾಡುತ್ತಾ, ಹಿಂದೂ ಭಕ್ತಿಮಾರ್ಗ ಹಿಡಿದು, ಎಲ್ಲಾ ಧರ್ಮ ಗ್ರಂಥಗಳ ಭಕ್ತಿಗೀತೆಗಳನ್ನು ಹಾಡುತ್ತಾ, 'ಗುರುದ್ವಾರಾ' ಎಂಬ ಗುಡಿಯಲ್ಲಿ ಭಕ್ತಿ ಗೀತೆಗಳ ಪುಸ್ತಕ 'ಗ್ರಂಥಸಾಹಿಬ್'ನ್ನು ಪೂಜಿಸುತ್ತಾ, ಆರಾಧಿಸುವ ನೀವು 'ಸಿಖ್'ರೆಂದು ಕರೆದುಕೊಳ್ಳುತ್ತೀರಾ! ಅಷ್ಟೇ!"

ಕಪೂರ್ ತನ್ನ ಪ್ರಶ್ನೆಗೆ ತಾನೇ ಉತ್ತರ ಸಲೀಸಾಗಿ ನೀಡಿದ.

ನನಗೆ ಆಶ್ಚರ್ಯವಾಯಿತು. 'ಪರವಾಗಿಲ್ಲ ವಿಷಯ ತಿಳಿದುಕೊಂಡಿದ್ದಾನೆ ಈತ! ಇತಿಹಾಸ ಪ್ರಜ್ಞೆ ಇದೆ ಇವನಿಗೆ!

"ಸುಭಾಷ್‌ಚಂದ್ರಬೋಸ್ ಬ್ರಿಟಿಷ್‌ರ ವಿರುದ್ಧ ಹೋರಾಡಲಿಲ್ಲವೇ? 'ನಿಮ್ಮ ರಕ್ತ ಕೊಡಿ; ನಾನು ನಿಮಗೆ ಸ್ವತಂತ್ರ ಕೊಡುತ್ತೇನೆ' ಎಂದು ಹೇಳಲಿಲ್ಲವೇ?" ಕಪೂರ್‌ನ ಪ್ರಶ್ನೆ ಅವನ ಬಾಯಿಂದ ಹೊರಬಿದ್ದ ಕೂಡಲೇ, ಸರ್ದಾರ್ಜೀ ಚೀರಿದ: "ಏನು ಹೇಳಿದರು ನಿಮ್ಮ ಸುಭಾಷ್? 'ರಕ್ತ ಕೊಡಿ, ಸ್ವತಂತ್ರ ತಂದುಕೊಡುತ್ತೇನೆ'

ಅಂದರೆ, ಸ್ವತಂತ್ರ ಪಡೆಯಲಿಕ್ಕೆ ರಕ್ತಚೆಲ್ಲಬೇಕು! ರಕ್ತಚೆಲ್ಲಬೇಕು ಅಂದರೆ, ಹೋರಾಡಬೇಕು, ಯುದ್ಧವಾಗಬೇಕು, ಹಿಂಸಾಚಾರವಾಗಬೇಕು ಅಲ್ಲವೇ?"

...ಬುಸುಗುಟ್ಟುತ್ತಾ ನುಡಿದ ಸರದಾರ್ಜಿ!

"ಅಹಿಂಸೆ, ಅಹಿಂಸೆ ಎಂದು ಸಾರುತ್ತಾ, ಹೋರಾಡುತ್ತಾ ಹಾರಾಡಿದ ಗಾಂಧೀಜಿಯ ಮಾತಿಗೆ ಕೊನೆಗೆ ಸಿಕ್ಕಿದ್ದು ಹಿಂಸೆಯ ಸ್ವಾತಂತ್ರ! ಲಕ್ಷಾಂತರ ಜನ ಹಿಂದೂ ಸಿಖ್, ಮುಸ್ಲಿಮ್‌ರ ಕಗ್ಗೊಲೆ ಆಯಿತು. ಸ್ವಾತಂತ್ರಕ್ಕೆ, ಬ್ರಿಟಿಷರ ವಿರುದ್ಧ, ಹೋರಾಡಿ ಇಷ್ಟು ಜನ ಪ್ರಾಣ ತೆತ್ತಿದ್ದರೆ, ದೇಶಕ್ಕೆ ಸ್ವಾತಂತ್ರ ನೂರು ವರ್ಷ ಮುಂಚೆ ಸಿಗುತ್ತಿತ್ತು!" ಗುಡುಗಿದ ಸರ್ದಾರ್ಜೀ. "ಅಹಿಂಸೆ, ಅಹಿಂಸೆ ಎಂದು, ಜನರನ್ನು ನಿಷ್ಕ್ರಿಯ, ನಿರ್ವೀರ್ಯರನ್ನಾಗಿ ಮಾಡಿದರು ನಿಮ್ಮ ಗಾಂಧೀ?"

"ಹಿಂದೂಗಳು ದಂಗೆ ಎದ್ದು, ಯುದ್ಧ ಆಡಿ, ಸಾಮ್ರಾಜ್ಯ ಕಟ್ಟಲೇ ಇಲ್ಲವೇ? ಹಾಗಾದರೆ, ದಕ್ಷಿಣದಲ್ಲಿ ವಿಜಯನಗರ ಅರಸರು, ಮರಾಠರು, ಮೈಸೂರು ಅರಸರು, ಇವರ ಇತಿಹಾಸ ನಿಮಗೆ ತಿಳಿದಿಲ್ಲವೇ?"

"ಕಿತ್ತೂರ ರಾಣೀ ಚೆನ್ನಮ್ಮ, ಝಾನ್ಸಿರಾಣೀ ಲಕ್ಷ್ಮೀಬಾಯಿ, ತಾತ್ಯಾಟೋಪಿ, ಇವರ ಹೆಸರನ್ನಾದರೂ ಕೇಳಿರಲೇಬೇಕಲ್ಲ ನೀವು!" ಮೆಲ್ಲಗೆ ಕೇಳಿದೆ ನಾನು.

"ಹಿಂದೂಗಳು, ಶತಮಾನಗಳಿಂದ, ವಿವಿಧ ಕಾರಣಗಳಿಂದ, ನಿರ್ವೀರ್ಯರಾಗಿ, ನಿಷ್ಕ್ರಿಯರಾಗಿ, ದಾಸರಾಗಿದ್ದುದು ಇತಿಹಾಸ ಸತ್ಯ. ಈಗ ಎಚ್ಚೆತ್ತುಗೊಂಡಿದ್ದಾರೆ. ಅವರಲ್ಲೂ ಹೋರಾಡುವ ಮನೋಭಾವ, ಕೆಚ್ಚು, ಧೈರ್ಯ, ರಾಷ್ಟ್ರೀಯತನ ಮೂಡುತ್ತಿದೆ. ಇದರಿಂದಲೇ ಬೇರೆ ಧರ್ಮೀಯರಿಗೆ ಅಸೂಯೆ, ಕಳವಳ, ಶಂಕೆ ಉಂಟಾಗುತ್ತಿದೆ. ನಮ್ಮನ್ನು ಕೀಳಾಗಿ ಗುಲಾಮರಾಗಿಯೇ ಕಾಣಬೇಕೆಂಬ ಅವರ ಕನಸು, ನಡೆನುಡಿ, ಬಯಕೆಗಳಿಗೆ ಧಕ್ಕೆ ಉಂಟಾಗಿದೆ. ಇದು ಒಂದು ತರಹ ಕಾಂಪ್ಲೆಕ್ಸ್!ಮೈನಾರಿಟಿ ಕಾಂಪ್ಲೆಕ್ಸ್! ಮೈನಾರಿಟಿ ಯಾವಾಗ ಮೆಜಾರಿಟಿಯನ್ನು ತಮ್ಮ ಇಷ್ಟ ಬಂದ ಹಾಗೆ ಕುಣಿಸಿ, ಹಾಡಿಸಿ, ಆಟ ಆಡಿಸಿ, ದಂಡಿಸಿ, ಆಳಲು ಸಾಧ್ಯವಾಗುತ್ತದೆಯೋ ಆಗಲೇ, ಇಬ್ಬರಲ್ಲೂ ಘರ್ಷಣೆ ಏರ್ಪಡುತ್ತದೆ! ಅಲ್ಲವೇ?"

ಕಪೂರ್ ತನ್ನ ವಿಚಾರಧಾರೆಯನ್ನು ಹಂತಹಂತವಾಗಿ ಸರ್ದಾರ್ಜೀಯ ಮುಂದೆ ಇರಿಸಿದ. ಸರ್ದಾರ್ಜೀ ಮಾತು ಹೊರಡದೇ ಮೌನಿಯಾಗಿದ್ದ. ಅವನ ಹಾಲುಗೆನ್ನೆಯ ಮೇಲೆ ಆಗಾಗ ಬೀಳುತ್ತಿದ್ದ ವಾಹನಗಳ ಬೆಳಕಿನ ರೇಖೆಗಳಿಂದ ನನಗೆ ಅರಿವಾಗ ತೊಡಗಿತ್ತು, ಅವನ ಮುಖ ಗೊಂದಲದ ಗೂಡಾಗಿದೆ ಎಂದು.

ನನ್ನ ಮನಸ್ಸು ಚಡಪಡಿಸಲಿಕ್ಕೆ ಶುರುಮಾಡಿತ್ತು. ಸರ್ದಾರ್ಜೀ ಹಿಂದೂಗಳ ಬಗ್ಗೆ ಏಕೆ ಇಷ್ಟು ಹೀನ ಭಾವನೆ ಇರಿಸಿಕೊಂಡಿದ್ದಾನೆ? ಇಷ್ಟು ದ್ವೇಷ, ವೈಮನಸ್ಸು,

ಹಗೆತನ, ಕ್ರೂರತನ ನಮ್ಮ ಮೇಲೆ ಏಕೆ? ಇದಕ್ಕೆ ಕಾರಣವಾದರೂ ಏನು? ಈ ಸಿಖ್‌ರು ಬಹುಪಾಲು ಹಿಂದೂಗಳೇ ಆಗಿದ್ದರು. ಮತಾಂತರ ಹೊಂದಿದ ನಂತರ, ಒಮ್ಮೆಲೆ ಅವರಿಗೆ ಏಕೆ ಹಿಂದೂಗಳ ಬಗ್ಗೆ ತಾತ್ಸಾರ, ನಿರ್ದಯಿತನ, ಕ್ರೂರತನ ಪಡೆಯುತ್ತಾರೆ? ಮತಾಂತರದಿಂದ, ಒಮ್ಮೆಲೆ ಹೇಗೆ ಇವರು ಧೈರ್ಯ, ಕೆಚ್ಚು, ಕಲಿತನ, ಛಾತಿ, ಸಾಹಸ, ಪರಾಕ್ರಮ ತೋರಿಸುತ್ತಾರೆ? ತಮ್ಮ ಪ್ರಾಣವನ್ನೇ ತಮ್ಮ ನೂತನ ಮತಕ್ಕೆ ಮುಡಿಪಾಗಿಟ್ಟು, ಹೋರಾಡುತ್ತಾರಲ್ಲಾ? ಕಾರಣವಾದರೂ ಏನು? ಹಿಂದೂ ಧರ್ಮದ ಉದಾರ ತತ್ವದಿಂದಲೇ! 'ಉದಾರ ಚರಿತಾನಂತು, ವಸುದೈವ ಕುಟುಂಬಕಂ'ವೆಂಬ ಜೀವನ ಸೂತ್ರ, ಕಂಟಕಪ್ರಾಯವಾಗಿದೆಯೆ? ಪರಧರ್ಮ ಸಹಿಷ್ಣುತೆಗೆ ಹೆಸರುವಾಸಿಯಾದ ಹಿಂದೂ ಧರ್ಮ, ತನ್ನ ಈ ಗುಣದ ಲಾಭವನ್ನು ಅನ್ಯಧರ್ಮದವರು ಪಡೆಯುತ್ತಿದ್ದರೆಯೆ? ಅಥವಾ, ಈ ಗುಣ ಶಾಪವಾಗಿ, ಅನ್ಯರಿಗೆ ವರವಾಗಿ ಪರಿಣಮಿಸಿದೆಯೆ? ಅಥವಾ ಹಿಂದೂ ಸಂಸ್ಕೃತಿಯ ವಿವಿಧ ರೂಪರೇಖೆಗಳ ವಿಚಾರಕಿರಣಗಳಿಂದಲೇ? ಅಥವಾ ಹಿಂದೂಗಳ ಚಿತ್ರವಿಚಿತ್ರ ಜಾತಿ ಪದ್ಧತಿ ಯಿಂದಲೋ? ಅಥವಾ ಹಿಂದೂಗಳ ಮನಸ್ಸಿನಲ್ಲಿರುವ ಕೀಳರಮೆಯೇ? ಅಥವಾ ಶತಮಾನಗಳ ದಾಸ್ಯದಿಂದ ಉಂಟಾದ ಹೇಡಿತನದ, ಪುಕ್ಕಲುತನದ ಅಸ್ಥಿರ ಮನಸ್ಸೇ? ಅಥವಾ ಐತಿಹಾಸಿಕ ಕಾರಣಗಳಿಂದ, ವಿವಿಧ ಭಾಷೆಗಳಿಂಡ, ವಿವಿಧ ಸಂಸ್ಕೃತಿಗಳಿಂದ, ವಿವಿಧ ಜಾತಿಪದ್ಧತಿಗಳಿಂದ ನರಳಿ, ತಮ್ಮ ಸ್ವಭಾವದಲ್ಲೇ ಚಂಚಲ ಮನೋಭಾವ, ಅನಿಶ್ಚಿತ ಬುದ್ಧಿ ಹೊಂದಿ, ತಮ್ಮ ಮೇಲೆ ತಮ್ಮ ಬಗ್ಗೆ ತಮ್ಮ ಧರ್ಮದ ಬಗ್ಗೆ, ತಮ್ಮ ಸಂಸ್ಕೃತಿ ಬಗ್ಗೆ, ನಂಬಿಕೆ ವಿಶ್ವಾಸ ಕಳೆದುಕೊಂಡು ಹತಾಶರಾಗಿದ್ದಾರೆಯೆ? ಈ ಹತಾಶಭಾವ, ಅಪನಂಬಿಕೆ, ಸಂದೇಹ, ಗುಮಾನಿ, ಇವರ ಹುಟ್ಟುಗುಣ ಗಳಾಗಿವೆಯೆ?

ಮತಾಂತರ ಹೊಂದಿದ ಮರುಕ್ಷಣದಲ್ಲೇ, ಇದೇ ಹಿಂದೂ ಈ ಭಾವನೆ ಗಳನ್ನೆಲ್ಲಾ ಬಿಸಾಡಿ, ಸರ್ಪ ತನ್ನ ಹೊರಮೈ ಕಳಚಿ, ಹೊಸ ರೂಪ ತಾಳಿದಂತೆ, ಹೊಸ ಚೈತನ್ಯ ಹೊಂದಿ, ಬೆರಗುಗೊಳಿಸುವ ಹಾಗೆ ಕ್ರಿಯಾಶೀಲ, ಶ್ರದ್ಧಾವಂತ, ನಿಷ್ಠಾವಂತ, ಧರ್ಮಿಷ್ಠನಾಗುತ್ತಾನೆ! ತಾನು ಈ ಹಿಂದೆ ಹಿಂದೂವಾಗಿದ್ದೆ, ಹಿಂದೂ ಧರ್ಮ ತನ್ನ ಧರ್ಮ, ಹಿಂದೂ ಸಂಸ್ಕೃತಿ ತನ್ನ ಸಂಸ್ಕೃತಿ, ಹಿಂದೂದೇಶ, ತನ್ನ ದೇಶ, ಹಿಂದೂ ಜನ, ತನ್ನ ಸಹೋದರರು, ಎಲ್ಲವನ್ನೂ ಮರೆಯುತ್ತಾನಲ್ಲ! ಎಂತಹ ವಿಪರ್ಯಾಸ? ಎಂತಹ ವಿಧಿವಿಡಂಬನೆ?

"ನೀನು ಇಷ್ಟೆಲ್ಲಾ ಮಾತನಾಡುತ್ತೀಯಲ್ಲಾ! ಸಿಖ್‌ರು ಯಾರು ಅಂದರೆ ಹಿಂದೂಗಳು ಮತಾಂತರ ಹೊಂದಿದವರು, ಗುರುಗ್ರಂಥ ಸಾಹಿಬ್‌ನ್ನು ಪೂಜಿಸುವವರು ಎಂದು ಹೇಳಿದೆಯಲ್ಲಾ! ನಮ್ಮ ಸಿಖ್ ಮತದ ಬಗ್ಗೆ ಏನು ತಿಳಿದಿದೆ ನಿನಗೆ?"

ಸರ್ದಾರ್ಜೀ, ಕಪೂರ್‌ಗೆ ಸವಾಲೆಸೆದ. ಧರ್ಮದ ಬಗ್ಗೆ ಯಾರಿಗೆ ತಾನೇ ಅರಿವಿದೆ? ಯಾವ ಧರ್ಮೀಯರಿಗೆ ತಮ್ಮ ಧರ್ಮದ ಬಗ್ಗೆ ತಿಳಿದುಕೊಳ್ಳಬೇಕೆಂಬ ಆಸಕ್ತಿ ಇದೆ! ಎಲ್ಲರೂ ಭಗವಂತನನ್ನು ನಂಬುವವರೆ? ಎಲ್ಲರೂ ಗುಡಿ, ಗುರುದ್ವಾರ, ಮಸೀದಿ, ಚರ್ಚುಗಳಿಗೆ ಹೋಗುವವರೆ! ಆದರೆ ಅವರವರ ಧರ್ಮದ ಮೂಲಭೂತ ರೂಪರೇಖೆಗಳ ಬಗ್ಗೆಯಾಗಲೀ, ತತ್ವವಿಚಾರಗಳಾಗಲೀ, ಶಾಸ್ತ್ರಜ್ಞಾನವಾಗಲೀ ಅರಿವಿದೆಯೆ? ಅಥವಾ ಅರಿಯಬೇಕೆಂಬ ಹಂಬಲವಿದೆಯೆ? ಹಂಬಲವಿದ್ದರೂ, ಕಲಿಸಬೇಕೆಂಬ ತಿಳಿಯಪಡಿಸಬೇಕೆಂಬ ಆಸಕ್ತಿ ಧರ್ಮ ಪ್ರಚಾರಕರಿಗೆ ತಂದೆ-ತಾಯಿಯಂದರಿಗೆ, ಗುರು-ಪಂಡಿತರಿಗೆ ಇದೆಯೆ?

"ನನಗೆ ತಿಳಿದರೂ ಒಂದೇ, ತಿಳಿಯದಿದ್ದರೂ ಒಂದೆ! ನೀನು ಸಿಖ್ ಅಲ್ಲವೇ? ನಿನಗೆ ತಿಳಿದಿದೆಯಾ?"

"ತಿಳಿಯದಿದ್ದರೆ, ನಿನಗೆ ಈ ಪ್ರಶ್ನೆ ಹಾಕುತ್ತಿರಲಿಲ್ಲ!"

"ಹಾಗಾದರೆ, ದಯಮಾಡಿ ಹೇಳಪ್ಪಾ!"

ನಗು, ಕಪೂರ್‌ನ ಮುಖದಲ್ಲಿ ಮಾಸಿರಲಿಲ್ಲ.

"ಗುರುನಾನಕ್‌ರ ಪ್ರಕಾರ, ಧರ್ಮ ಒಂದು ಅನುಭವ, ನಂಬಿಕೆ, ವಿಧಿ, ಶಾಸ್ತ್ರಗಳ ಆಚರಣೆಯಲ್ಲ. ದೇವರೊಬ್ಬ. ಅವನ ಸಾಕ್ಷಾತ್ಕಾರ ಮಾನವನ ಅಂತಿಮ ಗುರಿ. ಈ ಗುರಿ ಸಾಧಿಸಲಿಕ್ಕೆ, ಮನಸ್ಸು ಮತ್ತು ಹೃದಯಗಳ ಶಿಷ್ಟಪಾಲನೆಯ ಪಥ ಹಿಡಿದು ಹೋಗಬೇಕು. ಇದು ಆತ್ಮಸಮರ್ಪಣೆ ಮತ್ತು ಸ್ವಾರ್ಥತ್ಯಾಗಗಳಿಂದ ಸಾಧ್ಯ. ಇದು ಸಹಜವಾಗಿ ಬರಬೇಕು, ದೇಹ, ಮನಸ್ಸುಗಳ ದಂಡನೆಗಳಿಂದಲ್ಲ....."

"ಗುರುನಾನಕರು, ಹಿಂದೂಗಳ ತರಹ, 'ಕರ್ಮ' 'ಪುನರ್ಜನ್ಮ' 'ಮೋಕ್ಷ' ಇವುಗಳಲ್ಲಿ ನಂಬಿಕೆ ಇಟ್ಟಿರುತ್ತಾರಲ್ಲ. ಇದಕ್ಕೆ ಏನು ಹೇಳುವಿ?"

ಕಪೂರ್ ಮಧ್ಯ ಬಾಯಿ ಹಾಕಿ ಪ್ರಶ್ನಿಸಿದ.

"ಇರಬಹುದು, ಆದರೆ ನಾನಕ್ ಹಿಂದೂಗಳು ನಂಬಿಕೆ ಇಟ್ಟಿರುವ ವೇದ, ಪುರಾಣ, ತ್ರಿಮೂರ್ತಿಗಳು, ವೈರಾಗ್ಯ, ಹಟಯೋಗ ಮುಂತಾದವುಗಳನ್ನು ನಂಬಲಿಲ್ಲ. ಮುಖ್ಯವಾಗಿ, ವರ್ಣಾಶ್ರಮ, ಜಾತಿಪದ್ಧತಿ, ನೂರಾರು ಕರ್ಮ, ವಿಧಿಗಳ ಆಚರಣೆಗಳನ್ನು ಬಲವಾಗಿ ವಿರೋಧಿಸಿದರು."

"ಹೌದು. ವಿರೋಧಿಸಿದರು. ಒಪ್ಪುತ್ತೇನೆ. ಆದರೆ, ಇವೆಲ್ಲಾ ಒಬ್ಬ ಸಾಮಾಜಿಕ ವ್ಯವಸ್ಥೆಯ ವಿರೋಧ ಪಡಿಸುವಂತಹುದು. ನಾನು ನಿನ್ನನ್ನು ಕೇಳಿದ್ದು, ನಿಮ್ಮ ಧರ್ಮದ ಮೂಲತತ್ವ ಏನು ಎಂದು? ಇದಕ್ಕೆ ಉತ್ತರ ಕೊಡಪ್ಪ?"

ಮತಮತಗಳ ಗಲಿಬಿಲಿ ಬಲವಾಗಿತ್ತು. ಕಪೂರ್‌ನ ಪ್ರಶ್ನೆ, ಸರ್ದಾರ್ಜೀಗೆ

ಗಲಿಬಿಲಿ ಉಂಟಾಗಿತ್ತು. ಅವನು ಕೆಲವುಕ್ಷಣ ಸುಮ್ಮನಾದ. ಉತ್ತರ ಹೇಳುವುದು ಕಷ್ಟವಾಗಿರಬೇಕು.

"ನಾನು ಆಗಲೇ ಹೇಳಿದೆನಲ್ಲ. ದೇವರು ಒಬ್ಬನೇ! ದೇವರ ಕರುಣೆಯನ್ನು ಪಡೆಯುವುದಕ್ಕೋಸ್ಕರ ನಾವು ಆತ್ಮಸಮರ್ಪಣೆ, ಸ್ವಾರ್ಥತ್ಯಾಗ ಮಾಡಬೇಕು."

"ಒಪ್ಪಿದೆ. ಎಲ್ಲಾ ಧರ್ಮಗಳು ಇವೇ ಹೇಳುವುದು- ದೇವರು ಒಬ್ಬನೇ. ದೇವರಿಗಾಗಿ ಆತ್ಮಸಮರ್ಪಣೆ, ಸ್ವಾರ್ಥತ್ಯಾಗ ಮಾಡಿ ಎಂದು! ಮುಂದೆ ಹೇಳು!"

"'ಸಹಜ ಯೋಗ' ಅಂದರೆ ಭಕ್ತಿ, ಕರ್ಮ ಮತ್ತು ಜ್ಞಾನಯೋಗಗಳ ಸಮ್ಮಿಶ್ರ ಯೋಗದ ಅನುಚರಣೆಯೇ ಗುರುನಾನಕರ ಮುಖ್ಯ ತತ್ವ."

"'ಹಟಯೋಗ' ಬೇಡವೆಂದರು ಯಾಕೆ?"

"ಯಾಕೆಂದರೆ, ದೇಹವಿರುವುದು ಸುಡುವುದಕ್ಕಲ್ಲ, ಘಾಸಿಗೊಳ್ಳುವುದಕ್ಕಲ್ಲ. ತನ್ನನ್ನೇ ತಾನು ಬಲಹೀನವಾಗಿಸಿಕೊಂಡರೆ, ತನ್ನ ಅಥವಾ ಸಮಾಜದ ಉದ್ಧಾರ ವಾದರೂ ಹೇಗೆ ಆದೀತು? ಮನಸ್ಸು ಹೇಗೆ ಧೃಡವಾಗಿರಬೇಕೋ ಹಾಗೇ ದೇಹವೂ ಗಟ್ಟಿಯಾಗಿರಬೇಕು."

"ಹಿಂದೂಗಳಲ್ಲಿ ದೇಹ ಕೃಷವಾಗಿರಬೇಕು ಎಂದು ಯಾವ ಶಾಸ್ತ್ರಗ್ರಂಥದಲ್ಲಿ ಹೇಳಿದೆ?"

"ಅದು ನನಗೆ ಗೊತ್ತಿಲ್ಲ! ಆದರೆ, ನಿಮ್ಮ 'ಹಟಯೋಗ'ದಲ್ಲಿ ದೇಹ ದಂಡಿಸಿ, ಮೋಕ್ಷ ಪಡೆಯಬಹುದು ಎಂದು ಹೇಳಿದೆಯಂತಲ್ಲ! ಗುರುನಾನಕರು ಹೇಳಿದರು:

'ನೈತಿಕಹೀನ ಮನುಷ್ಯ ಮತ್ತು ಸಮಾಜ, ಲೌಕಿಕ ಕಂಟಕಗಳಿಗೆ ಈಡಾ ಗುತ್ತವೆ.'

"ಈ ತತ್ವ ಎಲ್ಲಾ ಧರ್ಮಗಳಲ್ಲಿ ಕಾಣಸಿಗುತ್ತದಲ್ಲಾ. ನೈತಿಕತೆ ಇಲ್ಲದೆ ಯಾವ ಮನುಷ್ಯ ಉದ್ಧಾರ ಆಗಿದ್ದಾನೆ?"

"ನಮ್ಮ ಆಸೆಆಕಾಂಕ್ಷೆಗಳನ್ನು ತುಳಿದು, ಕಾವಿಬಟ್ಟೆತೊಟ್ಟು, ದಿಗಂಬರರಾಗಿ, ಊರು ಊರು ಅಲೆದು ದೈವತ್ವ ಪಡೆಯಿರಿ ಎಂದು ಹೇಳಲಿಲ್ಲ. ಹಾಡು, ನಾದಗಳಿಂದ, ಭಕ್ತಿಭಾವನೆಗಳಿಂದ, ಪರಿಶುದ್ಧ ಆತ್ಮದಿಂದ ಆನಂದದ ಪರಿಪೂರ್ಣತೆಯನ್ನು ಪಡೆದು ಕೊಳ್ಳಿರೆಂದು ಬೋಧಿಸಿದರು ನಾನಕರು" ಉನ್ಮಾದದಿಂದ ಹೇಳುತ್ತಾ ಹೋದ ಸರ್ದಾರ್ಜೀ.

"ನಮ್ಮ ಭಕ್ತಿಯೋಗವೂ ಇದೇ ಅಲ್ಲವೇ ಬೋಧಿಸುವುದು?"

"ಇಲ್ಲ! ನಿಮ್ಮ ಭಕ್ತಿಯೋಗ ಈ ಪ್ರಪಂಚವನ್ನು 'ಮಾಯ' ಎಂದು ಕರೆದರು. ಗುರುನಾನಕರು ಇದನ್ನು ಅಲ್ಲಗಳೆದರು. ಈ ಪ್ರಪಂಚ, ದಿಟ, ಈ ದೇವರು ದಿಟ,

ಈ ಸಮಾಜ, ಎಲ್ಲವೂ ದಿಟ. ದೇವರು ಇಲ್ಲೇ ಇದ್ದಾನೆ. ದೇವರಿಗಾಗಿ, ಮುಂದಿನ ಜನ್ಮ ನೀಡು ಎಂದು ಬೇಡಿಕೊಳ್ಳುವುದು ಬೇಡ. ಇದೇ ಜನ್ಮದಲ್ಲಿ, ಇದೇ ದೇಹದಲ್ಲಿ, ಮನಸ್ಸಿನಲ್ಲಿ, ಪ್ರಪಂಚದಲ್ಲಿ, ಈ ಸಮ್ಮಿಶ್ರ ಯೋಗಾಭ್ಯಾಸ ಗಳಿಂದ ಮೋಕ್ಷ ಪಡೆಯಬಹುದು."

"ನೀನು ಹೇಳಿದ್ದನ್ನು ಒಪ್ಪುತ್ತೇನೆ. ಆದರೆ ಈ ವಿಷಯದಲ್ಲಿ ಭಿನ್ನಾಭಿಪ್ರಾಯ ವಿದ್ದರೂ, ಪರಸ್ಪರ ಹಿಂಸೆ, ಆತಂಕ ಒಡ್ಡಿ ನರಕಯಾತನೆ ಯಾಕೆ ಅನುಭವಿಸಬೇಕು? ನಿಮ್ಮ ಧರ್ಮ ಪಾಲಿಸುವುದಕ್ಕೆ ಯಾರಾದರೂ ಅಡ್ಡಿ ಮಾಡಿದ್ದಾರೆಯೆ?"

ಮೌನವಾಗಿ ಇವರ ಸಂಭಾಷಣೆಯನ್ನು ಆಲೈಸುತ್ತಿದ್ದ ನಾನು ಪ್ರಶ್ನೆ ಕೇಳಿದೆ.

"ಹೌದು. ನಮ್ಮ ಧರ್ಮಾಚರಣೆಯಲ್ಲಿ ಸರಕಾರ ಮಧ್ಯ ಪ್ರವೇಶಿಸುತ್ತಿದೆ. ಆದ್ದರಿಂದಲೇ ಈ ಘರ್ಷಣೆ, ಗಲಾಟೆ, ತಿಕ್ಕಾಟ."

"ಸರಕಾರವೇನಾದರೂ ಸಿಖ್ ಮತ ಸರಿಯಾಗಿಲ್ಲ, ಅದು ಉತ್ತಮವಾಗಿಲ್ಲ. ಅದರ ಶಾಸ್ತ್ರಗಳನ್ನು ನಿರಾಕರಿಸಿ ಎಂದು ಹೇಳಿಕೆ ಇತ್ತಿದ್ದಾರೆಯಾ?"

"ಇಲ್ಲ. ಆದರೆ ಪರೋಕ್ಷವಾಗಿ ನಮ್ಮ ವಿರುದ್ಧ ಪ್ರಚಾರ ಮಾಡುತ್ತಿದ್ದಾರೆ."

"ಹೇಗೆ?"

"ಸಿಖ್‌ರು ಹಿಂದೂಗಳು ಒಬ್ಬರೇ. ಅವರಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಸಿಖ್ ಧರ್ಮ, ಹಿಂದೂ ಧರ್ಮದ ಒಂದು ಶಾಖೆ' ಹೀಗೆ ಹೇಳಿ, ನಮ್ಮ ಧರ್ಮವನ್ನು ನಾಶ ಮಾಡಲಿಕ್ಕೆ ಹೊರಟಿದ್ದಾರೆ."

"ಸರಕಾರ ಹೇಳುತ್ತಿದ್ದಾರೋ ಅಥವಾ ರಾಜಕಾರಣಿಗಳು ಹೇಳುತ್ತಿದ್ದಾರೆಯೋ?" ನಿರುತ್ತರನಾದ ಸರ್ದಾರ್ಜೀ.

ವೈಯಕ್ತಿಕ ಕಾರಣಗಳಿಂದ, ರಾಜಕೀಯ ಕಾರಣಗಳಿಂದ, ಸಾಮಾಜಿಕ ಕಾರಣ ಗಳಿಂದ, ತನಗೆ ಒಪ್ಪಿಗೆಯಾದ ತತ್ವವಿಚಾರಗಳೇ ಸರಿಯಾದುದು, ಉತ್ತಮವಾದುದು, ಇತರ ತತ್ವಗಳು ತಮಗೆ ಸರಿಬರದು ಎಂಬ ರಾಗದ್ವೇಷಗಳನ್ನು ಹುಟ್ಟಿಸಿಕೊಂಡು, ಜನರು ತಮ್ಮ ಶಾಂತಿಗೆ, ತಮ್ಮ ಮುಕ್ತಿಗೆ ಅಡ್ಡಿ ಮಾಡಿಕೊಂಡು ನರಳುತ್ತಿದ್ದಾರೆಯೆ? 'ಒಂದು ಧರ್ಮ ಇನ್ನೊಂದು ಧರ್ಮಕ್ಕೆ ತೊಡಕಾಗುವುದಾದರೆ ಅದು ಧರ್ಮವೇ ಅಲ್ಲ. ಅದು ಕುತ್ಸಿತ ಧರ್ಮವೆನ್ನಿಸಿಕೊಳ್ಳುತ್ತದೆ, ಎಂದು ಮಹಾಭಾರತದಲ್ಲಿ ಹೇಳಿದೆಯಂತೆ. ಧರ್ಮ ಒಂದು ವ್ಯಕ್ತಿಯ ಸ್ವಂತ ವಿಷಯಕ್ಕೆ ಸೇರಿದ್ದಲ್ಲವೇ? ಮನುಷ್ಯ ತನ್ನನ್ನು ತಾನೇ ನೈತಿಕವಾಗಿ ಮೇಲಕ್ಕೆತ್ತಿಕೊಳ್ಳಲಿಕ್ಕೆ ಪ್ರಯತ್ನಿಸುವುದೇ ಧರ್ಮದ ಆದ್ಯ ಗುರಿ ಎಂದು ಹೇಳುತ್ತಾರೆ. 'ದಯೆಯೇ ಧರ್ಮದ ಮೂಲ' ವೆನ್ನುತ್ತಾರೆ. ಅಹಿಂಸೆ, ಸತ್ಯ, ದಯೆ, ಕ್ಷಮೆ, ಸಹನೆ, ಧರ್ಮದ ಆಧಾರ ಸ್ತಂಭಗಳು ಎಂದಿದ್ದಾರೆ.

ಇಷ್ಟೆಲ್ಲಾ ಹೇಳಿ, ಹಾಡಿ, ಹೊಗಳಿ, ಎಲ್ಲೆಡೆ ಪ್ರಸಾರ ಮಾಡಿ, ಶಿಕ್ಷಣ ನೀಡಿ, ಢಂಗೂರ ಸಾರಿದರೂ, ಯಾಕೆ ಧರ್ಮದ ಬಗ್ಗೆ ಈ ಧರ್ಮಯುದ್ಧ?

"ನಿಮ್ಮ ಧರ್ಮದ ಅಸ್ತಿತ್ವಕ್ಕೆ ಚ್ಯುತಿ ಬಂದಿದೆ ಎಂದು ಹೆದರಿರಬೇಕು ನೀವು, ಅಲ್ಲವೇ? ಎಲ್ಲಿ ಹಿಂದೂಧರ್ಮದ ವಿಶಾಲ ನೆರಳಿನಡಿಯಲ್ಲಿ ನಿಂತು, ಬೆಳೆಯಲು ಅಸಾಧ್ಯವಾಗಿ, ನಶಿಸಿಹೋಗುತ್ತದೆ ಎಂಬ ಶಂಕೆ ಇರಬೇಕು, ಅಲ್ಲವೇ?"

ಕಪೂರ್ ಕೇಳಿದ.

"ಇರಬಹುದು. ಜೈನರು, ಬುದ್ಧರು, ಹಿಂದೂಗಳು ಎಂದು ತೀರ್ಮಾನಿಸಿ, ಅವರಿಗೆ ತಮ್ಮ ಸ್ವಂತಿಕೆಯನ್ನು ಈಗಾಗಲೇ ನಾಶ ಮಾಡಿಬಿಟ್ಟಿದ್ದೀರಲ್ಲವೇ?"

"ನಾಶ ಆಗಿಹೋಗಿದೆಯೇ? ಅಥವಾ ಆಗುತ್ತಾ ಇದೆಯೆ?"

"ನಾಶ ಆಗುತ್ತಾ ಇದೆ. ಇದೇ ಕಾರಣಕ್ಕೆ ಮುಸ್ಲಿಮರು ಪ್ರತ್ಯೇಕ ರಾಜ್ಯ ಕೇಳಿ ಪಡೆದರು."

"ಪ್ರತ್ಯೇಕ ಪಡೆದು ಅವರು ಉದ್ಧಾರ ಆಗಿದ್ದಾರೆಯೆ! ಅಥವಾ ಅವರ ಧರ್ಮ ಉದ್ಧಾರ ಆಗಿದೆಯೆ? ಇಲ್ಲೇ ಉಳಿದ ಅಲ್ಪಸಂಖ್ಯಾತರು ಉದ್ಧಾರ ಆಗಿಲ್ಲವೇ? ಅವರ ಶೋಷಣೆ ನಡೆಯುತ್ತಾ ಇದೆಯೆ? ನಮ್ಮ ದೇಶದಿಂದ ಹೊರಗೆ ಹೋದವರು ಉದ್ಧಾರವಾಗಿದ್ದಾರೆಯೆ?" ಪ್ರಶ್ನೆಗಳ ಸುರಿಮಳೆ ಸುರಿಸಿದ ಕಪೂರ್.

ವಿಷಯ ಗಂಭೀರವಾಗಿ, ಮನಸ್ತಾಪ, ವ್ಯಸನಗಳಿಗೆ ಎಡೆಕೊಡಬಹುದೆಂದು ಬಗೆದು ನಾನು ಚರ್ಚೆಗೆ ಕಡಿವಾಣ ಹಾಕಲು ಎಣಿಸಿದೆ.

"ಅವರು ಉದ್ಧಾರ ಆಗಿದ್ದಾರೋ, ಇಲ್ಲವೋ, ಆ ಪ್ರಶ್ನೆಗೆ ಯಾಕೆ ಉತ್ತರ ಕೊಡಲಿ? ನಮ್ಮ ಉದ್ಧಾರಕ್ಕೆ ನನ್ನ ಪ್ರಯತ್ನ ಮಾಡುವುದು ತಪ್ಪೇ?"

"ತಪ್ಪಿಲ್ಲ! ಈಗ ನಿನಗೆ ಏನು ಬೇಕು? ಪ್ರತ್ಯೇಕ ರಾಷ್ಟ್ರ ಬೇಕಾ?"

"ಪ್ರತ್ಯೇಕ ರಾಷ್ಟ್ರದ ಪ್ರಶ್ನೆ ಅಲ್ಲ! ಪ್ರತ್ಯೇಕ ರಾಜ್ಯದ ಪ್ರಶ್ನೆ. ನಾನು ಈ ಹಿಂದೆಯೇ ಹೇಳಿದೆನಲ್ಲ. ನಮ್ಮ ರಾಷ್ಟ್ರ ಒಂದು ಸಾಮೂಹಿಕ ರಾಜ್ಯಗಳ ಒಕ್ಕೂಟ. ವಿವಿಧ ರಾಜ್ಯಗಳು, ವಿವಿಧ ಪ್ರದೇಶಗಳು ಒಟ್ಟುಗೂಡಿ, ಒಂದು ಒಕ್ಕೂಟವನ್ನು ನಿರ್ಮಿಸಿ, ಅದಕ್ಕೆ ರಾಷ್ಟ್ರವೆಂದು ಕರೆದವು. ಅಂದಮೇಲೆ ರಾಜ್ಯಗಳು ತಮ್ಮ ಸ್ವಾತಂತ್ರ್ಯವನ್ನು ಮಿತಿರೀತಿಯಲ್ಲಿ ಕಳೆದುಕೊಂಡು, ಒಕ್ಕೂಟಕ್ಕೆ ಆ ಸ್ವಾತಂತ್ರ್ಯವನ್ನು ಒಪ್ಪಿಸಿದವು. ಆ ಸ್ವಾತಂತ್ರ್ಯವನ್ನು ಒಪ್ಪಿಸುವಾಗ, ಬಹು ಮುಖ್ಯ ಸ್ವಾತಂತ್ರ್ಯವಾದ ಆರ್ಥಿಕ ಮತ್ತು ಹಣಕಾಸಿನ ಸ್ವಾತಂತ್ರ್ಯವನ್ನು ಕಳೆದುಕೊಂಡವು. ರಾಜಕೀಯ, ಸಾಮಾಜಿಕ, ಮತ್ತಿತರ ಸ್ವಾತಂತ್ರವನ್ನು ಪಡೆದರೂ, ಮನುಷ್ಯನ ಪ್ರಗತಿಗೆ ಮುಖ್ಯವಾದ ಆರ್ಥಿಕ ಸ್ವಾತಂತ್ರ್ಯ ಕಳೆದು ಅನಾಥರಾಗಿದ್ದೇವೆ."

ಸರ್ದಾರ್ಜೀಯ ವಾದ ವಿಚಿತ್ರವಾಗಿದೆಯಲ್ಲಾ ಎಂದು ನನಗೆ ತಲೆದೋರಿತು. ಸ್ವಾತಂತ್ರದ ಎಲ್ಲಾ ಅಂಶಗಳನ್ನೂ ಅನುಭವಿಸುತ್ತಿರುವ ನಾವು, ಪ್ರತ್ಯೇಕವಾಗಿ ಆರ್ಥಿಕ ಸ್ವಾತಂತ್ರ್ಯ ಪಡೆದಿಲ್ಲ ಅಂದರೆ ಏನು ಅರ್ಥ?

"ನೀವು ಹೇಳುವುದಾದರೂ ಏನು?"

"ನಾನು ಉದಾಹರಣೆಯ ಮೂಲಕ ನಿಮಗೆ ಉತ್ತರ ಕೊಡುತ್ತೇನೆ. ಪಂಜಾಬ್, ಕೃಷಿಪ್ರಧಾನ ದೇಶ. ಗೋಧಿ, ಅಕ್ಕಿ, ಜೋಳ, ಅತ್ಯಂತ ಸಮೃದ್ಧಿಯಾಗಿ ಬೆಳೆಸುತ್ತೇವೆ. ಹಾಲು ಹೈನುಗಾರಿಕೆಯಲ್ಲಿ ನಾವು ಎತ್ತಿದ ಕೈ. ಕೈಗಾರಿಕೆ ಕ್ಷೇತ್ರದಲ್ಲಿ ದುಡಿಯಲು ಸಿದ್ಧರಾದ ಕಷ್ಟ ಸಹಿಷ್ಣುಗಳು ನಾವು. ಈಗ ನೋಡಿ! ನಾವು ಬೆಳೆದ ಪದಾರ್ಥಗಳನ್ನು ಹೊರದೇಶಕ್ಕಾಗಲೀ, ದೇಶದ ಒಳಗಾಗಲೀ, ಒಳ್ಳೇ ಬೆಲೆಗೆ ಮಾರಲಿಕ್ಕೆ, ಕೇಂದ್ರ ಸರಕಾರದ ಪರವಾನಿಗೆ ಬೇಕು. ಅವರ ಒಪ್ಪಿಗೆ ಇಲ್ಲದೆ ನಾವು ಏನೂ ಮಾಡುವಂತಿಲ್ಲ. ಹಾಗೆ ಒಂದು ಪಕ್ಷ ಒಪ್ಪಿಗೆ ಪಡೆದು ರಫ್ತು ಮಾಡಿದರೂ, ಆ ಹಣವನ್ನು ಅಂದರೆ ಫಾರಿನ್ ಎಕ್ಸಚೇಂಜ್‌ನ್ನು ನಾವು ನಮ್ಮ ರಾಜ್ಯದ ಉಪಯೋಗಕ್ಕೆ ಬಳಸಿಕೊಳ್ಳಲಿಕ್ಕೆ ಆಗುವುದಿಲ್ಲ."

"ಇದು ಎಲ್ಲಾ ರಾಜ್ಯಗಳಿಗೂ ಅನ್ವಯಿಸುತ್ತದೆಯಲ್ಲವೇ? ನಮ್ಮ ಕರ್ನಾಟಕ ರಾಜ್ಯದಿಂದ, ಕಾಫೀ, ರೇಷ್ಮೆ, ಕೊಬ್ಬರಿ, ಕಬ್ಬಿಣದ ಅದುರು, ಮುಂತಾದ ಪದಾರ್ಥಗಳ ರಫ್ತಿನಿಂದ ವಿದೇಶಿ ವಿನಿಮಯಗಳಿಸುತ್ತಾ ಇದ್ದೇವಲ್ಲಾ! ಆದರೆ ಇದರಿಂದ ರಾಷ್ಟ್ರಕ್ಕೆ ಲಾಭವಾದರೆ, ನಮಗೂ ಲಾಭ"

ನನ್ನ ಮಾತು ಕೇಳಿ, ಸರ್ದಾರ್ಜೀ ನಕ್ಕುಬಿಟ್ಟ.

"ಎನ್. ಆರ್.ಐ.ಗಳಿಂದ ಸಿಗುವ ವಿನಿಮಯವೊಂದೇ ಪಂಜಾಬ್‌ನ್ನು ಒಂದು ಪ್ರಚಂಡ, ಬಲಶಾಲಿ ರಾಜ್ಯವನ್ನಾಗಿ ಮಾಡಲು ಸಾಧ್ಯ! ನಿಮ್ಮ ಕಾಫೀ ಪುಡಿ, ರೇಷ್ಮೆ, ನಮ್ಮ ಒಂದು ಜಿಲ್ಲೆಗಳಿಸುವಷ್ಟು ವಿದೇಶೀ ವಿನಿಮಯಗಳಿಸುವುದಿಲ್ಲ! ಕಾಫೀ ಪುಡಿಯಂತೆ! ಕಾಫೀಪುಡಿ!"

ಗಹಗಹಿಸಿ ನಕ್ಕ ಸರ್ದಾರ್ಜೀ!

ಅವನು ಹೇಳಿದ ಮಾತಿನಲ್ಲಿ ಅತಿಶಯೋಕ್ತಿ ಇರಲಿಲ್ಲ. ಪಂಜಾಬಿಗಳು ಪ್ರಪಂಚದ ಎಲ್ಲಾ ದಿಕ್ಕುಗಳಲ್ಲೂ ಹರಡಿ ಹಂಚಿ ಹೋಗಿದ್ದಾರೆ. ಅವರು ಕಷ್ಟಪಟ್ಟು, ಮೈ ಬಗ್ಗಿಸಿ, ಬೆವರು ಸುರಿಸಿ, ಹಣ ಗಳಿಸಿ, ತಮ್ಮ ತಾಯ್ನಾಡಿಗೆ ಕಳುಹಿಸುವ ಹಣ, ಅವರ ರಾಜ್ಯವನ್ನು ಒಂದು ಬಲಿಷ್ಠರಾಜ್ಯವನ್ನಾಗಿ ಮಾಡಬಹುದು. ಕರ್ನಾಟಕದ ಜನರಲ್ಲಿ, ಕೇವಲ ಇಂಜಿನಿಯರ್‌ಗಳು, ಡಾಕ್ಟರ್‌ಗಳು, ಮತ್ತು ಕೆಲವು ಕಾರಕೂನರು, ಅಕೌಂಟೆಂಟ್‌ಗಳು, ಹಣವನ್ನು ಆಯಾಯಾ ದೇಶಗಳಲ್ಲೇ ತೊಡಗಿಸಿ, ತಮ್ಮ

ರಾಜ್ಯಕ್ಕೆ ಅಥವಾ ರಾಜ್ಯದಲ್ಲಿ ತೊಡಗಿಸುವುದಕ್ಕೆ ನಾಚಿಕೆ ಅಥವಾ ಹಿಂಜರಿಯುವ ಪರಿಪಾಠವಿದೆಯಲ್ಲವೇ?

"ಕರ್ನಾಟಕದ ಎಷ್ಟು ಮಂದಿ ದೇಶದ ಗಡಿ ಕಾಯುವ ಕಾರ್ಯದಲ್ಲಿ, ಯುದ್ಧ ಜರುಗಿದ ಸಮಯದಲ್ಲಿ ಪ್ರಾಣ ತೊರೆದಿದ್ದಾರೆ? ಸತ್ತ ಸಂಖ್ಯೆ ಗೊತ್ತಿದೆಯಾ ನಿಮಗೆ?"

ಸರ್ದಾರ್ಜೀಯ ಮೆಶಿನ್‌ಗನ್‌ನಿಂದ ಹೊರಹೊಮ್ಮುತ್ತಿದ್ದ ಗುಂಡುಗಳ ಹಾವಳಿ ಮತ್ತೆ ಶುರುವಾಗಿ ನನ್ನನ್ನು ಘಾಸಿಗೊಳಿಸುತ್ತಿದ್ದವು.

ಸಿಖ್‌ರ ವೀರತನ, ಕಲಿತನಕ್ಕೆ ಸರಿಸಾಟಿಯಿಲ್ಲವೆ? ಸಿಖ್‌ರ ಪೌರುಷ ವಿಶ್ವ ವಿಖ್ಯಾತವಾಗಿದೆಯಲ್ಲವೇ? ಬ್ರಿಟಿಷರ ವಿರುದ್ಧ ಹೋರಾಡಿದ ಅವರು, ಅದೃಷ್ಟದ ಅಭಾವದಿಂದ ಪರಾಭವ ಹೊಂದಿದ್ದು ಯಾರಿಗೆ ತಿಳಿದಿಲ್ಲ? ಅನಾಯಕತ್ವ, ಯೋಜನೆಗಳ, ಯುದ್ಧತಂತ್ರಗಳ ಅನನುಭವಗಳಿಂದ ನರಳಿ, ಸೋಲನ್ನಪ್ಪಿದ್ದು ನಿಜವಾದರೂ, ಕಲಿತನ ಮತ್ತು ಅಪೂರ್ವ ಪೌರುಷಗಳ ಅಭಾವದಿಂದಲ್ಲ ಎಂಬುದು ಸರ್ವವಿದಿತ.

"ಒಂದು ದೇಶದ ಸ್ವಾತಂತ್ರ್ಯಕ್ಕೆ, ದೇಶಪ್ರೇಮಿಗಳ, ಧೈರ್ಯ, ಸಾಹಸ, ಕೆಚ್ಚು, ಎದೆಗಾರಿಕೆಯುಳ್ಳ ಯೋಧರ ಅಗತ್ಯ 'ಬೇಕೇ ಬೇಕು.' ಸಿಖ್‌ರು ಈ ಅಗತ್ಯವನ್ನು ಪೂರೈಸುತ್ತಾರೆ. ನಮ್ಮದೇ ರಾಜ್ಯ ಸ್ಥಾಪನೆಯಾದರೆ, ಅದರ ಸ್ವಾತಂತ್ರ್ಯವನ್ನು ಕಾಪಾಡಿ ಕೊಳ್ಳಲು ಇನ್ನೇನು ಬೇಕು?"

ಮೆಶಿನ್‌ಗನ್ ಕೆಲಸ ಮಾಡುತ್ತಲೇ ಇತ್ತು.

"ತ್ಯಾಗ ಬಲಿದಾನಕ್ಕೆ ಹಿಂಜರಿಯದ ನಾವು, ಅಹಿಂಸಾ ಮಂತ್ರದ ಜಪ ಹೇಳುತ್ತಾ ಕುಳಿತುಕೊಳ್ಳುವಷ್ಟು ಪುಕ್ಕಲರಲ್ಲ."

"ಸ್ವಲ್ಪ ಸುಮ್ಮನಿರ್ತೀಯಾ? ಒಂದೇ ಉಸಿರಿಗೆ ಮಾತಾಡುತ್ತಾ ಇದ್ದೀಯಲ್ಲ? ತಾಳ್ಮೆಯಿಂದ ಕೇಳುತ್ತಾ ಇದ್ದೇವೆ ಎಂದು ಒಂದೇ ಸಮನೇ ಬಡಬಡಿಸುತ್ತಾ ಇದ್ದೀಯಲ್ಲ!" ಕಪೂರ್ ರೇಗಿದ.

"ನೀನು ಹೇಳಿದ್ದು ನಿಜ. ನಿಮಗೆ ತಾಳ್ಮೆ ಇದೆ ಎಂದೇ ನಾನು ಇಷ್ಟು ಮಾತ ನಾಡಲು ಅವಕಾಶ ಸಿಕ್ಕಿತು. ಇದೇ ರೀತಿ, ನಮಗೆ ತಾಳ್ಮೆ, ಅಹಿಂಸೆ, ಸಹಿಷ್ಣುತೆ, ಉದಾರತೆ ಇದ್ದುದರಿಂದಲೇ ಬ್ರಿಟಿಷ್‌ರು ನೂರಮೂವತ್ತು ವರ್ಷ ನಮ್ಮನ್ನು ಆಳಿದರು. ತಾಳ್ಮೆ, ಹೇಡಿತನಕ್ಕೆ ತಿರುಗಿತು. ಇಲ್ಲದೇ ಹೋದ ಪಕ್ಷಕ್ಕೆ, ಪ್ಲಾಸೀ ಕದನದಲ್ಲಿ, ಕೇವಲ ೧೭ ಇಂಗ್ಲಿಷ್ ಸೈನಿಕರು ಸತ್ತು, ಇಡೀ ಬೆಂಗಾಳ ರಾಜ್ಯ ಸಂಪಾದಿಸಿದ್ದು ಸುಳ್ಳೇ? ಬರೀ ಹತ್ತು, ಇಪ್ಪತ್ತು ಸಾವಿರ ಇಂಗ್ಲಿಷ್‌ರು ೩೦ ಕೋಟಿ

ಜನರನ್ನು ಆಳಿದ್ದು ಸುಳ್ಳೇ? ಕೇವಲ ಮೂರು ಸಾವಿರ ಮೊಘಲರು ಮೂರು ಕೋಟಿ ಜನರನ್ನು ಆಳಿದ್ದು ಸುಳ್ಳೇ! ತಾಳ್ಮೆ ಅಂತೆ ತಾಳ್ಮೆ! ನಮಗೆ ಸ್ವಾಭಿಮಾನ, ಕೆಚ್ಚು, ಧೈರ್ಯ ಹಠ, ಛಲ, ಸಾಹಸ, ಎದೆಗಾರಿಕೆ ಇದ್ದಿದ್ದರೆ, ಇಂಗ್ಲಿಷ್‌ನವರು ೧೯೪೭ ರವರೆಗೆ ಇಲ್ಲಿರಬೇಕಾಗಿರಲಿಲ್ಲ. ಯಾವಾಗಲೋ ಅವರನ್ನು ಓಡಿಸಿಬಿಡಬಹುದಾಗಿತ್ತು. ಅಹಿಂಸೆಯಂತೆ ಅಹಿಂಸೆ! ಅಹಿಂಸೆ ಎಂದು ಹೇಳಿದ ಗಾಂಧಿ! 'ಮಾಡು ಇಲ್ಲವೇ ಮಡಿ' ಎಂದು ಘೋಷಿಸಿದರು. 'ಮಾಡು' ಎಂದರೆ ಏನು? 'ಮಡಿ' ಎಂದರೆ ಏನು? ಹೇಡಿಗಳ ಹಾಗೆ ಜೈಲು ಭರ್ತಿಯಾಗುವುದೇ? ಲಾಠಿ ಏಟು ತಿನ್ನುವುದೇ? ಗುಂಡೇಟು ತಿಂದು ನಾಯಿಯ ತರಹ ಸಾಯುವುದೇ ಹೇಳಿ? ಹತ್ತು ಇಂಗ್ಲಿಷ್‌ರನ್ನು ಕೊಂದು, ಅವರು ಭಯ ಪಟ್ಟು ಓಡುವ ಹಾಗೆ ಮಾಡಿದ್ದರೆ, ಯಾವಾಗಲೋ ಅವರು ದೇಶ ಬಿಟ್ಟು ಓಡಿಹೋಗುತ್ತಿದ್ದರು. ದೇಶ ವಿಭಜನೆ ಆಗುತ್ತಿರಲಿಲ್ಲ! ಲಕ್ಷಾಂತರ ಜನರ ಹತ್ಯೆ ಆಗುತ್ತಿರಲಿಲ್ಲ! ಅನಗತ್ಯವಾಗಿ ಒಬ್ಬರಿ ಗೊಬ್ಬರು ಹೊಡೆದಾಡಿ ಸಾಯುವ ಬದಲು, ಇಂಗ್ಲಿಷ್‌ರನ್ನು ಹಿಡಿದು, ಕೊಚ್ಚಿ ಸಾಯಿಸಬಹುದಾಗಿತ್ತು. ಆಗ ನಾವು ಸತ್ತಿದ್ದರೂ, ಇಂಗ್ಲಿಷ್‌ರನ್ನು ಕೊಂದ ಪುಣ್ಯ ಬರುತ್ತಿತ್ತು!"

"ಹಿಂದೆ ನಡೆದ ಘಟನೆಗಳನ್ನು ಈಗ ನೆನೆದೂ ಚರ್ಚಿಸಿ, ಚಿಂತಿಸಿ ಫಲವೇನು? ಆಗಿದ್ದಾಯಿತು. ಈಗ ನಿನಗೆ ಮತ್ತೆ ನಮ್ಮ ದೇಶವನ್ನ ತುಂಡು ತುಂಡಾಗಿ, ಹಲವಾರು ಹೋಳಾಗಿ ಮಾರ್ಪಾಡಬೇಕೆಂಬ ಬಯಕೆಯೇ?" ಕಪೂರ್ ಹತಾಶನಾಗಿ ನುಡಿದ.

"ತುಂಡಾಗುವ ಬಯಕೆ ಇಲ್ಲ. ಆದರೆ ನಮಗೆ ಅರಿವಿಲ್ಲದಂತೆಯೇ ಅದು ತುಂಡಾಗುತ್ತಾ ಇದೆ. ಪೂರ್ಣ ತುಂಡಾಗುವ ಮೊದಲೇ, ನಾವು ಎಚ್ಚೆತ್ತುಕೊಂಡು, ದೇಶ ಹೋಳಾಗುವುದನ್ನು ತಪ್ಪಿಸಬಹುದಿಲ್ಲವೇ?"

ಸರ್ದಾರ್ಜೀಯ ಧ್ವನಿಯಲ್ಲಿ ಮಾರ್ಪಾಡಾಗಿತ್ತು. ಆದೇಶ ಕುಗ್ಗಿತ್ತು. ಸಮಾಧಾನದ ಉಸಿರು ಬಿಡುತ್ತಿದ್ದ.

"ಹೇಗೆ? ಖಲಿಸ್ಥಾನದಿಂದಲೇ?"

ಅರ್ಧ ಕುಶಾಲಿನಿಂದ, ಅರ್ಧ ಗಂಭೀರತನದಿಂದ ಕೇಳಿದ ಕಪೂರ್.

"ಹೌದು! ಏಕಾಗಬಾರದು? ನಾನು ಆಗಲೇ ಹೇಳಿದೆನಲ್ಲಾ? ಕೇಂದ್ರ ಸರಕಾರ ಮೂರು ಕ್ಷೇತ್ರಗಳಲ್ಲಿ ಅಧಿಕಾರ ಇಟ್ಟುಕೊಂಡು, ಬಾಕಿ ಎಲ್ಲಾ ಅಧಿಕಾರವನ್ನು ರಾಜ್ಯಗಳಿಗೆ ವಹಿಸಿಕೊಡಲಿ. ಆಗ ನೋಡು! ದೇಶ ಯಾಕೆ ಹೋಳಾಗುತ್ತದೆ ಅಥವಾ ಒಡೆಯುತ್ತದೆ!"

"ಮೂರು ಕ್ಷೇತ್ರವೆಂದರೆ-ರಕ್ಷಣೆ, ವಿದೇಶ ವಿಚಾರಗಳು ಮತ್ತು ಸಾರಿಗೆ ಸಂಪರ್ಕ ವಿಭಾಗಗಳು. ಅಲ್ಲವೇ?"

"ಹೌದು."

ಸರ್ದಾರ್ಜೀ, ಪುನಃ ಪುನಃ ಅದೇ ವಿಚಾರಕ್ಕೆ ಬರುತ್ತಿರುವುದನ್ನು ನೋಡಿದರೆ, ವಿಚಾರ ಬಹಳ ಗಂಭೀರವಾಗಿ, ಪರಿಹಾರ ಅವನಿಗೆ ದೊರಕುವುದು ಭ್ರಾಂತಿಯ ಕಥೆಯಾಗಿತ್ತು.

ತನ್ನ ಹೃದಯದಲ್ಲಿ ಸತತವಾಗಿ ತಳಮಳಗೊಳ್ಳುತ್ತಿರುವ ಸ್ವತಂತ್ರತೆಯನ್ನು ಕಾಪಾಡಿಕೊಳ್ಳುವ ಬಯಕೆ, ತನ್ನವರ, ಜೊತೆಗಾರರ, ಭಾಷಾಬಾಂಧವರ, ಸ್ವಧರ್ಮೀಯರ ಒಡನಾಟದ ಬಯಕೆ, ಇವುಗಳಿಂದ ಬಿಡುಗಡೆ ಹೊಂದಲು ಸಾಧ್ಯವೇ? ಸಂಘ, ಸಂಸ್ಥೆ, ಸಮಾಜ ಕಟ್ಟಲು ಯಾವಾಗಲೂ ಹಾತೊರೆಯುವ ಈ ಗುಣ ಮನುಷ್ಯನ ಗುಣಗಳಲ್ಲಿ ಸ್ವಾಭಾವಿಕ ಎನ್ನುವುದಾದರೂ, ಈ ಗುಣದಿಂದಲೇ ಪರಸ್ಪರ, ತಿಕ್ಕಾಟ, ಘರ್ಷಣೆ, ಹಿಂಸೆ, ಆತಂಕ ಉಂಟಾಗುತ್ತದೆಯಲ್ಲವೇ? ಒಂಟಿಯಾಗಿ ಇರಬೇಕೆಂಬ ಆಸೆ, ಒಂಟಿಯಾಗಿ ಇರೋಲ್ಲವಲ್ಲ! ಸಂಘ ಸಂಸ್ಥೆ, ರಾಜ್ಯ, ಕಟ್ಟಬೇಕೆಂಬ ಹೆಬ್ಬಯಕೆ, ಜೊತೆಗೆ ಒಂಟಿತನದ ಹಂಬಲ! ಸಂಘ, ರಾಜ್ಯ, ಕಟ್ಟ ಬೇಕೆಂಬ ಬಯಕೆಯಲ್ಲಿ ಹಂಬಲದಲ್ಲಿ ತನ್ನ ಸ್ವಂತ ಅನಿಸಿಕೆ, ಕಲ್ಪನೆಗಳನ್ನು ಜಾರಿಗೆ ತರುವಾಗಲೇ, ಮತ್ತೊಬ್ಬನ ಕಲ್ಪನೆ, ಅನಿಸಿಕೆಗಳ ವಿರುದ್ಧ ಘರ್ಷಣೆ ಏರ್ಪಡುತ್ತದೆಯಲ್ಲವೇ? ತನ್ನ ಧರ್ಮ, ತನ್ನ ಸಂಸ್ಕೃತಿ, ತನ್ನ ಭಾಷೆ, ತನ್ನ ರೀತಿ ರಿವಾಜು, ತನ್ನ ಪರಂಪರೆ, ತನ್ನ ಸಾಹಿತ್ಯ ಸಂಗೀತ, ತನ್ನ ದೇವರು, ತನ್ನ ರಾಜ್ಯ, ತನ್ನ ದೇಶ, ಎಂದು ಬೊಬ್ಬೆ ಇಡುತ್ತಾ, ಸಾರುತ್ತಾ, ಕಿತ್ತಾಡುತ್ತಾ, ಜಗಳವಾಡುತ್ತಾ, ಯುದ್ಧವಾಡಿ, ರಕ್ತ ಹರಿಸುತ್ತಾ ಇರುವ ಪ್ರಪಂಚದ ಪ್ರತಿ ಖಂಡದ ಪ್ರತಿ ದೇಶದ ಮೂಲೆ ಮೂಲೆಗಳಲ್ಲಿ ಜರುಗುತ್ತಿರುವ ಘರ್ಷಣೆಗಳಿಗೆ ಪರಿಹಾರ ಇಲ್ಲವೇ?

ಪರಿಹಾರ ಬೇಕಾದರೆ, ಮಾನವ ತನ್ನ ಸ್ವಾರ್ಥತನ, ವಿರೋಧತನ, ಹೊಟ್ಟೆಯಲ್ಲಿ ಕಿಚ್ಚೆಬ್ಬಿಸುವ ರಾಷ್ಟ್ರೀಯತೆ, ಸಂಕುಚಿತ ಮನೋಭಾವನೆ, ದೃಷ್ಟಿ ವೈಶಾಲ್ಯತನದ ಬಡತನ, ಕಟ್ಟುನಿಟ್ಟಾದ, ಅತಿ ಸೂಕ್ಷ್ಮ, ದುರಾಗ್ರಹಪೀಡಿತ ಸಣ್ಣ ಮನಸ್ಸಿನ ಪ್ರತ್ಯೇಕತೆಗಳನ್ನು ತೊಡೆದು ಹಾಕಿ, ಗಟ್ಟಿ ಮನಸ್ಸು, ಉದಾತ್ತ ಗುಣ, ಮಾನವೀಯತೆ, ನಿಷ್ಠೆ, ಕರ್ತವ್ಯ ಪ್ರಜ್ಞೆ ಉಳ್ಳ ನಾಯಕರ ಉಗಮ ಮತ್ತು ಅಗತ್ಯ ಅತಿ ಮುಖ್ಯವಲ್ಲವೇ? ಇಂತಹ ನಾಯಕರು ತಮ್ಮ ಉದಾರ ನೀತಿಗಳ ಅನುಷ್ಠಾನದಿಂದ, ಜಗತ್ತಿನ ಸಾಮಾನ್ಯ ಜನರನ್ನು ಶಾಂತಿ ಸುಖದೆಡೆಗೆ ಕೊಂಡೊಯ್ಯಬಹುದೇನೋ!

ನಾನು ಭ್ರಾಂತಿ, ಕನಸುಗಳ ಮೋಡಗಳ ಮೇಲೆ ತೇಲುತ್ತಿದ್ದೆನಲ್ಲವೇ? ಮನುಷ್ಯನನ್ನು, ಅವನಿಗೆ ಅರಿವಿಲ್ಲದಂತೆಯೋ, ಕೆಲವು ಪ್ರಭಾವಶಕ್ತಿಗಳು ಪ್ರೇರೇಪಿಸಿ,

ಉತ್ತೇಜನಗೊಳಿಸಿ, ಕ್ಲೇಷ, ಘರ್ಷಣೆಗಳೆಡೆಗೆ ತಳ್ಳುವಾಗ, ಹಸಿವು, ನೀರಡಿಕೆ, ರೂಢಿ, ಅಭ್ಯಾಸ, ಪೂರ್ವಗ್ರಹ, ಹೊಟ್ಟೆಕಿಚ್ಚು ಮುಂತಾದವುಗಳಿಂದ ಪೀಡಿತರಾದಾಗ, ಉತ್ತಮ ವ್ಯವಸ್ಥಿತ ಶಿಸ್ತಿನ ಸಮಾಜ ಕಟ್ಟಲು ಸಾಧ್ಯವೇ?

"ನಿಮ್ಮ ಜೊತೆ ಚರ್ಚೆ ಮಾಡುವ ಬದಲು, ನಾನು ಬಂದ ಕಾರ್ಯ ನೆರವೇರಿಸಿದರೆ, ನನ್ನ ಗುರಿ ಸಾಧಿಸಬಹುದು. ಮತ್ತೆ ಭೇಟಿಯಾಗೋಣ ಬದುಕಿ ಉಳಿದಿದ್ದರೆ!"

ಭರಭರನೆ ಕಾಲು ಬೀಸಿ ಸರ್ದಾರ್ಜೀ ಕತ್ತಲೆಯಲ್ಲಿ ಕಣ್ಮರೆಯಾದ. ನನ್ನ ಅನಿಸಿಕೆಗಳಿಗೆ, ಕನಸುಗಳಿಗೆ, ಭ್ರಾಂತಿಗಳಿಗೆ ಇತಿಶ್ರೀ ಹಾಡಿದನೆ? ಈ ಸುಂದರ, ಸುಸಂಸ್ಕೃತ, ಆರೋಗ್ಯಮಂತ, ದೃಢಕಾಯ ಸರ್ದಾರ್ಜೀ ಎಲ್ಲರಂತೆ ಸಾಮಾನ್ಯ ಜೀವನ ನಡೆಸುವುದನ್ನು ಬಿಟ್ಟು ಭೋರ್ಗರೆಯುತ್ತಿರುವ, ಭಯೋತ್ಪಾದಕರ ನೆರೆಯಲ್ಲಿ ಬೀಳುವ ಉದ್ದೇಶವಾದರೂ ಏನು? ಈ ಭಯಂಕರ ನೆರೆಯಲ್ಲಿ ಕೊಚ್ಚಿಹೋಗುವ ಭಯವಿಲ್ಲವೇ ಈ ಭಯೋತ್ಪಾದಕರಿಗೆ? ಅಥವಾ ಸರ್ದಾರ್ಜೀಯ ಆಸಕ್ತಿಯ ಆಳ ಭಯೋತ್ಪಾದಕ್ಕಿಂತ ಆಗದ ಹೋಗದ ಕ್ರಿಯಾತ್ಮಕವಲ್ಲದ ಸಿದ್ಧಾಂತವಿಲ್ಲದ ಸಿದ್ಧಾಂತವಿರಬಹುದೇ? ತಮ್ಮ ಸಂಸ್ಕೃತಿ ಭಾಷೆ, ಮತಗಳ ನೆಲಗಟ್ಟುಕಟ್ಟಿ ಪ್ರತ್ಯೇಕ ನಾಡು ಕಟ್ಟುವ ಸಿದ್ಧಾಂತಕ್ಕೆ ಒಳಪಟ್ಟು ಅದನ್ನು ಸಾಧಿಸಲು ಭಯೋತ್ಪಾದನೆ, ಆತಂಕತನ, ಹಿಂಸಾಚಾರಗಳ ಚಕ್ರಾಧಿಪತ್ಯದ ಸೇನಾನಿಯಾಗಬೇಕೆಂಬ ಬೃಹತ್ ಆಸೆ ಇಟ್ಟುಕೊಂಡು ಈ ಕರ್ಮಕಾಂಡಕ್ಕೆ ಧುಮುಕಿದನೆ?

"ಇವನು ಯಾಕೆ ಭಯೋತ್ಪಾದಕನಾದ ?" ನಾನು ಕೇಳಿದೆ.

"ಭಯೋತ್ಪಾದಕನೂ ಅಲ್ಲ ಅಭಯೋತ್ಪಾದಕನೂ ಅಲ್ಲ! ಅವನು ಆತಂಕವಾದಿಯಾಗಿದ್ದಾನೆಂದು ನಿಮ್ಮ ನಂಬಿಕೆಯಾ? ಅಥವಾ ಅನಿಸಿಕೆಯಾ?"

ಕಪೂರ್‌ನ ಮಾತುಗಳು ನನಗೆ ಅರ್ಥವಾಗಲಿಲ್ಲ. ಸರ್ದಾರ್ಜೀ ಅಮೃತಸರಕ್ಕೆ ಹೋಗಿದ್ದು ಆತಂಕವಾದಿಗಳ ಬಂಟನಾಗಲಿಕ್ಕೆ ಎಂದು ಇವನೇ ಹೇಳಿದ ನೆನಪು! ಅಥವಾ ಕನಸು ಕಂಡನೇನು ನಾನು? ಊಹಾಪೋಹಾದ ವ್ಯೂಹದಲ್ಲಿ ಸಿಕ್ಕಿಹಾಕಿಕೊಂಡನೇನೊ ನಾನು? ಕಪೂರ್‌ನ ಹೊಳೆಯುವ ಸ್ಫಟಿಕ ಕಣ್ಣಿನಲ್ಲಿ ಕಾಣುವ ಭವಿಷ್ಯ ಕಂಡನೇನು ನಾನು?

"ಹಣ ಮಾಡುವ ಉದ್ಯೋಗಗಳಲ್ಲಿ, ಆತಂಕವಾದ ಒಂದು. ಬರೀ ಒಂದು ಧ್ಯೇಯಕ್ಕೋಸ್ಕರ ಪ್ರಾಣ ಪಣ ತೊಟ್ಟು ಹೋರಾಡುವ ವ್ಯಕ್ತಿ ಅಲ್ಲ ನಮ್ಮ ಸರ್ದಾರ್ಜೀ!"

"ಹಾಗಾದರೆ ಸರ್ದಾರ್ಜೀ ಹಣ ಸಂಪಾದಿಸುವುದಕ್ಕೋಸ್ಕರ ಆತಂಕವಾದಿಯಾದನೆಂದು ನಿಮ್ಮ ಅನಿಸಿಕೆಯಾ?"

"ಸರ್ದಾರ್ಜಿೀಯ ಬಗ್ಗೆ ಇಷ್ಟು ಬೇಗ ತೀರ್ಮಾನ ಕೈಗೊಳ್ಳಲು ನಾನು ತಯಾರಿಲ್ಲ!"

ಕಪೂರ್ ಎಚ್ಚರಿಕೆ ವಹಿಸಿದ್ದ. ಅವರಿಬ್ಬರ ಒಡನಾಟ ಸ್ನೇಹ ಕೆಲವೇ ತಿಂಗಳಾಗಿದ್ದು, ಸರ್ದಾರ್ಜಿೀಯ ಗುಣ, ಸ್ವಭಾವ, ಪ್ರವೃತ್ತಿ, ಒಲವು, ಧೋರಣೆ, ವಿಚಾರ, ಆಲೋಚನೆಗಳು ಸಂಪೂರ್ಣವಾಗಿ ಅರಿತಿಲ್ಲದರ ಬಗ್ಗೆ ನನಗೆ ಅರಿವಾಗತೊಡಗಿತ್ತು.

"ಆದರೆ ಆತಂಕವಾದಿಗಳೆಲ್ಲಾ ಧ್ಯೇಯವಾದಿಗಳು, ಅವರು ತಮ್ಮ ಧ್ಯೇಯವನ್ನು, ವಿಚಾರವನ್ನು ಪರಿಪೂರ್ಣಗೊಳಿಸಲು, ಹಿಂಸಾವೃತ್ತಿ, ಭಯೋತ್ಪಾದನೆಯನ್ನು ಕೈಗೊಳ್ಳುತ್ತಾರೆಂದರೆ ನಾನು ನಂಬುವುದಿಲ್ಲ!"

ಫಕ್ಕನೆ ನನ್ನ ಮನಸ್ಸು ಬಾಂಬ್ ದಾಳಿಗೀಡಾದ ಬಸ್‌ನಲ್ಲಿದ್ದ ಇಬ್ಬರು ಪ್ರಯಾಣಿಕರ ನೆನಪಾಯಿತು. ನನ್ನ ಮುಂದೆ ನಿಂತಿದ್ದ ಇಬ್ಬರು ಪ್ರಯಾಣಿಕರ ಪೈಕಿ ಒಬ್ಬ ನಮ್ಮ ಸ್ನೇಹದ ಸರ್ದಾರ್ಜೀ ಆಗಿರಬಹುದೆ? ಅದೇ ಧ್ವನಿ, ಅದೇ ನಡತೆ, ಅದೇ ಹಾವಭಾವ, ಅದೇ ನಿಲುವು, ಅದೇ ನಡೆ, ಮೆಲ್ಲನೆ ನಡುಗಿದೆ! ಆದರೆ, ಅವನು ಸರ್ದಾರ್ಜೀ ಆಗಿದ್ದರೆ, ಹಿಂದೆ ನಿಂತಿದ್ದ ನನ್ನನ್ನು ಗುರುತಿಸಲೇ ಬೇಕಿತ್ತಲ್ಲ! ನನಗೆ ಹಾನಿ ಉಂಟುಮಾಡುವಷ್ಟು ಕಠಿಣ ಹೃದಯ ಹೊಂದಿದ್ದನೆ? ಛೆ! ಅವನು ಸರ್ದಾರ್ಜೀ ಆಗಿರಲಿಕ್ಕೆ ಸಾಧ್ಯವಿಲ್ಲದ ಮಾತು! ನನಗೇಕೆ ಈ ತರಹದ ಸಂದೇಹ?

"ಮನೆಗೆ ಹೋಗೋಣವೇ? ತಂದೆ ಕಾಯುತ್ತಿರುತ್ತಾರೆ."

ಕಪೂರ್ ಕುಳಿತಲ್ಲಿಂದ ಎದ್ದು, ನನ್ನನ್ನು ಹೊರಡುವಂತೆ ಎಚ್ಚರಿಸಿದ.

ಮನದಲ್ಲಿ ತುಂಬಿದ್ದ ಸರ್ದಾರ್ಜಿೀಯದೇ ಧ್ಯಾನವನ್ನು ಅರ್ಧದಲ್ಲೇ ಕಡಿದು, ಕುಳಿತಲ್ಲಿಂದ ಎದ್ದು, ಕಪೂರ್‌ನ ಜೊತೆ ಹೆಜ್ಜೆ ಹಾಕತೊಡಗಿದೆ.

ಪಾರ್ಕ್‌ದಾಟಿ, ಪಾಲಿಕಾ ಬಜಾರ್ ಸುತ್ತಿ, ರಾಜರಸ್ತೆ ದಾಟಿ, ಕರೋಲ್‌ಬಾಗ್ ಕಡೆ ಹೋಗುವ ಬಸ್‌ನಿಲ್ದಾಣದ ಕಡೆಗೆ ಹೆಜ್ಜೆ ಹಾಕತೊಡಗಿದೆವು. ರಾತ್ರಿ ೧೦ ಆಗಿದ್ದರೂ, ಜನರ ಓಡಾಟ, ವಾಹನಗಳ ಓಡಾಟಕ್ಕೇನೂ ಕಡಿಮೆಯಾಗಿರಲಿಲ್ಲ. ಮೈಗಳ್ಳರು, ಕೆಲಸವಿಲ್ಲದೇ ನಡೆದಾಡುವ ಪರದೇಶಿಗಳು, ಕಡಿಮೆ ಸಂಬಳಕ್ಕೆ ಹೆಚ್ಚು ಹೊತ್ತು ಮಳಿಗೆ, ಖಾಸಗೀ ಆಫೀಸ್‌ಗಳಲ್ಲಿ ದುಡಿದು, ಸುಸ್ತಾಗಿ, ಬೇಗ ಮನೆ ಸೇರುವ ತವಕದಲ್ಲಿ ಓಡಿ ಓಡಿ ಹೆಜ್ಜೆ ಹಾಕುವ ಪಾಪದ ನೌಕರರು, ಕುಡಿದು ತೂರಾಡುವ, ಪಾನ್ ಜಗಿಯುವ ದಿಲ್ಲೀವಾಲರು ಚಿತ್ರಪಟದಲ್ಲಿ ಹಾದು ಹೋಗುವಂತೆ ನನ್ನ ಮುಂದೆ ಹಾದು ಹೋಗುತ್ತಿದ್ದರು.

"ನಿಮ್ಮ ದಾಂಪತ್ಯ ಜೀವನದ ಬಗ್ಗೆ ಮುಂದೆ ಯಾವಾಗಲಾದರೂ ಹೇಳುತ್ತೇನೆ ಎಂದು ಹೇಳಿದ್ದೀರಿ?"

ಬಸ್‌ನಿಲ್ದಾಣಕ್ಕೆ ಬಂದೊಡನೆ, ಕಪೂರ್‌ನಿಗೆ ಪ್ರಶ್ನೆ ಹಾಕಿ, ಅವನು ಹಿಂದೆ ನೀಡಿದ ಆಶ್ವಾಸನೆಯ ಬಗ್ಗೆ ನೆನಪಿಸಿದೆ.

ಕಪೂರ್ ಉತ್ತರಿಸುವ ಮುನ್ನ, ಬಳಿಯಲ್ಲಿದ್ದ ಪಾನ್ ಅಂಗಡಿಗೆ ಹೋಗಿ, ಒಂದು ಪಾನ್ ಖರೀದಿಸಿ, ಬಾಯಿಗೆ ಹಾಕಿ, ಜಗಿದು, ಮತ್ತೆ ನನ್ನ ಬಳಿ ಬಂದು ನಿಂತ.

ನನ್ನ ಮುಖ ನೋಡಿ ನಕ್ಕು, ಪಿಚಕ್ಕನೆ ಪಾನ್‌ರಸವನ್ನು ಉಗುಳಿ ಮತ್ತೊಮ್ಮೆ ದಿಲ್ಲೀ ನೆಲವನ್ನು ಕೆಂಪು ಓಕಳಿಯಿಂದ ಸಿಂಗರಿಸಿದ.

"ನನ್ನ ಹೆಂಡತಿ ಬಗ್ಗೆ ಕೇಳಿದಿರಿ, ಅಲ್ಲವಾ?"

ನಾನು ಉತ್ತರಿಸಲಿಲ್ಲ.

"ಅವಳು ಓಡಿಹೋದಳು!"

"ಆಂ!" ಬೆಚ್ಚಿ ಬಿದ್ದೆ ಅವನ ಮಾತನ್ನು ಕೇಳಿ!

"ನಿಮ್ಮ ಬಸ್ಸು ಬಂತು! ಓಡಿ! ಓಡಿ!"

ನನ್ನ ಬೆನ್ನು ಹಿಡಿದು ಮುಂದಕ್ಕೆ ದಬ್ಬಿದ ಕಪೂರ್.

ಬಸ್ ಭರ್‍ರನೆ ನಮ್ಮ ಮುಂದೆ ಹಾದು, ಎಲ್ಲಾ ಬಸ್‌ಗಳ ರೀತಿ, ನಿಲ್ದಾಣದಲ್ಲಿ ನಿಲ್ಲದೆ, ದೂರ ನಿಂತು ನಮ್ಮನ್ನು ಓಡುವಂತೆ ಮಾಡಿತು.

ಬಸ್ ಹಿಂದೆ ಓಡಿದೆ ನಾನು. ಹೇಗೋ ಕಷ್ಟಪಟ್ಟು, ಜನಜಂಗುಳಿಗಳ ಮಧ್ಯ ನುಸುಳಿ, ಬಸ್ ಏರಿದೆ. ಕಪೂರ್‌ನನ್ನು ಆ ಗಲಾಟೆಗುಂಪಿನಲ್ಲಿ ಹುಡುಕಲು ಪ್ರಯತ್ನ ಪಟ್ಟೆ. ಆತ ಕಾಣಲಿಲ್ಲ. ಎಲ್ಲಿ ಹೋದ ಇವ? ಯೋಚಿಸುತ್ತಾ ನಿಂತಿದ್ದವನಿಗೆ ನೆನಪಾಯಿತು. ಕಪೂರ್ ದಕ್ಷಿಣ ದಿಲ್ಲೀಯಲ್ಲಿರುವ ಮಾಲವೀಯ ನಗರ್‌ನಲ್ಲಿರುವ ತನ್ನ ಮನೆಗೆ ಹೋಗುವ ಬಸ್ ಹಿಡಿಯುವುದನ್ನು ಬಿಟ್ಟು, ಪಶ್ಚಿಮದಿಲ್ಲೀಯ ಕರೋಲ್‌ಬಾಗ್‌ನ ಬಸ್ ಯಾಕೆ ಹಿಡಿಯುತ್ತಾನೆ?

'ಓಡಿ, ಓಡಿ' ಎಂದು ಹೇಳಿ ನನ್ನನ್ನು ಓಡಿಸಿದನಲ್ಲಾ ಕಪೂರ್! ಇದೇ ರೀತಿ ತನ್ನ ಹೆಂಡತಿಯನ್ನೂ ಓಡಿಸಿದನೆ? ಆದರೆ ಬಸ್ ಹಿಡಿಯಲು ನನ್ನನ್ನು ಯಾವ ವಾಹನ ಅಥವ ಯಾವ ವ್ಯಕ್ತಿಯನ್ನು ಹಿಡಿಯಲು ಹೆಂಡತಿಯನ್ನು ಓಡಿಸಿದ!

ನನ್ನ ಯೋಚನೆಗೆ ನನಗೇ ನಗು ಬಂತು!

ಆದರೆ, ಕಪೂರ್‌ನ ಮನಸ್ಸಿನ ವಿಶ್ಲೇಷಣೆ ಹೇಗೆ ಮಾಡುವುದು? ಹೆಂಡತಿ ಓಡಿ ಹೋದಳಂತೆ! ಯಾಕೆ? ಯಾರ ಜೊತೆ? ಎಲ್ಲಿಗೆ?

"ಸಾಬ್! ಎಲ್ಲಿಗೆ ಹೋಗಬೇಕು ನೀವು?"

"ಶಂಕರ್ ರೋಡ್."

"ಮುಂದೆ ಹೋಗಿ! ಇನ್ನೇನು ಬಂದುಬಿಡುತ್ತದಲ್ಲಾ! ಶಂಕರ್‌ರೋಡ್!"

ಈ ಜನರ ಒತ್ತಡದಲ್ಲಿ ಹೇಗಪ್ಪಾ ಮುನ್ನುಗ್ಗುವುದು? ನುಗ್ಗದಿದ್ದರೆ ಇಳಿಯುವ ಹಾಗೆ ಇರಲಿಲ್ಲ. ದಿಲ್ಲೀ ಬಸ್ ಪ್ರಯಾಣ ಅಂದರೆ ಒಂಟಿ ಕಾಲಿನಲ್ಲಿ ನಿಂತು ಶಿಕ್ಷೆ ಅನುಭವಿಸುವ ಪ್ರಯಾಸ! ಯಾರೋ ಪುಣ್ಯಾತ್ಮ ಹಿಂದಿನಿಂದ ನೂಕಲಿಕ್ಕೆ ಶುರು ಮಾಡಿದ, ಒಮ್ಮೆಲೆ ಮುಂದಿದ್ದ ಜನ ದಾರಿ ಮಾಡಿಕೊಟ್ಟರು.

"ಶಂಕರ್‌ರೋಡ್!" ಕೂಗಿದ ಕಂಡಕ್ಟರ್.

ಕಷ್ಟಪಟ್ಟು ದಾರಿ ಮಾಡಿಕೊಂಡು, ಬಸ್‌ನಿಂದ ಕೆಳಗೆ ಇಳಿದೆ. ಮನೆಗೆ ನಡೆದು ಬಂದು, ಮೂರನೇ ಮಹಡಿ ಏರಿ, ಹಾಸಿಗೆ ಮೇಲೆ ದೊಪ್ಪೆಂದು ಬಿದ್ದೆ. ಸೆಖೆಯ ತಾಪ ತಾಳಲಾರದೆ, ಒಂದು ಚಾಪೆ ಮತ್ತು ದಿಂಬುಕೊಂಡು, ಹೊರಗಡೆ, ಮುಚ್ಚಣೆ ಗೆಯ ಮೇಲೆ ಅವನ್ನು ಹಾಸಿ, ಮಲಗಿದೆ. ಹಾಯಾನಿಸಿತು. ವಿಪರೀತ ಸುಸ್ತಾಗಿದ್ದ ದೇಹ ನಿದ್ರೆಯನ್ನಾಲಂಗಿಸಿತು.

"ನಹೀ!ನಹೀ! ಮೈ ನಹೀ ಕಿಯಾ!ಮತ್ ಮಾರೋ! ಹೋ! ಹೋ!......"

ಯಾರೋ ಭಯಾನಕವಾಗಿ, ಕರ್ಕಶವಾಗಿ ಕಿರಿಚುವ, ಅರಚುವ, ಅಳುವ, ನರಳುವ ಶಬ್ದ ಕೇಳಿದೆ. ಗಾಢನಿದ್ರೆಯಿಂದ ಎಚ್ಚರವಾದ ನನಗೆ ಕನಸು ಕಂಡನೇ ಎನ್ನುವ ಶಂಕೆ ಆಯಿತು. ಇಲ್ಲ!ಹತ್ತಿರದಲ್ಲೇ ಶಬ್ದ ಕೇಳಿಸುತ್ತಾ ಇತ್ತು! ಮೇಲೆದ್ದು ಶಬ್ದ ಬರುವ ಕಡೆ ಆಲಿಸಿದೆ. ಕೈ ಗಡಿಯಾರದಲ್ಲಿ ಒಂದು ಗಂಟೆ ತೋರಿಸುತ್ತಿತ್ತು. ಈ ನಡುರಾತ್ರಿಯಲ್ಲಿ ಅನಿರೀಕ್ಷಿತ ಹಿಂಸಾಚಾರದ ಅವತಾರವಾಗಿದೆಯಲ್ಲ! ಕರ್ಕಶವಾಗಿ ಅಳುವ ಗೋಳಾಡುವ ಶಬ್ದ ಒಬ್ಬ ಮನುಷ್ಯನಾಗಿದ್ದಿತು. ಹೊಡೆಯು ವವರು ಪೊಲೀಸ್‌ರಾಗಿದ್ದರೆಂದು ಅರಿವಾಗಿದ್ದು, ಹೊಡೆಸಿಕೊಂಡವ 'ಇನ್‌ಸ್ಪೆಕ್ಟರ್ ಸಾಬ್ ಮತ್ ಮಾರೋ'ಎಂದು ಕಿರುಚಿಕೊಂಡಾಗ. ಕೆಳಗೆ ಇಳಿದು ಹೋಗಿ ನೋಡುವ ಎಂದು ಮನಸ್ಸಾದರೂ, 'ಡಿಸ್‌ಕ್ರಿಷನ್ ಇಸ್ ಬೆಟರ್‌ಪಾರ್ಟ್ ಆಫ್ ವೇಲರ್; ಎಂಬ ಇಂಗ್ಲಿಷ್ ಗಾದೆ ನೆನಪಿಗೆ ಬಂದು, ಚಾಪೆಯ ಮೇಲೆ ಒರಗಿದೆ. ನನ್ನ ಬಳಿ ಯಲ್ಲೇ ಹಿಂಸಾಚಾರ ನಾಟ್ಯವಾಡುತ್ತಿರುವಾಗ, ನಿದ್ರಾದೇವಿ ಹೆದರಿ ಓಡಿಹೋಗುವುದು ನ್ಯಾಯವೇ ಆಗಿತ್ತು. ನಿದ್ರಾದೇವಿಯ ಬದ್ಧ ವೈರಿ ಕ್ಲೇಷರಾಕ್ಷಸ!

ಮನಸ್ಸು, ಆತಂಕ, ಶಂಕೆ, ಗಾಬರಿ, ದಿಗಿಲು, ಕಳವಳಗೊಂಡು, ತಬ್ಬಿಬ್ಬಾದಾಗ, ಯೋಚನಾಶಕ್ತಿ ಕಳೆದುಕೊಂಡಿದ್ದೆ. ಊರು ಬಿಟ್ಟು ದೂರದ ದಿಲ್ಲೀಗೆ ಬಂದರೆ, 'ಊರು ಬೇರೆ ಆದರೂ ಪ್ರಾರಬ್ಧ ಬೇರೆಯೋ'ಅಂದ ಹಾಗೆ ಆಯಿತಲ್ಲಾ ನನ್ನ ಪರಿಸ್ಥಿತಿ! ದಿಲ್ಲೀ ತುಂಬಾ ಆತಂಕವಾದಿಗಳ ಬಿರುಗಾಳಿ ರಭಸದಿಂದ ಬೀಸುತ್ತಿರುವ ಸಂಗತಿಯ ಪ್ರತ್ಯೇಕ ಅನುಭವ ಆಗುತ್ತಲೇ ಇತ್ತು. ಎಲ್ಲೆಲ್ಲೂ ಹರಡಿದ್ದ ಬಿರುಗಾಳಿ,

ತಂಗಿದ್ದ ಮನೆಯ ಬಳಿ ಬೀಸಿ, ನನಗೆ ತಟ್ಟತೊಡಗಿದ್ದು, ನನ್ನ ಮೈ ನಡುಗಿಸಿತ್ತು. ತಣ್ಣನೆ ಗಾಳಿ, ಆತಂಕವಾದಿಗಳ ಬಿಸಿಗಾಳಿಯ ಹೊಡೆತಕ್ಕೆ ಯಾವಾಗಲೋ ಓಡಿ ಹೋಗಿ ಕಣ್ಮರೆಯಾಗಿತ್ತು!

"ಮೈ ಮರ್‌ಗಯಾ! ಮರ್ ಗಯಾ! ಮತ್ ಮಾರ್‌ನಾ!"

ರಾತ್ರಿಯ ನೀರವತೆಯನ್ನು ಸೀಳಿ ಹೊರಬರುತ್ತಿತ್ತು ಅವನ ಚೀರುವಿಕೆ! ಚೀರುವಿಕೆಯ ಬಾಣ ನನ್ನ ಮನಸ್ಸನ್ನು ಚುಚ್ಚಿ ಹಿಂಡುತ್ತಿತ್ತು.

ಅವನು ಯಾರಿರಬಹುದು? ಆತಂಕವಾದಿಯೆ? ಭಯೋತ್ಪಾದಕನೇ? ಕಳ್ಳನೇ? ಖದೀಮನೆ? ಡಕಾಯಿತನೇ?

ಪೊಲೀಸರಾದರೂ, ಏಕೆ ಅವನನ್ನು ದಾರಿಯಲ್ಲಿ ಹಿಡಿದು ನಡು ರಾತ್ರಿಯಲ್ಲಿ ದನಗಳಿಗೆ ಹೊಡೆಯುವ ಹಾಗೆ ಹೊಡೆಯುತ್ತಿದ್ದಾರೆ? ಪೊಲೀಸ್ ಠಾಣೆಗೆ ಕರೆದು ಕೊಂಡು ಹೋಗಿ ತಮ್ಮ ಹೊಡೆಯುವ ತೀಟೆ ತೀರಿಸಿಕೊಳ್ಳಬಹುದಲ್ಲಾ! ನಡುರಾತ್ರಿ, ನಮ್ಮ ನಡುವಿನಲ್ಲೇ ಹಾಯಾಗಿ ಮಲಗಿದ್ದ ಆತಂಕವಾದಿಯನ್ನು ಹಿಡಿದು, ಅವನಿಗೆ ಬಡಿದು, ಹಿಂಸಿಸಿ, ಗಾಢನಿದ್ರೆಯಲ್ಲಿದ್ದ ನಮ್ಮನ್ನು ಎಬ್ಬಿಸುವುದರ ಅರ್ಥವಾದರೂ ಏನು? ನಮ್ಮ ಬಳಿಯಲ್ಲೇ, ನಮ್ಮ ನಡುವಿನಲ್ಲೇ, ನಮ್ಮ ನೆರೆಯಲ್ಲೇ ಆತಂಕವಾದಿ ಗಳಿದ್ದಾರೆ, ಅವರ ಬಗ್ಗೆ ಎಚ್ಚರವಹಿಸಲಿಕ್ಕೆ, ಅವರು ಹಿಂಸಾಚಾರ ಎಸಗಬಹುದು ಎಂಬ ಮುನ್ನೆಚ್ಚರಿಕೆ ನೀಡುವ ನೆಪದಿಂದ ಪಾಪದ ವ್ಯಕ್ತಿಗೆ ಹಿಂಸೆಯ ಶಿಕ್ಷೆ ನೀಡು ತ್ತಿದ್ದಾರೆಯೆ?

ಆತಂಕವಾದಿಗಳಿಗೆ ಹಣದ ಅವಶ್ಯಕತೆ ಇರುವುದು ಗೊತ್ತಿದ್ದ ವಿಷಯವೇ ಆಗಿತ್ತು. ಬ್ಯಾಂಕ್ ದರೋಡೆ, ಕಳ್ಳತನ, ಡಕಾಯಿತಿ, ಸುಲಿಗೆ, ಬೆದರಿಕೆ, ವಂಚನೆ ಮಾಡಿ ಹಣ ರೂಢಿಸಿಕೊಂಡ ಜನರು ಆತಂಕವಾದಿಗಳಾಗಿ ಪರಿವರ್ತನೆಗೊಳ್ಳು ತ್ತಾರೆಯೆ? ಅಥವಾ ಆತಂಕವಾದಿಗಳು ಕೇವಲ ಹಣ ಸಂಪಾದಿಸಿಕೊಳ್ಳಲಿಕ್ಕೋಸ್ಕರ ಕೊಲೆ, ಸುಲಿಗೆ ಮಾಡಿ, ತಮ್ಮ ನಿಜವಾದ ಧ್ಯೇಯವನ್ನು ಮರೆಯುತ್ತಾರೆಯೆ? ಯಾರು ಆತಂಕವಾದಿಗಳು? ಯಾರು ಕೊಲೆಗಾರರು? ಹಣ ಲಪಟಾಯಿಸಿದವ, ತನ್ನ ಬಯಕೆ ಗಳಿಗೆ ದಾಸನಾಗಿ, ಧ್ಯೇಯವನ್ನು ಮರೆಯುವ ಸಾಧ್ಯತೆ ಇಲ್ಲವೇ? ಅನರ್ಥಮಾಡಿ ಅರ್ಥ ಪಡೆದರೂ, ಅದರ ಸಂಪೂರ್ಣ ಉಪಯೋಗ ಪಡೆಯುವುದು ದುರ್ಲಭ. ಹಣಗಳಿಸುವುದು ಮತ್ತು ಪಡೆಯುವುದರಲ್ಲಿ ಎಷ್ಟು ಭೇಧವಿದೆ! ಕಷ್ಟಪಟ್ಟು ಗಳಿಸಿದ ಹಣ ಕಳೆದುಕೊಳ್ಳುವುದು ಕಷ್ಟವೇ! ಮೋಸ, ವಂಚನೆ, ಕಳ್ಳತನದಿಂದ ಪಡೆದ ಹಣ ಉಳಿಸಿಕೊಳ್ಳುವುದು ಕಷ್ಟವೇ! ಅಸಮರ್ಥನ ಹಣ ಸಂಪಾದನೆ ಕೂಡಿಡುವುದಕ್ಕೂ ಅಸಮರ್ಥನೇ! ಹಾಗೆ ಸಂಪಾದಿಸಿದರೂ, ಅವನನ್ನು ಭಯ ಕಾಡದೇ ಇರಲಾರದು.

ಹೇಗೆ ಹಣವನ್ನು ಸಂಪಾದಿಸಿದನೋ, ಅದ್ದೇ ರೀತಿ ಅದನ್ನು ತನ್ನಿಂದ ಕಸಿದುಕೊಳ್ಳುವರೆಂಬ ಭೀತಿಯಿಂದ ಒದ್ದಾಡುತ್ತಾನೆ. ಸರ್ದಾರ್ಜೀಯ ಬಗ್ಗೆ ಕಪೂರ್‌ನ ಅನಿಸಿಕೆ ಸರಿ ಇರಬಹುದು ಎಂದು ನನ್ನನ್ನು ಕಾಡಿತು. ಸರ್ದಾರ್ಜೀ ಅಸಮರ್ಥನೇ? ಹಣದಾಸೆಗಾಗಿ, ಆತಂಕವಾದಿಯಾದನೇ?

ನನ್ನ ತಲೆ ಚಿಟ್ಟು ಹಿಡಿಯಿತು. ತಲೆಯನ್ನು ಎರಡೂ ಕೈಗಳಿಂದ ಅದುಮಿ ಹಿಡಿದೆ. ಎರಡು ನಿಮಿಷಗಳ ನಂತರ, ಕೈ ತೆಗೆದು, ಪಕ್ಕಕ್ಕೆ ಹೊರಳಿ ಮಲಗಿದೆ. ನಿಶ್ಶಬ್ದ, ನೀರವತೆಯನ್ನು ಅನುಭವಿಸಿದೆ. ಥಟ್ಟನೆ ನೆನಪಾಯಿತು! ಉಸಿರು ಹಿಡಿದು, ಕಿವಿಗೊತ್ತಿ, ಬಹಳ ಕುತೂಹಲದಿಂದ ಆಲೈಸಿದ. ನಿಶ್ಶಬ್ದ ವಾತಾವರಣ, ಎಲ್ಲೆಲ್ಲೂ ನೀರವತೆಯ ಶಾಂತ ವಾತಾವರಣ! ಹಿಂಸಾಚಾರದ ಕೊನೆಯಾಟ ಮುಗಿದಿತ್ತು. ನರಳಾಟ, ಕಿರುಚಾಟ, ಹೊಡೆದಾಟ, ಎಲ್ಲವೂ ಸ್ಥಬ್ಧವಾಗಿದ್ದವು. ಹಾಗಾದರೆ ಪೊಲೀಸ್‌ರು ತಮ್ಮ ಕೆಲಸವನ್ನು ಅಚ್ಚುಕಟ್ಟಾಗಿ ಮಾಡಿ ಮುಗಿಸಿ ಕೃತಾರ್ಥರಾಗಿ ಹೊರಟು ಹೋಗಿದ್ದಾರೆ!

ಅಸ್ಥಿರ ಮನಸ್ಸು ನಿರಾಳವಾಯಿತು. ಪ್ರಶಾಂತ ವಾತಾವರಣದ ಮಡಿಲಲ್ಲಿ ಮಲಗಿದ ನನ್ನನ್ನು ನಿದ್ರಾದೇವಿ ಪುನಃ ಬಂದು ಆಕ್ರಮಿಸಿದಳು.

ಸೂರ್ಯನ ಸುಡು ಬಿಸಿಲು ಏರಿ, ನನ್ನ ಮುಖದ ಮೇಲೆ ಹರಿಹಾಯ್ದಾಗ ಧಡಕ್ಕನೆ ಎದ್ದು, ಮನೆಯೊಳಗೆ ಓಡಿದೆ. ಬೇಗ ಬೇಗ ಮುಖ ತೊಳೆದು, ಕಾಫಿ ಮಾಡಿಕೊಂಡು ಕುಡಿದು, ಸ್ನಾನ ಮಾಡಿ, ಕೆಳಗೆ ಇಳಿದು ಬಂದಾಗ, ಮನೆ ಯಜಮಾನ ಸಿಂಧೀ ನಿಂತಿದ್ದ. ಕೇಳಿದೆ ಅವನನ್ನು ಹಿಂದಿನ ದಿನದ ರಾತ್ರಿಯ ಘಟನೆಯ ಬಗ್ಗೆ.

"ಬದ್ಮಾಷ್ ಪೊಲೀಸ್! ನನ್ನ ಸ್ನೇಹಿತನನ್ನು ಹಿಡಿದು ಚಚ್ಚಿದ್ದಾರೆ!"

"ಯಾಕೆ? ಏನು ಕಾರಣ?"

"ಅವ ಸ್ಮಗ್ಲರ್ ಅಂತೆ! ಕಳ್ಳ ಸಾಗಣೆ ಮಾಡುತ್ತಿದ್ದನಂತೆ! ಸಿಕ್ಕುತ್ತಲೇ ಇರಲಿಲ್ಲವಂತೆ! ಅದಕ್ಕೆ ರಾತ್ರಿ ಬಂದು ಅವನನ್ನು ಹಿಡಿದು ಕಾಲು ಮುರಿದಿದ್ದಾರೆ!"

"ಕಾಲು ಮುರಿದಿದ್ದಾರೆಯೇ?"

"ಹೌದು!" ಕೋಪದಿಂದ ಉರಿಯುತ್ತಿತ್ತು ಅವನ ಮುಖ.

"ಕಾಲು ಯಾಕೆ ಮುರಿಯಬೇಕಾಗಿತ್ತು ಅವರು?"

"ಓಡದೇ ಇರಲೀ ಅಂತ? ಇನ್ನ್ಯಾಕೆ ಮುರಿತಾರೆ ಹೇಳಿ?"

ನನ್ನ ಪ್ರಶ್ನೆ ಕೇಳಿ ಅವನಿಗೆ ಬೇಸರವಾಗಿತ್ತು ಎಂದು ಅವನ ಧ್ವನಿಯಿಂದ ಅರಿಯಿತು.

ಓಡದೇ ಇರಲೀ ಎಂದು ಕಾಲು ಮುರಿಯುವುದೇ? ಇದೆಂತಹ ಶಿಕ್ಷೆ? ಅಪರಾಧ

ಮಾಡುವುದನ್ನು ತಪ್ಪಿಸುವುದಕ್ಕೆ ಅಪರಾಧಿಗಳ ಕಣ್ಣು ಕೀಳುವ ಅಭ್ಯಾಸ ಇಟ್ಟಿದ್ದರಲ್ಲ ಈ ಪೊಲೀಸರು ಈ ಹಿಂದೆ! ಈಗ ಓಡಿಹೋಗಬಾರದೆಂದು ಕಾಲು ಮುರಿಯುವ ಪದ್ಧತಿ ಶುರು ಹಚ್ಚಿದ್ದಾರೆಯೆ? "ಕಳ್ಳ ಸಾಗಾಣಿಕೆ ಎಂದರೆ, ಶಸ್ತ್ರಸಾಗಾಣಿಕೆ ಮಾಡುತ್ತಿದ್ದರೆ? ಗನ್, ಪಿಸ್ತೂಲ್?"

ತಿನ್ನುವಂತೆ ನೋಡುತ್ತಿದ್ದ ಸಿಂಧೀಯನ್ನು ಅಲ್ಲೇ ಬಿಟ್ಟು, ಬಸ್‌ನಿಲ್ದಾಣದ ಬಳಿಗೆ ಓಡಿದೆ! ಬಸ್ ಹತ್ತಿ ನನ್ನ ಶಾಖೆಗೆ ಬರುವಾಗ, ಇನ್ನೇನು ವಿಪ್ಪತ್ತು ಕಾದಿ ದೆಯೋ ಎಂದು ಯೋಚಿಸುತ್ತಾ, ಕಟ್ಟಡದ ಮೆಟ್ಟಿಲು ಹತ್ತಿ, ನನ್ನ ಕೊಠಡಿಯೊಳಗೆ ಕಾಲಿಡುವುದರಲ್ಲಿ ಹತ್ತಾರು ಗ್ರಾಹಕರು ನನ್ನ ಬಳಿ ಬಂದು ಘೇರಾವ್ ಮಾಡಿದರು.

"ಏನು ಸಮಾಚಾರ?"

"ಸಮಾಚಾರ, ದಿನಪತ್ರಿಕೆಯಲ್ಲಿ ಹಾಕುತ್ತಾರೆ. ಅದನ್ನು ದಿನವಿಡೀ ಓದು ತ್ತೇವೆ. ಆದರೆ ನಿಮ್ಮ ಶಾಖೆಯಲ್ಲಿ ನಡೆಯುವ ಘಟನೆಗಳು, ಸಂಗತಿಗಳು, ನಮಗೆ ಇಲ್ಲೇ ದೊರೆಯಬೇಕು, ಅನುಭವಿಸಬೇಕು!"

ಇವತ್ತಿನ ಪೀಕಲಾಟ ಏನು ಎಂದು ಆಲೋಚಿಸುವ ಹೊತ್ತಿಗೆ, ಅಕೌಂಟೆಂಟ್ ವರ್ಮಾ ಒಳಗೆ ಬಂದು ನಮಸ್ಕರಿಸಿದ.

"ಏನು ವಿಷಯ?" ಕೇಳಿದೆ.

"ಕಸ ಗುಡಿಸುವಾಕೆ ಇಂದು ರಜೆ!"

"ಅವಳ ಕಡೆಯವರು ಯಾರೂ ಬರಲಿಲ್ಲವೇ?"

"ಯಾರೂ ಇಲ್ಲ!"

ತಲೆ ತೂರಿಸಿಕೊಂಡೆ. ನೆಲ ಗುಡಿಸಿ ಸಾರಿಸಿಲ್ಲ, ಕೌಂಟರ್ ಸ್ವಚ್ಛಗೊಳಿಸಿಲ್ಲ! ಅಂದರೆ, ನೌಕರರು ಕೆಲಸ ಶುರುಮಾಡಿಲ್ಲ. ತಮ್ಮ ಪೆನ್ ಜೇಬಿನಿಂದ ಹೊರಗೆ ತೆಗೆದಿಲ್ಲ.

ಹೊರಗೆ ನಡೆದೆ. ನೌಕರರೆಲ್ಲಾ ಗುಂಪು ಗುಂಪಾಗಿ ನಿಂತಿದ್ದರು. ಕೌಂಟರ್ ಖಾಲಿ ಆಗಿತ್ತು. ಲೆಡ್ಜರ್‌ಗಳು ಅಲ್‌ಮೈರಾಗಳಲ್ಲಿ ಹಾಯಾಗಿ ಪವಡಿಸಿದ್ದವು. ಅವನ್ನು ಎಬ್ಬಿಸಿ, ಕೌಂಟರ್ ಟೇಬಲ್‌ನಲ್ಲಿಡಲು, ನೌಕರರು ತಯಾರಿರಲಿಲ್ಲ.

"ನೀವೆಲ್ಲಾ ಈ ದಿನ ಸ್ಟ್ರೈಕ್ ಮಾಡಬೇಕೆಂದು ಮಾಡಿದ್ದೀರಾ?" ಕೇಳಿದೆ ನಾನು.

"ಇಲ್ಲಾ, ಇಲ್ಲಾ!" ಉತ್ತರಿಸಿದರು ಒಕ್ಕರಲಿನಿಂದ.

"ಮತ್ತೆ ಏಕೆ ಶುರು ಮಾಡಿಲ್ಲ ಕೆಲಸ?"

"ಕೌಂಟರ್, ಟೇಬಲ್ ಮತ್ತು ಕುರ್ಚಿಗಳನ್ನು ಕ್ಲೀನ್ ಮಾಡಿಲ್ಲ. ಹೇಗೆ ಕೆಲಸ ಮಾಡುವುದು?"

ಸ್ವಚ್ಛತೆ ಬಗ್ಗೆ ಎಷ್ಟು ಕಾಳಜಿ, ಕಾತುರ ಇವರಿಗೆ! ದಿಲ್ಲೀಯ ರಸ್ತೆಗಳನ್ನು ನೋಡಿದರೆ ಸಾಲದೇ ಇವರಿಗೆ ಸ್ವಚ್ಛತೆಯ ಬಗ್ಗೆ ಇರುವ ಕಾಳಜೀ, ಗೌರವ?

ವಾರ, ತಿಂಗಳುಗಟ್ಟಲೆ ಸ್ನಾನ ಮಾಡದೆ, ಬರೀ ಸೆಂಟ್ ಪೌಡರ್‌ಗಳನ್ನು ಬಳಿದುಕೊಂಡು, ನೆಗೆದಾಡುವ ಈ ಜನರನ್ನು ಕಂಡು, ಕೆರಳಿ ಕೆಂಡವಾದೆ.

"ಒರಸೋ ಬಟ್ಟೆ ಕೊಡ್ರೀ!"

ನನ್ನ ಒರಟು ಧ್ವನಿಗೆ ಹೆದರಿ, ಒಬ್ಬ ಓಡಿ ಬಂದು ತುಂಡು ಒರಸೋ ಅರಿವೆಯನ್ನು ಕೈಗೆ ನೀಡಿದ. ಕೌಂಟರ್ ಮೇಲಿದ್ದ ಧೂಳನ್ನು ಝಾಡಿಸಿ ಸಾರಿಸಿದೆ. ಉದ್ದನೆಯ ಕೌಂಟರ್ ಮೇಲ್ಭಾಗವನ್ನು ಆ ಕಡೆಯಿಂದ ಈ ಕಡೆಯವರೆಗೆ ಓಡಾಡಿ, ಸ್ವಚ್ಛಗೊಳಿಸಿದೆ. ಬೇಕೆಂದೇ ಎರಡು ಸಲ ಸಾರಿಸಿದೆ. ಮತ್ತು ಒಳಗೆ ಹೋಗಿ, ಪವಡಿಸಿದ್ದ ಲೆಡ್ಜರ್‌ಗಳನ್ನು ಎಬ್ಬಿಸಿ, ಟೇಬಲ್ ಮೇಲೆ ಇರಿಸತೊಡಗಿದೆ. ನನ್ನ ಈ ಕಾರ್ಯ ನೋಡಿ, ಒಬ್ಬೊಬ್ಬರೇ ನೌಕರರು, ತಮ್ಮ ತಮ್ಮ ಲೆಡ್ಜರ್‌ಗಳನ್ನು ಹೊತ್ತು ತಮ್ಮ ಟೇಬಲ್ ಮೇಲೆ ಇರಿಸಿ, ಕೆಲಸ ಶುರುಮಾಡತೊಡಗಿದರು.

"ತಾವು ಹೋಗಿ ಕುಳಿತುಕೊಳ್ಳಿ ಸಾಬ್!"

ನನ್ನ ಕೊಠಡಿಗೆ ಬಂದು, ಕುರ್ಚಿಯಲ್ಲಿ ಕುಳಿತೆ. ಕೊಠಡಿಯಲ್ಲಿ ಗ್ರಾಹಕರ್‍ಯಾರೂ ಕಾಣಲಿಲ್ಲ.

ಫೋನ್ ಟ್ರಿನ್ ಎಂದು ಶಬ್ದ ಮಾಡಿತು. ಈ ಫೋನ್‌ಗೆ ಬಿಡುವೇ ಇಲ್ಲವೇ?

"ಎಷ್ಟು ದಿವಸ ಬೇಕ್ರಿ ಆ ಪ್ರಪೋಸಲ್ ಕಳುಹಿಸಲಿಕ್ಕೆ?"

ಆ ಕಡೆಯಿಂದ ರಾಜಕುಮಾರ್ ಡಿ.ಎಮ್. ಮಾಡನಾಡುತ್ತಿದ್ದ.

ಇನ್ನೂ ಮರೆತಿರಲಿಲ್ಲ ಅವ ಆ ಪ್ರಪೋಸಲ್‌ನ ಬಗ್ಗೆ! ಬೆಂಬಿಡದ ಭೂತನಾಗಿದ್ದ! ಈ ಭೂತ ಚೇಷ್ಟೆಯನ್ನು ನಿವಾರಿಸಲು ಏನು ಉಪಾಯ? ಆತಂಕವಾದಿಗಳನ್ನಾದರೂ ಎದುರಿಸಬಹುದು ಆದರೆ ಪ್ರತಿ ನಿಮಿಷ ಆತಂಕ ಹುಟ್ಟಿಸುವ ಈ ಭೂತವನ್ನು ಎದುರಿಸಲು ಎಷ್ಟು ಹೆಣಗಾಡಬೇಕು? ಸಾಮಾನ್ಯ ಭೂತವಾಗಿದ್ದರೆ, ಪಂಜುರ್ಲಿ ದೆವ್ವವಾಗಿದ್ದರೆ, ಹರಕೆ ಹೊತ್ತು ಅವುಗಳ ಕೋಪ ಶಮನ ಮಾಡಬಹುದಾಗಿತ್ತು. ಆದರೆ ಇದು ಹೆಂಡ ಕುಡಿಯುವ ಭೂತ! ಯಾವಾಗಲೂ ಅಮಲಿನಲ್ಲಿರುವ ಭೂತ! ಇದರ ಚೇಷ್ಟೆ ಅಪಾರ ಅಪರಿಮಿತ! ಇದರ ಬಲ ಭೀಮ ಬಲ! ಬ್ಯಾಂಕ್‌ನ ಮುಖ್ಯ ಚೇರ್‌ಮನ್ ಬಾದ್‌ಶಾಹಾನೇ ಈತನ ಸಹೋದರನಾದ ಮೇಲೆ, ಇವನ ಚೇಷ್ಟೆಗೆ ಮಿತಿಯೇ ಇರಲಿಲ್ಲ.

ಒಣಗಿದ ತುಟಿಯನ್ನು, ಆರಿದ ನಾಲಿಗೆಯಿಂದ ಒರೆಸಿ ಸಾರಿಸಲಿಕ್ಕೆ ಹೊರ ತೆಗೆದೆ. ನಿಗರಿ ನಿಂತ ತಲೆಕೂದಲನ್ನೂ ಸರಿಮಾಡಿ ತುರಿಸತೊಡಗಿದೆ ತಲೆಯನ್ನು ನನ್ನ ಬಲಗೈಯಿಂದ.

"ಉತ್ತರ ಕೊಡಲಿಕ್ಕೆ ಯಾಕ್ರೀ ಇಷ್ಟು ಹೊತ್ತು?"

"ರೆಡಿ ಆಗಿದೆ ಸಾರ್ ಪ್ರಪೋಸಲ್. ಈಗ ಕಳುಹಿಸುತ್ತಾ ಇದ್ದೇನೆ"

ಸಾವಿರ ಸುಳ್ಳು ಹೇಳಿ ಮದುವೆ ಮಾಡಿದರೆ, ನಾನು ಒಂದು ಸುಳ್ಳು ಹೇಳಿ, ಮುಂಬರುವ ಆಘಾತವನ್ನು ತಪ್ಪಿಸಿಕೊಂಡೆ.

ಅಕೌಂಟೆಂಟ್ ವರ್ಮನನ್ನು ಕರೆದೆ. ಅವನು ಬಂದ ಕೂಡಲೆ ಹೇಳಿದೆ.

"ಆ ಪ್ರೊಪೋಸಲ್ ಹೆಡ್ ಆಫೀಸ್‌ಗೆ ಕಳುಹಿಸಿರಿ"

"ಶಿಫಾರಸ್ಸು ಮಾಡಬೇಕಾ ಸಾಬ್!"

"ಶಿಫಾರಸ್ಸು ಯಾಕೆ ಮಾಡ್ಬೇಕು? ಪ್ರಪೋಸಲ್‌ಲನ್ನು ನಿಮ್ಮ ಗಮನಕ್ಕೆ ತಂದಿದ್ದೇವೆ ಎಂದು ಹೇಳಿ ಕಳುಹಿಸಿರಿ. 'ಶಿಫಾರಸ್ಸು' ಎಂಬ ಪದವನ್ನು ಎಲ್ಲೂ ಉಪಯೋಗಿಸಬೇಡ್ರಿ! ಪ್ರಪೋಸಲ್ ಪಾಸ್ ಆಗಿ ಲೋನ್ ಸ್ಯಾಂಕ್ಷನ್ ಆದರೆ ಅವನ ಹಣೆಬರಹ!" ವರ್ಮಾ ನಗುತ್ತಾ ಹೊರಟುಹೋದ.

ಹಿಂದಿನ ದಿನ ಕೆಲಸ ಬಾಕಿ ಇದ್ದು, ಮನೆಗೆ ಓಡಿಹೋದ ಜೈನನನ್ನು ಕರೆಸಿದೆ. ಅವ ಬಂದ.

"ನಿನ್ನೆ ಕೆಲಸ ಬಾಕಿ ಇಟ್ಟು, ಯಾಕೆ ಹೋದದ್ದು?"

"ಸಮಯವಿರಲಿಲ್ಲ ಸಾರ್" ನಗುತ್ತಾ ಹೇಳಿದ ಭೂಪ!

"ಅರ್ಧ ಗಂಟೆ ಹೆಚ್ಚು ಕುಳಿತು ಮುಗಿಸಿ ಹೋಗಬಹುದಿತ್ತಲ್ಲಾ!" ಆಕ್ಷೇಪಿಸಿದೆ.

"ಹೆಚ್ಚು ಹೊತ್ತು ನಾನು ಕೂರುವ ಹಾಗಿಲ್ಲ ಸಾಬ್! ಆರು ಗಂಟೆ ಆದ ಮೇಲೆ ನಾವು ಜೈನರು ಊಟ ಮಾಡುವ ಹಾಗಿಲ್ಲ! ಆರು ಗಂಟೆ ಮೊದಲೇ ಮನೆಗೆ ಹೋಗಬೇಕು, ಊಟ ಸಿಗುವ ಹಾಗಿದ್ದರೆ."

"ಆರು ಗಂಟೆಯ ಆದ ಮೇಲೆ ಊಟ ಸಿಗುವುದಿಲ್ಲವೋ ಅಥವಾ ಮಾಡುವುದಿಲ್ಲವೋ?"

"ಸಿಗುವ ಹಾಗಿಲ್ಲವೆಂದೇ ಲೆಕ್ಕ" ಕುತಂತ್ರಿ ಜೈನ್, ನಸುನಗುತ್ತಲೇ ಇದ್ದ!

"ಬೆಳಗಿನಿಂದ ಊಟವಿಲ್ಲದೇ ಸಾಯಂಕಾಲ ಆರು ಗಂಟೆ ಮುನ್ನ ಮನೆಗೆ ಹೋಗದಿದ್ದರೆ, ಹಸಿದ ಹೊಟ್ಟೆಗೆ ಊಟ ಸಿಗದಿದ್ದರೆ ಹೇಗೆ ಸಾಬ್?"

ಜೈನ್ ಪ್ರಶ್ನೆ ಹಾಕಿದ.

"ಹೌದು! ಊಟ ಸಿಗಬೇಕಾದರೆ, ಆರು ಗಂಟೆ ಮುನ್ನ ಮನೆಗೆ ಹೋಗಬೇಕು! ಆದರೆ ನಿಮಗೆ ತಿಳಿದಿದೆಯೋ ಜೈನ್ ಸಾಬ್! ಬ್ಯಾಂಕ್‌ನ ಕೆಲಸ ಮಾಡದೆ, ಕೊಟ್ಟ ಕೆಲಸ ಪೂರ್ತಿ ಮಾಡದೇ ಇದ್ದರೆ, ನಮಗೆ ಊಟವೇ ಸಿಗುವುದಿಲ್ಲ! ಬರೀ ಆರು ಗಂಟೆ ಒಳಗೆ ಮನೆಗೆ ಹೋಗುವುದಿರಲಿ ೨೪ ಗಂಟೆ ಮನೆಯಲ್ಲೇ ಇದ್ದರೂ ಊಟ ಸಿಗುವುದಿಲ್ಲ!"

ಬಿಳಿ-ಹಳದಿ ಮಿಶ್ರಿತ ಮುಖ ಕೆಂಡವಾಯಿತು. ಅವನ ಆಕ್ರಮಣಕ್ಕೆ ಸಿದ್ಧನಾದೆ.

ಅವನಿಗೆ ಉದ್ರೇಕಿಸಿದ್ದೆ, ರೇಗಿಸಿದ್ದೆ. ನನ್ನ ಮೇಲೆ ರೇಗಿದರೆ ಹರಿಹಾಯಿದರೆ, ಅವನನ್ನು ಸಿಗಿದು ಸೀಳಿಬಿಡುವ ಇಚ್ಛೆ ಉಂಟಾಗಿತ್ತು.

"ಈ ದಿನದಿಂದ ಕೆಲಸ ಬಾಕಿ ಇಟ್ಟರೆ, ನಿಮ್ಮ ಹೊಟ್ಟೆಗೆ ಬಾಕಿ ಇಡಬೇಕಾಗುತ್ತದೆ! ಕೆಲಸ ಮಾಡಿ ಹೋಗಿ!"

ಏನೋ ಹೇಳಬೇಕೆಂದು ಬಾಯಿ ತೆರೆದಿದ್ದ ಜೈನ್ ಬಾಯಿಮುಚ್ಚಿಕೊಂಡು ಹೊರಗೆ ಹೋದ.

ಸುದ್ದಿ ಸಂತೆಗೆ ಬೇಕಾದಷ್ಟು ಸರಕು ದೊರಕುವಂತಾಗಿತ್ತು ನನ್ನ ದೆಸೆಯಿಂದ. ಹೊರಗಡೆ, ಸಂತೆ ಸೇರಿತ್ತು. ಬಿಸಿ ಸುದ್ದಿಯ ಕಾವು ಎಲ್ಲರಿಗೂ ಬಿಸಿ ತಟ್ಟಿತ್ತು. ಆದರೆ ನನ್ನ ಗಂಟು ಕಟ್ಟಿದ ಹಿಮಾಲಯ ಶಿಖರದಂತಿದ್ದ ಮುಖ ಕೊರೆಯುವ ಮುಖದ ಮುಂದೆ ಅವರ ಬಿಸಿ ಆರಿ ತಣ್ಣಗಾಗಿತ್ತು.

"ಸಾಬ್!" ಒಳಗೆ ಬಂದ ಜಾಟ್ ಜವಾನ.

"ಏನು?" ಕೇಳಿದೆ.

ನನ್ನ ಮುಖ ನೋಡಿದ ಜಾಟ್. ೬ ಅಡಿ ಎತ್ತರದ ಜಾಟ್ ಸ್ವಲ್ಪ ಸ್ವಲ್ಪವೇ ಕುಗ್ಗಿದ.

"ಸ್ವಲ್ಪ ಲೇಟಾಯಿತು ಸಾಬ್"

"ನನ್ನ ಕೈಗಡಿಯಾರ ನೋಡಿದೆ. ಅರ್ಧ ಗಂಟೆ ತಡವಾಗಿ ಬಂದಿದ್ದ. ಮಾತನಾಡಲಿಲ್ಲ ನಾನು.

"ಬಸ್ ಲೇಟಾಗಿ ಬಂತು ಸಾಬ್! ಬಹದ್ದೂರ್ ಗಢ್‌ದಿಂದ ಬರಬೇಕು! ೩೦ ಕಿಲೋಮೀಟರ್ ದೂರ ಸಾಬ್!"

ಯೋಚಿಸತೊಡಗಿದೆ. ಪಾಪದ ಜಾಟ್! ತಡವಾಗಿ ಬಂದಿದ್ದಾನೆ! ಹೋಗಲಿ ಪಾಪ ಎಂದು ಕೆಲಸ ಮಾಡು ಎಂದರೆ ಇದೇ ನೆಪ ಒಡ್ಡಿ ದಿನವಹೀ ತಡವಾಗಿ ಬಂದಾನು! ಇವನಿಗೆ ಯಾಕೆ ರಿಯಾಯಿತಿ ಎಂದು ಬಾಕಿ ನೌಕರರು ಇವನ ಮೇಲ್ಪಂಗ್ತಿ ಹಾಕಿಯಾರು! ಶಿಸ್ತಿನ ಗತಿ?

"ರಜೆ ಹಾಕಿ ಹೋಗು" ಮನಸ್ಸು ಗಟ್ಟಿ ಮಾಡಿ, ಗಟ್ಟಿ ಧ್ವನಿಯಲ್ಲಿ ನುಡಿದೆ.

"ಸಾಬ್! ಇದೊಂದು ಸಲ ! ನನಗೆ ರಜಾ ಬೇರೆ ಇಲ್ಲ!

"ರಜಾ ಇಲ್ಲದಿದ್ದರೆ ಸಂಬಳ ಇಲ್ಲ!"

ಜಾಟ್ ಮತ್ತೂ ಕುಗ್ಗಿದ. ಮುಖ ಬೆವರೊಡೆದಿತ್ತು. ನೀರಿಳಿಯುತ್ತಿತ್ತು.

ನಾನು ಎದ್ದು ಹೊರಗೆ ಹೋಗಿ, ವಾಟರ್ ಕೂಲರ್‌ನಿಂದ ಒಂದು ಲೋಟ ನೀರು ತಂದು ಅವನ ಕೈಗೆ ಇತ್ತು,

"ಕುಡಿ" ಎಂದೆ.

ನನ್ನ ಮುಖವನ್ನೇ ದಿಟ್ಟಿಸಿ ನೋಡಿದ. ಅವನ ಕಣ್ಣಿನಲ್ಲಿ ತೀಕ್ಷ್ಣತೆ ಇರಲಿಲ್ಲ. ಹತಾಶ ಭಾವನೆ ತುಂಬಿತ್ತು. ನೀರಿನ ಲೋಟವನ್ನು ನನ್ನ ಮೇಜಿನ ಮೇಲೆ ಇಟ್ಟ. ನಿಧಾನವಾಗಿ ಬೆನ್ನು ಬಾಗಿಸಿ, ಹೊರಗೆ ಹೋದ ಜಾಟ್! ಅಂದು ನನಗೆ ನೀರು ಕೊಡಲು ನಿರಾಕರಿಸಿದ ಜಾಟ್ ಇಂದು ನಾನು ಇತ್ತ ನೀರು ಕುಡಿಯಲು ನಿರಾಕರಿಸಿದ್ದ. ಹೊರಗೆ ಸುದ್ದಿ ಸಂತೇಗೆ ಮತ್ತೊಮ್ಮೆ ಸರಕು ದೊರಕಿತ್ತು! ಸುದ್ದಿ ಸಂತೆಗೆ ಸರಕುಗಳ ಅಭಾವವೇ ಇರಲಿಲ್ಲ!

ಇದುವರೆಗೂ ನನ್ನನ್ನು ಮೀನಿನ ಗಾಳದಲ್ಲಿ ಸಿಕ್ಕ ಹುಳುವಿನಂತೆ ಅಳ್ಳಾಡಿಸುತ್ತಿದ್ದ ಈ ಜನರನ್ನು ನನ್ನ ಗಾಳಕ್ಕೆ ಸಿಕ್ಕಿಸುವ ಪ್ರಯತ್ನಗಳಲ್ಲಿ ಇದು ಮೊದಲನೆಯ ಯತ್ನವಾಗಿತ್ತು.

"ತೆಗೆದುಕೊಳ್ಳಿ ಸಾಬ್ ನಿಮ್ಮ ಪ್ರಪೋಸಲ್!

ಅಕೌಂಟೆಂಟ್ ವರ್ಮಾ, ಒಳಗೆ ಬಂದು, ನನ್ನ ಮೇಜಿನ ಮೇಲೆ ಫೈಲ್ ಇಟ್ಟ. ಅವನ ಮುಖ ನೋಡಿದೆ. ಎಂದಿನಂತೆ ನಗು, ಸ್ನೇಹ ಗೌರವ ಕಾರ್ಯ ನಿರ್ವಹಣೆಯಲ್ಲಿ ಚಾಕಚಕ್ಯತೆಗಳ ಪ್ರತೀಕನಾಗಿದ್ದ ವರ್ಮಾ.

ಫೈಲ್ ತೆಗೆದು ಪ್ರಪೋಸಲ್ ಮೇಲೆ ಕಣ್ಣಾಡಿಸಿ, ಅದರಲ್ಲಿ 'ರೆಕಮೆಂಡೇಶನ್' ಎಂಬ ಪದದ ಉಪಯೋಗ ಆಗಿಲ್ಲವೆಂಬುದನ್ನು ಖಾತರಿ ಪಡಿಸಿಕೊಂಡು ಫೈಲನ್ನು ಮುಚ್ಚಿಟ್ಟೆ.

"ವೆರಿಗುಡ್! ರವಾನಿಸಿರಿ ಇದನ್ನು ರಾಜಕುಮಾರನ ಸನ್ನಿಧಾನಕ್ಕೆ!" ಎಂದೆ.

"ಇದನ್ನು ರವಾನಿಸೋಣ! ಆದರೆ ಹೊರಗಡೆ ನಿಮ್ಮನ್ನು ಈ ಶಾಖೆಯಿಂದ ರವಾನಿಸಲಿಕ್ಕೆ ತಯ್ಯಾರಿ ನಡೆಯುತ್ತಾ ಇದೆ!"

ವರ್ಮಾನ ಮುಖದಲ್ಲಿ ನಗು ಮಾಸಿರಲಿಲ್ಲ. ಇವನಿಗೆ ಕೋಪ ಬರುವುದೇ ಇಲ್ಲವೇ? 'ನಗು ಖರ್ಚಿಲ್ಲದೆ ಮುಖದ ಅಂದವನ್ನು ಹೆಚ್ಚಿಸುವ ಸಾಧನ' ವೆಂದು ಹೇಳುವುದು ಸುಳ್ಳಲ್ಲ!

ನೌಕರರೆಲ್ಲಾ ಆತಂಕವಾದಿಗಳಾಗಿ ಪರಿವರ್ತಿಸಿದ್ದು ನನಗೆ ಸೋಜಿಗವೇನು ಆಗಿರಲಿಲ್ಲ. ಆದರೆ, ಇವರು ನನ್ನ ಸ್ಥಳಾಂತರಕ್ಕೆ ಇಷ್ಟು ಬೇಗ ತಯಾರಿ ನಡೆಸಿರುವ ವಿಷಯ ಅರಿತು ಬೇಸರದ ಜೊತೆಗೆ ಅವರ ಬಗ್ಗೆ ಅನುಕಂಪವೂ ಆಯಿತು. ಈ ಕಾಳಗ ಬೇಗ ಮುಗಿಯುವ ಲಕ್ಷಣ ಕಾಣಬರುವುದಿಲ್ಲದುದರಿಂದ ಬೇಸರ; ಈ ಕಾಳಗದಿಂದ ಈಗಾಗಲೇ ಸಂಕಟ, ಮನಕ್ಲೇಶ, ಅಶಾಂತಿ, ನಷ್ಟಗಳಿಂದ ನರಳುತ್ತಿರುವ ನೌಕರರು ಮತ್ತೂ ಹೀನಾವಸ್ಥೆಗೆ ಇಳಿದು, ದುಃಖ ಪಡುವ ಸ್ಥಿತಿಗೆ ತಲುಪುತ್ತಾರೆಂದು ತಿಳಿದು ಅನುಕಂಪ. ಭಯೋತ್ಪಾದಕರು, ನನ್ನನ್ನು ಇಲ್ಲಿಂದ ಉಚ್ಚಾಟಿಸುವ ಸುದ್ದಿ ಹಬ್ಬಿಸಿ ನನಗೆ ಭಯ ಹುಟ್ಟಿಸುವ ಯತ್ನದಲ್ಲಿ ಸಫಲರಾಗಬಾರದೆಂದು ಪಣ ತೊಟ್ಟೆ.

ನಾನು ಎಣಿಸಿದಂತೆ, ಮುಖಂಡರಿಬ್ಬರ ಆಗಮನವಾಯಿತು ಮಧ್ಯಾಹ್ನದ ಊಟದ ಬಿಡುವಿನಲ್ಲಿ.

"ಜಾಟ್ ಸಿಂಗ್ ತಡವಾಗಿ ಬಂದಿದ್ದಕ್ಕೆ ಕೆಲಸಕ್ಕೆ ಸೇರಿಸಿಕೊಳ್ಳಲಿಲ್ಲ ಎಂದು ದೂರು ಇತ್ತಿದ್ದಾನೆ." ಸರ್ದಾರ್ಜೀ ನೇತಾ ಆಕ್ಷೇಪಣೆ ಇತ್ತ.

"ದೂರು ನಿಮ್ಮ ಬಳಿ ಬಂದಿದ್ದರೆ, ಅದಕ್ಕೆ ಉಪಾಯ ನೀವೇ ಹುಡುಕಿ. ನನ್ನ ಬಳಿ ದೂರು ಬಂದಿಲ್ಲವಲ್ಲ!'

"ನಾವು ದೂರು ತಂದಿದ್ದೇವೆ ನಿಮ್ಮ ಬಳಿ ಈಗ."

"ಇದು ಎಂತಹ ದೂರು? ತಡವಾಗಿ ಬಂದರೆ ಕೆಲಸ ಮಾಡಲಿಕ್ಕೆ ಬಿಡಬೇಕು. ಸಾಯಂಕಾಲ ಕೆಲಸ ಬಾಕಿ ಇಟ್ಟು ಹೋದರೆ, ನನ್ನ ದೂರು ಯಾರು ಕೇಳುವವರು?"

"೩೦ ಕಿಲೋ ಮೀಟರ್ ದೂರದಿಂದ ಬರುತ್ತಾನೆ. ಅವನಿಗೆ ಸ್ವಲ್ಪವಾದರೂ ರಿಯಾಯಿತಿ ತೋರಿಸಬಹುದಲ್ಲಾ!"

"ಸಂಬಳ, ಕೆಲಸ ಬೇಕೆಂದಿದ್ದರೆ, ೩೦ ಅಲ್ಲ ನೂರು ಕಿಲೋಮೀಟರ್ ದೂರವಾದರೂ ಬರಬೇಕು!" ಬೇಕಂತಲೇ ನಸುನಗುತ್ತಾ ಸಮಾಧಾನದಿಂದ ನುಡಿದಿದ್ದೆ.

"ನೀವು ಹಿರಿಯರು ಸಾಬ್! ನಿಮಗೆ ಹೆಚ್ಚು ಹೇಳಲು ನಮಗೆ ಸಾಧ್ಯವಿಲ್ಲ. ಅವನ ಬಗ್ಗೆ ಸ್ವಲ್ಪ ದಯೆ ತೋರಿ!"

ಕಾಶ್ಮೀರೀ ನಾಯಕ ಮೆತ್ತಗಾಗಿದ್ದ. ಅವನ ನಯವಾದ ಮಾತು ಕೇಳಿ ನನಗೆ ಅಚ್ಚರಿಯಾಗಿತ್ತು. ಆದರೆ ಒಮ್ಮೆಲೆ ನನ್ನ ಅಚ್ಚರಿ ಬಗ್ಗೆ ನಾನೇ ಎಚ್ಚರಗೊಂಡೆ. ಕನ್ನಡ ಗಾದೆ ನೆನಪಿಗೆ ಬಂತು. "ಬಾಯಲ್ಲಿ ಬಸಪ್ಪ, ಹೊಟ್ಟೆಯಲ್ಲಿ ವಿಷಪ್ಪ" ಇವನು ನಮ್ಮ ರಾಜಕುಮಾರ ಡಿ.ಎಮ್. ಜಾತಿಗೆ ಸೇರಿದವನಾದರೆ?' ಮುಂದೆ ಚಂದ ಮಾತನಾಡಿ ಹಿಂದಿನಿಂದ ಬಾಕು ಹಾಕಬೇಕ್ರೀ!' ಈ ಬಾಕು ಸಂಸ್ಕೃತಿಯವರ ಸಂಗಡ ಜಾಗರೂಕರಾಗಿದ್ದರೆ, ಕ್ಷೇಮವಲ್ಲವೇ?

"ಅರ್ಧ ಗಂಟೆ ತಡವಾಗಿ ಬಂದದ್ದಕ್ಕೆ, ಸಾಯಂಕಾಲ ತಡವಾಗಿ ಮನೆಗೆ ಹೋಗಲಿಕ್ಕೆ ತಯಾರಾಗಿದ್ದಾನೆಯೇ ನಿಮ್ಮ ಜವಾನ?"

ಕಾಶ್ಮೀರೀ ನಾಯಕ ಕಾಶ್ಮೀರೀ ಚಳಿಯಿಂದ ನಡುಗುವಂತೆ ಒಂದು ಸಲ ನಡುಗಿದ. ಮಾತನಾಡಲಿಲ್ಲ ಅವ.

"ನಿಮ್ಮ ವರ್ತನೆ ನಮಗೆ ಸರಿಬೀಳುತ್ತಾ ಇಲ್ಲ."

ನನ್ನ ವರ್ತನೆ ಬಗ್ಗೆ ಸರ್ಟಿಫಿಕೇಟ್ ನೀಡಿದ ಸರ್ದಾರ್ಜೀ ನೇತಾ.

"ಸೂಪರ್‌ವೈಸರ್ ಜೈನ್ ಜೊತೆ ಕೆಟ್ಟದಾಗಿ ವರ್ತಿಸಿದ್ದೀರಿ. ಆರು ಗಂಟೆ ಆದ ಮೇಲೆ ಊಟ ಮಾಡುವ ಹಾಗಿಲ್ಲ ಎಂದು ಹೇಳಿದರೆ, ಅವರಿಗೆ ಊಟವೇ ಸಿಗದಂತೆ ಮಾಡುವುದಾಗಿ ಹೆದರಿಸಿದ್ದೀರಿ!"

ಗಂಟಲು ಹರಿಯಬಿಟ್ಟಿದ್ದ ಸರ್ದಾರ್ಜೀ!ಅಲಾರಂ ಗಂಟೆ ಬಡಿದಿದ್ದ! ಹೊರಗೆ ಕೆಲಸ ಮಾಡುವುದನ್ನು ಮರೆತು, ನೌಕರರೆಲ್ಲಾ ನನ್ನ ಕ್ಯಾಬಿನ್ ಒಳಗೆ ಘೇರಾಯಿಸ ಲಿಕ್ಕೆ ಶುರು ಮಾಡತೊಡಗಿದ್ದರು. ಭಯೋತ್ಪಾದಕರೆಲ್ಲಾ ಒಗ್ಗಟ್ಟಾದರೆ, ಊರು ಧ್ವಂಸ ಮಾಡುವುದು ಖಂಡಿತ. ಆದರೆ ಇವರ ಭಯದ ಹುಟ್ಟನ್ನೇ ಅಡಗಿಸಿಬಿಟ್ಟರೆ, ಇನ್ನೊಮ್ಮೆ ನನ್ನ ಬಳಿ ಸುಳಿಯುವುದಿಲ್ಲ.

"ನಿಮಗೆಲ್ಲಾ ಇಲ್ಲಿ ಬರಲು ಹೇಳಿ ಕಳುಹಿಸಿದವರ್ಯಾರು?" ನನ್ನ ಗಂಟಲು ಸಡಿಲಬಿಟ್ಟಿದ್ದೆ.

"ಅವರೆಲ್ಲಾ ನಮ್ಮ ಅನುಯಾಯಿಗಳು. ಅವರು ಬಂದರೆ ನಿಮಗೇನು ನಷ್ಟ?" ದರ್ಪದ ಧ್ವನಿಯಲ್ಲಿ ಅಬ್ಬರಿಸಿದ ಸರ್ದಾರ್ಜೀ ನೇತಾ!

"ಒಂದು ನಿಮಿಷ ಸಮಯ ಕೊಡುತ್ತೇನೆ. ನಿಮ್ಮ ನಿಮ್ಮ ಸೀಟ್‌ಗೆ ಹೋಗಿ ಕುಳಿತು ಕೆಲಸ ಮಾಡಿ. ಇಲ್ಲದಿದ್ದರೆ, ನಿಮ್ಮ ಈ ನಡತೆಯನ್ನು ಬೇಜವಾಬ್ದಾರೀ ಯುತ, ಸಂಪು ಹೂಡಿದ್ದೀರೆಂದು ತಿಳಿದು, ಸೂಕ್ತ ಕ್ರಮ ಜರುಗಿಸುತ್ತೇವೆ!"

ನನ್ನ ಬೆದರಿಕೆಗೆ ಅವರು ಸೊಪ್ಪು ಹಾಕಿದ ಹಾಗೆ ಕಾಣಲಿಲ್ಲ. ಸಾವಿರ ಸಹಸ್ರನಾಮ ಹಾಕಿದರು. ಹಿಂದೀ ಭಾಷೆಯ ಚಿತ್ರವಿಚಿತ್ರ ಬೈಗುಳಗಳ ಸುರಿಮಳೆ ಆಯಿತು.

ಅವರ ನಾಲಿಗೆಗಳು ಸುಗ್ಗಿ ಕುಣಿತ ಕುಣಿದು ಹಾಡತೊಡಗಿದವು.

ಕೈಗೆ ಪೇಪರ್ ಪೆನ್ ಹಿಡಿದು, ಮೆಮೋ ಬರಿಯತೊಡಗಿದೆ. ಹೆಡ್ ಆಫೀಸ್‌ಗೆ ಕಳಿಸುವ ಯೋಜನೆ ಹಾಕಿ, ಬೇಕಂತಲೇ ಎದುರಿಗೆ ಕುಳಿತಿದ್ದ ನಾಯಕರ ಕಣ್ಣಿಗೆ ಬೀಳಲೆಂದೇ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಬರೆಯತೊಡಗಿದೆ. ನನ್ನ ಬರೆಯುವ ರಭಸ ನೋಡಿ, ಸಹಸ್ರನಾಮಾವಳಿಯ ರಭಸವೂ ಕಡಿಮೆಯಾಗತೊಡಗಿತು. ಅರ್ಧ

ಪುಟ ಮುಗಿಸುವ ವೇಳೆಗೆ, ಸಹಸ್ರನಾಮಾವಳಿಯ ಅರ್ಧದಷ್ಟು ಮುಗಿದಿತ್ತು. ಪೂರ್ತ ಪುಟ ಮುಗಿಸಿ, ನನ್ನ ಸಹಿ ಬಿದ್ದು ಪತ್ರವನ್ನು ಮಡಚಿದೊಡನೆ, ಸಹಸ್ರನಾಮಾಳಿಯ ರಭಸ ಪೂರ್ಣವಾಗಿ, ಎಲ್ಲರ ಬಾಯಿ ಮುಚ್ಚಿ, ತುಟಿಗಳನ್ನು ಮಡಚಿದ್ದರು!

"ನಿಮ್ಮನ್ನು ಯಾರು ಇಲ್ಲಿ ಕರೆಸಿದವರು? ನಾವು ಇಲ್ಲವೇ ಮಾತನಾಡಲಿಕ್ಕೆ?"

ಕಾಶ್ಮೀರೀ ನಾಯಕ ಒಮ್ಮೆಲೆ ಕಿರುಚಿದ. ಅವನ ಗುಟುರಿನ ಶಬ್ದಕ್ಕೆ, ಚೇಲಾಗಳೆಲ್ಲಾ ಚೆಲ್ಲಾಪಿಲ್ಲಿಯಾದರು.

"ಸಾಬ್! ದಿನವಿಡೀ ಇದೆಂತಹ ತಕರಾರು! ನಿಮಗೂ ತ್ರಾಸು, ನಮಗೂ ತ್ರಾಸು. ನಮ್ಮನಮ್ಮಲ್ಲಿ ಜಗಳ, ಮನಸ್ತಾಪ ಯಾವುದೂ ಬೇಡ!"

ಸರ್ದಾರ್ಜೀಯ ಮಾತು ಕೇಳಿ ಬೆಚ್ಚಿಬಿದ್ದೆ. ಇವ ಇದ್ದಕ್ಕಿದ್ದ ಹಾಗೆ ಬದಲಾದುದು ಹೇಗೆ? ಅದೂ ಇಷ್ಟು ಬೇಗ? ನನ್ನ ಮೇಜಿನ ಮೇಲೆ ಗಪ್‌ಚೂಪಾಗಿ ಮಲಗಿದ್ದ ಮೆಮೋ ಕಡೆ ಕಣ್ಣು ಹಾಯಿಸಿದೆ. ಅದನ್ನು ಕೈಗೆ ತೆಗೆದುಕೊಂಡು ನಾನು ಬರೆದಿದ್ದನ್ನು ಮತ್ತೊಮ್ಮೆ ಮನಸ್ಸಿನಲ್ಲೇ ಓದತೊಡಗಿದೆ.

"ಅದನ್ನೇನು ಓದುತ್ತಾ ಇದ್ದೀರಿ ಸಾಬ್! ನಮ್ಮ ಮಾತು ಕೇಳಿ! ನಾವು ಹೇಳಿದಂತೆ ಕೇಳ್ರೀ ಸಾಬ್! ಈ ಜಂಜಾಟ, ಕಷ್ಟ, ಕಾರ್ಪಣ್ಯ ಎಲ್ಲಾ ತಪ್ಪಿಸಿಕೊಳ್ಳಬಹುದು?"

ಇವ ಏನು ಹೇಳುತ್ತಿದ್ದಾನೆ? ಜಂಜಾಟದಿಂದ ತಪ್ಪಿಸಿಕೊಳ್ಳುವುದೇ? "ನೀವು ಸ್ವಲ್ಪ ನಮ್ಮೊಡನೆ ಸಹಕರಿಸಿದರೆ, ಈ ಶಾಖೆಯನ್ನು ಚೆನ್ನಾಗಿ ನಡೆಸಬಹುದು; ಶಾಂತಿ ಕೂಡ ಏರ್ಪಡಿಸಬಹುದು!"

ಆತಂಕವಾದಿಗಳಿಂದ ಶಾಂತಿ ಏರ್ಪಾಟು. ನನ್ನ ಹೃದಯ ಶಾಂತಿಗೀತ ಹಾಡಿತು!

ಮನಸ್ಸು ನಿರಾಳ, ನಿರ್ಭಯ, ನೆಮ್ಮದಿಯ ಬೀಡಾಯಿತು. ಕನಸು ಕಾಣುತ್ತಿಲ್ಲವಷ್ಟೇ! ಆತಂಕವಾದಿಗಳು ಶಾಂತಿ ಬಾವುಟ ಹಿಡಿದು ನನ್ನ ಮುಂದೆ ಕುಳಿತಿರುವ ದೃಶ್ಯ ಎಂತಹ ಅಪೂರ್ವ! ಈ ಶಾಖೆಯನ್ನು ಒಂದು ಉತ್ತಮ, ಶಿಸ್ತಿನ, ಘನತೆಯ ಸಂಸ್ಥೆಯನ್ನಾಗಿ ಮಾಡಬೇಕೆಂಬ ಉತ್ಕಾಂಕ್ಷೆ, ಇಂದು ನಿಜವಾಗುವ ಹಾಗೆ ತೋರುತ್ತದೆ! ಇವರಿಗೆ ಎಂತಹ ಸಹಕಾರ ಬೇಕು?

"ನಿಮ್ಮ ಸಹಕಾರ ಸಿಕ್ಕಿದರೆ, ಈ ಶಾಖೆಯನ್ನು ಸುಗಮ ಹಾದಿಯನ್ನು ಕೊಂಡೊಯ್ಯಬಹುದು?"

"ಹೇಗೆ?"

ಮೌನದ ಗುಹೆಯಿಂದ ಹೊರಬಂದು, ಅವರನ್ನು ಪ್ರಶ್ನಿಸಿದೆ. "ನೀವು ಕೊಟ್ಟರೆ, ಎಲ್ಲಾ ಸರಿಹೋಗುತ್ತದೆ!"

"ಹಿಂದಿನ ಮೇನೇಜರ್‌ಗಳು? ಅವರ ಸಹಕಾರ ಹೇಗಿತ್ತು?"........

"ಅವರು ನೀಡುತ್ತಿದ್ದ ಸಹಕಾರ ಬಹಳ ಸುಲಭವಾಗಿತ್ತು!"

"ಸುಲಭ?"

"ಹೌದು! ಸುಲಭ! ಅವರು ನಾವು ಹೇಳಿದ ಹಾಗೆ ಕೇಳುತ್ತಿದ್ದರು. ಕೆಲಸವೇ ಮಾಡುತ್ತಿರಲಿಲ್ಲ!

ಇವರು ಹೇಳಿದ ಹಾಗೆ ಕೇಳಿಕೊಂಡು, ಸಹಕಾರ ನೀಡುತ್ತಿದ್ದರು! ಕೆಲಸವೇ ಮಾಡುತ್ತಿರಲಿಲ್ಲ!

"ಬೆಳಿಗ್ಗೆ ಹಾಜರಾತಿ ಹಾಕಿ, ಹೊರಗೆ ಹೋದರೆ, ಸಾಯಂಕಾಲ ಐದು ಗಂಟೆಗೆ ಬಂದು, ನಾವು ಮಾಡಿ ಮುಗಿಸಿದ ಕಾಗದ ಪತ್ರಗಳಿಗೆ ಸಹಿ ಹಾಕಿ ಮನೆಗೆ ಹೋಗುತ್ತಿದ್ದರು."

"ನಾನು ಇದೇ ಮಾಡಬೇಕು ಎನ್ನುತ್ತೀರಾ? ಅಲ್ಲವೇ?"

"ಅಷ್ಟೇ!"

"ಇದಕ್ಕೇ ಸಹಕಾರ ಎನ್ನುವುದು!"

"ಹೌದು!"

"ಎಲ್ಲಾ ಕೆಲಸ ನಿಮ್ಮ ಕೈಲಿ ಕೊಟ್ಟು, ನಾನು ಆರಾಮಾಗಿರುವುದು. ಅಲ್ಲವೇ?"

"ಹೌದೇ ಹೌದು!" ಆನಂದವಾಗಿತ್ತು ಅವರಿಗೆ ನನ್ನ ಮಾತು ಕೇಳಿ.

"ಹಾಗೆ ನಿಮ್ಮ ಮಾತು ಕೇಳಿಯೇ, ಹಿಂದಿನ ಮೇನೇಜರ್‌ಗೆ ಅಮಾನತ್ತು ಆಯಿತು. ಅಲ್ಲವೇ?"

ಮುಖಂಡರಿಬ್ಬರ ಮುಖ ಗಂಟಾಯಿತು.

"ಹತ್ತು ಜನ ನೌಕರರು ಕೆಲಸ ಕಳೆದುಕೊಳ್ಳುವ ಪರಿಸ್ಥಿತಿಯಲ್ಲಿದ್ದಾರೆ, ನಿಮ್ಮ ಮಾತು ಕೇಳಿ!"

ಮುಖದ ಗಂಟು ಮತ್ತಷ್ಟು ಗಂಟಿಕ್ಕಿತು.

"ನಿಮ್ಮ ಮಾತು ಕೇಳಿ, ನಿಮ್ಮಿಂದ ಶಾಂತಿ ಕೊಂಡುಕೊಂಡು, ಶಾಖೆಯನ್ನು ನಿಮ್ಮ ಸುರ್ಪದಿಗೆ ವಹಿಸಿ, ನಾನು ಹಾಯಾಗಿ ಕುಳಿತು-ಅಲ್ಲ, ಮಲಗಿಕೊಳ್ಳುವ ಉಪಾಯ ಹೇಳಿಕೊಡುತ್ತಿದ್ದೀರಾ! ಅಲ್ಲವೇ?"

ಅವರ ಮುಖಗಳಲ್ಲಿನ ಗಂಟು ಸ್ವಲ್ಪ ಸಡಿಲಗೊಂಡ ಹಾಗೆ ತೋರಿತು.

"ನನ್ನ ಎಲ್ಲಾ ಕೆಲಸಗಳನ್ನು ನಿಮಗೆ ವಹಿಸಿ ಕೊಟ್ಟು, ನಾನು ಈ ಕೊಠಡಿಯಲ್ಲಿ, ಇದೇ ಕುರ್ಚಿಯಲ್ಲಿ ಕುಳಿತುಕೊಳ್ಳಬಹುದೇ?"

"ಅವಶ್ಯವಾಗಿ!" ಇಬ್ಬರೂ ಒಟ್ಟಿಗೆ ನುಡಿದರು.

"ಹೇಗೆ ಸಾಧ್ಯ? ನಿಮಗೆ ನನ್ನ ಕೆಲಸ ವಹಿಸಿಕೊಟ್ಟರೆ, ನಾನು ಈ ಕುರ್ಚಿಯಲ್ಲಿ ಕುಳಿತುಕೊಳ್ಳಲು ಸಾಧ್ಯವೇ ಇಲ್ಲ!" ಎಂದೆ.

"ಯಾಕೆ ಹಾಗೆ ಹೇಳುತ್ತೀರಿ?"

"ನನ್ನ ಸಸ್ಪೆಂಡ್ ಆಗಿ ಮನೆಯಲ್ಲೋ, ಜೈಲ್‌ನಲ್ಲೋ ಕುಳಿತ ಹಾಗೆ ಆದಾಗ, ಈ ಕುರ್ಚಿಯಲ್ಲಿ ಕುಳಿತುಕೊಳ್ಳುವುದು ಹೇಗೆ?"

ಮೆಲ್ಲನೆ ಎದ್ದರು ಇಬ್ಬರು ನೇತಾಗಳು, ಕುಳಿತ ಕುರ್ಚಿಗಳಿಂದ. ನನ್ನ ಉದ್ದ ಮುಖ ಬಾಳೇಹಣ್ಣಿನ ಹಾಗೆ ತೋರಿರಬಹುದು. ದುರುಗುಟ್ಟಿ ತಿನ್ನುವಂತೆ ನೋಡಿದರು.

"ನೀವು ಪಶ್ಚಾತ್ತಾಪ ಪಡುತ್ತೀರಾ!"

ಆಶೀರ್ವಾದ ಕೊಟ್ಟು, ಹೊರ ನಡೆದರು!

ಸಂಧಾನ ಮುರಿದುಬಿದ್ದ ಸುದ್ದಿ, ಹೊರಗಡೆ ನೆರೆದಿದ್ದ ಸುದ್ದಿಸಂತೆಗೆ ತಿಳಿಯಿತು. ಸುದ್ದಿಸಂತೆಯಲ್ಲಿ ವಿಷದ ಗಾಳಿ ಹರಡಿ, ಸಂತೆಜನ ಅದನ್ನು ಕುಡಿದು ವಿಷಕನ್ಯೆಯ ತರಹ ವಿಷಜಂತುಗಳಾಗಿ, ಎಲ್ಲಿ ನನ್ನ ಮೇಲೆ ಬೀಳುತ್ತಾರೋ, ಬಿದ್ದು ಕಚ್ಚಾಡಿ, ಹರಿದು ತಿಂದು ಮುಕ್ಕುತ್ತಾರೋ ಎಂದು ಭಯಗೊಂಡೆ. ಮರುಕ್ಷಣವೇ ಧೈರ್ಯ ತಂದುಕೊಂಡೆ. 'ಒರಳಲ್ಲಿ ಕೂತಾಗಿದೆ, ಒನಕೆ ಪೆಟ್ಟು ತಪ್ಪಿಸಿಕೊಳ್ಳಲಿಕ್ಕೆ ಸಾಧ್ಯವೇ?'

# 10

"ಹುಲ್ಲಿನ ಹೊದಿಕೆ ಹೊತ್ತು ಯಾವ ಆಡಂಬರ, ವೈಭವ, ಅಟ್ಟಹಾಸಗಳಿಲ್ಲದ ಗೋರಿ ಇದು. ಮೊಘಲ್ ಚಕ್ರವರ್ತಿ ಶಹಜಹಾನ್‌ನ ಪ್ರೀತಿಯ ಮಗಳು ಜಹನ್ನಾರಾ ಬೇಗಂಳ ಗೋರಿ ಇದು" ಕಪೂರ್, ನೀಜಾಮುದ್ದೀನ್ ಔಲಿಯಾದ ಆವರಣದಲ್ಲಿದ್ದ ಜಹನ್ನಾರಾ ಬೇಗಂಳ ಗೋರಿಯನ್ನು ಕುರಿತು ವರ್ಣಿಸುತ್ತಿದ್ದ.

ಅಂದು ಭಾನುವಾರವಾದ್ದರಿಂದ, ಇಬ್ಬರೂ ಸುತ್ತಾಡಲು ಬೆಳ್ಳಂಬೆಳಗ್ಗೆ ಮನೆಯಿಂದ ಹೊರಬಿದ್ದಿದ್ದೆವು. ದಿಲ್ಲೀಯ ಮುಖ್ಯವಾರು ಸುಲ್ತಾನ್, ಬಾದಶಹಾ, ಶಹನ್ ಶಹಾಗಳೆಲ್ಲರ ಗೋರಿಗಳನ್ನು ಈ ನಿಜಾಮುದ್ದೀನ್ ಆವರಣದಲ್ಲಿ ಕಾಣಬಹುದು. ದಿಲ್ಲೀ ಚರಿತ್ರೆಯನ್ನು ಸಾರಿ ಹೇಳುವ ಈ ಗೋರಿಗಳು, ದಿಲ್ಲೀಯನ್ನಾಳಿದವರ ಜೀವನ ಕ್ರಮಗಳ, ಅವರ ವೈಯುಕ್ತಿಕ ಸಾಧನೆ, ಗುರಿ, ತತ್ವಗಳ ಪ್ರತೀಕವಾಗಿದ್ದವು. ಪೌರುಷ, ಕೆಚ್ಚು, ಅಹಂಕಾರ, ಸೊಕ್ಕುಗಳ ಪ್ರತೀಕವಾಗಿ ಭಾರಿ ಭಾರಿ ಸೌಧಗಳೋಪಾಯದ ಗೋರಿಗಳಿದ್ದರೆ, ಸುಂದರ ಸರಳ, ಮನೋಹರ ಮನಸೆಳೆಯುವ ಮನಮಿಡಿಸುವ ಚಿಕ್ಕ, ಚೊಕ್ಕ ಗೋರಿಗಳನ್ನು ಕಾಣಬಹುದು. ಇಂತಹ ಸುಂದರ ಸರಳ ಗೋರಿಗಳಲ್ಲಿ, ಜಹನ್ನಾರಾ ಬೇಗಂಳ ಗೋರಿಯೂ ಒಂದಾಗಿತ್ತು. ಅಮೃತಶಿಲೆಯ ೮ ಅಡಿ ಗೋಡೆ ಹೊಂದಿದ್ದು, ಮೇಲೇ ಛಾವಣಿ ಇಲ್ಲದೆ, ನೀಲಾಕಾಷದ ಹೊದಿಕೆ ಹೊದ್ದ ಈ ಸುಂದರ ಗೋರಿ ಅಪೂರ್ವ ಕಟ್ಟಡವಾಗಿತ್ತು! ತ್ಯಾಗವೇ ಮೈದೆಳೆದು ನಿಂತಂತೆ ತನ್ನ ಇಡೀ ಜೀವನವನ್ನು ಪ್ರೀತಿಯ ತಂದೆಯ ಸೇವೆಗಾಗಿ ಮುಡಿಪಾಗಿ ಇಟ್ಟು, ಕೊನೆಯುಸಿರೆಳೆದ ಈ ಮಹಿಳೆ, ಸತ್ತಮೇಲೆ ತನ್ನ ಶವವನ್ನು ಸರಳ ರೀತಿಯಲ್ಲಿ ದಫನ್ ಮಾಡಿ, ಅದರ ಮೇಲೆ ಯಾವ ತರಹವಾದ ಕಟ್ಟಡವನ್ನು ಕಟ್ಟಬಾರದೆಂದು ಬೇಡಿಕೊಂಡಳಂತೆ. ಹಸಿರು ಹುಲ್ಲಿನ ಹೊದಿಕೆ ಹೊದ್ದ ಜಹನ್ನಾರ ಬೇಗಂಳ ಅಪೂರ್ವ ಮತ್ತು ಅನುಪಮ ತ್ಯಾಗ ಜೀವನದ ಬಗೆ ಓದುವಾಗ ಮನಮಿಡಿದು ಕಂಬನಿ ಸುರಿಸುವುದು ಎಂತಹ ಕಲ್ಲು ಹೃದಯದವನಿಗೂ ಅಸಾಧ್ಯ! ಆದರೆ ಅವಳ ಸಹೋದರ ಔರಂಗ್‌ಜೇಬ್‌ನಿಗೆ ಮಾತ್ರ ಅವಳ ಕರುಣಾಜನಕ ಹೃದಯ, ಅತೀವ ಪಿತೃಪ್ರೇಮ, ಸರಳ ಜೀವನ, ಕೊನೆಗೆ ತಂದೆಗೆ ಜೊತೆಯಾಗಿ ಕಾರಾಗೃಹವಾಸ ಯಾವ ಪರಿಣಾಮವೂ ಉಂಟು ಮಾಡಿರಲಿಲ್ಲ! ಕ್ರೌರ್ಯವೇ ಮೂರ್ತಿವೆತ್ತ ಮನುಷ್ಯ ಔರಂಗ್‌ಜೇಬ್ ತನ್ನ ಸಹೋದರ ದಾರಾ ಶಿಕೋವ್‌ನ ರುಂಡವನ್ನು, ಪೆಟ್ಟಿಗೆಯಲ್ಲಿರಿಸಿ, ಶಹಜಹಾನ್‌ನಿಗೆ ಅದನ್ನು ತನ್ನ ಕಾಣಿಕೆಯೆಂದು ಕಳುಹಿಸಿದಾಗ, ಒಳಗೆ ಏನಿದೆ ಎಂಬುದು ಅರಿಯದ ಮುಗ್ಧ ತಂದೆ, ಆಶ್ಚರ್ಯ ಮತ್ತು ಆನಂದದಿಂದ ಪೆಟ್ಟಿಗೆಯ ಬಾಗಿಲು ತೆರೆದು

ನೋಡಿ, ಅದರಲ್ಲಿದ್ದ ತನ್ನ ಪ್ರೀತಿಯ ಮಗ ದಾರಾ ಶಿಕೋವ್‌ನ ತಲೆಯನ್ನು ಕಂಡು, ಅತೀವ ಶೋಕದಿಂದ ತಲೆತಿರುಗಿ ಬಿದ್ದಾಗ, ಉನ್ಮತ್ತನಂತೆ ಕುಣಿದಾಡಿದನಂತೆ ಕ್ರೂರಿ ಔರಂಗ್‌ಜೇಬ್!

ಇಂತಹ ಕ್ರೂರ ಸಹೋದರನ ಸಹೋದರಿ ಕರುಣಾಳು ಜಹನ್ನಾರಾ ಬೇಗಂ!

"ಅಮಿರ್ ಖುಸ್ರೋವಿನ ಸಮಾಧಿ ನೋಡೋಣವೇ?" ಕಪೂರ್ ಎಚ್ಚರಿಸಿದ. ಜಹನ್ನಾರಳ ಸಮಾಧಿ ನೋಡಿ ಮೈ ಮರೆತು ನಾನು ಕಪೂರ್‌ನ ಎಚ್ಚರಿಕೆಯಿಂದ ಬೆಚ್ಚಿ, ಅವನ ಮುಖ ನೋಡಿ ಪೆಚ್ಚಾಗಿ ನಕ್ಕೆ!

ಜಹನ್ನಾರಾ ಬೇಗಂಳ ಸನಿಹದಲ್ಲೇ ಪುಟ್ಟ ಮಂಟಪದ ರೀತಿ ಕಟ್ಟಿದ ಅಮೃತ ಶಿಲೆಯ ಚಿಕ್ಕ ಅಲಂಕಾರಿಕ ಅಮೀರ್ ಖುಸ್ರೋವಿನ ಗೋರಿ, ಅವನ ಅಸಂಖ್ಯ ರೀತಿಯ ಪ್ರತಿಭೆಗಳ ಪ್ರತೀಕವಾಗಿತ್ತು. ಸಿತಾರ್‌ವಾದಕದ ನಿರ್ಮಾತ, ಉರ್ದು ಪಾರ್ಸಿ, ಹಿಂದೀ ಭಾಷೆಗಳ ಕವಿ ಅಮೀರ್ ಖುಸ್ರೋವಿನ ಉರ್ದು ಕವಿತೆ, ಗಜಲ್‌ಗಳು ಇಂದಿಗೂ ಉತ್ತರ ಭಾರತದ, ಅದರಲ್ಲೂ ದಿಲ್ಲೀ ಶಹರಿನ ಜನಗಳ ಬಾಯಲ್ಲಿ ರಾರಾಜಿಸುತ್ತಿವೆ. ಅತಿ ಸುಂದರ, ಮನಮೋಹಕ, ಚಿತ್ರವಿಚಿತ್ರ ಚಿತ್ತಾರ ಗಳಿಂದ ಕಂಗೊಳಿಸುವ ಪುಟ್ಟ ಕಟ್ಟಡ, ಕಣ್ಣಿಗೆ, ಹೃದಯಕ್ಕೆ ತಂಪನ್ನೀಯುವ ಸುಂದರ ದೃಶ್ಯ.

ಹಜರತ್ ನಿಜಾಮುದ್ದೀನ್‌ನ ಪ್ರಿಯ ಶಿಷ್ಯನಾಗಿದ್ದ ಈತ, ಗುರುವಿನ ಸಾವನ್ನು ಕೇಳಿದೊಡನೆ, ತನ್ನ ಸರ್ವಸ್ವವನ್ನೂ ತ್ಯಾಗ ಮಾಡಿ, ಕರೀ ಬಟ್ಟೆ ಧರಿಸಿ, ಗುರುವಿನ ಸಮಾಧಿಯ ಬಳಿ ಆರು ತಿಂಗಳ ಕಾಲ ಶೋಕಿಸುತ್ತಾ ಕುಳಿತು, ಕ್ರಿ.ಶ. ೧೩೨೫ರಲ್ಲಿ ಪ್ರಾಣ ಬಿಟ್ಟನಂತೆ.

ಗೋರಿಗಳ ವಿಶಾಲ ಆವರಣದಲ್ಲಿ ನಿಂತ ನನಗೆ ಮನುಷ್ಯನ ಅಸ್ಥಿರತೆ, ಅಸಹಾಯಕತೆ ಶೂನ್ಯತೆ, ಅಶಾಶ್ವತ ನಶ್ವರತೆಗಳ ಅನುಭವವಾದಂತಾಯಿತು. ಈ ಗೋರಿಗಳು ಇವೆಲ್ಲವನ್ನೂ ಪ್ರತಿಬಿಂಬಿಸುತ್ತವಲ್ಲವೇ? ಎಂದಾದರೊಂದು ದಿನ ಈ ಗೋರಿ ಗರ್ಭದೊಳಗೆ ಸೇರಿ ಹೋಗುವ ಎಷ್ಟು ತುಚ್ಛ, ತೃಣ ನಮ್ಮ ದೇಹ? ಈ ಮಣ್ಣಿನೊಳಗೆ ಮಣ್ಣಾಗುವ ಈ ದೇಹದ ಮೇಲೆ ಎಷ್ಟು ಪ್ರೀತಿ, ಪ್ರೇಮ!

"ಬೆಳಿಗ್ಗೆ ನಾಷ್ಟಾ ಮಾಡಿಲ್ಲ! ಈ ಗೋರಿಗಳನ್ನು ನೋಡುತ್ತಾ ಕುಳಿತರೆ, ನಾವೂ ಗೋರಿಗಳಾಗಿಬಿಡುತ್ತೇವೆ! ಬನ್ನಿ ಹೋಗೋಣ!"

ಕೈ ಹಿಡಿದು ಎಳೆದ ಕಪೂರ್! ಅವನ ಪಂಜಾಬೀ ಹೊಟ್ಟೆ ಕೂಗತೊಡಗಿತ್ತು. ಹೊಟ್ಟೆ ಕೂಗಿದಾಗ, ಸತ್ತು ಗೋರಿಯಾದ ರಾಜಮಹಾರಾಜ, ಸುಲ್ತಾನರು ಹೊಟ್ಟೆ ತುಂಬಿಸುತ್ತಾರೆಯೇ? ಸತ್ತು ಮಣ್ಣಾದವರ ಗೋರಿ ಚರಿತ್ರೆ ಸಾರಿ ಹೇಳಿದರೂ, ಯಾರು ಅವರ ಕಥೆ ಕೇಳಿ, ತಿಳಿದೂ ಕಲಿಯುತ್ತಾರೆ? ಹೊಟ್ಟೆ ತುಂಬದಿದ್ದರೂ, ಅವರ ಕಥೆಗಳು

ಮಿದುಳಿಗೆ ಕಸರತ್ತು ನೀಡಿ, ಅದು ಹಸಿದ ಬಾಯಿಯ ತರಹ ಆಗುವುದಿಲ್ಲವೇ?'ಚರಿತ್ರೆ ಒಂದು ಮೊದಲೇ ತಯಾರಿಸಿದ ಅಡಿಗೆ ಮಾಡುವ ಪುಸ್ತಕವಲ್ಲ!' ಎಂದು ಯಾರೋ ಹೇಳಿದ್ದು ನೆನಪಿಗೆ ಬಂತು.

"ಬನ್ನೀ ಸಾಬ್! ಖುಸ್ರೋ ಸತ್ತು ಚರಿತ್ರೆಯಾಗಿ ಹೋಗಿದ್ದಾನೆ. ಅವನ ಸುಂದರ ಗೋರಿ ನೋಡುತ್ತಾ, ಹಾಡುತ್ತಾ ಕುಳಿತರೆ, ನಮ್ಮ ಹೊಟ್ಟೆ ಹಾಡುವುದನ್ನು ಯಾರು ಕೇಳುತ್ತಾರೆ?"

ಹೊಟ್ಟೆ ಹಾಡುವುದು? ಕೂಗಿಗಿಂತ ಹಾಡುವುದು ಚೆನ್ನ!

ಭರಭರನೆ ಹೊರಗೆ ಹೆಜ್ಜೆ ಹಾಕಿದೆವು. ಹೆದ್ದಾರಿಗೆ ಬಂದಾಗ ಚೆಂಡು ಹೂವಿನ ರಾಶಿ ರಸ್ತೆ ಬದಿಯಲ್ಲಿ ಹಾಕಿ, ಮಾರುವವರನ್ನು ನೋಡಿ, ಆಸೆ ಆಯಿತು ನನಗೆ, ಹೂವನ್ನು ಕೈಗಳಲ್ಲಿ ಮುಟ್ಟಿ ಆನಂದಿಸಲು! ದಿಲ್ಲಿ ಹೆಂಗಳೆಯರ ಬಾಬ್ ಮಾಡಿದ ಕೂದಲಿಗೆ ಹೂಗಳ ಅವಶ್ಯಕತೆಯೇ ಇರಲಿಲ್ಲ. ದಿಲ್ಲೀ ಹೆಂಗಳೆಯರ ಅವಶ್ಯಕತೆಗಿಂತ, ದಿಲ್ಲೀ ಗೋರಿಗಳ ಮೇಲೆ ಹೂ ಮಾಲೆ ಬಿಡಿಸಿ ಸಿಂಗರಿಸುವುದನ್ನು ನೋಡುವುದಕ್ಕೇ ಚೆನ್ನ.

'ಭೂಮಿತಾಯಿ ಹೂಗಳ ಮೂಲಕ ನಗುತ್ತಾಳೆ' ಕವಿ ಎಮರ್‌ಸನ್‌ನ ಈ ಸಾಲು, ಎಷ್ಟು ಅರ್ಥಗರ್ಭಿತ. ಗೋರಿ ಕೂಡ ನಗುತ್ತಿದೆಯೊ? ಅಥವಾ ಗೋರಿಯ ಒಳಗಡೆ ಇರುವವರು ನಮ್ಮನ್ನು ಹೂಗಳ ಮೂಲಕ ನೋಡಿ ನಗುತ್ತಿದ್ದಾರೆಯೆ? ನಮ್ಮನ್ನು ತಮ್ಮ ಇರುವಿಕೆಯನ್ನ ನೆನಪಿಸುತ್ತಿದ್ದಾರೆಯೆ?'ಸಾವು ಚಂದ, ಹೆದರಬೇಕಿಲ್ಲ, ತಾವು ಬನ್ನಿರಿ' ಎಂದು ಆಹ್ವಾನಿಸುತ್ತಿದ್ದಾರೆಯೆ? ಅಥವಾ ಜೀವನದ ಒಕ್ಕೂಟ-ಪ್ರೇಮ, ಕಾಮ, ಸುಖ, ದುಃಖ, ಹತಾಶೆ, ಸಂಕಟ, ವ್ಯಸನ, ನೋವು, ನಲಿವು, ಆಸೆ-ಆಕಾಂಕ್ಷೆ, ಕೆಲಸ, ಕಾರ್ಯ, ದೇವದಿಂಡರು- ಇವುಗಳನ್ನೆಲ್ಲಾ ತನ್ನ ಬದುಕಿನಲ್ಲಿ ತುಂಬಿ, ಹೂ ಮೂಲಕ ತಮ್ಮ ಇರುವನ್ನು ತೋರಿಸುತ್ತದೆಯೊ?

ಕೆಂಪು-ಹಳದಿ ಚೆಂಡು ಹೂ ಬಿಟ್ಟರೆ, ಸುವಾಸನೆಯ ಮೈಸೂರು ಮಲ್ಲಿಗೆ ದಿಲ್ಲೀಯಲ್ಲಿ ಯಾಕೆ ತನ್ನ ಕಂಪು ಬೀರುವುದಿಲ್ಲ? ಜಾಜಿ, ಶಾವಂತಿಗೆ, ಕನಕಾಂಬರಗಳ ಆಡಂಬರ ಏಕೆ ಇಲ್ಲ? ದಾಸವಾಳ, ಸಂಪಿಗೆ, ಸುಗಂದರಾಜರ ಮೆರವಣಿಗೆ ರದ್ದಾಗಿದೆಯಲ್ಲ? ಇದೆಂತಹ ಊರು? ಹೂವಿಲ್ಲದ ಊರು?

ಹುಚ್ಚೆದ್ದು ಕುಣಿಯುತ್ತಿರುವ ಯೋಚನೆಗಳ ಕಾಲಿಗೆ ಕಟ್ಟು ಹಾಕಿ, ರಾಗವಿಲ್ಲದ ಹಾಡು ಹೇಳುತ್ತಿದ್ದ ಹೊಟ್ಟೆಯ ಕರೆಗೆ, ಓಗೊಟ್ಟು, ಹತ್ತಿರದಲ್ಲೇ ಕಾಣುತ್ತಿದ್ದ ಧಾಬಾಗೆ ದಾಳಿ ಇಟ್ಟೆವು. ಎರಡೆರಡು ರೊಟ್ಟಿ, ಬೆಂಕಿಯಲ್ಲಿ ಸುಟ್ಟ ಬದನೆಕಾಯಿ ಬರ್ತಾ ತಿಂದು, ಕಂಗಾಲಾಗಿ ಹಾಡುತ್ತಿದ್ದ ಹೊಟ್ಟೆಯ ಹಸಿವನ್ನು ಶಮನ ಮಾಡಿ ನಡೆದೆವು.

"ಇಲ್ಲೇ ಹತ್ತಿರದಲ್ಲೇ ಲೋಡಿ ಗಾರ್ಡನ್ಸ್ ಇದೆ, ನೋಡ್ತೀರೇನು?"

ಆಹ್ವಾನಿಸಿದ ಕಪೂರ್. ಮನೆಗೆ ಹೋಗಿ ಮಲಗುವ ಬದಲು, ಲೋಡಿ ಗಾರ್ಡನ್ಸ್‌ನಲ್ಲಿ ಸ್ವಲ್ಪ ಹೊತ್ತು ಕುಳಿತು ಹರಟೆ ಹೊಡೆದರೆ, ತಪ್ಪೇನು?'ಆಗಲಿ' ಎಂದು ಸಮ್ಮತಿಸಿ, ನಡೆದೆ.

ಊರು ಮಧ್ಯ ಇರುವ ಈ ತೋಟ, ತೋಟವಲ್ಲ, ವಿವಿಧ ಮರಗಳ ಸಮೂಹ ವಿಲ್ಲ ಇಲ್ಲಿ;ಕಾಡು ಕಾಡಲ್ಲ, ಕಾಡಿನಲ್ಲಿ ಕಾಣುವ ಹೆಮ್ಮರಗಳು, ಪ್ರಾಣಿ-ಜಂತುಗಳು ಹಿಂಡಿಲ್ಲ ಇಲ್ಲಿ; ಉದ್ಯಾನವನ, ವನವಲ್ಲ, ಹೂವಿನ ಗಿಡಗಳು, ಕಾರಂಜಿಗಳು, ಲತಾಕುಂಜಗಳು, ಲತಾಮಂಟಪಗಳು ಕಾಣಬರುವುದಿಲ್ಲ ಇಲ್ಲಿ. ಹಾಗಾದರೆ ಇದು ಯಾವ ತರಹದ ತೋಟ? ನನ್ನ ಮನಸ್ಸಿಗೆ ಇದು ಒಂದು ವಿಶಾಲ ಹುಲ್ಲುಗಾವಲಿನ ತರಹ ಕಾಣಿಸಿತು. ಹಸಿರು ಹುಲ್ಲಿನ ಹಾಸಿಗೆ ಹೇಳಿ ಮಾಡಿಸಿದಂತಿತ್ತು, ಮಲಗಿ ವಿಶ್ರಾಂತಿ ತೆಗೆದುಕೊಳ್ಳುವುದಕ್ಕೆ, ನಿದ್ದೆ ಮಾಡುವುದಕ್ಕೆ! ಚಿರನಿದ್ರೆಮಾಡಿ ಮೇಲೆ ಒಂದು ಮಂಟಪ ಕಟ್ಟಿಸಿಕೊಳ್ಳಲಿಕ್ಕೂ ಅತ್ಯಂತ ಪ್ರಶಾಂತ ಸ್ಥಳವೆನಿಸಿತು!

ದಿಲ್ಲೀಯ ಅಫ್ಘನ್ ಲೋಡೀ ಮನೆತನದ ಸುಲ್ತಾನರು ಕಟ್ಟಿಸಿದನ್ನೆಲಾದ ಲೋಡಿ ಉದ್ಯಾನವನ ಈಗ ದಿಲ್ಲೀವಾಲರ, ಅದರಲ್ಲೂ ದಿಲ್ಲೀಯ ಪ್ರತಿಷ್ಠಿತ ವ್ಯಕ್ತಿಗಳ, ಬಲಿಷ್ಠ ರಾಜಕಾರಣಿಗಳ, ಹೆಸರಾಂತ ರಾಜದೂತರ ಹವಾಸೇವನೆಗೆಂದು ಮುಡಿಪಾಗಿಟ್ಟಿರುವ ವನವಾಗಿದೆ. "ಬನ್ನಿ ಇಲ್ಲೇ ಕುಳಿತುಕೊಳ್ಳೋಣ!"

ಮರದ ಬುಡದ ನೆರಳಿನಲ್ಲಿ ಕುಳಿತು, ಆಹ್ವಾನಿಸಿದ ಕಪೂರ್! ಅವನ ಎದುರಿನಲ್ಲಿ ಕುಳಿತು, ಹಠಾತನೇ ನೆನಪಿಗೆ ಬಂತು, ಆತನ ಓಡಿಹೋದ ಹೆಂಡತಿಯ ವಿಷಯ.

"ನಿನ್ನ ಹೆಂಡತಿ ಯಾಕೆ ಓಡಿ ಹೋಗಿದ್ದು?"

ಜೋರಾಗಿ ನಕ್ಕ ಕಪೂರ್!

ನನಗೆ ಆಶ್ಚರ್ಯವಾಗಲೇ ಬೇಕಾಗಿತ್ತು, ಅವನು ತನ್ನ ನಗುವಿನಿಂದ ನೀಡಿದ ಉತ್ತರಕ್ಕೆ!

"ಹೆಂಡತಿ ಓಡಿದ ಕಥೆ ಹೇಳೋದಕ್ಕೆ ನಗೋ ಪೀಠಿಕೆ ಏಕೆ ಬೆಕು ಮಹಾರಾಯ?"

ಆಶ್ಚರ್ಯದ ಮುಗಿಲು ಹತ್ತಿದ್ದ ನಾನು ಕೆಳಗಿಳಿಯದೇ ಅಲ್ಲಿಂದಲೇ ಕೇಳಿದೆ.

"ಹೆಂಡತಿ ಯಾಕೆ ಓಡಿಹೋಗ್ತಾಳೆ?" ನಗುತ್ತಲೇ ಪ್ರಶ್ನೆ ಹಾಕಿದ ಕಪೂರ್!

ಆ ದಿನ ತನ್ನ ಹೆಂಡತಿ ಓಡಿಹೋದಳು ಎಂದು ಹೇಳಿ ನನ್ನನ್ನು ಬಸ್ ಏರಲು ಓಡಿಸಿದ್ದ ಭೂಪ, ಈ ದಿನ 'ಹೆಂಡತಿ ಯಾಕೆ ಓಡಿಹೋಗ್ತಾಳೆ?" ಎಂದು ಪ್ರಶ್ನಿಸುತ್ತಾ ಇದ್ದಾನಲ್ಲಾ!

"ಹಾಗಾದರೆ ಓಡಿ ಹೋಗಲಿಲ್ಲ, ನಿಮ್ಮ ಹೆಂಡತಿ?"

ತಲೆ ಅಲ್ಲಾಡಿಸಿದ ಅವ.

"ಓಡಿ ಹೋಗಲಿಲ್ಲ! ಆದರೆ ಮನೆ ಬಿಟ್ಟು, ಹೊರಟುಹೋದಳು!"

ಕೆಳಗೆ ಇಳಿದು ಬಂದಿದ್ದ ನಾನು ಮತ್ತೆ ಆಶ್ಚರ್ಯದ ಮುಗಿಲೆತ್ತರಕ್ಕೇರಿದ್ದೆ!

"ಮನೆ ಬಿಟ್ಟು ಹೋಗುವವರಿಗೆ, ಓಡಿಹೋದರು ಎಂದೇ ಅಲ್ಲವೇ ಹೇಳುವುದು ಜನರು! ಅದಕ್ಕೆ ನಾನು ಹೇಳಿದ್ದು, ಹೆಂಡತಿ ಓಡಿ ಹೋದಳು ಎಂದು!"

"ಯಾಕೆ ಎಂದು ಕೇಳಬಹುದಾ? ತೀರಾ ವೈಯಕ್ತಿಕ ವಿಷಯ ಇದು. ಬೇಸರ ಮಾಡಬೇಡಿ!"

"ಇಡೀ ದಿಲ್ಲಿಗೆ ಗೊತ್ತಿದೆ ಈ ವಿಷಯ! ಇನ್ನು ನಿಮಗೆ ಹೇಳದೇ ಇರುವುದರಿಂದ ನನಗೇನು ಲಾಭ?"

ಇಡೀ ದಿಲ್ಲಿಗೆ ತಿಳಿದಿದೆ ಇವನ ವಿಷಯ! ಆಶ್ಚರ್ಯದ ಮುಗಿಲಿಂದ ಕೆಳಗೆ ಇಳಿಯಲಿಕ್ಕೇ ಬಿಡುವುದಿಲ್ಲವಲ್ಲ ಇವ! ರಬ್ಬರ್ ಚಂಡಿನ ಹಾಗೆ ಒದೆಯುತ್ತಲೇ ಇದ್ದಾನಲ್ಲಾ ನನ್ನನ್ನು!

"ಪ್ರೀತಿ ವಿಶ್ವಾಸದ ಕೊರತೆ ಕಾರಣವಿರಬಹುದೇ?ಎಂದು ನೀವು ಕೇಳುವ ಮೊದಲೇ ಕಾರಣ ಹೇಳಿಬಿಡುತ್ತೇನೆ! ಧಾರಾಳವಾಗಿ ಪ್ರೀತಿ ವಿಶ್ವಾಸ ಇತ್ತು. ನಮ್ಮಿಬ್ಬರಲ್ಲಿ ಗಾಢವಾದ ಪ್ರೇಮವಿತ್ತು."

"ಪ್ರೇಮ ವಿವಾಹವೇ?"

ಕುತೂಹಲದಿಂದ ಕೇಳಿದೆ.

"ಇಲ್ಲ! ಆದರೆ ಮದುವೆಗೆ ಮೊದಲೇ ಪರಿಚಯವಿತ್ತು. ಹತ್ತಿರದ ನೆಂಟಸ್ಥನ. ಇಬ್ಬರಿಗೂ ಪರಿಚಯವಿದ್ದ ಮೇಲೆ ಕೇಳುವುದೇನು? ಹುಡುಗಿ ಚೆನ್ನಾಗಿದ್ದಳು, ಹುಡುಗನೂ ಚೆನ್ನಾಗಿದ್ದ! ಅನುರೂಪದ ಜೋಡಿ!ಮದುವೆ ನಡೆದುದರಲ್ಲಿ ಯಾವ ಆತಂಕವೂ ಇರಲಿಲ್ಲ. ಹಿರಿಯರ ಆಶೀರ್ವಾದ, ಸ್ನೇಹಿತರ ಒತ್ತಡ, ಬೆಂಬಲ ಸಿಕ್ಕ ಮೇಲೆ ತಡಮಾಡಿದರೆ ಯಾರಿಗೆ ಸಂತೋಷವಾಗುತ್ತದೆ? ಮದುವೆ ನಡೆದೇ ಹೋಯಿತು ಇಲ್ಲೇ ದಿಲ್ಲೀಯಲ್ಲಿ! ಮದುವೆ ನಡೆದು ಈಗಾಗಲೇ ಐದು ವರ್ಷಗಳೇ ಆದುವು. ಅವಳು ಓಡಿಹೋಗಿ ನಾಲ್ಕು ವರ್ಷಗಳೇ ಆದವು!"

ಅಂದರೆ ಕೇವಲ ಒಂದು ವರ್ಷದ ವೈವಾಹಿಕ ಜೀವನ ನಡೆಸಿದ್ದಾನೆ ಈತ! ಕಾರಣ?

"ಒಂದೇ ವರ್ಷದ ವೈವಾಹಿಕ ಜೀವನ ನಿಮ್ಮದು?"

"ಹೌದು! ಒಂದೇ ವರ್ಷದ ವೈವಾಹಿಕ ಜೀವನ ನಡೆಸಿದೆ... ಅರೆ!... ಅಂಧೀ..!

...ಆಂಧೀ..... ಕರ್‌ಚೀಫ್ ತೆಗೀರಿ! ಕಣ್ಣು ಮುಚ್ಚಿ ಕೊಳ್ರೀ!" ಎಂದು ಹೇಳಿ, ಲಗುಬಗೆಯಿಂದ ಕರಚೀಫ್ ತೆಗೆದು ತನ್ನ ಮುಖವನ್ನು ಮುಚ್ಚಿಕೊಂಡ.

ಇವನು ಯಾಕೆ ಹೀಗೆ ಮುಖ ಮುಚ್ಚಿಕೊಂಡ ಎಂದು ಯೋಚಿಸುತ್ತಿರುವಾಗಲೇ ಎಲ್ಲಿಂದಲೋ ತೂರಿ ಬಂದ ಧೂಳಿನ ಸುಂಟರ ಗಾಳಿ ನನ್ನನ್ನು ಅಪ್ಪಳಿಸಿತು! ಕರಚೀಫ್ ತೆಗೆಯುವುದರೊಳಗೆ ನನ್ನ ಮುಖ ಮತ್ತು ಮೈ ಇಡೀ ದೇಹ ಧೂಳಿನಿಂದ ಆವೃತಗೊಂಡು, ದಿಲ್ಲೀಗೆ ಬಂದ ಮೇಲೆ ಪ್ರಪ್ರಥಮವಾಗಿ ದಿಲ್ಲೀಯ ಪ್ರಸಿದ್ಧ ಧೂಳುಗಾಳಿ 'ಆಂಧೀ'ಯ ಹೊಡೆತಕ್ಕೆ ತುತ್ತಾಗಿ, ಅದರ ತಾಪವನ್ನು ಅನುಭವಿಸ ತೊಡಗಿದ್ದೆ. ಇದಕ್ಕೆ 'ಆಂಧೀ' ಎಂದು ಯಾಕೆ ಕರೆಯುತ್ತಾರೆಂದು ಯಾರನ್ನೂ ಕೇಳಬೇಕಾಗಿರಲಿಲ್ಲ. ಹಿಂದೀಯಲ್ಲಿ 'ಆಂಧೀ' ಎಂದರೆ 'ಕತ್ತಲೆ ಕುರುಡು' ಅಂದರೆ, ಧೂಳಿನ ದಾಳಿಗೆ ತುತ್ತಾಗಿ ನಮ್ಮ ಕಣ್ಣುಗಳು ಕುರುಡಾಗುವುದು! ಧೂಳಿನ ಸೂಕ್ಷ್ಮ ಕಣಗಳು ಕಣ್ಣುಗಳನ್ನು ಹೊಕ್ಕು ನಮ್ಮನ್ನು ತಾತ್ಕಾಲಿಕವಾಗಿ ಕುರುಡು ಮಾಡಿಬಿಡುತ್ತವೆ. ಕಣ್ಣಿಗೆ ಮರಳೆರಚಿ ಇದು ನಮ್ಮ ಆಸ್ತಿ ಲಪಾಟಾಯಿಸದಿದ್ದರೂ, ಬುದ್ಧಿಭ್ರಮಣೆ ಮಾತ್ರ ಖಂಡಿತ ಮಾಡುತ್ತವೆ!

'ನಾನು ಕ್ಷುಲ್ಲಕನಾದರೂ, 'ಉಷ್!ಉಷ್!' ಎಂದು ನನ್ನನ್ನು ಹೊಡೆದು ಓಡಿಸುವ ಪರಿಪಾಠವಿಟ್ಟುಕೊಂಡರೂ, ನಾನು ನಿಮ್ಮ ನೆಂಟನೇ ಎಂದು ಹಾರಿ ಬಂದು ನಿಮ್ಮ ಮೇಲೆ ಕುಳಿತರೂ, ನಮ್ಮ ಬಗ್ಗೆ ಕನಿಕರ ತೋರಿಸಿ ಹಟದಿಂದ ಕುರುಡರ ಹಾಗೆ ವರ್ತಿಸುವ ನಿಮ್ಮನ್ನು ಕುರುಡರನ್ನಾಗಿ ಮಾಡಿ, ಹತಾಶೆಯ ಹೊಂಡದಲ್ಲಿ ಬೀಳಿಸಿ, ಅಟ್ಟಹಾಸದಿಂದ ನಗುತ್ತೇನೆ!' ಎಂದು ಹೇಳುವ ರೀತಿಯಲ್ಲಿ 'ಆಂಧೀ' ತನ್ನ ಬಲಪ್ರದರ್ಶನವನ್ನು ತೋರಿಸಿ, ನರ್ತಿಸಿ, ಕುಪ್ಪಳಿಸಿ, ಹೊರಟುಹೋಯಿತು.

"ನಿಮ್ಮ ಹೆಂಡತಿಯೂ ಈ 'ಆಂಧೀ' ತರಹ ನಿಮ್ಮ ಮೇಲೆ ದಾಳಿ ಮಾಡಿ, ಕಣ್ಣಿಗೆ ಧೂಳು ಎರಚಿ ಓಡಿಹೋದಳೆ?"

ಕಣ್ಣನ್ನು ಒರೆಸಿಕೊಳ್ಳುತ್ತಿದ್ದ ಕಪೂರ್ ಒಂದು ಕ್ಷಣ, ಒಂದೇ ಕ್ಷಣ ನನ್ನ ಮುಖವನ್ನು ತೀಕ್ಷ್ಣವಾಗಿ ನೋಡಿದ. ಮರುಗಳಿಗೆಯಲ್ಲೇ ಸಾವರಿಸಿಕೊಂಡು, ನುಡಿದ:

"ಇಲ್ಲ! ಇಲ್ಲ! ಕಣ್ಣಿಗೆ ಧೂಳು ಎರಚಲಿಲ್ಲ! ಅದರ ಉಪಯೋಗ ಅಥವಾ ಪ್ರಮೇಯ ಬರಲಿಲ್ಲ!"

ಹೆಂಡತಿ 'ಆಂಧೀ'ಆಗಿರಲಿಲ್ಲ! ಮತ್ತೇನಾಗಿದ್ದಳು?ಅಂಧವಾಗಿದ್ದಳೇ?

ಅವಳಲ್ಲಿ ಯಾವ ನ್ಯೂನತೆಗಳೂ ಇರಲಿಲ್ಲ. ಒಳ್ಳೆಯ ಹೆಂಡತಿಯಾಗಿದ್ದಳು!

ಕಪೂರ್ ಮಾತು ಮುಂದುವರೆಸಿದ್ದ. 'ಆಂಧೀ' ನಮ್ಮನ್ನು ಬಿಟ್ಟು ದೂರ

ಹೋಗಿತ್ತು. ಆದರೆ, ಮುಗಿಲು ಮಾತ್ರ ಟಾರ್‌ಪಾಲಿನ್ ಬಟ್ಟೆ ಹೊಡೆದ ಹಾಗೆ ಇತ್ತು. ಮಳೆ ಬರಲು ತಡೆಯೊಡ್ಡುವುದಕ್ಕೆ ಅದು ಹಾಗೆ ಹೊದ್ದಿರಬಹುದೇ?

"ನಿಮ್ಮಲ್ಲಿ ಏನಾದರೂ ನ್ಯೂನತೆ ಇದ್ದಿರಬಹುದೇ?"

"ಅವಳಿಂದ ನನ್ನ ಬಗ್ಗೆ ಯಾವ ದೂರೂ ಬರಲಿಲ್ಲ!"

"ದೂರು ಹೇಳಲಿಕ್ಕೆ ಹಿಂಜರಿದಿರಬಹುದು!"

"ಓಹ್! ಎಂತಹ ಪ್ರಶ್ನೆ ನಿಮ್ಮದು? ಗಂಡನ ಬಳಿ ದೂರು ಹೇಳಲಿಕ್ಕೆ ಯಾವ ಹೆಂಡತಿಗೆ ಕಷ್ಟ? ಅದೂ ಗಂಡನ ನ್ಯೂನತೆಗಳ ಬಗ್ಗೆ ದೂರು ಹೇಳಲಿಕ್ಕೆ ಹಿಂಜರಿದರೆ ಅವಳು ಹೆಂಡತಿಯೇ ಅಲ್ಲ!"

ಅವನ ಘೋಷಣೆ ಕೇಳಿ ನನಗೆ ನಗು ಬಂತು.

ನನ್ನ ಮನಸ್ಸು ಓಡಿತು. ಸ್ನೇಹಿತನ ಮನೆಗೆ ಹೋಗಿದ್ದಾಗ ನಡೆದ ಸಂಗತಿಯ ಬಗ್ಗೆ ನೆನಪು ಕಾಡಿತು.

"ಏನಾದರೂ ನೌಕರೀ ಮಾಡುವ ಹೆಂಗಸನ್ನು ಮದುವೆಯಾಗಬಾರದು!"

ಘೋಷಣೆ ಮಾಡಿದ್ದಳು ನನ್ನ ಸ್ನೇಹಿತನ ಹೆಂಡತಿ! ಅವಳ ಘೋಷಣೆಯಲ್ಲಿ ಅಡಗಿದ್ದ ತೀವ್ರತೆ, ದುಃಖ, ಸಂಕಟ ಅಸಹಾಯತೆ ಕೇಳಿ ಅಚ್ಚರಿಯ ಜೊತೆಗೆ ಭಯವೂ ಆಯಿತು.

"ನೀವೇ ವಾಸಿ! ನಿಮ್ಮ ಹೆಂಡತಿ ನೌಕರೀ ಮಾಡುತ್ತಾ ಇಲ್ಲ!"

ನನ್ನ ಸ್ನೇಹಿತನು ನನ್ನ ಹಾಗೆ ಬ್ಯಾಂಕ್‌ನಲ್ಲಿ ನೌಕರೀ ಮಾಡುತ್ತಾ ಇದ್ದ. ಒಂದೇ ಶಾಖೆಯಲ್ಲಿ ಕೆಲಸ ಮಾಡುತ್ತಿದ್ದ ತನ್ನ ಸಹೋದ್ಯೋಗಿಯಾದವಳ ಜೊತೆ ಸ್ನೇಹ ಬೆಳೆದು, ಪ್ರೇಮಕ್ಕೆ ತಿರುಗಿ, ಲಗ್ನವಾಗಿದ್ದ. ಪ್ರೇಮವಿವಾಹದ ಕುರುಹಾಗಿ ಒಂದು ಮುದ್ದು ಹೆಣ್ಣು ಮಗುವಿನ ಜನನವು ಆಗಿತ್ತು ಅವರಿಗೆ. ಇಬ್ಬರ ಕೈ ತುಂಬಾ ಸಂಬಳ, ಸ್ವಂತ ಮನೆ, ಆಳುಕಾಳು, ಕಾರು ಮತ್ತು ಇತರ ಭೋಗಗಳಿಂದ ವಿಜೃಂಭಿಸಿ ದರೂ, ಯಾಕೆ ಈ ಸಂಕಟ, ಅಸಹಾಯಕತೆ? ಅರ್ಥವಾಗದ ವಿಷಯ!

'ನೌಕರೀ ಮಾಡುವ ಹೆಂಡತಿಯಿಂದ ಸುಖವಿಲ್ಲ' ಎಂದು ಒಬ್ಬ ಗಂಡಸು ಹೇಳಿದ್ದರೆ, ಆಶ್ಚರ್ಯಪಡುವ ಸಂಗತಿ ಆಗಿರಲಿಲ್ಲ. ಆದರೆ, ನೌಕರೀ ಮಾಡುವ. ಹೆಂಗಸು ಈ ಮಾತು ಹೇಳುವಾಗ, ಗಾಬರಿಯಾಗುವುದು ಸ್ವಾಭಾವಿಕವಲ್ಲವೆ?

'ಮನೆ, ಕೆಲಸ, ಮಗುವಿನ ಸಾಕುವಿಕೆ, ಗಂಡನ ಸಾಕುಬೇಕುಗಳ ಪೂರೈಸುವುದು, ಜೊತೆಗೆ ತನ್ನ ನೌಕರೀ- ಇವೆಲ್ಲಾ ಯಾರ ಕೈಲಿ ಆಗುತ್ತದೆ?'

ಅವಳು ಗೋಳಾಟ ನೋಡಿ, ಖೇದವೆನಿಸಿತು.

"ಬೆಳಿಗ್ಗೆ ತಿಂಡಿ ಮಾಡಿ, ಮಗುವಿಗೆ ಸ್ನಾನ ಮಾಡಿಸಿ, ಬಟ್ಟೆ ತೊಡಿಸಿ, ಸ್ಕೂಲಿಗೆ

ಕಳುಹಿಸಿ, ನಮ್ಮ ಊಟ ಮುಗಿಸಿ, ಟಿಫನ್ ಬಾಕ್ಸ್ ರೆಡಿ ಮಾಡಿ, ಬ್ಯಾಂಕ್‌ಗೆ ಹೋಗಿ, ಅಲ್ಲಿ ದುಡಿದು, ಸಾಯಂಕಾಲ ಮನೆಗೆ ಬಂದು, ಮತ್ತೆ ಅಡಿಗೆ ಊಟ ಮಾಡಿ ಬಡಿಸಿ, ಉಸ್ಸಪ್ಪಾ ಎಂದು ಬೇಗ ಮಲಗಿಕೊಳ್ಳೋಣವೆಂದರೆ, ಈ ನನ್ನ ಗಂಡ 'ಟೀ.ವಿ.ಲಿ ಹಿಂದೀ ಪಿಕ್ಚರ್ ಇದೇ ಕಣೇ' ಎಂದು ಗಟ್ಟಿಯಾಗಿ ಹಾಕಿಕೊಂಡು ನೋಡುವಾಗ, ಎಂತಹ ಸಿಟ್ಟು ಬರುತ್ತದೆ ಗೊತ್ತೇ?"

ಅವಳ ಮುಖ ಸಿಟ್ಟಿನ ಕೆಂಡವಾಗಿ ಗಂಡ ಮುಂದಿದ್ದರೆ, ಅವನನ್ನು ಸುಟ್ಟಿ ಬೂದಿ ಮಾಡುತ್ತಿದ್ದಳೇನೋ!

"ಜೀವನವೇ ಬೇಸರವಾಗಿಬಿಟ್ಟಿದೆರೀ!"

ಅವಳ ನರಳಾಟ, ನಿಟ್ಟುಸಿರು ಕಂಡು, ನನ್ನ ಹೃದಯ ಕೂಡ ನರಳಿತು. ಸಿಟ್ಟಿನ ಉರಿಮುಖ, ತಣ್ಣಗಾಗಿ ಕಂದಾಗಿತ್ತು.

"ನಾನು ಒಂದು ಮಾತು ಕೇಳಲೇ?" ಎಂದೆ ಅಳುಕುತ್ತಾ.

"ಕೇಳಿ ಪರವಾಗಿಲ್ಲ!" ಎಂದಳು ಆಕೆ.

"ನಿಮ್ಮ ಕಷ್ಟಗಳಿಗೆಲ್ಲಾ ಪರಿಹಾರವೆಂದರೆ ಒಂದೇ ಒಂದು!" ಎಂದೆ.

"ಏನು ಅದು?" ಉತ್ಸುಕತೆಯಿಂದ ಕೇಳಿದಳು ಆಕೆ.

"ನೀವು ಯಾಕೆ ಕೆಲಸ ಬಿಡಬಾರದು?"

ಎಲ್ಲಿಂದಲೋ, ದೂರದಿಂದ ಬಂದ 'ಆಂಧೀ'ಯಾಗಿತ್ತು ಅವಳ ಬಿರುಗಾಳಿಯ ಉತ್ತರ!

"ಕೆಲಸ ಬಿಡಬೇಕಾ? ಏನು ಹೇಳುತ್ತಿದ್ದೀರಾ ನೀವು? ಪರಿಹಾರವಂತೆ ಪರಿಹಾರ! ಏನೋ ಹೇಳುತ್ತಾರೆ ಎಂದರೆ ಕೆಲಸ ಬಿಡಬೇಕು ಅಂತ ಹೇಳುತ್ತೀರಲ್ಲಾ! ಹತ್ತು ಸಾವಿರ ರೂಪಾಯಿ ಸಂಬಳ ಸಿಗುವ ಕೆಲಸ ಬಿಡಬೇಕಂತೆ!"

ಅವಳ ಬಾಯಿಯ ಬಿರುಗಾಳಿಗೆ ಸಿಕ್ಕಿ ತತ್ತರಿಸಿ ತೂರಾಡಿದೆ. ತಪ್ಪಿಸಿಕೊಂಡು ಬರುವ ವೇಳೆಗೆ ನನ್ನ ಆಯುಸ್ಸು ಅರ್ಧ ಮುಗಿದ ಹಾಗೆ ಆಗಿತ್ತು!

"ಆಂಧೀ ಹೊರಟು ಹೋಯಿತು. ನಾವೂ ಹೋಗೋಣವೇ. ಊಟದ ಸಮಯ ವಾಯಿತಲ್ಲಾ!"

ಕಪೂರ್ ಊಟದ ಸಮಯ ಜ್ಞಾಪಿಸಿದ. ಅಂದರೆ, ಮಧ್ಯಾಹ್ನ ಒಂದು ಗಂಟೆ ಮೀರಿತ್ತು. ನನಗೂ ನಡೆದು, ಸುತ್ತಿ ಸುತ್ತಿ ಪಾದಗಳು ನೋಯುತ್ತಿದ್ದವು. ಮನೆಗೆ ಹೋಗಿ ಸ್ವಲ್ಪ ಹೊತ್ತು ವಿಶ್ರಮಿಸಿಕೊಳ್ಳೋಣವೆಂಬ ಬಯಕೆಯೂ ಉಂಟಾಯಿತು. ಆದರೆ, ಕಪೂರ್‌ನ ಕಥೆ ಅರ್ಧದಲ್ಲಿ ಬಿಟ್ಟು, ಹೊರಟರೆ, ಮನಸ್ಸು ಸಮಾಧಾನ

ವಾಗುವುದಾದರೂ ಹೇಗೆ? ಆದರೂ ಅವನಿಗೆ ಕಥೆ ಹೇಳುವ ಹುಮ್ಮಸ್ಸು ಇರುತ್ತದೆಯೋ ಇಲ್ಲವೋ?

"ಹೊಟ್ಟೆ ಹಸಿದರೆ ಇನ್ನೊಂದು ರೊಟ್ಟಿ ತಿನ್ನೋಣವಂತೆ!"

"ನನ್ನ ಹೊಟ್ಟೆಯ ಚಿಂತೆಯಲ್ಲ; ನನ್ನ ತಂದೆಯವರ ಹೊಟ್ಟೆಯ ಚಿಂತೆ ಮಾಡಬೇಕಲ್ಲ!"

"ಹೋಗೋಣ! ನಡೀರಿ!"

ಮೇಲಕ್ಕೆ ಎದ್ದು ವನದಿಂದ ಹೊರಕ್ಕೆ ಮೌನವಾಗಿ ಹೆಜ್ಜೆ ಹಾಕತೊಡಗಿದೆವು. ರಾಜರಸ್ತೆಗೆ ಬಂದಾಗ, ಅಲ್ಲೇ ನಿಂತಿದ್ದ ಆಟೋರಿಕ್ಷಾ ಏರಲು ಹತ್ತಿರ ಹೋದ ಕಪೂರ್ ನನ್ನ ಕೈ ಹಿಡಿದು ಕೇಳಿದ,

"ನನ್ನ ಮನೆಗೆ ಹೋಗೋಣ ಬನ್ನಿ. ಅಲ್ಲೇ ಊಟ ಮಾಡಿದರಾಯಿತು."

ಒಂದು ಕ್ಷಣ ಯೋಚಿಸಿದೆ. ಹೌದು! ಯಾಕಾಗಬಾರದು? ಅವನ ಮನೆಗೆ ಹೋಗಿ, ಅವನ ಕಥೆ ಸಂಪೂರ್ಣವಾಗಿ ತಿಳಿದುಕೊಳ್ಳುವ ಸುಯೋಗ ಯಾಕೆ ತಪ್ಪಿಸಿಕೊಳ್ಳಬೇಕು? ಮನೆಗೆ ಹೋಗಿ ನಿದ್ರೆ ಮಾಡುವ ಬದಲು, ಕಪೂರ್‌ನ ಕಥೆ ಕೇಳಿ ನಿದ್ರೆ ಬರುವ ಹಾಗಿದ್ದರೆ ಅಲ್ಲೇ ಯಾಕೆ ನಿದ್ರೆ ಮಾಡಬಾರದು? ನನ್ನ ಯೋಚನೆಗೆ ನನಗೇ ನಗು ಬಂತು.

"ಯಾಕೆ ನಗುತ್ತೀರಿ?" ಕಪೂರ್ ಕೇಳಿದ.

"ಬರುತ್ತೇನೆ! ಆದರೆ ಒಂದು ಕಂಡೀಶನ್!"

"ಏನು?"

"ಈ ದಿನ ನಿನ್ನ ಕಥೆ ಪೂರ್ಣಗೊಳಿಸಬೇಕು!"

"ಹೋಹೋಹೋ!" ಕೇಕೆ ಹಾಕಿ ನಕ್ಕ ಕಪೂರ್!

"ನನ್ನ ಕಥೆಯಲ್ಲಿ ಯಾವ ರಸವೂ ಇಲ್ಲ, ತಿಳಿದು, ಅರೆದು, ಕುಡಿದು ಆನಂದ ಪಡಲಿಕ್ಕೆ!"

"ಹಾಗಾದರೆ ನಿನಗೆ ಇಷ್ಟವಿಲ್ಲ!"

"ಬನ್ನಿ ಸಾಬ್! ನನ್ನ ಕಥೆ ಯಾಕೇ? ನಿಮಗೆ ರಸವತ್ತಾದ ಕಥೆಗಳನ್ನು ಹೇಳುತ್ತೇನೆ ಬನ್ನಿ! ನಿಮ್ಮ ಕಥೆ ಬೇಕಾದರೂ ಹೇಳಬಲ್ಲೆ! ಈಗ ಬನ್ನಿ ಹೋಗೋಣ!" ಎಂದು ಕೈ ಹಿಡಿದು, ಎಳೆದು ಆಟೋದಲ್ಲಿ ಕುಳ್ಳಿರಿಸಿದ. ಆಟೋ ಓಡಿತು, ಹುಚ್ಚು ಹಿಡಿದ ಕುದುರೆ ತರಹ. ಎಸ್.ಡೀ. ಏರಿಯಾ ದಾಟಿ, ಹೌಜ್ ಖಾಸ್ ಬಳಸಿ, ಮಾಲವೀಯಾ ನಗರ ತಲುಪಲು ಕೇವಲ ಹದಿನೈದು ನಿಮಿಷ ಸಾಕಾಯಿತು ಅದಕ್ಕೆ.

"ಆಹಿಸ್ತಾ, ಆಹಿಸ್ತಾ!" ಎಂದು ಎಷ್ಟು ಹೇಳಿದರೂ, ಚಾಲಕ ನನ್ನ ಎಚ್ಚರಿಕೆಗೆ ಗಮನಕೊಡದೆ 'ಆಂಧೀ'ತರಹ ಓಡಿಸಿದ್ದ ಗಾಡೀಯನ್ನು! ಕಪೂರ್‌ಗೆ ತಮಾಷೆ ಯಾಗಿತ್ತು ನನ್ನ ಎಚ್ಚರಿಕೆಯ ಮಾತು ಕೇಳಿ.

"ಯಾಕೆ 'ಆಹಿಸ್ತಾ' 'ಆಹೀಸ್ತಾ' ಎಂದು ಜಪ ಮಾಡುತ್ತಾ ಇದ್ದೀರಿ?"

"ಇಷ್ಟು ವೇಗವಾಗಿ ಓಡಿಸುತ್ತಾ ಇದ್ದಾನೆ! ಅವನಿಗೆ ಸ್ವಲ್ಪ ನಿಧಾನವಾಗಿ ಓಡಿಸಪ್ಪಾ ಎಂದು ಹೇಳುತ್ತಾ ಇದ್ದೆ!"

"ವೇಗವಾಗಿ ಓಡಿಸುತ್ತಾ ಇದ್ದಾನೆಯೆ? ಇದು ವೇಗ ಎಂದು ಕರೆಯುತ್ತಾ ಇದ್ದೀರಾ? ಇವನು ಯಾಕೆ ಇಷ್ಟು ನಿಧಾನವಾಗಿ ಓಡಿಸುತ್ತಾ ಇದ್ದಾನೆ ಎಂದು ನಾನು ಯೋಚಿಸುತ್ತಾ ಇದ್ದೆ. 'ಇನ್ನೂ ವೇಗವಾಗಿ ಓಡಿಸು ಗಾಡಿ' ಎಂದು ಹೇಳುವ ಅಂತಿದ್ದೆ!" ಎಂದು ನಗ ಹತ್ತಿದ. ಇದರಲ್ಲಿ ನಗುವುದೇನಿದೆ? ಆದರೆ ನಗುವಿನಷ್ಟು ಸಾಂಕ್ರಾಮಿಕ ರೋಗ ಬೇರೆಯೊಂದಿಲ್ಲ, ಅಲ್ಲವೇ? ನನಗೂ ನಗು ಬಂತು ಅವನ ನಗು ಕಂಡು.

ಮಾಲವೀಯನಗರದಲ್ಲಿನ ಕಪೂರ್‌ನ ಮನೆಯ ಮುಂದೆ ಆಟೋ ನಿಂತೊಡನೆ, 'ಬದುಕಿದೆಯ ಬಡಜೀವಾ' ಎಂದು ಆಟೋದಿಂದ ಹೊರಕ್ಕೆ ಹಾರಿ ನಿಂತೆ. ಕಪೂರ್ ಆಟೋ ಬಾಡಿಗೆ ಕೊಟ್ಟು, ಮನೆಯೊಳಗೆ ನಡೆದ. ಮನೆಯ ಮೆಟ್ಟಿಲುಗಳು, ರಾಜೇಂದ್ರ ನಗರ್ ಮನೆಗಳಿಗೆ ಇರುವ ಹಾಗೆ ಹಿಂಭಾಗದ ಕಾನ್‌ಸರ್‌ವೆನ್ಸಿ ರಸ್ತೆಯಲ್ಲಿದ್ದ ಹಾಗೆ ಇಲ್ಲ. ಮುಂಭಾಗದ ರಸ್ತೆಯಿಂದ ಮೆಟ್ಟಿಲು ಹತ್ತಿ ಮೇಲೇರಿ, ಹತ್ತಿ ಬಾಲ್ಕನಿ ಸೇರಿ, ಅಲ್ಲಿಂದ ಒಳಗೆ ಹಾಲ್, ಅಲ್ಲಿಂದಲೇ ಒಳಕೋಣೆ ಮೂಲಕ, ಅಡಿಗೆಮನೆ, ಬಚ್ಚಲು ಮನೆ ಮತ್ತು ಕಕ್ಕಸು-ಎಲ್ಲಾ ರೈಲು ಬೋಗಿಯ ತರಹ-ಇರುವ ಈ ಬಗೆಯ ಮನೆಗಳು ದಿಲ್ಲೀಯಲ್ಲಿ ಕಾಣಬಹುದಾದ ಅದ್ಭುತ ಸ್ಮಾರಕಗಳು!

ಮೆಟ್ಟಿಲೇರಿ, ಹಾಲ್‌ನ ಸೋಫಾದಲ್ಲಿ ಕುಳಿತು ಫ್ಯಾನ್ ಗಾಳಿಗೆ ಮುಖ ಒಡ್ಡಿದೆ. ಕಪೂರ್ ಇರಿಸಿದ ಇಂಗ್ಲಿಷ್ ಪೇಪರ್ ಕೈಗೆತ್ತಿ ಓದತೊಡಗಿದೆ.

"ಅಮೃತ್‌ಸರದಲ್ಲಿನ ಸ್ವರ್ಣಮಂದಿರದ ಬಾಗಿಲಿನಲ್ಲಿ ಪಂಜಾಬ್ ಪೊಲೀಸ್ ಅಧಿಕಾರಿಯ ಕಗ್ಗೊಲೆ. ಕೊಲೆಗಾರರು ಕೊಲೆಗೈದು ಸ್ವರ್ಣಮಂದಿರದೊಳಗೆ ಓಡಿ ಹೋದರೆಂದು ಪ್ರತ್ಯಕ್ಷ ಸಾಕ್ಷಿಗಳ ವರದಿ."

ಪ್ರಾರ್ಥನೆ ಸಲ್ಲಿಸಲು ಬಂದ ಸಿಖ್ ಪೊಲೀಸ್ ಅಧಿಕಾರಿ-ಡಿ.ಐ.ಜಿ.ಯ ಕೊಲೆ, ಅದೂ ಹಾಡಹಗಲಿನಲ್ಲಿ, ದೇವತಾ ಮಂದಿರದಲ್ಲಿ!

ಮೈ ಬೆವರೊಡೆಯಿತು. ಇದು ಎಂತಹ ವಿಪರ್ಯಾಸ! ದೇವಮಂದಿರದಲ್ಲಿ ಕೊಲೆ! ಅದೂ ಒಬ್ಬ ಪೊಲೀಸ್ ಅಧಿಕಾರಿಯ ಕೊಲೆ!

ಕಪೂರ್ ನನ್ನ ಮುಂದೆ ತಂದಿಟ್ಟ, ತಣ್ಣೀರಿನ ಲೋಟವನ್ನು ಕೈಗೆ ತೆಗೆದುಕೊಂಡು, ಒಂದೇ ಉಸಿರಿಗೆ ನೀರು ಕುಡಿದು, ಲೋಟ ಬರಿದು ಮಾಡಿದೆ.

"ಬಹಳ ಶೆಖೆ ಅಲ್ಲವೇ"ಅಂದ ಕಪೂರ್!

ನಾನು ಮಾತನಾಡದೆ, ಪೇಪರ್‌ನ್ನು ಅವನ ಮುಂದೆ ಹಿಡಿದೆ. ಸುದ್ದಿ ಓದಿ, ಅವ ನುಡಿದ.

"ಇದು ಯಾವ ಮಹಾ ಸುದ್ದಿ ಎಂದು ಓದುವುದು? ದಿನವಿಡೀ ನಡೆಯುವ ಈ ದುರ್ಘಟನೆಗಳಿಗೆ ಸುದ್ದಿಯ ಮುಲಾಮು ಹಚ್ಚುತ್ತಾರೆ. 'ದಿನವಿಡೀ ಸಾಯುವವರಿಗೆ ಅಳುವವರು ಯಾರು?' ಎಂಬಂತೆ ಮಾತನಾಡಿದ್ದ ಕಪೂರ್! ದಿನಂಪ್ರತಿ ಕೊಲೆ, ಸಾವು, ನೋವು, ಪ್ರತಿಭಟನೆ, ಪೊಲೀಸ್ ಗೋಲಿಬಾರ್ ಇವುಗಳಿಂದ ತುಂಬಿದ್ದ ಪತ್ರಿಕೆಗಳನ್ನು ಓದುವುದರಲ್ಲಿ ಯಾವ ಉತ್ಸಾಹವೂ ಇರಲಿಲ್ಲ, ಕಪೂರ್‌ನಿಗೆ.

ಎಲ್ಲಿಂದಲೋ ತಂದ ಎರಡು ಪರೋಟ, ಪುದೀನಾ ಚಟ್ನಿ ಮತ್ತು ಬರ್ತಾವನ್ನು ಮುಂದಿಟ್ಟ ಕಪೂರ್.

"ನಿಮ್ಮ ತಂದೆ ಹೇಗಿದ್ದಾರೆ?"

"ಈಗ ಸ್ವಲ್ಪ ವಾಸಿ. ಸ್ವಲ್ಪ ಸ್ವಲ್ಪ ಮಾತನಾಡುತ್ತಾರೆ. ಡಿಪ್ರೆಷನ್ ಕಡಿಮೆಯಾಗಿದೆ ಎನ್ನಬಹುದು."

ತಾನು ಒಂದು ಪ್ಲೇಟ್ ಪರೋಟ, ನಮ್ಮ ಮುಂದೆ ಇರಿಸಿದ್ದ ಟೀಪಾಯ್ ಮೇಲೆ ಇರಿಸಿ, ಪರೋಟವನ್ನು ಕೈಗೆ ತೆಗೆದುಕೊಂಡು, ಅದನ್ನು ತುಂಡು ಮಾಡಿ, ಚಟ್ನಿಯಲ್ಲಿ ಅದ್ದಿ, ಬಾಯಿಗೆ ಎಸೆದು ಅಗಿಯಲಾರಂಭಿಸಿದ, ಕಪೂರ್. ಅವನು ತಿನ್ನುವ ಪರಿಯನ್ನೇ ನೋಡುತ್ತಾ ಕುಳಿತ ನನಗೆ ಕಪೂರ್ ಎಚ್ಚರಿಸಿದ.

"ಹೊಟ್ಟೆ ಹಸಿದಿಲ್ಲವೇ? ಅಥವಾ ಡಿ.ಐ.ಜೀ ಸರ್ದಾರ್ಜೀ ಕೊಲೆಯಾಯಿತೆಂದು ಭೂಕ್ ಹರತಾಳ ಮಾಡುತ್ತಿದ್ದೀರಾ?"

ಬಾಯಿಯಲ್ಲಿದ್ದ ಪರೋಟೆಯ ತುಂಡಿನೊಂದಿಗೆ, ಬಾಯಿ ಬಿಟ್ಟು ನಗಲಿಕ್ಕೆ ಶುರು ಮಾಡಿದ ಕಪೂರ್‌ನನ್ನು ಕಂಡು ಗಾಬರಿಯಾಯಿತು. ಇವನು ನಗುವ ಭರಾಟೆಯಲ್ಲಿ ಪರೋಟೆ ಗಂಟಲಲ್ಲಿ ಸಿಕ್ಕಿ, ಎಲ್ಲಿ ಪಜೀತಿ ಪಡುತ್ತಾನೋ ಎಂದು! ನಾನು ಎಣಿಸಿದಂತೆಯೇ ಆಯಿತು!

"ಖೊಕ್!ಖೊಕ್!" ಎಂದು ಎರಡು ಸಲ ಕೆಮ್ಮಿ, ತಲೆ ತಟ್ಟಿಕೊಂಡು, ಮುಂದೆ ಇರಿಸಿದ್ದ ಗಾಜಿನ ತಂಬಿಗೆಯಲ್ಲಿದ್ದ ನೀರನ್ನು ಗಂಟಲಿಗೆ ಸುರಿದು, ಗಂಟಲ ನಾಳವನ್ನು ಸ್ವಚ್ಛ ಮಾಡಿಕೊಂಡ.

"ಏನಾಯಿತು ನಿನಗೆ?"

ಕಪೂರ್‌ನ ತಂದೆ ಕೇಳಿದರು. ಮಗನ ಕೆಮ್ಮು ಮಲಗಿದ್ದ ಅವರಿಗೆ ಎಚ್ಚರ ತಂದಿತ್ತು.

"ಏನೂ ಇಲ್ಲ! ಗಂಟಲಿಗೆ ಪರೋಟ ಸಿಕ್ಕಿಹಾಕಿಕೊಂಡು ಬಿಟ್ಟಿತು."

"ನೀನು ಎಂದು ನಿಧಾನವಾಗಿ ಊಟ ಮಾಡಿದ್ದೀಯಾ?" ಆಕ್ಷೇಪಣೆ ಎತ್ತಿದರು ತಂದೆ.

ಕಪೂರ್ ಮತ್ತೆ ನಕ್ಕ!

"ಭಿಕಾರಿಗಳ ಹಾಗೆ ಗಟಗಟ ತಿನ್ನುತ್ತೀಯಾ?"

"ಸ್ನೇಹಿತರ ಮುಂದೆ ಬೈಬೇಡ ಅಪ್ಪ!"

ನಗುತ್ತಲೇ ಹೇಳಿದ ಕಪೂರ್. ಆಮೇಲೆ ಅಪ್ಪನ ಉಸಿರೇ ಇಲ್ಲ! ಸುಮ್ಮನಾದರು ಅವನ ತಂದೆ.

"ನಿನ್ನ ಮತ್ತು ಬ್ಯಾಂಕ್ ಹುಡುಗಿಯ ಪ್ರೇಮ ಪ್ರಕರಣ ಎಲ್ಲಿಯವರೆಗೆ ಬಂದಿದೆ?"

ಹಠಾತನೆ ಕೇಳಿದ ಪ್ರಶ್ನೆಗೆ, ಮಿಂಚಿನಂತೆ, ಅವನ ಕಣ್ಣುಗಳು ನನ್ನ ಮುಖದ ಮೇಲೆ ಹಾಯ್ದು, ಪರೋಟದ ಕಡೆ ನೆಟ್ಟಿತು. ಉಳಿದಿದ್ದ ಒಂದು ಪರೋಟವನ್ನು ಬಾಯಿಗೆ ಹಾಕಿ, ಜೊತೆಗೆ ಒಂದು ಲೋಟ ನೀರು ಸುರಿದುಕೊಂಡು, ನನ್ನ ಮುಖ ನೋಡಿದ. ಅವನ ಸೂಕ್ಷ್ಮ ತೆಳ್ಳಗಿನ ಕೆಂಪು ರಂಗಿನ ತುಟಿಗಳು, ಅತಿ ಸೂಕ್ಷ್ಮ ಹೊಳಪಿನ ಕಣ್ಣುಗಳು, ಉದ್ದ ನಾಸಿಕ, ನನ್ನನ್ನು ಪರೀಕ್ಷಿಸುವಂತೆ ಕಂಡವು.

"ಆ ಶಾಖೆಯಿಂದ ನನಗೆ ವರ್ಗವಾದ ಮೇಲೆ ಆಕೆಯನ್ನು ನಾನು ಕಾಣಲೇ ಇಲ್ಲ!" ಎಂದೆ.

"ಅವಳನ್ನು ಕಾಣಬೇಕೇನು?"

ಅವನ ಧ್ವನಿಯಲ್ಲಿ ಅಚ್ಚರಿ ಹಣಿಕಿತ್ತು.

"ನಿಮ್ಮ ಅಭ್ಯಂತರವಿಲ್ಲದಿದ್ದರೆ!" ಎಂದೆ.

"ಓಹ್! ನನ್ನ ಅಭ್ಯಂತರ? ಎಂತಹ ಪ್ರಶ್ನೆ? ಅವಳನ್ನು ಭೇಟಿ ಮಾಡಲಿಕ್ಕೆ ನನ್ನದೇನು ಅಭ್ಯಂತರ? ಅವಳೇನು ನನ್ನ ಹೆಂಡತಿಯೇ? ಬಂಧುವೇ? ಬಳಗವೇ?"

"ಪ್ರೇಯಸಿ ಅಲ್ಲವೇ?"

ಯಾವ ಧೈರ್ಯದಿಂದ ಕೇಳಿದೆ ಈ ಪ್ರಶ್ನೆ? ನನಗೆ ಅರಿವಾಗಲಿಲ್ಲ! ಆದರೆ ಕೇಳಿಬಿಟ್ಟಿದ್ದೆ!

"ಪ್ರೇಯಸಿ?..... ಇರಬಹುದು!......"

"ನಿಮಗೆ ಅವಳನ್ನು ಭೇಟಿ ಮಾಡಬೇಕೆಂದಿದ್ದರೆ, ಕರೆದುಕೊಂಡು ಹೋಗಿ ಭೇಟಿ ಮಾಡಿಸುತ್ತೇನೆ. ನಾನಂತೂ ಅವಳನ್ನು ದಿನವಿಡೀ ಬ್ಯಾಂಕ್‌ನಲ್ಲಿ ಭೇಟಿ ಮಾಡುತ್ತೇನೆ. ನೀವು ಕೂಡ ಅವಳನ್ನು ಅಲ್ಲಿಯೇ ಭೇಟಿ ಮಾಡಬಹುದಲ್ಲಾ!"

ಅರೇ!ಹೌದಲ್ಲಾ! ಮರೆತೇಬಿಟ್ಟಿದ್ದೆ. ಇದೇ ಮಾಲವೀಯನಗರದ ಶಾಖೆ ಯಲ್ಲೇ ಅವಳು ನೌಕರೀ ಮಾಡುತ್ತಿದ್ದಾಳೆ!

"ಹೋಗೋಣವೇ?"

ನನ್ನ ಪ್ರಶ್ನೆಗೆ ಉತ್ತರವಾಗಿ, ಕಪೂರ್ ಜೋರಾಗಿ ನಕ್ಕ!

"ನಿನಗೆ ಮರ್ಯಾದೆ ಇಲ್ಲವಾ?"

ಒಳಗಿನಿಂದ ತಂದೆಯ ಗಡುಸು ಧ್ವನಿ ಕೇಳಿಸಿತು. ಕಪೂರ್‌ನ ನಗುವಿನ ಅಬ್ಬರ ತಂದೆಯ ನಿದ್ರೆಯನ್ನು ಕೆಡಿಸಿತ್ತು!

"ನನ್ನ ಹೆಂಡತಿ ಓಡಿಹೋದಾಗಲೇ ನನ್ನ ಮರ್ಯಾದೆ ಅವಳ ಜೊತೆಗೆ ಓಡಿಹೋಯಿತು!"

ಮತ್ತೆ ನಕ್ಕ ಕಪೂರ್!

"ನೀನು ನಗುವ ಬದಲು ಸ್ವಲ್ಪ ಅತ್ತಿದ್ದರೆ, ಅವಳು ಓಡಿ ಹೋಗುತ್ತಿರಲಿಲ್ಲ!"

ತಂದೆಯ ಧ್ವನಿಯಲ್ಲಿ ಗಡಸು ಸ್ವಲ್ಪ ಮೆತ್ತಗಾಗಿತ್ತು.

ಕಪೂರ್‌ನ ಕಣ್ಣೆವೆಗಳ ಮಧ್ಯ ಯೋಚನೆಯ ಗೆರೆ ಕಾಣಿಸಿಕೊಂಡವು. ಯೋಚನೆಯ ಗೆರೆಯೋ ಅಥವಾ ಗಲಿಬಿಲಿಯ ಗೆರೆಯೋ?

"ಓಡಿ ಹೋಗುವವರಿಗೆ ಅತ್ತು ಕರೆದು ನಿಲ್ಲಿಸಲಿಕ್ಕಾಗುತ್ತದೆಯೊ?"

ಯೋಚನೆಗೆರೆಗಳು ಓಡಿಹೋಗಿದ್ದವು. ನಿಶ್ಚಲನಾಗಿದ್ದ ಈಗ. ತನ್ನ ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಳ್ಳುವವನಂತೆ ಕಾಣಿಸಿದ. ಅವನ ಮುಖದಲ್ಲಿ ನಗು ಮನೆ ಮಾಡಿತ್ತು. ಈ ನಗು ಮನೆ ಬಿಟ್ಟು ಹೋಗುವ ಹಾಗೆ ಕಾಣಸಲಿಲ್ಲ. ನಗುವಾದರೋ ನೆಚ್ಚಿಕೆಯ ಬೆಳದಿಂಗಳ ಹೊದ್ದಿಕೆಯ ಹಾಗೆ!

"ಯಾವುದಕ್ಕಾದರೂ ಒಂದು ಮಿತಿ ಇರಬೇಕು."

ತಂದೆ ನಿಧಾನವಾಗಿ, ಅರೆನಿದ್ರೆಯಲ್ಲಿದ್ದವರ ಹಾಗೆ ನುಡಿದರು.

"ಕರೆಕ್ಟ್! ಈಗ ನೀವು ನಿದ್ರೆ ಮಾಡಿ!" ಎಂದು ಹೇಳಿ ಕಪೂರ್ ಒಳಗೆ ಹೋಗಿ, ಬಾಯಿಯಲ್ಲಿ ಪಾನ್ ಹಾಕಿಕೊಂಡು, ಜಗಿಯುತ್ತಾ ಹೊರಗೆ ಬಂದ. ಒಳಗೆ ತಂದೆಯ ಬಾಯಿಗೂ ಪಾನ್ ತುರುಕಿ, ಅವರು ಮತ್ತೆ ಮಾತು ಮುಂದುವರೆಸುವುದು ಬಂದು ಮಾಡಿ ಬಂದಿದ್ದಾನೆಂದು ತೋರಿತು. ಯಾಕೆಂದರೆ, ಅವರ ಬಾಯಿಯಿಂದ ಮುಂದೆ ಮಾತು ಹೊರಡಲಿಲ್ಲ.

"ನಿಮ್ಮ ತಂದೆ ಹೇಳಿದರಲ್ಲಾ- ನೀವು ಅತ್ತಿದ್ದರೆ ನಿಮ್ಮ ಹೆಂಡತಿ ಓಡಿಹೋಗುತ್ತಿರಲಿಲ್ಲ ಎಂದು. ನನಗೆ ಅರ್ಥವಾಗಲಿಲ್ಲ!"

"ನಮ್ಮ ತಂದೆ ಅರೆನಿದ್ರೆಯಲ್ಲಿದ್ದರು. ಅವರು ಏನು ಮಾತನಾಡುತ್ತಿದ್ದೇನೆ ಎಂದು ಅವರಿಗೇ ಅರ್ಥವಾಗದೇ ಇರುವಾಗ ನಿಮಗೆ ಹೇಗೆ ಅರ್ಥವಾಗುತ್ತದೆ?"

ನಾನು ತಲೆ ಅಲ್ಲಾಡಿಸಿದೆ. ಯಾವಾಗಲೂ ನಗುವನ್ನು ತನ್ನ ಮುಖದಲ್ಲಿ ಮನೆ ಮಾಡಿಕೊಟ್ಟ ಈ ಮನುಷ್ಯನನ್ನು ಹೇಗೆ ನಂಬುವುದು? 'ಅಳಬೇಕಿತ್ತು ನೀನು' ಎಂದು ಹೇಳುವ ತಂದೆಯ ಮಾತಿನಲ್ಲಿ ಗೂಢಾರ್ಥವಿರಲೇ ಬೇಕು! ಏನೋ ಬಚ್ಚಿಡಲು ಪ್ರಯತ್ನಿಸುತ್ತಿದ್ದಾನೆ ಎಂದು ತೋರಿತು.

"ತಮಿಳು ಹುಡುಗಿಯಲ್ಲಿ ಏನು ವಿಶೇಷ ಕಂಡೆ?"

ಬಾಲ್ಕನಿಯ ಕಟಕಟೆಯ ಬಳಿ ಹೋಗಿ ಪಿಚಕ್ಕನೆ ಪಾನ್ ರಸ ಉಗುಳಿ, ಕಪೂರ್ ನನ್ನ ಬಳಿ ಬಂದು ಕುಳಿತ.

"ನನ್ನ ಹೆಂಡತಿಗೆ ನನ್ನ ಮೇಲೆ ಭಯಂಕರ ಕೋಪ ಬಂದಿತ್ತು. ಯಾಕೆ ಅಂತೀರಾ?..................

"ಅವಳ ಮಗು ಸತ್ತು ಹೋಯಿತು!"

ಅವಳ ಮಗು? ಇವನ ಮಗು ಅಲ್ಲವೇ? ಇವ ಏನು ಹೇಳುತ್ತಿದ್ದಾನೆ?

"ಆಕ್ಸಿಡೆಂಟ್‌ಲ್ಲಿ ಸತ್ತುಹೋಯಿತು, ಮಗು! ನಾನು ಅದಕ್ಕೆ ಅಳಲಿಲ್ಲ! ಅದಕ್ಕೆ ಅವಳಿಗೆ ಕೋಪ. ನಾನು ಅಳಬೇಕಿತ್ತಂತೆ!"

ಎಲ್ಲವೂ ಗೂಢವಾಗಿತ್ತು. ಮದುವೆಯಾಗಿ ಒಂದು ವರ್ಷದಲ್ಲೇ ಅವನ ಹೆಂಡತಿ ಓಡಿಹೋಗಿದ್ದ ವಿಷಯ ತಿಳಿಸಿದ್ದ. ಒಂದು ವರ್ಷದಲ್ಲಿ ಮಗುವಾಗಿ, ಆಕ್ಸಿಡೆಂಟ್‌ನಲ್ಲಿ ಸಾಯಬೇಕಾದರೆ, ಮಗುವಿಗೆ ಎಷ್ಟು ವಯಸ್ಸಾಗಿರಬೇಕು? ನನ್ನನ್ನು ಲೇವಡಿ ಮಾಡಿ, ಚುಡಾಯಿಸಲು ಯತ್ನಿಸುತ್ತಿದ್ದಾನೆಯೆ?

"ನನಗೆ ಮಾಡಲು ಬೇರೆ ಕೆಲಸವಿಲ್ಲ ಎಂದು ಇಲ್ಲಿಗೆ ಬರಲಿಲ್ಲ. ಹೊತ್ತು ಕಳೆಯಲೂ ಇಲ್ಲಿಗೆ ಬರಲಿಲ್ಲ. ನಿಮ್ಮ ಬಗ್ಗೆ, ನಿಮ್ಮ ಹಿಂದಿನ ಜೀವನದ ಬಗ್ಗೆ ತಿಳಿದುಕೊಳ್ಳುವ ಆಸೆ ಆಯಿತು. ಯಾಕೆ ಈ ಆಸೆ ಎಂದು ನೀವು ಕೇಳಬಹುದು. ನಿಮ್ಮ ಖಾಸಗೀ ಜೀವನದ ಬಗ್ಗೆ ನನಗೆ ಯಾಕೆ ಇಷ್ಟು ಆಸಕ್ತಿ ಎಂದು ನೀವು ಕೇಳಬಹುದು. ನಿಮ್ಮ ಪರಿಚಯವಾದ ಮೇಲೆ, ನಿಮ್ಮನ್ನು ನೋಡಿದ ಮೇಲೆ, ನಿಮ್ಮ ವ್ಯಕ್ತಿತ್ವ ಕಂಡಮೇಲೆ, ಇನ್ನು ಹೆಚ್ಚಿನ ಸಂಗತಿ ತಿಳಿದುಕೊಳ್ಳುವ ಮಾನವ ಸಹಜವಾದ ಆಸಕ್ತಿ ಉಂಟಾಯಿತು. ಅಷ್ಟೇ! ಹೆಚ್ಚಿಲ್ಲ, ಕಡಿಮೆ ಇಲ್ಲ!"

ಉದ್ದ ಭಾಷಣ ಬಿಗಿದು, ಕುಳಿತಲ್ಲಿಂದ ಮೇಲಕ್ಕೆದ್ದು ಹೊರಡಲನುವಾದೆ.

"ಅರೆ ಸಾಬ್! ಏಕಿಷ್ಟು ತಾಪ? ಸ್ವಲ್ಪ ಸುಧಾರಿಸಿಕೊಳ್ಳಿರಿ! ನಾನು ನಿಮಗೆ ಸುಳ್ಳು ಸಂಗತಿ ಹೇಳಲಿಲ್ಲ! ಕುಳಿತುಕೊಳ್ಳಿ. ಈ ದಿನ ನನ್ನ ಎಲ್ಲಾ ಕಥೆ ಹೇಳಿಬಿಡುತ್ತೇನೆ. ನನಗೂ ಹೇಳಬೇಕೆಂಬ ಮನಸ್ಸಾಗಿದೆ. ಅದೂ ಅಲ್ಲದೆ, ನನ್ನ ಕಥೆ ಕೇಳುವವರೇ ಇಲ್ಲದಿರುವಾಗ, ನೀವಾಗಿ ಬಂದು ನನ್ನ ಕಥೆ ಕೇಳಲು ಉಮ್ಮೇದು ಇರುವಾಗ ನಾನು ಯಾಕೆ ಹೇಳದೆ ಇರಲಿ?"

ಮತ್ತೆ ಕುಳಿತೆ ಸೋಫಾದಲ್ಲಿ, ಸಾವಧಾನದಿಂದ.

"ನಿಮ್ಮ ಕಥೆ ಕೇಳುವವರೇ ಇರಲಿಲ್ಲವೇ?"

ಈ ಪ್ರಪಂಚದಲ್ಲಿ, ಇವನ ಕಥೆ ಕೇಳುವವರೇ ಇಲ್ಲವೇ? ಹಾಗಾದರೆ, ನನ್ನ ಎಣಿಕೆ ಸುಳ್ಳಾಯಿತೇ? ಇವ ಯಾವ ಕಥಾನಾಯಕನೂ ಅಲ್ಲ!

"ನನ್ನ ಕಥೆ ಯಾರು ಕೇಳುತ್ತಾರೆ? ಯಾಕೆ ಕೇಳಬೇಕು ಹೇಳಿ? ಎಲ್ಲರಿಗೂ ತಿಳಿದಿರುವ ಕಥೆ ನನ್ನದು! ಕಥೆ ಗೊತ್ತಿದ್ದ ಮೇಲೆ ಮತ್ತೇಕೆ ಕೇಳುತ್ತಾರೆ?"

ಅವನ ನಗುವಿನಲ್ಲಿ ತುಂಟತನವಿತ್ತು. ಅವನ ತರ್ಕಕ್ಕೆ ತಲೆತೂಗಲೇ ಬೇಕಿತ್ತು. ನನ್ನನ್ನು ಬೆಪ್ಪನನ್ನಾಗಿ ಮಾಡಲಿಕ್ಕೆ ಇಲ್ಲಿಗೆ ಕರೆದುಕೊಂಡು ಬಂದನೇ?

"ಹೋಳಿ ಹಬ್ಬ ಜೋರಾಗಿ ಮಾಡಿದೆವು. ಓಕಳೀಯಾಟ ಬಹಳ ಚೆನ್ನಾಗಿ ಆಡಿದೆವು. ಹೋಳೀ ಅಂದ ಮೇಲೆ ನಮಗೆ ಎಲ್ಲಿಲ್ಲದ ಉತ್ಸಾಹ, ಆನಂದ! ಬಣ್ಣ ಬಣ್ಣದ ನೀರು, ಬಕೆಟ್‌ಗಳಲ್ಲಿ ತುಂಬಿ ಎಲ್ಲರ ತಲೆ ಮೇಲೆ ಸುರಿಯುತ್ತಿದ್ದೆವು. ಮಜವೋ ಮಜ! ತಮಾಷೆ ಮಾಡುತ್ತಾ, ಜೋಕ್ ಹಾರಿಸುತ್ತಾ, ಬಣ್ಣ ಎರಚಿ, ಕೈ ಮೈ ರಾಡಿ ಮಾಡಿಕೊಂಡು, ಕಿರಿಚಾಡಿ, ಕುಣಿದಾಡಿ, ಹಾರಾಡಿ, ನಲಿದಾಡುತ್ತಿದ್ದೆವು!"

ಹೋಳಿ ಹಬ್ಬ ದಿಲ್ಲೀವಾಲರಿಗೆ ಬಹಳ ಒಳ್ಳೇ ಹಬ್ಬ. ಉತ್ಸಾಹದ ರಂಗು ರಂಗಿನ ಹಬ್ಬ. ಬಹಳ ಉತ್ಸಾಹದಿಂದ, ವಿಜೃಂಭಣೆಯಿಂದ ನಲಿದು, ಅಬಾಲ ವೃದ್ಧರೆಲ್ಲರೂ, ಮನೆಮಂದಿಯೆಲ್ಲಾ, ಸ್ನೇಹಿತ- ಬಂಧುಗಳೆಲ್ಲಾ ಒಟ್ಟಾಗಿ ಸೇರಿ ಆಚರಿಸುವ ಈ ಹಬ್ಬದ ಪರಿಚಯ ದಿಲ್ಲೀಗೆ ಬಂದಮೇಲೆ ನನಗೆ ಆಗಿತ್ತು. ಆದರೆ ಇವನ್ಯಾಕೆ ಇದರ ಬಗ್ಗೆ ವಿಷದವಾಗಿ ವಿವರಿಸುತ್ತಾ ಇದ್ದಾನೆ! ಹೋಳಿ ಮೇಳದ ಬಗ್ಗೆ ಏನು ಅರಿತಿಲ್ಲವೆಂದು ಬಗೆದಿದ್ದಾನೆಯೆ?

"ಮನೆ ಮುಂದಿನ ಜಾಗವೆಲ್ಲಾ, ನೆಲದಲ್ಲೆಲ್ಲಾ, ರಸ್ತೆಯೆಲ್ಲಾ ರಂಗಿನ ನೀರಿನಿಂದ ಕೊಚ್ಚೆಯಾಗಿತ್ತು. ನೀರಿಗೆ ರಂಗಿನ ಪುಡಿ ಸೇರಿಸುತ್ತೀವಲ್ಲಾ! ಅದರಲ್ಲಿ ಎಣ್ಣೆ ಅಂಶ ಇರುತ್ತದೆ. ಗೊತ್ತಿದೆಯಲ್ಲಾ ನಿಮಗೆ!"

ರಂಗಿನಲ್ಲಿ ಎಣ್ಣೆ ಅಂಶ? ಅದು ಯಾರಿಗೆ ಗೊತ್ತಿಲ್ಲಾ? ಇವನು ಯಾಕೆ ಹೀಗೆ ಮಾತನಾಡುತ್ತಿದ್ದಾನೆ?

"ಎಲ್ಲೆಲ್ಲೂ ಕೊಚ್ಚೆ, ಎಣ್ಣೆ ನೀರು, ರಂಗಿನ ನೀರು ಹರಡಿ, ಅದರ ಮೇಲೆ ಓಡಾಡಿ, ಹಾರಾಡಿ, ನಲಿದಾಡುತ್ತಿದ್ದರು ಎಲ್ಲರೂ! ನಮ್ಮ ಮೊದಲನೆಯ ಹೋಳಿಯಾಗಿತ್ತು! ಮದುವೆಯಾದ ಮೊದಲನೆ ವರ್ಷದ ಹೋಳಿ! ನನ್ನ ಹುರುಪು ಜೋರಾಗಿತ್ತು. ನನ್ನ ಹೆಂಡತಿಯ ತಲೆ ಮೇಲೆ ಬಕೆಟ್‌ಗಟ್ಟಲೆ ರಂಗಿನ ನೀರು ಸುರಿದಿದ್ದೆ. ರಂಗಿನಾಟದ ಜೊತೆಗೆ ನನ್ನ ನಗುವಿನ ಆರ್ಭಟ, ಕೇಕೆ, ಕೂಗು ಎತ್ತರಿಸಿದ ಧ್ವನಿ ಬಾಕಿ ಎಲ್ಲರ ಧ್ವನಿಯನ್ನು ಮೀರಿಸಿತ್ತು."

ಮಾತು ನಿಲ್ಲಿಸಿ ಮೌನದಿಂದ ಕುಳಿತ ಕಪೂರ್! ನಗು ಮಾಸಿತ್ತು. ಹುಬ್ಬುಗಳಲ್ಲಿ ಗಂಟು ಕಾಣಿಸಿತು.

"ನನ್ನ ಹುರುಪಿನ ಹೋಳಿಯಾಟಕ್ಕೆ ಸೋತಿದ್ದಳು ನನ್ನ ಹೆಂಡತಿ. ನನ್ನಿಂದ ತಪ್ಪಿಸಿಕೊಳ್ಳಲು, ಮನೆಯೊಳಗೆ ಓಡಿಹೋಗಲು ಪ್ರಯತ್ನಿಸಿದಳು. ರಂಗಿನ ನೀರಿನಿಂದ ಸಂಪೂರ್ಣವಾಗಿ ಒದ್ದೆಯಾದ ಅವಳ ಸಲ್ವಾರ್ ಕಮೀಜ್, ಅವಳ ಮೈಗೆ ಅಂಟಿಕೊಂಡಿತ್ತು. ನನ್ನ ಹಿಡಿತದಿಂದ ಬಿಡಿಸಿಕೊಳ್ಳಲು ಬಹಳ ಕಷ್ಟಪಟ್ಟಳು. ಆದರೆ ನಾನು ಬಿಟ್ಟೇನೆಯೇ? ಜೋರಾಗಿ ಎಳೆದೆ! ಅವಳ ಕೈಯನ್ನು ಹಿಡಿದು ಎಳೆದೆ! ಇನ್ನೊಂದು ಕೈಯಿಂದ ಅವಳ ತಲೆ ಮೇಲೆ ಸುರಿದೆ ರಂಗಿನ ನೀರು! ಎಲ್ಲರೂ 'ಹೋ' ಎಂದು ಕಿರುಚಿದರು. ಆಟ ಜೋರಾಗಿತ್ತು! ಅದು ಯಾವಾಗ ನನ್ನ ಕೈ ಹಿಡಿತದಿಂದ ಜಾರಿ ಬಿಟ್ಟಳೋ ನನಗೆ ಗೊತ್ತಿಲ್ಲ. ಬಿದ್ದಳು ಕೆಳಗೆ ಜಾರಿ! ನಾವೆಲ್ಲಾ 'ಹೋ' ಎಂದು ಕಿರುಚತೊಡಗಿದೆವು. ಒಬ್ಬ ವ್ಯಕ್ತಿ ಕೆಳಗೆ ಬಿದ್ದಾಗ, ಅಳುವವರಿಗಿಂತಲೂ ನಗುವವರೇ ಹೆಚ್ಚು! ಅಲ್ಲವೇ?....

ಅವಳು ಅಳುತ್ತಿದ್ದಳು! ನಾವೆಲ್ಲಾ ನಗುತ್ತಿದ್ದೆವು! ಬಿದ್ದವಳಿಗೆ ರಂಗಿನ ನೀರು ಎಸೆಯುವವರೇ! ಕೆಂಪು ನೀರು, ಕೆಂಪು ಬಣ್ಣ, ಕೆಂಪು ಸಲ್ವಾರ್ ಕಮೀಜ್, ಎಲ್ಲವೂ ಕೆಂಪುಮಯ!....... ಕೆಂಪು ರಕ್ತ ಹರಿದಿದ್ದು ನಮಗೆ ಗೊತ್ತೇ ಆಗಲಿಲ್ಲ! ಕೆಂಪು ರಕ್ತ, ಕೆಂಪು ರಂಗಿನಲ್ಲಿ ಸೇರಿಹೋಗಿತ್ತು! ನನ್ನ ಹೆಂಡತಿ ಅಳುತ್ತಲೇ ಬಿದ್ದು ಒದ್ದಾಡುತ್ತಿದ್ದಳು..... ನನಗೆ ಅರಿವಾಗಲೇ ಇಲ್ಲ! 'ನಾನು ಸತ್ತೇ ಸತ್ತೇ ಎಂದು ಕಿರುಚಿದಾಗಲೇ ನಾನು ಭೂಮಿಗೆ ಇಳಿದು ಬಂದಿದ್ದೆ! ಸಾಗಿಸಿದೆ. ಮಂಚದ ಮೇಲೆ ಮಲಗಿಸಿದಾಗ, ಅವಳು ನಿಧಾನವಾಗಿ ಹೇಳಿದಳು- 'ನನಗೆ ರಕ್ತಸ್ರಾವವಾಗಿದೆ' ಎಂದು.

ಅವಳು ಐದು ತಿಂಗಳ ಗರ್ಭಿಣಿಯಾಗಿದ್ದಳು.

ಮುಖ ಮುಚ್ಚಿ, ಮೆಲ್ಲನೆ ಕಣ್ಣೀರು ಸುರಿಸಿದ್ದನು ಕಪೂರ್!

ಕಪೂರ್‌ನ ಕಣ್ಣಿನಲ್ಲಿ ನೀರು! ಯಾವಾಗಲೂ ನಗುನಗುತ್ತಾ ನಲಿಯುತ್ತಿರುವ ಕಣ್ಣಿನಲ್ಲಿ ನೀರು! ಅವನು ದುಃಖಿಸುವುದನ್ನು ಕಂಡು ಕನಿಕರವೆನಿಸಿತು.

"ಅಂದು ನಾನು ಕಣ್ಣೀರು ಹಾಕಲಿಲ್ಲ! ಹೋಲಿಯಾಟದ ಹುರುಪಿನಲ್ಲಿ ಕಣ್ಣೀರು ಹಾಕುವುದನ್ನು ಮರೆತಿದ್ದೆ. ನನ್ನ ಹೆಂಡತಿಗಾದ ದುರ್ಘಟನೆ ನನಗೆ ದುಃಖವನ್ನುಂಟು ಮಾಡಲಿಲ್ಲ! ಆದರೆ ಅವಳನ್ನು ಆಸ್ಪತ್ರೆಗೆ ಸೇರಿಸಿ, ಡಾಕ್ಟರ್ ಅವಳ ಗರ್ಭಾಶಯವನ್ನು ತೆಗೆದು ಹಾಕಿದಾಗಲೇ ಗಂಭೀರ ಪರಿಸ್ಥಿತಿಯ ಅರಿವಾಗಿದ್ದು!"

ತನ್ನ ಮುಖ ಮುಚ್ಚಿ ಕುಳಿತ ಕಪೂರ್‌ನನ್ನು ನೋಡಿ, ನನ್ನ ಮನ ಮರುಗಿತು. ಅವನ ಹೆಂಡತಿಯ ದುರಂತ ವೃತ್ತಾಂತ ಕೇಳಿ ಮನ ಮಿಡಿಯಿತು. ಆದರೆ, ಅವಳು ಇವನನ್ನು ಬಿಟ್ಟು ಓಡಿದ್ದೇಕೆ? ಮತ್ತೆ ಮಕ್ಕಳಾಗುವುದಿಲ್ಲ ತನಗೆ ಎಂಬ ಕಾರಣಕ್ಕೆ ಓಡಿಹೋಗಬೇಕೆ? ಅವಳ ಬಗ್ಗೆ ಕನಿಕರ ಮತ್ತು ಅನುಕಂಪ ಉಂಟಾದರೂ, ಅವಳು ಇವನನ್ನು ತ್ಯಜಿಸಿ ದೂರ ಹೋಗಬೇಕಾದ ಪ್ರಮೇಯವಾದರೂ ಏನು?

"ಗರ್ಭಾಶಯ ತೆಗೆದು ಹಾಕಿದಾಗಲೇ, ನನ್ನ ಮೇಲಿನ ಅವಳ ಪ್ರೀತಿ ಓಡಿ ಹೋಯಿತು!"

ಅಳುವ ಧ್ವನಿಯಲ್ಲಿ ಕಪೂರ್ ಮುಂದುವರೆಸಿದ.

ಕೆಲವು ಕ್ಷಣ ಮೌನದ ವಾತಾವರಣ ಹರಡಿತು. ಕಪೂರ್ ಎದ್ದು ಒಳಗೆ ಹೋದ. ನಾನು ಎದ್ದು ಹೊರಗೆ ಬಾಲ್ಕನಿಗೆ ಬಂದು ನಿಂತೆ. ಬಿಸಿಲಿನ ಝಳ ಇರಲಿಲ್ಲ. ಮಧ್ಯಾಹ್ನದ 'ಆಂಧೀ' ಬೀಸಿದ್ದರಿಂದ, ಹಿತಕರ ಗಾಳಿ ಬೀಸುತ್ತಿತ್ತು. 'ಆಂಧೀ' ಎಂದು ಯೋಚಿಸುತ್ತಾ ನಿಂತೆ. ಯೋಚಿಸುತ್ತಿದ್ದ ಹಾಗೇ ನನ್ನ ಮನಸ್ಸು ಓಡಿತು ಬೆಂಗಳೂರಿನ ಕಡೆಗೆ!

"ನಾಳೆ ಒಂದು ಪಾರ್ಟಿ ಇಟ್ಟುಕೊಂಡಿದ್ದೇನೆ. ನೀವು ಬರಬೇಕು ಸಾರ್!"

ನನ್ನ ಶಾಖೆಯಲ್ಲಿ ಕೆಲಸ ಮಾಡುತ್ತಿದ್ದ ಹುಡುಗಿ ಹೇಳಿದಳು.

"ಏನು ಪಾರ್ಟಿ?"

"ಒಂದು ಮಗುವಿಗೆ ದತ್ತು ತೆಗೆದುಕೊಂಡಿದ್ದೇನೆ ಸಾರ್! ಅದಕ್ಕೆ ನಾಮಕರಣ ಮಾಡುತ್ತಿದ್ದೇನೆ!"

ದತ್ತು? ನಾಮಕರಣ. ಸುಮಾರು ೨೫-೩೦ ವರ್ಷದ ಪ್ರಾಯದ ಹುಡುಗಿ, ಮದುವೆಯಾಗಿದೆ. ಇನ್ನು ಮಕ್ಕಳಾಗಿರಲಿಲ್ಲ. ಆದರೆ ಮಕ್ಕಳಾಗುವ ನಂಬಿಕೆ ಬತ್ತಿರಲಿಲ್ಲ. ಆದರೂ ದತ್ತು ತೆಗೆದುಕೊಳ್ಳುವುದೇ?

"ಮಕ್ಕಳಾಗುವುದಿಲ್ಲ ಎಂದು ಡಾಕ್ಟರ್ ಹೇಳಿದ್ದಾರೆಯೆ?"

ಅವಳು ಉತ್ತರ ನೀಡಲಿಲ್ಲ. ನಕ್ಕಳಷ್ಟೆ. 'ಮುಂದೆ ನಿನಗೆ ಮಕ್ಕಳಾದರೆ, ಈ ದತ್ತು ಮಗುವನ್ನು ಪ್ರೀತಿಯಿಂದ ಸಾಕುವ ಮನೋಭಾವ ಇರುತ್ತದೆಯೆ?'

"ನೋಡಿಕೊಳ್ಳುತ್ತೇನೆ ಸಾರ್! ನಾಳೆ ಪಾರ್ಟಿಗೆ ಬನ್ನಿ ಸಾರ್" ಎಂದು ಆಹ್ವಾನ ನೀಡಿ ಹೊರಟುಹೋಗಿದ್ದಳು.

ಭರ್ಜರಿಯಾದ ಪಾರ್ಟಿ ಅದು. ಛತ್ರದಲ್ಲಿ ಸುಮಾರು ೪೦೦-೫೦೦ ಜನ ಸೇರಿದ್ದರು. ಅದ್ದೂರಿಯಿಂದ, ಸಂಪ್ರದಾಯ ರೀತಿ, ಅಪಾರ ಹಣ ಖರ್ಚು ಮಾಡಿ, ದತ್ತು ತೆಗೆದುಕೊಳ್ಳುವ ಶಾಸ್ತ್ರ ಮಾಡಿ ಮುಗಿಸಿದ್ದರು. ಒಂದು ವರ್ಷದ ಹೆಣ್ಣು ಮಗುವನ್ನು ನನ್ನ ಮುಂದೆ ತಂದು, ಆಶೀರ್ವಾದ ಕೋರಿದಾಗ, ನನ್ನ ಆಶ್ಚರ್ಯಕ್ಕೆ ಮಿತಿಯೇ ಇರಲಿಲ್ಲ! ಮಗು ಕಪ್ಪು! ಅದೂ ಹೆಣ್ಣು ಶಿಶು! ಅಯ್ಯೋ ದೇವಾ! ಬೇರೆ ಚಂದದ ಗೊಂಬೆ ಸಿಗಲಿಲ್ಲವೇ ಈಕೆಗೆ? ಈಕೆಯಾದರೋ ಲಕ್ಷಣವಾಗಿ, ಆರೋಗ್ಯ ವಂತಳಾಗಿ, ಬೆಳ್ಳಗೆ ಕಾಣುತ್ತಾಳೆ. ದತ್ತು ಮಗು, ತಾನು ಇವಳ ಮಗಳಲ್ಲ ಎಂದು ಸಾರಿ ಹೇಳುತ್ತಿತ್ತು.

"ಈ ಕಪ್ಪು ಕುರೂಪಿ ಹೆಣ್ಣು ಮಗುವಿಗೆ ತಾಯಿಯಾಗಲು ಏಕೆ ಇಷ್ಟಪಟ್ಟಳು ಈಕೆ?"

ಕೇಳಿದೆ ಅವಳ ಸಹೋದ್ಯೋಗಿಯೊಬ್ಬಳನ್ನು.

" 'ಸಾರ್! ನಿಮಗೆ ಗೊತ್ತಿಲ್ಲವೇ? ಈ ಮಗುವಿನ ತಂದೆ ತಾಯಿ ಇಬ್ಬರೈ ಆಕ್ಸಿಡೆಂಟ್‌ನಲ್ಲಿ ಸತ್ತು ಹೋಗಿಬಿಟ್ಟರಂತೆ! ಶಿಶುವನ್ನು ಅನಾಥಾಲಯಕ್ಕೆ ಸೇರಿಸಿದ ರಂತೆ. ಇದರ ಕಥೆ ಕೇಳಿ ಇವಳ ಕರಳು ಚುರುಕ್ಕೆಂದಿತಂತೆ. 'ಕಪ್ಪಾದರೂ ಚಿಂತಿಲ್ಲ, ಹೆಣ್ಣಾದರೂ ಚಿಂತಿಲ್ಲ ನಾನು ಈ ಮಗುವನ್ನೇ ದತ್ತು ತೆಗೆದುಕೊಳ್ಳುತ್ತೇನೆ ಎಂದು ಹಟ ಮಾಡಿ, ತೆಗೆದುಕೊಂಡಳು."

"ಮುಂದೆ ಇವಳದೇ ಮಗುವಾದರೆ?"

ನನ್ನ ಮುಖವನ್ನೇ ಸಂಶಯದ ದೃಷ್ಟಿಯಲ್ಲಿ ದಿಟ್ಟಿಸಿದಳು ಆಕೆ?

"ಓಹೋ! ನಿಮಗೆ ತಿಳಿದಿಲ್ಲ ಅಂತ ಕಾಣುತ್ತದೆ! ಇವಳಿಗೆ ಮುಂದೆ ಮಕ್ಕಳಾಗುವುದಿಲ್ಲ!"

"ಮುಂದೆ ಮಕ್ಕಳಾಗುವುದಿಲ್ಲ ಅಂದರೆ, ಹಿಂದೆ ಆಗಿತ್ತೆ?"

ಕುತೂಹಲ ತಡೆಯಲಾರದೆ ಕೇಳಿದ್ದೆ.

"ಒಂದು ಹೆಣ್ಣು ಮಗು ಹುಟ್ಟಿ, ಒಂದು ವರ್ಷ ಬದುಕಿ ಸತ್ತು ಹೋಯಿತು. ಆಗಲೇ ಡಾಕ್ಟರ್ ಹೇಳಿದ್ದರಂತೆ- 'ಮುಂದೆ ಮಕ್ಕಳಾಗುವುದಿಲ್ಲ! ಈ ಮಗುವನ್ನು ಜೋಪಾನವಾಗಿ ಸಾಕಿ' ಎಂದು. ಆದರೆ ದುರದೃಷ್ಟವಶಾತ್ ಮಗು ಕಾಯಿಲೆ ಬಿದ್ದು ನರಳಿ ನರಳಿ ಸತ್ತು ಹೋಯಿತು!"

ಎಂತಹ ದುರಂತ? ಆದರೆ ಎಂತಹ ಉದಾತ್ತ ಮನಸ್ಸಿನ ಹೆಣ್ಣು! ತನ್ನ

ದುರಂತಕ್ಕೆ ಅಂತ್ಯ ಹೇಳಿ, ಒಂದು ದುರ್ಭಾಗ್ಯ ಹೆಣ್ಣು ಶಿಶುವಿಗೆ ತಾಯಿತನದ ಭಾಗ್ಯ ನೀಡಿ, ಮಾನವತೇಯ ಸೊಬಗಿಗೆ ಹೊಸ ಅರ್ಥವನ್ನೇ ನೀಡಿದಳಲ್ಲಾ!

" ಚಾ ತೆಗೆದುಕೊಳ್ಳಿ!"

ಕಪೂರ್ ಚಾ ಬಟ್ಟಲನ್ನು ಕೈಯಲ್ಲಿ ಹಿಡಿದು ನನ್ನ ಪಕ್ಕದಲ್ಲಿ ನಿಂತಿದ್ದ.

ಚಾ ಕಪ್ಪು ಕೈಗೆ ತೆಗೆದುಕೊಂಡು, ಚಾ ಹೀರುತ್ತಾ, ಅವನ ಮುಖವನ್ನು ವೀಕ್ಷಿಸ ತೊಡಗಿದೆ.

ಅವನ ಮುಖದಲ್ಲಿ ಮಂದಹಾಸ ಮತ್ತೆ ಮನೆ ಮಾಡಿತ್ತು. ದುಃಖ ಮರೆಮಾಡಿ, ಮತ್ತೆ ಮೊದಲಿನ ಕಪೂರ್‌ನಾಗಿದ್ದ.

"ನಿನ್ನ ಹೆಂಡತಿ ಈಗ ಎಲ್ಲಿ ಇದ್ದಾಳೆ?"

"ಅಮೆರಿಕಾ!"

ನನ್ನ ಕೈಲಿದ್ದ ಚಾ ಕಪ್ಪು ಕೊಂಚ ಅಲುಗಿತು. ಗಾಬರಿಯಾಯಿತೆ? ಕೈ ನಡುಗಿರಬಹುದು. ತಬ್ಬಿಬ್ಬಾದನೇ? ಇರಬಹುದು!

"ಮರುಮದುವೆ ಮಾಡಿಕೊಂಡಳೆ?"

" ಹೂ ಮತ್ತು ಇಲ್ಲ!"

"ಅಂದರೆ?"

"ಅಂದರೆ-ಅಮೆರಿಕಾಕ್ಕೆ ಹೋಗಬೇಕಾದರೆ, ಎರಡು ವಿಧಾನಗಳಿವೆ. ಒಂದು ಉನ್ನತ ವ್ಯಾಸಂಗ; ಇನ್ನೊಂದು ಮದುವೆ! ಇವಳು ಮದುವೆಯಾಗಿ, ಹೊರಟು ಹೋದಳು!"

"ನಿನಗೆ ಡೈವೋರ್ಸ್ ನೀಡಿದಳೆ?"

"ಹೌದು!"

"ಅವಳ ಈಗಿನ ಗಂಡ ಯಾರು?"

"ಗೊತ್ತಿಲ್ಲ! ಅಮೇರಿಕಾಕ್ಕೆ ಹೋಗಲು ತಾತ್ಕಾಲಿಕವಾಗಿ ಸಿಗುತ್ತಾರಲ್ಲಾ ಗಂಡಂದಿರು, ಅವರಲ್ಲಿ ಒಬ್ಬನನ್ನು ಕಟ್ಟಿಕೊಂಡು ಹೋದಳು. ಅಲ್ಲಿ ಹೋಗಿ ಅವರಿಗೆ ಡೈವೋರ್ಸ್ ಕೊಟ್ಟು ಈಗ ಒಬ್ಬಂಟಿಗಳಾಗಿದ್ದಾಳಂತೆ!"

ಕಪೂರ್‌ನ ಹೆಂಡತಿಯ ಬಗ್ಗೆ ಒಂದು ರೀತಿಯ ಹೇಳಲಾಗದ, ವ್ಯಕ್ತಪಡಿಸ ಲಾಗದ ಹೆಮ್ಮೆ ಉಂಟಾಯಿತು. ಒಂಟಿ ಹೆಂಗಸು, ಸಂಕಟದಲ್ಲಿ ಧೈರ್ಯ ವಹಿಸಿ, ತನ್ನ ಇಷ್ಟದ ಪ್ರಕಾರ, ನಡೆದುಕೊಂಡಳು. ಯಾರಿಗೂ, ಯಾರ ಮಾತಿಗೂ ಸೊಪ್ಪು ಹಾಕದೆ, ತನ್ನ ಇಷ್ಟಾನುಸಾರ ನಡೆದುಕೊಂಡಿದ್ದು, ಕಪೂರ್‌ನಿಗೆ ಹೇಗೆನಿಸೀತು?

"ಅವಳ ಜೊತೆಗೆ ನೀನು ಹೋಗಬಹುದಾಗಿತ್ತಲ್ಲ!"

ಜೋರಾಗಿ ನಕ್ಕ ಕಪೂರ್! ಮತ್ತೆ ಹಳೇ ಜಾಡು ಹಿಡಿದಿದ್ದ. ನಗುವ ಜಾಡು! ನಕ್ಕೇ ಹೆಂಡತಿಯನ್ನು ಕಳೆದುಕೊಂಡಿದ್ದನಲ್ಲವೇ?

"ತಂದೆ-ತಾಯಿಯನ್ನು ಬಿಟ್ಟು ಹೆಂಡತಿಯ ಹಿಂದೆ ಅಮೇರಿಕಾಕ್ಕೆ ಹೋಗುವ ಮೂರ್ಖ ನಾನಲ್ಲ!"

ವಾಹ್! ತಂದೆ ತಾಯಿಯ ಮೇಲೆ ಇಷ್ಟು ಪ್ರೀತಿ, ವಿಶ್ವಾಸ! ಈ ಯುಗದಲ್ಲಿ! ಯುಗಪುರುಷನೇ ಸರಿ ಈ ಕಪೂರ್!

"ಅಮೇರಿಕಾಗೆ ಹೋಗುವ ಅವಶ್ಯಕತೆ ಯಾಕಿತ್ತು ಅವಳಿಗೆ? ಇಲ್ಲೇ ಇದ್ದು ಬೇರೆ ಯಾರನ್ನಾದರೂ ಮದುವೆ ಮಾಡಿಕೊಳ್ಳಬಹುದಾಗಿತ್ತಲ್ಲ!"

"ಅವಳಿಗೆ ತನ್ನ ಮದುವೆಗೆ ಮುಂಚಿನಿಂದಲೂ ಅಮೇರಿಕಾಗೆ ಹೋಗಲು ಆಸೆ ಇತ್ತು."

"ಹಾಗಾದರೆ ಯಾಕೆ ಹೋಗಲಿಲ್ಲ?"

"ಹೇಗೆ ಹೋಗಲಿಕ್ಕೆ ಆಗುತ್ತದೆ? ನನ್ನನ್ನು ಮದುವೆಯಾದಳಲ್ಲಾ!"

"ಮದುವೆಯಾಗದೇ ಅಮೇರಿಕಾಗೆ ಹೋಗಬಹುದಾಗಿತ್ತಲ್ಲ!"

"ನಾನು ಅವಳನ್ನು ಮದುವೆಯಾಗಿ ಬಿಟ್ಟೆನಲ್ಲಾ!"

ತರ್ಕಶಾಸ್ತ್ರ ಪ್ರವೀಣನಂತೆ ಮಾತನಾಡುತ್ತಿದ್ದ ಕಪೂರ್! ನೇರವಾಗಿ ಮಾತನಾಡಲಿಕ್ಕೆ ಏಕೆ ಇಷ್ಟು ಸಂಕೋಚ?

"ಸರಿಯಾದ ಕಾರಣ ಹೇಳದೆ ಯಾಕೆ ಈ ಸುತ್ತು-ಬಳಸೀ ಮಾತನಾಡುತ್ತಿದ್ದೀಯ?"

ಕೈಯಲ್ಲಿ ಹಿಡಿದಿದ್ದ ಚಾ ಕಪ್ಪನ್ನು ಬಾಯಿಗೆ ಏರಿಸಿ, ಚಾ ಬರಿದು ಮಾಡಿ, ನನ್ನ ಬರಿದಾದ ಚಾ ಕಪ್ಪನ್ನು ತನ್ನ ಕೈಗೆ ತೆಗೆದುಕೊಂಡು ಒಳಗೆ ನಡೆದ ಕಪೂರ್. ನನ್ನ ಪ್ರಶ್ನೆಗೆ ಉತ್ತರ ನೀಡದೆ ಒಳಗೆ ನಡೆದ ಅವನನ್ನು ನಾನು ಹಿಂಬಾಲಿಸಿ, ಹಾಲಿನ ಸೋಫಾದ ಮೇಲೆ ಕುಳಿತೆ. ಅಡಿಗೆ ಮನೆಯಲ್ಲಿ ಚಾ ಕಪ್ಪುಗಳನ್ನು ಇರಿಸಿ, ಹೊರಗೆ ಬಂದು ನನ್ನ ಎದುರಿನ ಸೋಫಾದ ಮೇಲೆ ಕುಳಿತ ಕಪೂರ್, ಮಾತಿಗೆ ಶುರು ಮಾಡಿದ. ಅವನ ಮುಖದಲ್ಲಿ ನಗುವಿನ ಎಳೆ ಇದ್ದೇ ಇತ್ತು.

"ನೇರವಾಗಿ, ಸರಳವಾಗಿ ಕಾರಣ ಹೇಳಬೇಕು, ಅಲ್ಲವೇ?"

ನಾನು ಉತ್ತರ ನೀಡಲಿಲ್ಲ. ಅದರ ಅವಶ್ಯಕತೆ ಕಾಣಲಿಲ್ಲ.

"ನಾವಿಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದೆವು, ಹುಚ್ಚು ಹಿಡಿಯುವ ರೀತಿ! ಹೀಗಿರುವಾಗ ಅವಳು ನನ್ನನ್ನು ಬಿಟ್ಟು ಹೇಗೆ ಅಮೇರಿಕಾಕ್ಕೆ ಹೋಗುತ್ತಾಳೆ?"

ಇವನದು ಪ್ರೇಮವಿವಾಹವಲ್ಲವೆಂದು ಕೇಳಿದ ನೆನಪು. ಹಿರಿಯರು ನಿಶ್ಚಯಿಸಿದ

ವಿವಾಹವೆಂದು ಅವನು ಹೇಳಿದ ನೆನಪು. ಈಗ ಹುಚ್ಚು ಹಿಡಿಯುವ ರೀತಿಯಲ್ಲಿ ಪ್ರೇಮಿಸುತ್ತಿದ್ದರು ಎಂದು ಹೇಳುತ್ತಿದ್ದಾನಲ್ಲಾ ಇವ!

"ನಿಮಗೆ ಮೊದಲೇ ಹೇಳಿದೆನಲ್ಲಾ! ಮೊದಲೇ ಪರಿಚಯವಿತ್ತು ನಮಗೆ. ಅವಳ ಕುಟುಂಬ, ನನ್ನ ಕುಟುಂಬ, ಎರಡೂ ಪಾಕಿಸ್ತಾನದಿಂದ ವಲಸೆ ಬಂದ ಕುಟುಂಬ ಗಳು. ಇದೇ ಮಾಲವೀಯ ನಗರದಲ್ಲಿ ಎರಡು ಕುಟುಂಬದವರಿಗೆ ವಸತಿ ನೀಡಿತ್ತು ಸರಕಾರ. ಕಷ್ಟ ನಷ್ಟ ಅನುಭವಿಸಿದವರು ನಾವು. ಇಬ್ಬರ ಕುಟುಂಬದವರಲ್ಲಿ ಸಾವು ನೋವು ಸಾಕಷ್ಟು ಆಗಿತ್ತು ದೇಶದ ವಿಭಜನೆಯಿಂದ. ನನ್ನ ಹೆಂಡತಿಯ ಮನೆಯವರಿಗೆ ನಮಗಿಂತ ಹೆಚ್ಚು ಕಷ್ಟ ಒದಗಿತ್ತು. ಅವಳಿಗೆ ತಾಯಿ ಇರಲಿಲ್ಲ. ತಂದೆ ಮರುಮದುವೆ ಮಾಡಿಕೊಳ್ಳಲಿಲ್ಲ. ನಾವು ಒಂದೇ ಬೀದಿಯಲ್ಲಿದ್ದರಿಂದ, ನಮ್ಮ ಪರಿಚಯ ಚೆನ್ನಾಗಿಯೇ ಇತ್ತು. ಅವಳ ತಂದೆ ತನ್ನ ಮಗಳ ಲಗ್ನದ ಪ್ರಸ್ತಾಪ ಮಾಡಿದಾಗ, ನನ್ನ ತಂದೆತಾಯಿ ಒಡನೆಯೇ ಒಪ್ಪಿದ್ದರು. ನಾನು ಒಪ್ಪಿದೆ. ಆದರೆ ಹುಡುಗಿಯೇ ಒಪ್ಪಲಿಲ್ಲ!"

ಮಾತು ನಿಲ್ಲಿಸಿ, ಒಳಗೆ ಹೋಗಿ, ಪಾನ್ ಬಾಯಿಗೆ ಹಾಕಿಕೊಂಡು, ಜಗಿಯುತ್ತಾ ಬಂದ.

"ಹುಡುಗಿಗೆ ಹುಡುಗನ ಮೇಲೆ ಆಸೆ ಇತ್ತು. ಆದರೆ ಮದುವೆ ಬೇಡವಾಗಿತ್ತು!"

ನಗಲಿಕ್ಕೆ ಶುರುಮಾಡಿದ. ಅವನು ನಗಲಿಕ್ಕೆ ಶುರು ಮಾಡಿದರೆ, ನೋಡಿದವರು ಸುಮ್ಮನಿರಲಿಕ್ಕೆ ಸಾಧ್ಯವೆ?

ನಾನು ನಕ್ಕೆ! ಹಗುರವಾಗಿ ಮೆಲ್ಲನೆ ನಕ್ಕೆ!

"ನಿಮಗೆ ಹುಡುಗಿಯ ಮೇಲೆ ಆಸೆ, ಪ್ರೀತಿ ಇರಲಿಲ್ಲವೇ?"

"ಆಸೆ ಇತ್ತು. ಆಸೆ ಇದ್ದ ಮೇಲೆ ಪ್ರೀತಿ ಇರಲೇ ಬೇಕಲ್ಲಾ!"

ಆಸೆ ಇದ್ದ ಮೇಲೆ ಪ್ರೀತಿ ಇರಲೇ ಬೇಕು! ಆಸೆ ಎಂದರೇನು? ಪ್ರೀತಿ ಎಂದರೇನು? ಪ್ರೀತಿ ಮಾಡಲಿಕ್ಕೆ ಮನದಲ್ಲಿ ಆಸೆ ಇರಬೇಕೆ? ಆಸೆಗೂ ಪ್ರೀತಿಗೂ ಯಾವ ಸಂಬಂಧ?

"ಅದೂ ಅಲ್ಲದೇ, ಪುಸ್ತಕ, ಸಿನಿಮಾ, ಪ್ರೇಮವಾಗಿರಲಿಲ್ಲ ನನ್ನ ಪ್ರೇಮ..... ನನ್ನ ಹೃದಯ ಹೇಳಿತು..... ಅವಳನ್ನು ಕಂಡರೆ, ನೋಡಿದರೆ, ನೆನೆದರೆ, ಒಂದು ಬಗೆ ಆಸೆ, ಬಯಕೆ, ಚಪಲ ಉಂಟಾಗುತ್ತಿತ್ತು. ಅವಳೊಡನೆ ಸಮಯ ಕಳೆದಾಗಲೆಲ್ಲಾ ಮನಸ್ಸು ಆನಂದಗೊಳ್ಳುತ್ತಿತ್ತು. ಆನಂದವಾಗುತ್ತಿತ್ತು ಅಂದ ಮೇಲೆ ಅವಳ ಮೇಲೆ ಪ್ರೀತಿ ಇತ್ತು ಎಂದು ಹೇಳಬಹುದು! ಅಲ್ಲವೇ?"

ಪ್ರೇಮ-ಪ್ರೀತಿ ಎಂದರೇನು?

ಇದೊಂದು ಹತೋಟಿಯಿಲ್ಲದ, ಅತಿರೇಕದ ಭಾವನೆ ಎನ್ನಬಹುದೇ? ಬರೀ ಹೃದಯ ಹಾಡಿ, ಮಿದುಳು ಕೆಲಸ ಮಾಡದಿದ್ದಾಗ, ಪ್ರೇಮರಾಗ ನುಡಿಸುತ್ತದಂತೆ! ಹುಚ್ಚೆದ್ದು ಕುಣಿದು ನಾಗಾಲೋಟದಿಂದ ಓಡುವ ಈ ಅತಿರೇಕದ ಭಾವನೆ ಕಪೂರ್ ಮತ್ತು ಅವನ ಹೆಂಡತಿಗಿತ್ತೇ? ಅಥವಾ ಅವರ ಪ್ರೇಮ ಒಂದು ಬಂಧನದ ಭಾವನೆಯಾಗಿತ್ತೆ? ಎರಡು ಜೀವಿಗಳ ಒಂದುಗೂಡಿಸುವ, ಬೆಸುಗೆಯಾಗಿಸುವ ಭಾವನೆ ಗಳೇ?

"ಮದುವೆ ಬೇಡ ಎಂದವಳು, ಮದುವೆಗೆ ಒಪ್ಪಿದಳೇಕೆ?" ಮಾತನ್ನು ಮದುವೆಯ ಕಡೆ ತಿರುಗಿಸಿದೆ.

"ಅವಳೊಂದು ಕಂಡಿಶನ್ ಹಾಕಿದಳು. ಮದುವೆಯಾದ ಮೇಲೆ ಅಮೇರಿಕಾಕ್ಕೆ ಹೋಗಬೇಕೆಂದು!"

"ಅವಳಿಗೆ ಯಾಕೆ ಅಮೇರಿಕಾದ ಹುಚ್ಚು?"

"ಅಮೇರಿಕದ ಮೇಲೆ ಹುಚ್ಚಲ್ಲ! ನಮ್ಮ ದೇಶದ ಬಗ್ಗೆ ರಚ್ಚು!"

ದೇಶದ ಬಗ್ಗೆ ಒಲವು ಇರದಿದ್ದರೂ ರಚ್ಚು ಯಾಕೆ ತೋರಿಸಬೇಕು? ಇದೆಂತಹ ಹುಚ್ಚುತನ!

"ದೇಶದ ಬಗ್ಗೆ ದ್ವೇಷವೇ? ಅಥವಾ ಜನರ ಬಗ್ಗೆ...."

ಮಾತು ಪೂರ್ಣಗೊಳಿಸುವ ಮುನ್ನ, ಕಪೂರ್ ನುಡಿದಿದ್ದ!

"ದೇಶದ ಬಗ್ಗೆ ಯಾಕೆ ದ್ವೇಷ? ದೇಶ ಏನು ಮಾಡೀತು? ಆದರೆ ಜನಗಳ ಬಗ್ಗೆ ಅಭಿಮಾನವಿರಲಿಲ್ಲ! ಅದು ಖಂಡಿತ!"

"ನಿನ್ನ ಬಗ್ಗೆ?"

"ಹೇಳಲು ಸಾಧ್ಯವಿಲ್ಲ! ನಾನು ಕೇಳಲು ಹೋಗುತ್ತಿರಲಿಲ್ಲ! ಆದರೆ ಅವಳ ಹೃದಯದಲ್ಲಿ ಜನರ ಬಗ್ಗೆ ಒಳ್ಳೆಯ ಅಭಿಪ್ರಾಯವಿರಲಿಲ್ಲ. ದ್ವೇಷಿಸುತ್ತಿದ್ದಳೆಂದೇ ಹೇಳಬಹುದು!"

"ಸ್ನೇಹಿತರು, ಬಂಧುಗಳು?"

"ಎಲ್ಲರ ಬಗ್ಗೆ!"

"ತಂದೆ-ತಾಯಿ?"

ನನ್ನ ಕುತೂಹಲ ವಿಷದಂತೆ ಏರುತ್ತಾ ಹೋಗಿತ್ತು.

"ತಂದೆಯ ಬಗ್ಗೆ ಹೇಳಿಕೊಳ್ಳುವ ಅಭಿಮಾನವಿರಲಿಲ್ಲ. ಗೌರವವಿತ್ತು-ಹಿರಿಯರೆಂಬ ಕಾರಣ."

"ತಾಯಿ?"

"ತಾಯಿ ಸತ್ತು ಹೋಗಿದ್ದರು."

"ಯಾವಾಗ?"

ಒಂದು ಕ್ಷಣ ಸುಮ್ಮನಾದ ಕಪೂರ್! ಅವನ ಮುಖದಲ್ಲಿದ್ದ ನಗೆ ಮಾಯವಾಗಿತ್ತು. ಉತ್ತರ ಕೊಡಲು ಹಿಂಜರಿಯುತ್ತಿದ್ದುದು ಗೋಚರವಾಯಿತು. ಇದರಲ್ಲಿ ಏನೋ ಕೌತಕವಿದೆ. ಅರಿಯಲೇಬೇಕೆಂಬ ಉತ್ಕಟ ಆಸೆ ಉಂಟಾಯಿತು.

"ಯಾವಾಗ? ಹೇಗೆ?"

ಪುನಃ ಕೇಳಿದೆ ಪ್ರಶ್ನೆ. ವಕೀಲ ಕೇಳುವ ರೀತಿಯಲ್ಲಿ.

"ಪಾಕಿಸ್ತಾನದಿಂದ ನಿರಾಶ್ರಿತರಾಗಿ ಬರುವಾಗ, ಅವಳ ತಾಯಿಯ ರೇಪ್ ಆಗಿ, ಕೊಲೆಯಾಗಿ ಹೋಯಿತು!"

# 11

"ನಾನು ಡಾ.ಕಾಲ್ರಾ!"

ನಮಸ್ಕರಿಸಿ, ಒಳಗೆ ಬಂದು ಕುಳಿತ ಸುಮಾರು ನಾಲ್ವತ್ತು ವರ್ಷ ವಯಸ್ಸಿನ ಬಿಳಿ-ಕೆಂಪು ಮಿಶ್ರಿತ ವ್ಯಕ್ತಿ. ಕಣ್ಣಿಗೆ ಕನ್ನಡಕ ಹಾಕಿಕೊಂಡಿದ್ದ. ಮುಂಭಾಗದ ತಲೆಕೂದಲು ಮಾಯವಾಗಿ, ಅರ್ಧ ತಲೆ ಬೋಳಾಗಿ, ತಲೆಯ ಮೇಲಿದ್ದ ಲೈಟ್‌ನ ದೆಸೆಯಿಂದ ಮಿಂಚಿ ಮಿನುಗುತ್ತಿತ್ತು. ಎತ್ತರದ ಭವ್ಯ ವ್ಯಕ್ತಿ. ನುಣ್ಣಗೆ ಮೀಸೆ, ಗಡ್ಡ ಬೋಳಿಸಿ, ಕಾಲೇಜ್ ಪ್ರೊಫೆಸರ್ ತರಹ ಕಂಡು ಬಂದು, ಕೈಯಲ್ಲಿದ್ದ ಸಣ್ಣ ಬ್ರೀಫ್ ಕೇಸ್ ನೋಡಿ, ಹಣದ ಕಟ್ಟನ್ನೇ ತಂದು ಮೇಜಿನ ಮೇಲೆ ಇಟ್ಟು, ಡಿಪಾಸಿಟ್ ಕೊಡುವ ಲಕ್ಷಾಧಿಪತಿ ಇವ ಎಂದು ಮನದಲ್ಲಿ ಹರ್ಷಿತನಾದೆ. ಹೊಟ್ಟೆ ಡೀ.ಎಮ್.ನ ತಲೆ ಮೇಲೆ ಹೊಡೆದಂತೆ ಈ ಡಿಪಾಸಿಟ್ ಗಂಟು ಮೂಟೆ ಹೊಡಿದಿದ್ದೇನೆ ಎಂದು ಹೇಳಬೇಕೆನ್ನಿಸಿತು.

"ಕುಳಿತುಕೊಳ್ಳಿ" ಎಂದು ಉಪಚರಿಸಿದೆ. ಮುಂದೆ ನೀಡಿದ ಅವನ ಹಸ್ತವನ್ನು ಹಿಡಿದು ಕುಲುಕಿದೆ.

ಕುರ್ಚಿಯಲ್ಲಿ ಕುಳಿತು, ಬ್ರೀಫ್‌ಕೇಸನ್ನು ಮೇಜಿನ ಮೇಲಿಟ್ಟು, ಅದರ ಬಾಯನ್ನು ತೆರೆದ. ನನಗೋ ಆತುರ. ಎಷ್ಟು ಲಕ್ಷ ನೋಟಿನ ಕಟ್ಟನ್ನು ಹೊರತೆಗೆದು, ಠೇವಣಿ ಎಷ್ಟು ವರ್ಷಕ್ಕೆ ನೀಡುತ್ತಾನೆಂದು ಕಣ್ಣು ಬಾಯಿ ಅಗಲವಾಗಿ ತೆರೆದು ನೋಡುತ್ತಿದ್ದೆ. ಈ ಬ್ರೀಫ್‌ಕೇಸ್ ಪೆಟ್ಟಿಗೆ ನನ್ನ ಭಾಗ್ಯದ ಪೆಟ್ಟಿಗೆಯೇ ಆಗಿದೆ ಎಂದು ನಾನು ಯೋಚಿಸುತ್ತಾ ಇರುವಾಗಲೇ ಅವನು ಒಂದು ಟೈಪ್ ಮಾಡಿದ ಪೇಪರ್‌ನ್ನು ತನ್ನ ಪೆಟ್ಟಿಗೆಯಿಂದ ಹೊರತೆಗೆದು, ನನ್ನ ಮುಂದೆ ಇಟ್ಟ. ಪೇಪರ್‌ನ್ನು ಕೈಗೆ ತೆಗೆದು ಕೊಂಡು ಅದನ್ನು ಓದಿದೆ.

'ಡಾ. ಕಾಲ್ರಾ, ಅಕೌಂಟೆಂಟ್, ಕೇಂದ್ರ ಕಛೇರಿಯಿಂದ ನಿಮ್ಮ ಶಾಖೆಗೆ ವರ್ಗಾಯಿಸಲಾಗಿದೆ....... ಇತ್ಯಾದಿ.'

ಅವನ ಮುಖವನ್ನು ನೋಡಿದೆ. ಹಲ್ಲು ಕಿರಿಯುತ್ತಾ ಕುಳಿತಿದ್ದ ಈ ಆಸಾಮಿ, ಪಂಜಾಬೀ ಬ್ಯಾಂಕ್‌ನ ಅಧಿಕಾರಿ. ಆ ಬ್ಯಾಂಕ್‌ನ್ನು ನಮ್ಮ ಬ್ಯಾಂಕ್ ತೆಗೆದುಕೊಂಡ ಮೇಲೆ, ಸ್ವಲ್ಪ ಕಾಲ ನಮ್ಮ ಬ್ಯಾಂಕ್‌ನ ಕೇಂದ್ರ ಕಛೇರಿಯಲ್ಲಿ ಕೆಲಸ ಮಾಡಿದ್ದಾದ ಮೇಲೆ, ನಮ್ಮ ಶಾಖೆಗೆ ವರ್ಗ ಮಾಡಿದ್ದರು.

"ನೋಡಿ ಮಿಸ್ಟರ್ ಕಾಲ್ರಾ! ನೀವು....."

"ಡಾಕ್ಟರ್ ಕಾಲ್ರಾ ಸಾಬ್! ಡಾಕ್ಟರ್!"

ನನ್ನ ಮಾತನ್ನು ಮೊಟಕುಗೊಳಿಸಿ ಹೇಳಿದ ಡಾ. ಕಾಲ್ರಾ.

"ನೋಡಿ ಡಾಕ್ಟರ್ ಕಾಲ್ರಾ! ನೀವು ಯಾವ ಯಾವ ಶಾಖೆಗಳಲ್ಲಿ ಕೆಲಸ ಮಾಡಿದ್ದೀರಿ?"

"ಯಾವ ಶಾಖೆಗಳಲ್ಲಿ ಕೆಲಸ ಮಾಡಿಲ್ಲ!"

"ಅಂದರೆ?"

"ಸರ್ವೀಸ್ ಎಲ್ಲಾ ಹೆಡ್ ಆಫೀಸ್‌ನಲ್ಲೇ ಆಯಿತು."

"ಹೆಡ್‌ಆಫೀಸ್‌ನಲ್ಲಿ ಏನು ಕೆಲಸ ಮಾಡುತ್ತಿದ್ದೀರಿ?"

"ಸಿಕ್ ಲೀವ್ ಬೇಕಾದ ನೌಕರರಿಗೆ ಡಾಕ್ಟರ್ ಸರ್ಟಿಫಿಕೇಟ್ ಕೊಡುತ್ತಿದ್ದೆ!"

ನನ್ನ ಹಣೆಯ ಮೇಲಿನ ನರ ಉಬ್ಬಿಕೊಂಡಿತು.

"ಡಾಕ್ಟರ್ ಅಂದರೆ ಮನುಷ್ಯರ ಖಾಯಿಲೆ ಗುಣ ಪಡಿಸುವ ಡಾಕ್ಟರ್ ಏನು?"

"ಹೌದು!"

"ನಿಮ್ಮ ಬ್ಯಾಂಕ್‌ಗೆ ಡಾಕ್ಟರ್ ಅವಶ್ಯಕತೆ ಏಕಾಯಿತು?"

"ಡಾಕ್ಟರ್‌ಕೆ ಓದುತ್ತಿದ್ದಾಗಲೇ ನಾನು ಕೆಲಸಕ್ಕೆ ಸೇರಿದೆ. ಸ್ವಲ್ಪ ದಿವಸ ಕೆಲಸ ಮಾಡಿದ ಮೇಲೆ ರಜೆ ಕೊಟ್ಟರು ಓದಲಿಕ್ಕೆ. ಓದಿದೆ. ಪಾಸ್ ಆಯಿತು, ಮತ್ತೆ ಕೆಲಸಕ್ಕೆ ವಾಪಸ್ಸಾದೆ."

"ನೀವು ಪ್ರಾಕ್ಟೀಸ್ ಮಾಡದೇ ಬ್ಯಾಂಕ್ ಕೆಲಸಕ್ಕೆ ಏಕೆ ಸೇರಿದಿರಿ?"

"ನಾನು ಪ್ರಾಕ್ಟೀಸ್ ಮಾಡುತ್ತಾ ಇದ್ದೇನಲ್ಲಾ!"

"ಎಲ್ಲಿ?"

"ಬ್ಯಾಂಕ್‌ನಲ್ಲಿ!"

ನನ್ನ ತಲೆ ಕೆಟ್ಟು ನೂರು ಹೋಳು ಆಗುವ ಹಾಗೆ ಆಯಿತು. ತಲೆ ಪಟಪಟ ಎಂದು ನೋವಿನಿಂದ ಹೊಡೆದುಕೊಳ್ಳತೊಡಗಿತು. ತಲೆಯನ್ನು ಗಟ್ಟಿಯಾಗಿ ಎರಡೂ ಕೈಯಿಂದ ಹಿಡಿದುಕೊಂಡೆ!

"ತಲೆ ನೋವಾ ಸಾಬ್?"

"ಹೌದು!" ಎಂದೆ ನರಳುತ್ತಾ.

"ತೆಗೆದುಕೊಳ್ಳಿ, ಈ ಮಾತ್ರೆನಾ!"

ಮಾತ್ರೆಯೊಂದನ್ನು ನನ್ನ ಕೈಗೆ ಇತ್ತ.

ಡಾಕ್ಟರ್ ಕಾಲ್ರಾ ತನ್ನ ಪ್ರಾಕ್ಟೀಸ್‌ನ್ನು ಪ್ರಪ್ರಥಮವಾಗಿ, ನನ್ನ ಶಾಖೆಯಲ್ಲಿ ನನ್ನ ಮೇಲೆ ಶುರುಮಾಡಿದ್ದ!

ಮಾತ್ರೆಯನ್ನು ಪಕ್ಕದಲ್ಲಿ ಇರಿಸಿ, ಅಕೌಂಟೆಂಟ್ ವರ್ಮಾನನ್ನು ಕರೆದು,

ಕಾಲ್ರಾನನ್ನು ಅವನಿಗೆ ಪರಿಚಯಿಸಿ, ಬ್ಯಾಂಕ್‌ನ ಇತರ ನೌಕರರಿಗೆ ಪರಿಚಯಿಸಲಿಕ್ಕೆ ಹೇಳಿದೆ.

ಫೋನ್ ಕೈಗೆ ತೆಗೆದುಕೊಂಡು, ಕೇಂದ್ರ ಕಛೇರಿಯ ಡೀ.ಎಮ್.ನನ್ನು ಕೇಳಿ ಅವರಿಗೆ ನನ್ನ ಅಹವಾಲನ್ನು ಹೇಳಿಕೊಂಡೆ.

"ನನ್ನ ಶಾಖೆಗೆ ಡಾಕ್ಟರ್‌ರ ಅವಶ್ಯಕತೆ ಇರಲಿಲ್ಲ ಸಾರ್!" ಎಂದೆ.

"ನಿಮ್ಮ ಶಾಖೆ ಕಾಯಿಲೆಯಿಂದ ನರಳುತ್ತಾ ಇದೆ ಅಂತ ನೀವೇ ಹೇಳಿದರಲ್ರೀ!"

ತನ್ನ ಜೋಕ್‌ಗೆ ತಾನೇ ಗಹಗಹಿಸಿ ನಕ್ಕ ಆತ!

"ನಮ್ಮ ಶಾಖೆಯ ಕಾಯಿಲೆಗೆ ಡಾಕ್ಟರ್‌ರ ಅವಶ್ಯಕತೆ ಇಲ್ಲ; ಬ್ಯಾಂಕಿಂಗ್‌ನಲ್ಲಿ ಪರಿಣತನಾದ ಒಬ್ಬ ಒಳ್ಳೆಯ ಅಧಿಕಾರಿ ಬೇಕು."

ಗಡುಸಾಗಿ ಹೇಳಿದೆ.

"ನೀವು ಒಬ್ಬ ದಕ್ಷ ಅಧಿಕಾರಿಯೆಂದು ಹೆಸರುಗಳಿಸಿದ್ದೀರಿ! ಈ ಡಾಕ್ಟರ್‌ನ್ನು ನಿಭಾಯಿಸಲಿಕ್ಕೆ ಆಗುವುದಿಲ್ಲವೇ?"

"ಗುಡ್ ಬಾಯ್ ಸಾರ್!"ಎಂದು ಫೋನ್ ಕಡಿದು ಹಾಕಿದೆ.

ನನ್ನ ತಲೆ ನೋವು ಜಾಸ್ತಿಯಾಗತೊಡಗಿತ್ತು. ಪಕ್ಕದಲ್ಲಿ ಇರಿಸಿದ್ದ ಮಾತ್ರೆಯನ್ನು ನೋಡಿದೆ. ಅದು ಪಕಪಕನೆ ನಗುವಂತೆ ತೋರಿತು. ಕೋಪದಿಂದ ಅದನ್ನು ನುಂಗುವಂತೆ ನೋಡಿದೆ. ನೀರು ತರಲಿಕ್ಕೆ ಕಾಲಿಂಗ್ ಬೆಲ್ ಹೊಡೆದೆ. ಜಾಟ್ ಜವಾನ ಬಂದ. ಇವನೆಲ್ಲಿ ನೀರು ತರುತ್ತಾನೆ ಎಂದು ಯೋಚಿಸುತ್ತಾ ಇರುವಾಗಲೇ, ನನ್ನ ಕೈಯಲ್ಲಿದ್ದ ಮಾತ್ರೆ ನೋಡಿದ ಅವನು,

"ನೀರು ಬೇಕಾ ಸಾಬ್!" ಎಂದ.

ಅವನ ಮುಖವನ್ನೇ ಮಿಕ ಮಿಕ ನೋಡಿದೆ. ಬೇಕು ಎಂದು ಹೇಗೆ ಹೇಳಲಿ? 'ಅಂಗೈ ತೋರಿಸಿ ಅವಲಕ್ಷಣ' ಮಾಡಿಸಿಕೊಂಡಿದ್ದಾಗಿದೆ ಒಂದು ಸಲ. ಮತ್ತೊಮ್ಮೆ ಈ ಮಾತ್ರೆ ಹಿಡಿದ ಅಂಗೈ ತೋರಿಸಿ ಮುಖದ ಲಕ್ಷಣ, ಮರ್ಯಾದೆ ಕಳೆದುಕೊಳ್ಳುವುದೇ?

ಹೊರಗೆ ಹೋದ ಜಾಟ್ ಜವಾನ, ನನ್ನ ಜವಾಬಿಗೆ ಕಾಯದೆ, ಎರಡೇ ನಿಮಿಷದಲ್ಲಿ ವಾಪಸ್ಸಾದ. ಅವನ ಕೈಯಲ್ಲಿ ಒಂದು ಕಪ್ಪಿತ್ತು. ಅದರಲ್ಲಿ ನೀರಿತ್ತು!

"ಕುಡೀರಿ ಸಾಬ್!" ಎಂದು ಉಪಚರಿಸಿದ.

ಅವನ ಉಪಚಾರದ ಮಾತು, ಮೃದುವಾಗಿತ್ತು.

ನನ್ನ ಉರಿಮನಸ್ಸಿಗೆ ಹಾಲೆರೆದಂತಾಗಿತ್ತು. ತಲೆನೋವು ಓಡಿಹೋಗಿತ್ತು!

ಲೋಟವನ್ನು ಬದಿಗಿರಿಸಿ, ಅದರ ಪಕ್ಕದಲ್ಲೇ ತಲೆನೋವಿನ ಮಾತ್ರೆಯನ್ನು ಇರಿಸಿದೆ.

"ತುಂಬಾ ಥ್ಯಾಂಕ್ಸ್!" ಎಂದು ಜಾಟ್‌ಗೆ ಧನ್ಯವಾದ ಅರ್ಪಿಸಿದೆ.

ಅಕೌಂಟೆಂಟ್ ವರ್ಮಾ ಓಡೋಡಿ ಬಂದ ಒಳಗೆ.

"ಏನಾಯಿತು?"

"ಕಾಲ್ರಾನನ್ನು ನನಗೇಕೆ ಅಂಟಿಸಿದಿರಿ?"

"ಏಕೆ ಏನಾಯಿತು?"

"ಯಾರಿಗೆ ಏನು ಕಾಯಿಲೆ ಈ ಶಾಖೆಯಲ್ಲಿ?" ಎಂದು ಕೇಳಿ ನೌಕರರನ್ನೆಲ್ಲಾ ಕಲೆ ಹಾಕಿ ಅವರ ದೇಹ ಪರೀಕ್ಷೆ ಶುರುಮಾಡಿಬಿಟ್ಟಿದ್ದಾನೆ!"

ಒಳ್ಳೇ ಕಾಲ್ರಾ ಮಾರಿ ತಗಲುಕೊಂಡಿಬಿಡುತ್ತಲ್ಲಾ ಈ ಶಾಖೆಗೆ ಎಂದು ಹಲುಬಿದೆ. ಕಾಲ್ರಾ ಆದಮೇಲೆ ಇನ್ನು ಯಾವಾಗ ಪ್ಲೇಗ್ ಮಾರಿ ನಮಗೆ ಅಂಟುತ್ತದೋ ಎಂದು ಭಯವಾಯಿತು.

"ಕರೀರಿ ಕಾಲ್ರಾನನ್ನು?"

ಕಾಲ್ರಾ ಬಂದ. ನನ್ನ ಎದುರು ಠೀವಿಯಲ್ಲಿ ಕುಳಿತ.

"ಕರೆದಿರಾ ಸಾಬ್?" ವಿನಯದ ಮೂರ್ತಿಯಾಗಿದ್ದ.

"ಹೌದು! ಈ ಶಾಖೆಯಲ್ಲಿ ಬ್ಯಾಂಕ್ ಕೆಲಸ ಮಾಡಬೇಕೇ ವಿನಹಾ, ಡಾಕ್ಟರ್ ಕೆಲಸ ಮಾಡಬೇಕಾದ್ದಿಲ್ಲ!"

ಗಡುಸಾಗಿ, ಆದಷ್ಟು ಧ್ವನಿ ಕುಗ್ಗಿಸಿ ಹೇಳಿದೆ.

ಹೊರಗಡೆ, ನೌಕರರೆಲ್ಲಾ ನೆರೆದಿದ್ದರು. ತಮಾಷೆ ನೋಡಲಿಕ್ಕೆ. ಅವರಿಗೆ ಚಲ್ಲಾಟವಾಗಿದ್ದರೆ, ನನಗೆ ಕಾಲ್ರಾನಿಂದ ಪ್ರಾಣಸಂಕಟ ಒದಗಿತ್ತು.

"ಯಾರೇ ಆಗಲೀ ನೋವಿನಿಂದ, ಕಾಯಿಲೆಯಿಂದ ನರಳಿ, ನನ್ನ ಬಳಿ ಬಂದರೆ, ಡಾಕ್ಟರ್ ಆದ ನಾನು ಅವರಿಗೆ ಗುಣ ಪಡಿಸುವುದು ನನ್ನ ಕರ್ತವ್ಯ. ಹೀಗಿರು ವಾಗ, ನಮ್ಮವರೇ ಆದ, ನನ್ನ ಸಹೋದ್ಯೋಗಿಗಳಿಗೆ ನಾನು ಸಲಹೆ ನೀಡಿದರೆ ಏನು ತಪ್ಪು?"

ನನ್ನ ರಕ್ತದ ಒತ್ತಡ ಏರತೊಡಗಿತು. 'ನಾನ್ಯಾಕೆ ಸುಮ್ಮನಿರಲಿ, ನಿನ್ನ ಜೊತೆಗೆ ನಾನೂ ಬರುತ್ತೇನೆ' ಎಂದು ತಲೆನೋವು ಏರತೊಡಗಿತು.

"ಇದು ಬ್ಯಾಂಕ್, ನಿಮ್ಮ ಕ್ಲಿನಿಕ್ ಅಲ್ಲ! ಬ್ಯಾಂಕ್‌ನಲ್ಲಿ ಬ್ಯಾಂಕ್ ಕೆಲಸ ಮಾಡಿ, ಡಾಕ್ಟರಿಕೆ ಮಾಡಬೇಡಿ! ಹಾಗೆ ಡಾಕ್ಟರಿಕೆ ಮಾಡಬೇಕೆಂಬ ಆಸೆ ಇದ್ದರೆ ಹೇಳಿ, ಕೆಲಸ ಬಿಟ್ಟು, ಕ್ಲಿನಿಕ್ ತೆಗೆಯಿರಿ, ನಾನು ಸಾಲ ಕೊಡುತ್ತೇನೆ. ನಿಮ್ಮ ಕ್ಲಿನಿಕ್‌ಗೆ ನಾವೆಲ್ಲಾ ಬೆಂಬಲ ಕೊಡುತ್ತೇವೆ."

ಕಾಲ್ರಾನ ಕೆಂಪು ಮುಖ ಮತ್ತಷ್ಟು ಕೆಂಪಗಾಗಿತ್ತು. ಕೋಪ ಬಂದ ಹಾಗೆ ಇತ್ತು.

"ನನಗೆ ಮೊದಲೇ ಸೂಚನೆ ಕೊಟ್ಟಿದ್ದರು!"

ನಿಧಾನವಾಗಿ ಹೇಳಿದ.

"ಏನು ಸೂಚನೆ ನೀಡಿದ್ದರು?"

"ನಿಮಗೆ ಬ್ಲಡ್ ಪ್ರೆಷರ್‌ನ ಕಾಯಿಲೆ ಇದೆ, ನಿಮಗೆ ಇಲಾಜಿನ ಅವಶ್ಯಕತೆ ಇದೆ, ಔಷಧ ಉಪಚಾರದ ಅವಶ್ಯಕತೆ ಇದೆ ಅಂತ ಹೇಳಿದ್ದರು!"

ನನ್ನ ಕೋಪ ಭುಗಿಲ್ ಎಂದು ಹೊರಹೊಮ್ಮಿತು.

"ಬ್ಯಾಂಕ್ ಕೆಲಸ ಬಿಟ್ಟು ಏನಾದರು ಬೇರೇ ಕೆಲಸ ಈ ಶಾಖೆಯಲ್ಲಿ ಮಾಡಿದ್ದು ಕಂಡು ಬಂದರೆ ನಾನು ನಿಮಗೆ ಏನು ಮಾಡುತ್ತೇನೆ ಎಂಬುದನ್ನು ಈಗ ಹೇಳುವುದಿಲ್ಲ, ಮಾಡಿ ತೋರಿಸುತ್ತೇನೆ."

ನನ್ನ ಬೆದರಿಕೆಗೆ ಅವ ಮಣಿಯಲೇ ಇಲ್ಲ! ನಗುತ್ತಲೇ ಉತ್ತರ ಕೊಟ್ಟ.

"ಬ್ಲಡ್ ಪ್ರಷರ್ ಇರುವವರಿಗೆ ಕೋಪ ಜಾಸ್ತಿ! ನಿಮ್ಮ ಕೋಪ ಕಡಿಮೆಯಾಗಲಿ, ಆಮೇಲೆ ಮಾತನಾಡೋಣ!"

ಎದ್ದು ಹೊರಟುಹೋದ. ಹೊರಗಡೆ, ಸುದ್ದಿಸಂತೆ ಸೇರಿತು. ಎಲ್ಲರೂ ಮಾತನಾಡುವವರೆ! ನಗಾಡುವವರೆ! ಕಿರಿಚಾಡುವವರೆ!

ನನ್ನ ಮನಸ್ಸು ಸಿಟ್ಟಿನಿಂದ ಕುದಿಯಿತು. ಈ ಕಾಲ್ರಾ ಪಿಡುಗನ್ನು ಹೇಗೆ ಸಂಭಾಳಿಸುವುದು? ಒಂದರ ಮೇಲೊಂದರಂತೆ, ಸಾಂಕ್ರಾಮಿಕ ರೋಗದ ಹಾಗೆ, ಆತಂಕಗಳು ನನ್ನ ಮೇಲೆ ವಕ್ರಿಸುತ್ತಾ ಇವೆಯಲ್ಲಾ!

"ಬ್ಲಡ್ ಪ್ರಷರ್ ಇರುವವರಿಗೆ ಕೋಪ ಜಾಸ್ತಿ!" ಕಾಲ್ರಾ ಹೇಳಿದರಲ್ಲಿ ಅತಿಶಯವಿರಲಿಲ್ಲ! ನನಗೆ ರಕ್ತ ಒತ್ತಡವಿರಲೇ ಬೇಕು! ಆದ್ದರಿಂದ ಈ ಪರಿಯ ಕೋಪ ತಾಪ! ಸಮಾಧಾನಿಯಾದವ, ತಾಳ್ಮೆಯಿಂದಿರುವ ಬಾಳಿಯಾನು! ನಾನು ಏಕೆ ಕೋಪ ಮಾಡಿಕೊಳ್ಳಬೇಕು? ಕೋಪತಾಪಗಳ ವೈಭವ ನನಗೇತಕ್ಕೆ? ಈ ವಿಷಯದಲ್ಲಿ ನಾನು ದರಿದ್ರನಾಗಿ ಉಳಿಯುವುದು ಒಳ್ಳೆಯದಲ್ಲವೇ? ಈ ಕಾಲ್ರಾನಿಗೆ ಕಾಲರಾ, ಪ್ಲೇಗ್ ಬರಿಸುವ ಹಾಗೆ ಮಾಡಿದರೆ ಹೇಗೆ?

ಕರೆದೆ ಅಕೌಂಟೆಂಟ್ ವರ್ಮನನ್ನು.

ಅವನು ಬಂದೊಡನೆ ಹೇಳಿದೆ:

"ಕಾಲ್ರಾನಿಗೆ ಏನು ಕೆಲಸ ನೀಡಿದ್ದೀರಿ?"

"ಯಾವುದೂ ಇಲ್ಲ!"

"ಅವನಿಗೆ ಕ್ಯಾಷ್ ಡಿಪಾರ್ಟ್‌ಮೆಂಟ್‌ನಲ್ಲಿ ಕೂರಿಸಿರಿ!"

ಆದೇಶ ನೀಡಿದೆ.

ಕೆಲವೇ ನಿಮಿಷಗಳಲ್ಲಿ ಕಾಲ್ರಾ ಓಡಿಬಂದ.

"ನಾನು ಆಫೀಸ್ ಗ್ರೇಡ್‌ನವನು, ಕ್ಲರ್ಕ್ ಅಲ್ಲ! ಕ್ಯಾಷ್‌ಯರ್ ಆಗಿ ಹೇಗೆ ಕೆಲಸ ಮಾಡಲಿ?"

ಈಗ ಅವನಿಗೆ ಕೋಪ ಬಂದಿತ್ತು!

"ಆಫೀಸರ್ ಆದವರು ಯಾವ ಕೆಲಸ ಮಾಡಲಿಕ್ಕೂ ತಯಾರಾಗಿರಬೇಕು. ಹೋಗಿ ಕ್ಯಾಷ್ ಕೇಜ್‌ನಲ್ಲಿ ಕುಳಿತು ಹಣ ಎಣಿಸಿರಿ!" ಆಜ್ಞಾಪಿಸಿದೆ.

"ನೀವು ಹೇಳುವುದು ಸಾಧುವಾದುದಲ್ಲ. ನನಗೆ ಅವಮಾನ ಮಾಡಬೇಕೆಂದು ಈ ರೀತಿ ಮಾಡುತ್ತಿದ್ದೀರಿ!"

ಕೋಪ ಏರುತ್ತಾ ಹೋಗುತ್ತಿತ್ತು ಅವನಿಗೆ.

"ಅವಮಾನ? ಬ್ಯಾಂಕ್ ಆಫೀಸರ್ ಆಗಿ, ಬ್ಯಾಂಕ್ ನೌಕರಿಕೆ ಮಾಡಲಿಕ್ಕೆ ಅವಮಾನ ಆಗದೇ ಇದ್ದಮೇಲೆ, ಬ್ಯಾಂಕ್ ಕ್ಯಾಷಿಯರ್ ಆಗಲಿಕ್ಕೆ ಯಾಕೆ ಅವಮಾನ? ಅದೂ ಅಲ್ಲದೆ, ನೀವು ಪುಕ್ಕಟೆ ಕೆಲಸ ಮಾಡುತ್ತಿಲ್ಲವಲ್ಲ! ಸಂಬಳ ಕೊಡುತ್ತಾರೆ ಬ್ಯಾಂಕ್‌ನವರು!"

ಚುಡಾಯಿಸಿದೆ ಅವನನ್ನು.

"ಸಾಬ್! ಬೇರೆ ಯಾವ ಕೆಲಸ ಬೇಕಾದರೂ ಹೇಳಿ ಮಾಡುತ್ತೇನೆ! ಈ ಕ್ಯಾಷ್ ಕೇಜ್‌ನಲ್ಲಿ ಕುಳ್ಳಿರಿಸಬೇಡಿ!"

ಅಂಗಲಾಚಿದ ಕಾಲ್ರಾ. ಒಂದು ದಿನದ ಮಟ್ಟಿಗೆ ಕೇಜ್‌ನಲ್ಲಿ ಕುಳ್ಳಿರಿಸಿದರೆ, ಅವನನ್ನು ಸರಿಪಡಿಸಬಹುದೆಂಬ ನಂಬಿಕೆ ಹೂಡಿತು ನನ್ನ ಮನಸ್ಸಿನಲ್ಲಿ!

"ಈ ದಿನ ಕುಳಿತುಕೊಳ್ಳಿ. ಆಮೇಲೆ ನೋಡೋಣ!" ಎಂದೆ.

ನನ್ನ ಮುಖವನ್ನೇ ತಿನ್ನುವಂತೆ ನೋಡಿದ. ಕೆಲವು ಕ್ಷಣ ಮೌನದಿಂದ ತಪಸ್ಸು ಮಾಡಿದ ಕಾಲ್ರಾ.

"ಈ ದಿನ ರಜೆ ಹಾಕಬಹುದೆ ನಾನು?"

ಕೇಳಿದ ಕಾಲ್ರಾ!

"ಈ ದಿನ ಕೆಲಸಕ್ಕೆ ಸೇರಿದ್ದಾಗಿದೆ. ಇಂದೇ ರಜೆ ಹಾಕುವ ಹಾಗಿದ್ದರೆ, ಹಾಕಿರಿ. ಆದರೆ, ಎಷ್ಟು ದಿನ ರಜೆ ಹಾಕುತ್ತೀರಿ? ಎಂದು ನೀವು ಕೆಲಸಕ್ಕೆ ಹಾಜರಾಗುತ್ತೀರೋ ಅಂದು ಕ್ಯಾಷ್ ಕೇಜಿನಲ್ಲೇ ನಿಮಗೆ ಕೆಲಸ!"

ಬಲವಂತದ ನಗೆಯನ್ನು ಮುಖದಲ್ಲಿ ತಂದು ಹೇಳಿದೆ.

ನಿಧಾನವಾಗಿ ಕಾಲೆಳೆದುಕೊಂಡು ಹೊರಕ್ಕೆ ಹೋದ ಕಾಲ್ರಾ! ಅವನಿಗೆ ಕಾಲ್ರಾ ಪಿಡುಗು ಅಂಟಿಕೊಂಡ ಹಾಗೆ ಆಗಿತ್ತು.

ಹೊರಗಡೆ ಸುದ್ದಿ ಸಂತೆಯ ಸದ್ದು ಅಡಗಿತ್ತು. ಕಾಲ್ರಾನ ಮದ್ದು ನೀಡುವಿಕೆಯ ಗದ್ದಲವೂ ಅಡಗಿತ್ತು. ಕ್ಯಾಷ್‌ಕೇಜ್‌ನ ಒಳಗೆ ಕುಳಿತು ಹಣ ಎಣಿಸುವ ಕಾರ್ಯಕ್ಕೆ ಕೈ ಹಚ್ಚಿದ್ದ ಕಾಲ್ರಾ.

ಅಕೌಂಟೆಂಟ್ ವರ್ಮಾ ಒಳಗೆ ಬಂದು ನೋಡಿ ನಸುನಗೆ ತೋರಿ,

"ಈ ಮಾತ್ರೆ ಇಲ್ಲೇ ಇಟ್ಟಿದ್ದೀರಲ್ಲಾ, ತೆಗೆದುಕೊಳ್ಳಲಿಲ್ಲವಾ?" ಎಂದು ಕೇಳಿದ.

"ಅದನ್ನು ಎತ್ತಿ ಕಿಟಕಿಯಿಂದ ಬಿಸಾಡಿ!ಬೇಡ!ಬೇಡ! ಇದನ್ನು ತೆಗೆದುಕೊಂಡು ಹೋಗಿ ಕ್ಯಾಷ್ ಕೇಜ್‌ನಲ್ಲಿರುವ ಕಾಲ್ರಾಗೆ ಕೊಡ್ರೀ, ಅವನಿಗೆ ಇದರ ಅವಶ್ಯಕತೆ ಇದೆ " ಎಂದೆ.

ವರ್ಮಾ, ಗುಳಿಗೆಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು, ಕ್ಯಾಷ್ ಕೇಜ್ ಬಳಿ ನಡೆದ!

ಅಬ್ಬಾ! ಈ ದಿನದ ಆತಂಕ, ಆಪತ್ತಿನಿಂದ ರಕ್ಷಿಸಿಕೊಂಡ ಹಾಗೆ ಆಯಿತು. ನಾಳೆಯ ಆಪತ್ತನ್ನು ನಾಳೆ ಎದುರಿಸೋಣ! ಇಂದೇಕೆ ಅದರ ಚಿಂತೆ! ಅದೂ ಅಲ್ಲದೆ, ಆಪತ್ತು ಎದುರಿಸುವುದು ರೂಢಿಯಾಗಿಬಿಟ್ಟಿದೆಯಲ್ಲವೇ? ಈ ಕಾಲ್ರಾ ಪಿಡುಗು ಬಂದಮೇಲೆ, ಅವನನ್ನು ನಿಯಂತ್ರಿಸುವುದರಿಂದ ಬೇರೆ ನೌಕರರಿಗೂ, ಇದು ಒಂದು ಉತ್ತಮ ನಿದರ್ಶನವಾಗಬಹುದಲ್ಲವೇ? ಅಧಿಕಾರಿ ಮತ್ತು ಸಾಮಾನ್ಯ ಕಾರಕೂನ-ಇಬ್ಬರಲ್ಲೂ ತಾರತಮ್ಯ ತೋರಿಸುವುದಿಲ್ಲವೆಂಬ ಅಂಶ ಅವರ ಮನಸ್ಸಿಗೆ ಬಂದರೆ, ಎಲ್ಲರಿಗೂ ಒಳ್ಳೆಯದೇ! ಕೆಲಸ ಮಾಡದೇ ಮೈಗಳ್ಳತನ, ಆಲಸ್ಯ, ಅಹಂಕಾರ, ಅಲಕ್ಷ್ಯ, ಉದಾಸೀನತೆ, ಉದ್ಧಟತನಗಳಂತಹ ಕಾಲ್ರಾ ರೋಗದಷ್ಟೇ-ಘೋರ ರೋಗ ಗಳಿಗೆ ಮದ್ದು ಇವೆ ಎಂಬುದು ಡಾ. ಕಾಲ್ರಾನಿಗೂ ತಿಳಿಸಬೇಕಾದದ್ದು ಅನಿವಾರ್ಯ ವಾಗಿತ್ತು ನನ್ನ ಪಾಲಿಗೆ.

ಅದೂ ಅಲ್ಲದೆ, ಕಾಲ್ರಾ ಪಿಡುಗನ್ನು ಎದುರಿಸಬೇಕಾದರೆ, ಸಾಕಷ್ಟು ಸಂಯಮ ಹೊಂದಿರಲೇಬೇಕಷ್ಟೆ. ನಮ್ಮ ಇಷ್ಟದ ಪ್ರಕಾರ ಅದನ್ನು ದೂರ ಮಾಡಲಿಕ್ಕೆ ಸಾಧ್ಯವೆ? ಚೀನೀ ಗಾದೆಯ ನೆನಪಿಗೆ ಬಂದಿತು. 'ಕಾಲ ಮತ್ತು ಸಂಯಮಗಳಿಂದ, ಹಿಪ್ಪು ನೇರಳೆ ಸೊಪ್ಪು ರೇಷ್ಮೆ ಬಟ್ಟೆಯಾಗುತ್ತದೆ'

ಕೇಂದ್ರ ಕಛೇರಿಯಿಂದ ತಪ್ಪಾಲು ಬಂದಿತ್ತು. ಲಕೋಟೆ ಒಡೆದು ಓದಿದೆ. ಶಾಮ್‌ಲಾಲ್‌ನ ಲೋನ್ ಪ್ರಪೋಸಲ್ ಮಂಜೂರು ಮಾಡಿದ್ದ ತಮಿಳು

ಡೀ.ಜೀ.ಎಮ್! ಪ್ರಪೋಸಲ್ ಶಿಫಾರಸ್ಸು ಮಾಡಬೇಡ ಎಂದಿದ್ದ ಇವ ಮಂಜೂರು ಮಾಡಿಬಿಟ್ಟಿದ್ದ. ರಾಜಕುಮಾರ್ ಡಿ.ಎಮ್.ನ ಪ್ರಭಾವ, ಶಕ್ತಿಯೆದುರು, ಇವನ ಆಟ ನಡೆದಿರಲಿಲ್ಲ. ಆದರೆ, ಒಂದೇ ಒಂದು ಕೊಕ್ಕೆ ಹಾಕಿಬಿಟ್ಟಿದ್ದ, ತನ್ನ ಮಂಜೂರಾತಿಯಲ್ಲಿ. ಇನ್‌ಕಮ್‌ಟ್ಯಾಕ್ಸ್ ಡಿಪಾರ್ಟಿಮೆಂಟ್‌ನಿಂದ 'ನೋ ಡ್ಯೂಸ್ ಸರ್ಟಿಫಿಕೇಟ್'ನ್ನು ಶಾಮಲಾಲ್ ಪಡೆದು, ಅದನ್ನು ಬ್ಯಾಂಕ್‌ಗೆ ಒಪ್ಪಿಸಿದ ನಂತರವೇ, ಸಾಲವನ್ನು ನೀಡಬೇಕು ಎಂದು ಒಂದು ಕಂಡೀಶನ್‌ನ ಕೊಕ್ಕೆ ಸಿಕ್ಕಿಸಿ, ಗಂಟಲಿನ ಒಳಗೆ ಅನ್ನ ಇಳಿಯದ ಹಾಗೆ ಮಾಡಿಬಿಟ್ಟಿದ್ದರು. ಇಂತಹ ಸರ್ಟಿಫಿಕೇಟ್ ಇನ್‌ಕಮ್ ಟ್ಯಾಕ್ಸ್‌ನವರು ಹೇಗೆ ನೀಡುತ್ತಾರೆ? ಶಾಮಲಾಲ್‌ನ ಮೇಲೆ ಕಳ್ಳಹಣ ಹೊಂದಿರುವ ಆಪಾದನೆ ಇರುವಾಗ, ತೆರಿಗೆ ಬಾಕಿ ಇರುವುದಿಲ್ಲ ಎಂದು ಸರ್ಟಿಫಿಕೇಟ್ ನೀಡುವುದಾದರೂ ಹೇಗೆ?

ನನ್ನ ಮನಸ್ಸು ಆನಂದದಿಂದ ಕುಣಿಯಿತು, ಈ ಜಂಜಾಟದಿಂದ ತಪ್ಪಿಸಿಕೊಂಡ ಹಾಗೆ ಆಯಿತಲ್ಲ ಎಂದು. ಶಾಮಲಾಲ್‌ನಿಗೆ ಫೋನ್ ಮಾಡಿ ವಿಷಯ ತಿಳಿಸಿದೆ. ಆತ ಯಾವ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಲಿಲ್ಲ.

"ನಮಸ್ಕಾರ ಸಾಬ್!"

ಸಾಗೂ, ನನ್ನ ಮುಂದೆ ನಗುತ್ತಾ ನಿಂತಿದ್ದ. ಬಹಳ ದಿನಗಳಿಂದ ಬ್ಯಾಂಕ್‌ಗೆ ಹಾಜರ್ ಆಗದಿದ್ದ ಸಾಗೂ ಇಂದು ಹಾಜರಾಗಿದ್ದ. ಎಲ್ಲ ತರಹದ ರಜೆಯನ್ನು ಖಾಲಿ ಮಾಡಿ, ಸಂಬಳವಿಲ್ಲದ ರಜೆಯನ್ನು ತೆಗೆದುಕೊಳ್ಳಲು ಉಪಕ್ರಮಿಸಿದ್ದ.

"ಏನು ಬೇಕು?"

ಮತ್ತೆ ನನ್ನ ಬಳಿ ಸಾಲಕ್ಕೆ ಬಂದಿದ್ದಾನೆಂದು ಬಗೆದು, ಎಚ್ಚರಿಕೆ ವಹಿಸಿದೆ.

"ನಮ್ಮ ಶಾಖೆಗೆ ಒಬ್ಬ ಡಾಕ್ಟರ್ ಬಂದಿದ್ದಾನೆ, ಡಾಕ್ಟರ್ ಕಾಲ್ರಾ!"

"ಅದಕ್ಕೆ ಏನು ಮಾಡಬೇಕು?"

"ಡಾಕ್ಟರ್ ಸರ್ಟಿಫಿಕೇಟ್‌ಗೆ ಇನ್ನು ಹಣ ಖರ್ಚು ಮಾಡಬೇಕಾದ್ದಿಲ್ಲ! ಡಾಕ್ಟರ್ ಕಾಲ್ರಾ ಪುಕ್ಕಟೆ ಸರ್ಟಿಫಿಕೇಟ್ ಕೊಡುತ್ತಾರಂತೆ!"

"ನಮ್ಮ ಬ್ಯಾಂಕ್‌ನಲ್ಲಿ ಡಾಕ್ಟರ್ ಕಾಲ್ರಾರವರ ಸರ್ಟಿಫಿಕೇಟ್‌ಗೆ ಬೆಲೆ ಇಲ್ಲ. ಅವರ ಸರ್ಟಿಫಿಕೇಟ್‌ನ ಉಪಯೋಗ ಪಟ್ಟರೆ, ಸರಕಾರಿ ಆಸ್ಪತ್ರೆಯಿಂದ ಮೆಡಿಕಲ್ ಆಫೀಸರ್‌ರವರಿಂದ ತಪಾಸಣೆ ನಡೆಸಿ ಸರ್ಟಿಫಿಕೇಟ್ ತೆಗೆದುಕೊಂಡು ಬನ್ನಿರಿ ಎಂದು ತಾಕೀತು ಮಾಡುತ್ತಾರೆ ನಮ್ಮ ಬ್ಯಾಂಕ್‌ನವರು. ಗೊತ್ತೇನು ನಿಮಗೆ?"

ನನ್ನ ಬೆದರಿಕೆಗೆ ಸಾಗೂ ಬೆದರಿದ.

"ಥತ್ ತೇರಿ! ಇದು ಬದ್ಮಾಶ್ ಬ್ಯಾಂಕ್! ಈ ಬ್ಯಾಂಕ್‌ನಲ್ಲಿ ಕೆಲಸ ಮಾಡು ವವರಿಗೆ ಬುದ್ಧಿ ಇಲ್ಲ!"

ಬಾಗಿಲೆಳೆದು ಹೊರಗೆ ಹೋದ.

ಸಾಯಂಕಾಲ ಶಾಖೆ ಮುಚ್ಚುವ ಸಮಯದಲ್ಲಿ, ಕಾಶ್ಮೀರೀ ನೇತಾ ಸಹಾನೀ ಒಳಗೆ ಬಂದು, ನನ್ನ ಮುಂದೆ ಕುರ್ಚಿ ಎಳೆದು ಕುಳಿತ.

ಈ ದಿನದ ದೂರು ಏನು ತಂದಿದ್ದೀಯಾ? ಎಂದು ಕೇಳುವ ರೀತಿಯಲ್ಲಿ ಅವನ ಮುಖವನ್ನೇ ದಿಟ್ಟಿಸಿ ನೋಡಿದೆ.

"ಡಾಕ್ಟರ್ ಕಾಲ್ರಾರವರ ಕೇಸ್ ಸಾಬ್?" ಎಂದ.

"ಏನಾಗಿದೆ ಕಾಲ್ರಾನಿಗೆ? ಸರಿಯಾಗಿದ್ದನಲ್ಲಾ ಬೆಳಿಗ್ಗೆ!"

"ಐದು ನೂರು ರೂಪಾಯಿ ಕಳೆದುಕೊಂಡು ಬಿಟ್ಟಿದ್ದಾನೆ ಸಾಬ್!"

"ಯಾಕೆ, ಹೇಗೆ?"

ಅವನು ಕಳೆದುಕೊಂಡಿದ್ದರೆ ನನಗೇನು ಆಶ್ಚರ್ಯ ತರುವಂತಿರಲಿಲ್ಲ!

"ಹಣ ತೆಗೆದುಕೊಳ್ಳುವಾಗ ತಪ್ಪಾಗಿರಬೇಕು. ಮೊದಲನೆಯ ದಿನವಲ್ಲವೇ? ಕ್ಯಾಷಿಯರ್ ಕೆಲಸ ಮಾಡಿ ಅಭ್ಯಾಸವಿಲ್ಲ. ಪಾಪ! ಹಣ ಕಳೆದುಕೊಂಡು ಬಿಟ್ಟ ಸಾಬ್!"

ಬೇಸರವಾಗಿತ್ತು ಸಹಾನಿಗೆ. ಎಷ್ಟಾದರೂ ಸಹೋದ್ಯೋಗಿಯಲ್ಲವೇ!

"ಮೊದಲನೆಯ ದಿನ ಅವನಿಗೆ ಕ್ಯಾಷ್ ಡಿಪಾರ್ಟ್‌ಮೆಂಟ್ ಕೊಡಬಾರ ದಿತ್ತು!"

ದೂರುವ ಧ್ವನಿಯಲ್ಲಿ ಹೇಳಿದ.

"ಎಂದು ಕುಳಿತರೂ, ಅಂದು ಅವನಿಗೆ ಮೊದಲನೆಯ ದಿನವಾಗುತ್ತಲೇ ಇತ್ತು. ಅಂದಮೇಲೆ ಇಂದಾದರೇನು, ನಾಳೆಯಾದರೇನು, ನಾಡಿದ್ದು ಆದರೇನು?"

ನಿನ್ನಷ್ಟು ಕಠಿಣ ಹೃದಯ ನಾನು ಬೇರೆಲ್ಲೂ ನೋಡಿಲ್ಲವೆಂಬಂತೆ ನನ್ನನ್ನು ನೋಡಿದ ಕಾಶ್ಮೀರಿ ನೇತಾ!

"ನೀವು ಸ್ವಲ್ಪ ಅವನ ಬಗ್ಗೆ ಕನಿಕರ ತೋರಿ ಸಹಕಾರ ನೀಡಬಹುದಾಗಿತ್ತು!"

ಮತ್ತೆ ಅದೇ ರಾಗ! ಸಹಕಾರದ ರಾಗ! ಸಹಕಾರ ನೀಡಲಿಕ್ಕೆ ಇದೇನು ಸಹಕಾರ ಸಂಘವೇ? ಇದು ಬ್ಯಾಂಕ್!

"ನಿಮಗೆ ಯಾವ ರೀತಿಯ ಸಹಕಾರ ಬೇಕು ಹೇಳಿ!"

ನಯ, ನಮ್ರತೆ ಪೋಣಿಸಿ ಧ್ವನಿಯನ್ನು ಆದಷ್ಟು ಸಿಹಿ ಜೇನುತುಪ್ಪದಲ್ಲಿ ಅದ್ದಿ, ಅದನ್ನು ನೇತಾಜೀ ಚೀಪಲಿ ಎಂದು ಅವನ ಮುಂದೆ ಇರಿಸಿದೆ.

ಅವನಿಗೂ ಆಶ್ಚರ್ಯವಾಗಿರಬೇಕು ನನ್ನ ನಯವಾದ ಧ್ವನಿ ಕೇಳಿ. ಸ್ವಲ್ಪ ಗಡಿಬಿಡಿಯಾದಂತೆ ತೋರಿದ.

"ನೀವು ಮನಸ್ಸು ಮಾಡಿದರೆ, ನಿಮಗೆ ಕಷ್ಟವಾಗುವುದಿಲ್ಲ ಸಾಬ್! ಸಮಸ್ಯೆಯನ್ನು ಬಗೆಹರಿಸಬಹುದು!" ಎಂದ.

"ಎಂತಹ ಸಮಸ್ಯೆ! ಈಗ ಸಮಸ್ಯೆ ಏನಿದೆ? ನನಗೇನೂ ಸಮಸ್ಯೆ ಕಾಣುತ್ತಿಲ್ಲವಲ್ಲ!"

ಶಾಖೆಯಲ್ಲಿ ಯಾವ ಸಮಸ್ಯೆಯೂ ನನ್ನನ್ನು ಕಾಡುತ್ತಿಲ್ಲ, ನಾನು ಹಾಯಾಗಿ ಇದ್ದೇನೆ, ಈ ಶಾಖೆಯಲ್ಲಿ ಕೆಲಸ ಮಾಡುವುದೆಂದರೆ, ತೀರ್ಥಕ್ಷೇತ್ರದಲ್ಲಿ ದೇವರ ಸೇವೆ ಮಾಡಿದ ಹಾಗೆ ಎನ್ನುವ ಧಾಟಿಯಲ್ಲಿ ಮಾತನಾಡಿದ್ದೆ.

"ಸಮಸ್ಯೆ ಏನು ಇಲ್ಲವೇ?"

"ನನಗೇನು ಅಂತಹ ಬಗೆಹರಿಸಲಾಗದ ಸಮಸ್ಯೆಗಳನ್ನು ನಾನು ಎದುರಿಸುತ್ತಿದ್ದೇನೆಂದು ತಿಳಿಯುತ್ತಿಲ್ಲ!"

ಆತಂಕವಾದಿಯಾಗಿದ್ದ ಕಾಶ್ಮೀರೀ ನಾಯಕನಿಗೆ ಆತಂಕ ಉಂಟಾಯಿತು. ಮುಖದ ತುಂಬಾ ದುಗುಡ ತುಂಬಿಕೊಂಡಿತು. ಕುಳಿತ ಕುರ್ಚಿಯಲ್ಲೇ ಮಿಸುಕಾಡಿದ. ಅತ್ತ ಇತ್ತ ಕತ್ತು ತಿರುಗಿಸಿ, ಕಣ್ಣುಗಳನ್ನು ನನ್ನ ಮೇಲೆ ಇರಿಸಲು ಬಹಳ ಕಷ್ಟಪಟ್ಟ. ಕೊನೆಗೆ ನುಡಿದ:

"ಸಾಬ್!ತಾವು ಹಿರಿಯರು. ಏನೋ ಒಂದೊಂದು ಸಲ ನಾವು ಮಕ್ಕಳು ತಪ್ಪು ಮಾಡಿಬಿಡುತ್ತೇವೆ. ದೊಡ್ಡವರಾದ ತಾವು ನಮ್ಮನ್ನು ಕ್ಷಮಿಸಿ, ಸುಧಾರಿಸಿಕೊಂಡು ಹೋಗಬೇಕು!".

ಕ್ಷೀಣವಾಗಿ ಅಂಗಲಾಚುವ ಧ್ವನಿಯಲ್ಲಿ ಆತ ಬೇಡಿದ. ಅವನ ಬಗ್ಗೆ ಮರುಕ ಉಂಟಾಯಿತು.

"ನನ್ನ ಸಹಕಾರ ಬೇಕು ನಿಮಗೆ?"

"ಹೌದು! ಬೇಕೇ ಬೇಕು!"

ಅವನಲ್ಲಿ ಆಸೆಯ ಬೀಜ ಅಂಕುರಿಸಿತ್ತು.

"ಈ ಶಾಖೆಯಲ್ಲಿ ಒಟ್ಟು ಎಷ್ಟು ಕಾರಕೂನರಿದ್ದೀರಿ?"

"ಒಟ್ಟು ೨೬ ಮಂದಿ!"

"ಅಧಿಕಾರಿಗಳು?"

"ಆರು ಮಂದಿ!"

"ಜವಾನರು?

"ಐದು!"

"ಮೇನೇಜರ್?"

"ಒಬ್ಬ!"

"ಹಾಗಾದರೆ, ಒಬ್ಬ ಮೇನೇಜರ್, ೩೭ ಮಂದಿ ನೌಕರರಿಗೆ ಸಹಕಾರ ನೀಡಬೇಕೋ, ೩೭ ಮಂದಿ ಒಬ್ಬನೇ ಮೇನೇಜರ್‌ಗೆ ಸಹಕಾರ ನೀಡಬೇಕೋ?"

ಮಾತನಾಡಲಿಲ್ಲ ನೇತಾಜೀ.

ನಾನು ಮುಂದುವರೆಸಿದೆ "ಒಬ್ಬ ವ್ಯಕ್ತಿ, ೩೭ ಮಂದಿಗೂ ಸಹಕಾರ ನೀಡುವುದು ಕಷ್ಟವೋ, ೩೭ ಮಂದಿ ಒಬ್ಬನಿಗೆ ಸಹಕಾರ ನೀಡುವುದು ಕಷ್ಟವೋ? ಒಬ್ಬೊಬ್ಬ ಒಂದು ರೀತಿ, ನಡತೆ, ಗುಣ ಹೊಂದಿರುವಾಗ ಅವರ ಅನುಗುಣವಾಗಿ, ಅವರೆಲ್ಲ ರಿಗೂ ಹೊಂದಿಕೊಂಡು ಹೋಗುವುದು ಸುಲಭವೋ, ಅಥವಾ ಒಬ್ಬ ವ್ಯಕ್ತಿಯ ಗುಣ, ನಡತೆ ಅರಿತುಕೊಂಡು ಅದಕ್ಕೆ ಅನುಗುಣವಾಗಿ ಸರಿಹೊಂದಿಕೊಂಡು ಹೋಗುವುದು ಸುಲಭವೋ ಹೇಳಿರಿ?"

ಕಾಶ್ಮೀರೀ ನೇತಾಜೀಗೆ ಈ ಸಮಸ್ಯೆ ಕಾಶ್ಮೀರೀ ಸಮಸ್ಯೆಯ ತರಹವೇ ಜಟಿಲವಾದಂತೆ ತೋರಿತು.

"ದಯವಿಟ್ಟು ನಾಳೆಯಿಂದ ಡಾಕ್ಟರ್ ಕಾಲ್ರಾಗೆ ಕ್ಯಾಷ್ ಕೇಜ್‌ನಲ್ಲಿ ಕುಳ್ಳಿರಿಸಬೇಡಿ ಸಾಬ್!"

ಅವನ ಕಳಕಳಿಯ ಬೇಡಿಕೆಯನ್ನು ನಾನು ನಿರಾಕರಿಸುವಂತೆಯೇ ಇರಲಿಲ್ಲ.

"ಒಂದು ಕರಾರಿನ ಮೇಲೆ?" ಎಂದೆ.

"ಏನು?"

"ಶಾಖೆಯಲ್ಲಿ ಅವನು ಡಾಕ್ಟರಿಕೆ ಪ್ರಾಕ್ಟೀಸ್ ಮಾಡುವ ಹಾಗಿಲ್ಲ!"

ಕೆಲವು ಕ್ಷಣ ಸುಮ್ಮನಿದ್ದು, ನೇತಾಜೀ ನುಡಿದ.

"ಅವನು ಪ್ರಾಕ್ಟೀಸ್ ಮಾಡಿದರೆ, ನಮಗೇ ಲಾಭವಲ್ಲವೇ ಸಾಬ್! ಬೇರೆ ಡಾಕ್ಟರ್ ಹತ್ತಿರ ಹೋಗಬೇಕಾದ್ದಿಲ್ಲ! ಫೀಸ್ ಕೊಡಬೇಕಾದ್ದಿಲ್ಲ! ಅದೂ ಅಲ್ಲದೆ, ಅವನು ಯಾವಾಗಲೂ ಪ್ರಾಕ್ಟೀಸ್ ಮಾಡುವುದಿಲ್ಲವಲ್ಲ! ಯಾವಾಗಲಾದರೂ ಸಮಯ ಸಿಕ್ಕಾಗ, ಮಾಡಿದರೆ ನಮಗೇನು ನಷ್ಟ?"

ಕಾಶ್ಮೀರೀ ನೇತಾಜೀ ಬುದ್ಧಿವಂತ, ಮೇಧಾವಿ, ಚುರುಕು ಬುದ್ಧಿಯುಳ್ಳವ ಎಂದುಕೊಂಡಿದ್ದ ನಾನು ಇವ ಇಷ್ಟು ಬೆಪ್ಪ ಎಂದು ಅರಿವಾದದ್ದು ನನ್ನ ಬಗ್ಗೆ ನನಗೇ ಬೇಸರವಾಯಿತು. ಇವನನ್ನು ಅಳೆದೂ ಸುರಿದೂ, ಬೆಲೆ ಕಟ್ಟುವಾಗ ನಾಲ್ಕಾಣೆಗೂ ಸಮನಾಗಲಿಲ್ಲವಲ್ಲಾ!

"ಎಂತಹ ಮಾತನಾಡುತ್ತಿದ್ದೀರಾ ನೇತಾಜೀ? ಡಾಕ್ಟರ್ ಕಾಲ್ರಾನ ಬದಲು, ಒಬ್ಬ ಹಜಾಮ ಕುಲವೃತ್ತಿಯವ ಬ್ಯಾಂಕ್ ಕೆಲಸ ಸಿಕ್ಕಿ, ನಮ್ಮ ಶಾಖೆಯಲ್ಲಿ ನೌಕರೀ ಮಾಡುವಾಗ, ನಾನು 'ಹಜಾಮ! ಕ್ಷೌರಿಕ ಕೆಲಸ, ಸಮಯವಿದ್ದಾಗ ಮಾಡುತ್ತೇನೆ' ಎಂದರೆ ನೀವು ಒಪ್ಪಿಕೊಳ್ಳುತ್ತೀರಾ? ಅದೇ ರೀತಿ ಒಬ್ಬ ಪುರೋಹಿತ, ಸಮಯ ಸಿಕ್ಕಾಗ, ಪುರೋಹಿತ ಕಸಬು ಮಾಡುತ್ತೇನೆ ಎಂದು ಒಪ್ಪಿಕೊಳ್ಳುತ್ತೀರಾ?ಅದೇ ರೀತಿ ಒಬ್ಬ ಟೈಲರ್ ಒಬ್ಬ ಡ್ಯಾನ್ಸರ್....."

ನನ್ನ ಮಾತುಗಳನ್ನು ಪೂರೈಸುವುದರೊಳಗೆ ಕಾಶ್ಮೀರೀ ನೇತಾ ಅಲ್ಲಿಂದ ಕಾಲ್ತೆಗೆದಿದ್ದ!

"ಡಾಕ್ಟರ್ ಕಾಲ್ರಾಗೆ ಕ್ಯಾಷ್ ಡಿಪಾರ್ಟ್‌ಮೆಂಟ್ ಬೇಡಾಂದ್ರೆ, ಯಾಕೆ ಸಾಬ್ ಅವನಿಗೆ ಬಲವಂತ ಮಾಡುತ್ತೀರಾ? ನಾನು ಕ್ಯಾಷ್ ಮಾಡಲಿಕ್ಕೆ ತಯಾರಿದ್ದೇನೆ. ನೀವು ನನಗೆ ಯಾಕೆ ಕ್ಯಾಷ್ ಡಿಪಾರ್ಟ್‌ಮೆಂಟ್ ಕೊಡಬಾರದು?"

ಒಳಗೆ ಬಂದು ಸಾಗೂ ಫೀರ್ಯಾದು ಮಾಡಿದ.

"ನಿಮ್ಮನ್ನು ಇಲ್ಲಿ ಕರೆಸಿದವರು ಯಾರು?" ಜಬರ್‌ದಾಸ್ತಾಗಿ ನುಡಿದೆ.

"ಕೋಪ ಯಾಕೆ ಸಾಬ್! ನಾನೇನು ನಿಮ್ಮ ಬಳಿ ಸಾಲ ಕೇಳಲಿಕ್ಕೆ ಬರಲಿಲ್ಲ! ಡಿಪಾರ್ಟ್‌ಮೆಂಟ್ ಚೇಂಜ್ ಕೇಳಿದೆ."

ಕನ್ನಡದ ಗಾದೆ ನೆನಪಾಯಿತು.

'ತೋಳಾ ಕುರಿ ಕಾದಿತೋ ಅಂದರೆ, ಸಂಬಳವೇ ಬೇಡ ಅಂದ ಹಾಗೆ' ಈ ಸಾಗುವಿಗೆ ಕ್ಯಾಷ್ ಡಿಪಾರ್ಟ್‌ಮೆಂಟ್ ಕೊಟ್ಟರೆ, ಹಣ ಲಪಟಾಯಿಸಿ, ದಿನದ ಕೊನೆಯಲ್ಲಿ 'ಇಷ್ಟು ಹಣ ಕಡಿಮೆಯಾಗಿದೆ, ನನ್ನ ಸಂಬಳದಲ್ಲಿ ಹಿಡಿದುಕೊಳ್ಳಿ' ಎಂದು ಎದ್ದು ಹೋಗುವವನನ್ನು ನಂಬುವುದಾದರೂ ಹೇಗೆ?

"ಡಿಪಾರ್ಟ್‌ಮೆಂಟ್ ಚೇಂಜ್ ಯಾಕೆ? ಬ್ರಾಂಚ್ ಚೇಂಜ್ ಕೊಡೋಣವಂತೆ!"

"ವರ್ಗ ಮಾಡುತ್ತೀರಾ ಸಾಬ್?"

"ನಿಮಗೆ ಬೇಕೆಂದರೆ ಶಿಫಾರಸ್ಸು ಮಾಡುತ್ತೇನೆ."

"ಖಂಡಿತ ಮಾಡುತ್ತೀರಾ?"

"ಏಕೆ ಅನುಮಾನ?"

ಸಧ್ಯ!ಇವನಾಗೆ ವರ್ಗ ಮಾಡಿಬಿಡಿ ಎಂದು ಕೇಳುವಾಗ, 'ಪೀಡೆ ಕಳೆಯಿತು' ಎಂದು ಶಿಫಾರಸ್ಸು ಮಾಡಲಿಕ್ಕೆ ನನಗೆ ಏಕೆ ಅನುಮಾನ?

"ನಾನು ಕೇಳಿದ ಜಾಗಕ್ಕೆ ವರ್ಗ ಮಾಡಿಸುತ್ತೀರಾ ಸಾಬ್?"

"ಎಲ್ಲಿಗೆ? ಯಾವ ಊರಿಗೆ?"

"ಲಂಡನ್‌ಗೆ ವರ್ಗ ಮಾಡಿಸಿಬಿಡಿ ಸಾಬ್!"

ಅಕೌಂಟೆಂಟ್ ವರ್ಮಾನನ್ನು ಕರೆಸಿದೆ.

"ಸಾಗೂಗೆ ಕ್ಯಾಷ್‌ಕೇಜ್‌ನಲ್ಲಿ ಕೂರಿಸಬೇಕಂತೆ ಏನು ಮಾಡೋಣ?"

"ಕ್ಯಾಷ್‌ಕೇಜೋ? ಅಥವಾ ತಿಹಾರ್ ಜೈಲ್‌ನಲ್ಲಿರೋ ಕೇಜೋ?"

ಸಾಗೂವಿನ ಮುಖ ನೋಡಿದೆ. ಅವನಿಗೆ ಕೋಪ ಬಂದಿದೆಯೋ ಎಂದು. ಅವನ ಮುಖ ಶಾಂತವಾಗಿತ್ತು.

ಇವನಿಗೆ ಕೋಪವೇ ಬರುವುದಿಲ್ಲವೇ?

"ತಿಹಾರ್ ಜೈಲ್‌ನಲ್ಲಿರಬೇಕಾದ ಅರ್ಹತೆ ನನ್ನಲಿಲ್ಲ. ಅಲ್ಲಿ ಇರುವವರು ಬರೀ ದೊಡ್ಡ ಮನುಷ್ಯರು, ವಿ.ಐ.ಪಿ. ಗಳು. ನಾನು ಒಬ್ಬ ಸಾಮಾನ್ಯ ಮನುಷ್ಯ, ಸಾಮಾನ್ಯ ಬಡ ಕಾರಕೂನ!"

"ನಿನಗೆ ಕ್ಯಾಷ್ ಡಿಪಾರ್ಟ್‌ಮೆಂಟ್ ಕೊಟ್ಟರೆ, ಖಂಡಿತ ತಿಹಾರ್ ಜೈಲ್‌ನಲ್ಲಿ ವಿ.ಐ.ಪಿ. ಆಗಿ ಬಡ್ತಿ ಸಿಗುತ್ತದೆ. ಆದರೆ ಒಂದು ಸಮಸ್ಯೆ! ನೀನು ತಿಹಾರ್‌ಜೈಲ್‌ಗೆ ಹೋಗೋದಲ್ಲದೆ ನಮ್ಮನ್ನು ಎಳೆದುಕೊಂಡು ಹೋಗುತ್ತೀಯ! ಇದು ಖಂಡಿತ!"

ವರ್ಮಾ ಕಡ್ಡಿ ತುಂಡು ಮಾಡಿದಂತೆ ಮಾತಾಡಿದ.

ಮರುಮಾತನಾಡದೆ, ಸಾಗೂ ಬಾಗಿಲ ಬಳಿ ಸಾಗಿ, ಒಂದು ಕ್ಷಣ ಹಿಂದಿರುಗಿ,

"ನೀವೆಲ್ಲಾ ಬಹಳ ಚಿಂತೆ ಮಾಡುತ್ತೀರಾ ಸಾಬ್! ಚಿಂತೆ ಮಾಡುವುದು ಬಿಟ್ಟು ಬಿಡಿ. ನನ್ನ ಹಾಗೆ ಇದ್ದು ಬಿಡಿ. ಚಿಂತೆ ಮಾಡುವುದು, ನಮ್ಮನ್ನು ಆಳುವ ಸರಕಾರಕ್ಕೆ ಸೇರಿದ್ದು. ಅಥವಾ ನಮ್ಮ ಮೇನೇಜ್‌ಮೆಂಟ್‌ಗೆ ಸೇರಿದ್ದು. ನಿಮಗೇಕೆ ಅದರ ಚಿಂತೆ! ನಾಳೆ ಬೆಳಿಗ್ಗೆ ಕ್ಯಾಷ್‌ಕೇಜ್‌ನಲ್ಲಿ ಕುಳಿತುಕೊಳ್ಳುತ್ತೇನೆ!" ಎಂದು ಹೇಳಿ ಹೊರಟುಹೋದ.

ಎಲಾ ಇವನಾ! ಎಂತಹ ಧಿಮಾಕು! ನಾಳೆ ಕ್ಯಾಷ್‌ಕೇಜ್‌ನಲ್ಲಿ ಕುಳಿತುಕೊಳ್ಳುತ್ತಾನಂತೆ! ಚಿಂತೆ ಮಾಡಬಾರದಂತೆ!

"ಇವನ್ಯಾಕೆ ಇಷ್ಟು ಹಣ ಖರ್ಚುಮಾಡುತ್ತಾನೆ?"

"ಮನುಷ್ಯರಿಗೆ ಇರಬಾರದ ಸಕಲ ದುರ್ಗುಣಗಳೂ ಇವನಲ್ಲಿ ಮನೆ ಮಾಡಿ ಕೊಂಡಿವೆ. ಮೋಸ, ಕಪಟ, ಸ್ವಾರ್ಥತನ, ಸೋಂಬೇರಿತನ, ಜಿಪುಣತನ, ದುಂದು, ಕ್ರೂರತನ......."

"ಸಾಕು, ಸಾಕು! ಎಲ್ಲಾ ದುರ್ಗುಣಗಳು ಎಂದ ಮೇಲೆ ಅದನ್ನು ವರ್ಣಿಸ ಬೇಡ!" ವರ್ಮಾನ ವರ್ಣನೆಗೆ ಅಡ್ಡಗೋಡೆ ಕಟ್ಟಿದೆ.

"ಈ ಗುಣಗಳನ್ನು ಹೇಗೆ ಮತ್ತು ಎಲ್ಲಿ ಪಡೆದ?"

"ಸಹವಾಸ ದೋಷ! ತಾಯಿಯಿಲ್ಲದ ಹುಡುಗ. ತಂದೆ ಮರುಮದುವೆಯಾದ. ಮಲತಾಯಿ ಕಾಟದ ಕೊಡುಗೆ!"

"ಸರಿ! ಸರಿ! ತಾಯಿಯಿಲ್ಲದ ತಬ್ಬಲಿಯ ಕಥೆ! ಆದರೆ ಇವನಿಗೆ ಬ್ಯಾಂಕ್‌ನಲ್ಲಿ ಕೆಲಸ ಹೇಗೆ ಸಿಕ್ಕಿತು. ಇವ ಮ್ಯಾಟ್ರಿಕ್ ಮತ್ತು ಟಾಯಿಪಿಂಗ್ ಹೇಗೆ ಪಾಸ್ ಮಾಡಿದ?"

ನನಗೆ ಆಶ್ಚರ್ಯವಾಗಿತ್ತು. ತಬ್ಬಲಿಯಾದರೂ, ವಿದ್ಯಾಭ್ಯಾಸದ ಕೊರತೆ ಇರಲಿಲ್ಲ.

"ಹುಡುಗ ಬುದ್ಧಿವಂತ! ಮ್ಯಾಟ್ರಿಕ್ ಪಾಸ್ ಮಾಡುವಷ್ಟು ದಡ್ಡನಾಗಿರಲಿಲ್ಲ! ಈಗಲೂ ಇವನು ದಡ್ಡನಲ್ಲ!"

"ಇವನಿಗೆ ಮದುವೆಯಾಗಿದೆಯಾ?"

"ಮದುವೆಯಾಗಿ ಒಂದು ಗಂಡು ಮಗು ಇದೆ. ಹತ್ತು ವರ್ಷದ ಮಗು. ಆದರೆ ಗಂಡ - ಹೆಂಡತಿಯರೊಳಗೆ ವೈಮನಸ್ಯ. ಜಗಳ ಹರಿಯುವುದಿಲ್ಲ, ಮುರಿಯುವುದಿಲ್ಲ! ಹೆಂಡತಿ ಒಳ್ಳೆಯವಳು. ಗಂಡನ ದುರಾಭ್ಯಾಸದ ಬಗ್ಗೆ ಕಣ್ಣೀರು ಹಾಕುತ್ತಾಳೆ. ಕುಡಿತ, ಜೂಜು, ಇಸ್ಪೀಟು ಇವುಗಳಲ್ಲೇ ಕಾಲ ಕಳೆಯುತ್ತಾ ಇರುವ ಸಾಗುವಿನ ಜೊತೆ ಸಂಸಾರ ಮಾಡುವುದು ಯಾವ ಹೆಂಡತಿಗಾದರೂ ಸರಿಯಾಗುತ್ತದೆ?"

ಕೈ ತುಂಬಾ ಸಂಬಳ, ಒಳ್ಳೇ ನೌಕರಿ, ಅನುರೂಪಳಾದ ಹೆಂಡತಿ, ಪುಟ್ಟ ಗಂಡು ಮಗು, ಇನ್ನೇನು ಬೇಕು ಮನುಷ್ಯನಿಗೆ ಒಳ್ಳೆಯ ಜೀವನ ಸಾಗಿಸಲಿಕ್ಕೆ? ಸಾಗುವಿಗೆ ಏಕೆ ಸಾಧ್ಯವಾಗುತ್ತಿಲ್ಲ ಈ ಜೀವನ ಸಾಗಿಸಲಿಕ್ಕೆ? ಕೆಟ್ಟ ಚಾಳಿ, ದುರ್ನಡತೆ, ನೀಚತನ, ನೀತಿಗೆಟ್ಟ ಧೂರ್ತತನಗಳಿಗೆ ಮಾರು ಹೋಗುವುದರಲ್ಲಿ ಯಾವ ಸುಖವಿದೆ? ಯಾವ ಅರ್ಥವಿದೆ?

"ಕುಟುಂಬದಲ್ಲಿ ಆತಂಕ ಹುಟ್ಟಿಸಿ, ಹೆಂಡತಿಯ ಜೀವನ ನರಕ ಮಾಡಿಬಿಟ್ಟಿದ್ದಾನೆ ಈ ನೀಚ!" ವರ್ಮಾ ವರ್ಣಿಸುತ್ತಿದ್ದ ಸಾಗುವಿನ ಜೀವನ ಕ್ರಮವನ್ನು.

ಕುಟುಂಬದಲ್ಲಿ ಆತಂಕ ಹುಟ್ಟಿಸೋದಲ್ಲದೆ ಶಾಖೆಯಲ್ಲೂ ಆತಂಕ ಹುಟ್ಟಿಸಿ, ನನ್ನ ಜೀವನವನ್ನು ನರಕ ಮಾಡಲಿಕ್ಕೆ ಪ್ರಯತ್ನಿಸುತ್ತಿದ್ದಾನಲ್ಲಾ ಈ ಸಾಗೂ! ಈ ಸಾಗೂ ಜೊತೆಗೆ, ಕಾಲ್ರಾನೂ ಸೇರಿ, ರೌರವ ನರಕ ಮಾಡಲಿಕ್ಕೆ ಶತಪ್ರಯತ್ನ ಮಾಡುವ ಸೂಚನೆ ಕಾಣುತ್ತದೆಯಲ್ಲಾ!

"ಡಾಕ್ಟರ್ ಕಾಲ್ರಾಗೆ ಯಾವ ಕೆಲಸ ಕೊಡುವುದು?" ವರ್ಮಾನನ್ನು ಕೇಳಿದೆ.

"ಚೆಕ್ಸ್ ಕ್ಲಿಯರಿಂಗ್ ಡಿಪಾರ್ಟ್‌ಮೆಂಟ್‌ನಲ್ಲಿ ಕೂರಿಸಿಬಿಡೋಣ. ತಲೆ ಎತ್ತಲಿಕ್ಕೆ ಆಗೋದಿಲ್ಲ ಅಷ್ಟು ಕೆಲಸ ಅಲ್ಲಿ!"

ತಲೆ ಎತ್ತುವುದಿರಲಿ, ತಲೆ ಬಗ್ಗಿಸಿ ಕೆಲಸ ಮಾಡಲಿಕ್ಕೂ ಬಾರದ ಹಾಗೆ ಡಾಕ್ಟರ್ ಕಾಲ್ರಾ, ಮಾರನೆಯ ದಿನ ಕೆಲಸಕ್ಕೆ ಹಾಜರಾಗಲಿಲ್ಲ! ಆದರೆ, ಸಾಗೂ ಮಾತ್ರ ಕೆಲಸಕ್ಕೆ ಹಾಜರಾಗಿದ್ದ! ಹಾಜರಾದವನು, ನೇರ ಕ್ಯಾಷ್ ಕ್ಯಾಬಿನೊಳಗೆ ಹೋಗಿ ಕುಳಿತುಬಿಟ್ಟ. ಇಬ್ಬರು ಕ್ಯಾಷಿಯರ್‌ಗಳು ಕಾಯಂ ಆಗಿದ್ದವರು, ಇವ ಮೂರನೆಯವನಾಗಿದ್ದ: ನಮ್ಮ ಒಪ್ಪಿಗೆ ಇಲ್ಲದೆ ಕ್ಯಾಷ್ ಕೇಜ್‌ನೊಳಗೆ ಹೋಗಿ ಕುಳಿತ ಇವನಿಗೆ ಏನು ಮಾಡುವುದು? ಹೇಗೆ ನಿಭಾಯಿಸುವುದು? ಇದು ಬಹಳ ಪೀಕಲಾಟದ ಪರಿಸ್ಥಿತಿ ಯಾಯಿತಲ್ಲ! ಜಬರ್‌ದಸ್ತು ಹಾಕಿ ಅವನನ್ನು ಅಲ್ಲಿಂದ ಅಟ್ಟಿ ದರೆ, ನೌಕರರೆಲ್ಲಾ ಒಟ್ಟಾಗಿ ನನ್ನ ಮೇಲೆ ಹುಲಿ ಹಾರಿದಂಗೆ ಹಾರಿಯಾರು. ಸುಮ್ಮ ನಿದ್ದರೆ, ನನ್ನ ಅಧಿಕಾರಕ್ಕೇ ಬೆಲೆ ಇರದ ಹಾಗೆ ಆಗುತ್ತದೆ ಎಂಬ ಶಂಕೆ!

ಅಕೌಂಟೆಂಟ್ ವರ್ಮಾನನ್ನ ಕರೆದೆ, ವಿಷಯ ತಿಳಿಸಿದೆ. ಇಂತಹ ಸಂಕಟ ಪರಿಸ್ಥಿತಿಯಲ್ಲಿ ಮೇನೇಜ್‌ಮೆಂಟ್ ಗುರುಗಳಾದ, ಪೀಟರ್ ಡ್ರಕರ್, ಪಾರ್ಕಿನ್ ಸನ್, ಮುಂತಾದವರಿಗಿಂತ ನಮ್ಮ ಶಾಣ್ಯ ವರ್ಮಾನೇ ಮೇಲು ಎನಿಸಿತು. ಕಾರ್ಯತಃ ಪ್ರಯೋಗ ಮಾಡುವದರಲ್ಲೇ ವಿಶ್ವಾಸ ಇಟ್ಟಿರುವ ವರ್ಮಾ ಪೀಟರ್ ಡ್ರಕರ್‌ನ ಸಿದ್ಧಮತದ ಉಪಯೋಗಕ್ಕೆ ಎಂದೂ ಶರಣು ಹೋದವರಲ್ಲ! ವರ್ಮಾ ಕ್ರಿಯಸ್ಥ!

ಸಮಸ್ಯೆಗಳು ಉದ್ಭವಿಸುವಾಗ, ಸುಲಭೋಪಾಯಗಳನ್ನು ಹುಡುಕುವುದರಲ್ಲಿ ಆನಂದವಿದೆ ಎಂದು ನಂಬಿರುವವ. ಸಿದ್ಧಾಂತ ಮಂಡಿಸುವವರು ಎಂದೂ ಕ್ರಿಯಾಸ್ಥರಲ್ಲ ಎಂದು ಇವನ ಸಿದ್ಧಾಂತ!

"ಸಾಬ್! ಈ ದಿನ ಮಾಡಲಿ ಬಿಡಿ! ಹಣ ಕಡಿಮೆ ಬಿದ್ದರೆ, ಇಂದೇ ಕಟ್ಟಬೇಕು, ಇಲ್ಲದಿದ್ದರೆ, ಹಣ ಲಪಟಾಯಿಸಿದ್ದೀಯ ಎಂದು ದೂರು ಕೊಡುತ್ತೇವೆ ಎಂದು ಹೆದರಿಸಿಬಿಡೋಣ. ಆಗ ನೋಡಿ! ಕ್ಯಾಷ್ ಬೇಡ ಎಂದು ಕಾಲು ಹಿಡಿಯುತ್ತಾನೆ!"

"ಈ ವಿಷಯ ಅವನಿಗೆ ತಿಳಿಸುವವರು ಯಾರು?"

"ನಾನೇ ತಿಳಿಸುತ್ತೇನೆ!" ಎಂದ ವರ್ಮಾ.

ಸಾಯಂಕಾಲ, ಕೆಲಸ ಮುಗಿದ ಮೇಲೆ, ಸಾಗೂ, ತನ್ನ ಕೆಲಸವನ್ನು ನಿಷ್ಠೆಯಿಂದ ಮಾಡಿದ್ದ. ಹಣ ಕಡಿಮೆ ಬಂದಿರಲಿಲ್ಲ. ಆದರೆ, ಮಾರನೆಯ ದಿನ, ಅವನು ಕ್ಯಾಷ್‌ಕೇಜ್‌ನಲ್ಲಿ ನೇರ ಹೋಗಿ ಕುಳಿತುಕೊಳ್ಳಲಿಲ್ಲ!

ಅಕೌಂಟೆಂಟ್‌ನ ಉಪಾಯ ಫಲಿಸಿತ್ತು.

"ಸಾಗೂವಿಗೆ ಏನು ಕೆಲಸ ಕೊಟ್ಟಿದ್ದೀರಿ?" ವರ್ಮಾನನ್ನು ಕೇಳಿದೆ.

"ಸೇವಿಂಗ್ಸ್ ಡಿಪಾರ್ಟ್‌ಮೆಂಟ್‌ನಲ್ಲಿ ಕೂರಿಸಿದ್ದೇನೆ. ಆದರೆ ಅಲ್ಲಿಯ ಸೂಪರ್‌ವೈಸರ್ ಜೈನ್ ತಕರಾರು ಮಾಡುತ್ತಾ ಇದ್ದಾನೆ!"

"ಏನು ತಕರಾರು?"

"ಸಾಗೂವಿನ ಬುದ್ಧಿ ಎಲ್ಲರಿಗೂ ತಿಳಿದಿದೆಯಲ್ಲಾ? ಗ್ರಾಹಕರಿಗೆ ಸರ್ವೀಸ್ ಕೊಡುವುದಿಲ್ಲ! ಗ್ರಾಹಕರು ಏನಾದರೂ ಪ್ರಶ್ನೆ ಕೇಳಿದರೆ, ವಿಚಾರಿಸಿದರೆ, ಕಿವುಡನ ತರಹ ವರ್ತಿಸುತ್ತಾನೆ. ಗ್ರಾಹಕರು ಇವ ಕಿವುಡ ಎಂದು ಅರಿತು ಜೋರಾಗಿ ಕಿರುಚುತ್ತಾರೆ. ಅವರ ಕಿರುಚಾಟ, ದೊಂಬಿ, ಹಗರಣ, ಜೈನ್ ಮತ್ತು ಇತರರಿಗೆ ಬೇಸರವಾಗುತ್ತದೆ. ಇದನ್ನು ನೋಡಿ ನಗುತ್ತಾನೆ ಸಾಗೂ! ವಿಚಿತ್ರ ಪ್ರಾಣಿ! ಇನ್ನೊಬ್ಬರಿಗೆ ತೊಂದರೆ ಕೊಟ್ಟು, ತಾನು ಸುಖ ಪಡುತ್ತಾನೆ!"

'ಪಟಿಂಗ ಸಾಗೂ!'

"ಇವನ ಮದುವೆ ಕಥೆ ಕೇಳಿದ್ದೀರಾ ಸಾಬ್!"

"ಇಲ್ಲ" ಎಂದೆ. ಕುತೂಹಲವಾಗಿತ್ತು ನನಗೆ.

"ಇವನ ಹೆಂಡತಿ ಹಳ್ಳೀ ಹುಡುಗಿ. ಜಾಸ್ತಿ ಓದಿಲ್ಲ. ನೋಡಲು ಕುರೂಪಿ, ಆದರೆ ಹೊರೆ ಹೊರೆ ವರದಕ್ಷಿಣೆ ಹೊಡೆದುಕೊಂಡ ಮಾವನಿಂದ. ಮದುವೆಯಾದ ಮೇಲೆ ಜಯಪುರ ತೋರಿಸಿಕೊಂಡು ಬರುತ್ತೇನೆಂದು ಹೊಸಹೆಂಡತಿಯನ್ನು ಕರೆದುಕೊಂಡು ರೈಲಿನಲ್ಲಿ ಹೊರಟ. ಹರ್ಯಾಣದ ಯಾವುದೋ ಮೂಲೆಯ ಹಳ್ಳಿಯಲ್ಲಿ ಬೆಳೆದ ಹುಡುಗಿ ದಿಲ್ಲೀ ಶಹರನ್ನು ನೋಡಿರಲಿಲ್ಲ. ರೈಲನ್ನು ಕಂಡೇ ಇರಲಿಲ್ಲ. ಮೊದಲನೆ ಬಾರಿ ರೈಲಿನ ಪ್ರಯಾಣ. ಕಿಟಕಿ ಪಕ್ಕದಲ್ಲಿ ಹೆಂಡತಿಯನ್ನು ಕುಳ್ಳರಿಸಿ, ತಾನು ಪಕ್ಕದಲ್ಲಿ ಕುಳಿತು ಪ್ರಯಾಣ ಬೆಳೆಸಿದ. ಹೆಂಡತಿಗೆ ನಾಚಿಕೆ, ಮುಜುಗರ, ಜೊತೆಗೆ ಖುಷಿ. ಗಂಡನ ಜೊತೆ ಜಯಪುರ ನೋಡುವುದೆಂದರೆ ಅವಳಿಗೆ ಅತ್ಯಂತ ಸಂತೋಷವಾಗಿತ್ತು. ಇವನಿಗೆ ಅವಳಿಗಿರುವ ಆತುರ, ಆಸೆ, ನಾಚಿಕೆ ಯಾವುದೂ ಇರಲಿಲ್ಲ. ಮುಂದಿನ ಸ್ಟೇಷನ್ ಬಂದಾಗ, ಚಾ ಕುಡಿಯಲು ಹಾಗೇ ತಿಂಡಿ ತಿನ್ನಲು ಕೆಳಗೆ ಇಳಿದ. ಆರಾಮಾಗಿ ತಿಂಡಿ ತಿಂದು, ಚಾ ಕುಡಿಯುವ ವೇಳೆಗೆ, ರೈಲು ಹೊರಟು ಬಿಟ್ಟಿತು. ಸಾಗೂ, ಆರಾಮಾಗಿ, ಸಮಾಧಾನದಿಂದ, ಯಾವುದೋ ಬೋಗಿ ಹತ್ತಿಕೊಂಡು, ಯಾವುದೋ ಸೀಟ್‌ನಲ್ಲಿ ಕುಳಿತು ಪ್ರಯಾಣ ಬೆಳೆಸಿದ."

"ಹೆಂಡತಿಯನ್ನು ಮರೆತುಬಿಟ್ಟನೆ? ಅವಳ ಗತಿ?"

ಮದುವೆಯಾದ ಕೂಡಲೇ ಹೆಂಡತಿಯನ್ನು ಮರೆಯುವಷ್ಟು ಧೂರ್ತನೇ ಇವನು?

"ಮರೆಯಲಿಲ್ಲ! ಅವನಿಗೆ ತಿಳಿದಿತ್ತು. ಅವಳು ಎಲ್ಲಿಗೂ ಓಡಿಹೋಗು

ವವಳಲ್ಲ! ಆದರೆ, ಆ ಸಮಯದಲ್ಲಿ ಅವನಿಗೆ ಅವಳ ಜೊತೆ ಬೇಕಿರಲಿಲ್ಲ. ಸಾವಕಾಶ ವಾಗಿ ಅವಳ ಬಳಿ ಹೋದರಾಯಿತು ಎಂದು ಕುಳಿತ. ಮುಂದಿನ ಸ್ಟೇಷನ್‌ನಲ್ಲಿ ರೈಲು ನಿಂತಾಗ, ಹೆಂಡತಿ ಕುಳಿತಿದ್ದ ಸ್ಥಳಕ್ಕೆ ಹೋಗಲಿಲ್ಲ. ಕೆಳಗೆ ಇಳಿದು ಸಾವಕಾಶ ವಾಗಿ ಮತ್ತೊಮ್ಮೆ ಚಾ ಕುಡಿದು, ಸಿಗರೇಟ್ ಸೇದುವ ಹೊತ್ತಿಗೆ ರೈಲು ಹೊರಟು ಬಿಟ್ಟಿತ್ತು! ಪುನಃ ಯಾವುದೋ ಬೋಗಿ ಹತ್ತಿ, ಎಲ್ಲೋ ಕುಳಿತು ಪ್ರಯಾಣ ಬೆಳೆಸಿದ ಭೂಪ!"

"ಹೆಂಡತಿಗೆ ಭಯವಾಗಿ ಒದ್ದಾಡಲಿಲ್ಲವೇ?"

"ಅವಳಿಗೆ ಯಾಕೆ ಭಯ?"

"ಗಂಡ, ಕೆಳಗೆ ಇಳಿದು ಹೋದವನು ಹಿಂದಿರುಗದೇ ಇದ್ದುದು ಅವಳಿಗೆ ಗಾಬರಿಯಾಗಿರಲೇ ಬೇಕಲ್ಲವೇ?"

"ಇಲ್ಲೇ ಇರುವುದು ಕಥೆಯ ಸ್ವಾರಸ್ಯ?" ನಕ್ಕು ನುಡಿದ ವರ್ಮಾ!

ನನ್ನ ಕುತೂಹಲ ಕೂಡ ಜಾಸ್ತಿಯಾಯಿತು ಇವನ ನಗೆಯಿಂದ.

"ಆಮೇಲೆ?"

"ಮೂರನೆ ಸಲ, ರೈಲು ನಿಂತಾಗ, ಸಾಗೂ ಕೆಳಗೆ ಇಳಿದು, ಪುನಃ ಒಂದು ಕಪ್. ಚಾ ಕುಡಿದು, ತನ್ನ ಬೋಗಿಗೆ ಬಂದು ನೋಡುತ್ತಾನೆ, ತನ್ನ ಹೆಂಡತಿಯ ಪಕ್ಕದಲ್ಲಿ ಒಬ್ಬ ಯುವಕ ಕುಳಿತುಕೊಂಡು ಬಿಟ್ಟಿದ್ದ! "ಏಯ್!ಎದ್ದೇಳು! ಇದು ನನ್ನ ಸೀಟ್!" ಎಂದು ಕೂಗಿದಾಗ, ಆ ಯುವಕ 'ಈ ಸೀಟಿನಲ್ಲಿ ನಾನು ದಿಲ್ಲೀಯಿಂದ ಕುಳಿತಿದ್ದೇನೆ. ಇದು ನನ್ನ ಸೀಟ್, ಬೇಕಾದರೆ ಇವಳನ್ನು ಕೇಳು' ಎಂದು ಸಾಗೂವಿನ ಹೆಂಡತಿಯ ಕಡೆ ಬೊಟ್ಟು ಮಾಡಿ ತೋರಿಸುತ್ತಾನೆ. ಸಿಟ್ಟಿಗೇರಿದ ಸಾಗೂ 'ಬದ್ಮಾಷ್! ಇವಳು ನನ್ನ ಹೆಂಡತಿ! ಇವಳನ್ನೇನು ಕೇಳುವುದು? ಏಳು ಮೇಲಕ್ಕೆ!" ಎಂದು ಅವನ ಕೈ ಹಿಡಿದು ಎಬ್ಬಿಸುತ್ತಾನೆ. ಇವನ ಧ್ವನಿ ಕೇಳಿ ಆಕೆ ಕತ್ತು ತಿರುಗಿಸಿ ನೋಡಿದರೆ, ಗಂಡ ಜಗಳ ಆಡುತ್ತಾ ಇದ್ದಾನೆ ಯಾರೋ ಆಗಂತುಕನ ಹತ್ತಿರ! ಈಗ ಗಾಭರಿ ಯಾದದ್ದು ಅವಳು? ಸಾಗು, ಅವಳ ಪಕ್ಕದಲ್ಲಿ ಕುಳಿತು ಕೇಳಿದ: 'ನಿನಗೆ ಗಾಬರಿ ಯಾಯಿತಾ?' 'ಯಾಕೆ?' ಅಂದಳಂತೆ. 'ನಾನು ಇಷ್ಟು ಹೊತ್ತು ಎಲ್ಲಿ ಹೋಗಿದ್ದೆ ಎಂದು?' 'ನೀವು ಇಷ್ಟು ಹೊತ್ತು ಇಲ್ಲೇ ನನ್ನ ಪಕ್ಕದಲ್ಲೇ ಕುಳಿತಿರಲಿಲ್ಲವೇ?' 'ಇಲ್ಲ! ನಾನು ಬೇರೆ ಬೋಗಿಯಲ್ಲಿ ಕುಳಿತಿದ್ದೆ!' 'ಹಾಯ್ ರಾಮ್! ಹಾಗಾದರೆ ನನ್ನ ಪಕ್ಕದಲ್ಲಿ ಆವಾಗಲಿಂದ ಕುಳಿತವರು ನೀವಲ್ಲವೇ?' ಎಂದು ಅಳಲಿಕ್ಕೆ ಶುರು ಮಾಡಿದಳಂತೆ. ನಾಚಿಕೆಯಿಂದ, ಕುಳಿತ ಕಡೆ ತಿರುಗಿ ನೋಡದೇ ಇದ್ದುದರ ಫಲ, ಯಾವನೋ ಆಗಂತುಕನ ಸಖ್ಯ ದೊರೆತಿತ್ತು ಅವಳಿಗೆ. ಅವಮಾನದಿಂದ ಕುಗ್ಗಿ ಮುಸುಕೆಳೆದು ರೋಧಿಸಲಿಕ್ಕೆ ಶುರುಮಾಡಿದಳಂತೆ ಅವಳು!"

"ಸಾಗೂವಿಗೆ ಬೇಸರವಾಗಿರಬೇಕಲ್ಲ?"

"ಬೇಸರ? ಅವನಿಗೆ ಬೇಸರವಾಗಿದ್ದರೆ, ಈ ಕಥೆಯನ್ನು ನಮಗೆ ಹೇಳುತ್ತಿದ್ದನೇ?"

ಸಾಗೂವಿನ ಕಥೆ ಕೇಳಿ ಈ ಮನುಷ್ಯ ಬರೀ ಧೂರ್ತನಾಗಿರದೇ, ಮನರಂಜನೆ ನೀಡುವ ದುಷ್ಟನೂ ಆಗಿದ್ದ!

"ಹೆಂಡತಿ ಬೇಸತ್ತಿರಬೇಕು ಇವನ ಚೆಲ್ಲಾಟ ನೋಡಿ!"

"ಬೇಸತ್ತಿರಬೇಕು? ಬೇಕಾದಷ್ಟು ಸಲ ಸಾಯಬೇಕೆಂದು ಪ್ರಯತ್ನಿಸಿ, ವಿಫಲಗೊಂಡಿದ್ದಾಳೆ!"

"ಯಾಕೆ?"

"ಮಗನಿದ್ದಾನಲ್ಲಾ! ಹತ್ತು ವರ್ಷದ ಮಗ. ಬಾಲಕ ಅನಾಥನಾಗುತ್ತಾನಲ್ಲಾ ಎಂದು ಹಲಬುತ್ತಾಳೆ. ಎಷ್ಟೋ ಸಲ ನನಗನಿಸುತ್ತದೆ-ಇವನೇ ಸತ್ತರೆ, ಇವನ ಹೆಂಡತಿ ಮಗು ಬದುಕುತ್ತಾರೆ!"

"ಹೇಗೆ?" ವಿಚಿತ್ರವಾಗಿತ್ತು ವರ್ಮನ ಅನಿಸಿಕೆ!

"ಹೆಂಡತಿಗೆ ಬ್ಯಾಂಕ್‌ನಲ್ಲಿ ಕೆಲಸ ಸಿಗುತ್ತದೆ. ಮಗನನ್ನು ಸಾಕಿಕೊಂಡು ಹಾಯಾಗಿ ಇರಬಹುದು!"

"ಅವನಿಂದ ತೊಂದರೆ ಅಷ್ಟಿದೆಯೆ?"

"ತೊಂದರೆ? ಬರೀ ತೊಂದರೆ ಅಲ್ಲ! ಪೀಡಕ ಅವನು! ಮಾವನ ಮನೆಯಿಂದ ಹಣ ಸಿಕ್ಕರೆ ಅವಳಿಗೆ ಊಟ, ಇಲ್ಲದಿದ್ದರೆ ಉಪವಾಸ!"

"ಸಂಬಳ ಏನು ಮಾಡುತ್ತಾನೆ?"

"ಕೆಲಸಕ್ಕೆ ಬಂದರಲ್ಲವೇ ಸಂಬಳ?"

ತನ್ನ ಸಂಸಾರಕ್ಕೆ, ಸಮಾಜಕ್ಕೆ, ಬಂಧುಬಳಗಕ್ಕೇ, ನೌಕರೀ ನೀಡಿದ ಬ್ಯಾಂಕ್‌ಗೆ, ಆತಂಕ ಒಡ್ಡಿದ ಈತನನ್ನು ಏನೆಂದು ಕರೆಯಬೇಕು? ಆತಂಕವಾದಿಯೆಂದೇ? ಭಯೋತ್ಪಾದಕನೆಂದೇ? ಇವನ ಕೈಯಲ್ಲಿ ಕೋವಿ, ಕತ್ತಿ ಕೊಟ್ಟರೆ, ದರೋಡೆಕೋರನಾಗಲು ಹೆಚ್ಚು ಕಾಲ ಬೇಕಿಲ್ಲವೆಂದೆನಿಸಿತು.

ಫೋನ್ ಟ್ರಿನ್ ಎಂದು ಶಬ್ಧಮಾಡಿತು.

"ಸಾಬ್! ನಿಮ್ಮ ಸ್ನೇಹಿತ ಕುಮಾರ್‌ನಿಗೆ ಗುಂಡೇಟು!"

ಆ ಕಡೆಯಿಂದ ಕಪೂರ್ ಮಾತನಾಡುತ್ತಿದ್ದ.

ಕುಮಾರ್‌ನಿಗೆ ಗುಂಡೇಟು! ನಾನು ಅಲ್ಲೇ ಕುಸಿದು ಕುಳಿತೆ.

# 12

ಬೆಳಿಗ್ಗೆ ಎಂಟು ಗಂಟೆಯಾದರೂ ಹಾಸಿಗೆಯನ್ನು ರಜಾಯಿ ಎಂದು ಕರೆಯುವ ರಗ್ಗನ್ನು ಹೊದ್ದು ಮಲಗಿದ್ದ ನನಗೆ ಏಳುವ ಮನಸ್ಸಾಗಲಿಲ್ಲ. ಹಿಂದಿನ ದಿನ ಟಿ.ವಿ.ಯಲ್ಲಿ ದಿಲ್ಲೀಯಲ್ಲಿ ಚಳಿ ೫ ಸೆಲ್ಸಿಯಸ್‌ಗೆ ಇಳಿದಿದೆ ಎಂದು ಬಿತ್ತರಿಸಿದ್ದು, ಈಗ ಅನುಭವಕ್ಕೆ ಬಂದಿತ್ತು. ಗಡಗಡ ನಡುಗಿಸುವ ಈ ಚಳಿಗೆ ಹೆದರಿ, ಹಸಿವಿನಿಂದ ಹೊಟ್ಟೆ ಚುರ್ ಅಂತಿದ್ದರೂ, ಬೆಚ್ಚಗೆ, ರಜಾಯಿಯೊಳಗೆ ಸೇರಿದ್ದ ನನ್ನ ದೇಹ ಹೊರಗೆ ಬರಲು ನಿರಾಕರಿಸುತ್ತಿತ್ತು. ಮನಸ್ಸು ಲಂಗುಲಗಾಮಿಲ್ಲದ ಕುದುರೆಯ ಹಾಗೆ ಎಲ್ಲೇಲ್ಲೋ ಓಡುತ್ತಿತ್ತು. ಈ ದಿಲ್ಲೀ ಚಳಿ, ಜೂನ್-ಜುಲೈ ತಿಂಗಳ ಶಖೆಯ ಆತಂಕ ನೀಡಿದ ಹಾಗೆ, ನವೆಂಬರ್, ಡಿಸೆಂಬರ್ ತಿಂಗಳಲ್ಲಿ ಮೈ ಮನಸ್ಸಿಗೆ ಆತಂಕ ಒಡ್ಡುತ್ತದೆ. ಇಂತಹ ಒಂದು ಚಳಿಗಾಲದಲ್ಲೇ, ಮೈಗೆ ಹೊದೆಯಲು ಸರಿಯಾದ ಬೆಚ್ಚನೆಯ ಬಟ್ಟೆಗಳಿಲ್ಲದೆ, ಹೊಟ್ಟೆಗೆ ಹಿಟ್ಟಿಲ್ಲದೆ, ಮರಾಠಾವೀರರು, ಮೂರನೇ ಪಾನೀಪತ್ ಯುದ್ಧದಲ್ಲಿ ಕಾದಾಡಬೇಕಾಯಿತು. ಸ್ವತಂತ್ರಭಾರತದ ವೀರ ಜವಾನರು ಮತ್ತೊಮ್ಮೆ ಚಳಿಗಾಲದಲ್ಲಿ, ಮೈಗೆ ಬೆಚ್ಚನೆಯ ಬಟ್ಟೆಗಳಿಲ್ಲದೆ, ಹೊಟ್ಟೆಗೆ ಸೂಕ್ತ ಆಹಾರವಿಲ್ಲದೆ, ಚೀನೀಯರ ವಿರುದ್ಧ ಹೋರಾಡಿ, ಪ್ರಾಣಾರ್ಪಣೆ ಮಾಡಬೇಕಾಯಿತು. 'ಸೈನ್ಯ ತನ್ನ ಹೊಟ್ಟೆಯಿಂದ ನಡೆಯುತ್ತದೆ' ಎಂಬ ಯುಕ್ತಿಯ ನೆನಪಾಯಿತು.

ಹೊಟ್ಟೆ ಒಂದೇ ಅಲ್ಲ, ಶಿಸ್ತಿನ ಅಭಾವದಿಂದ ನಮ್ಮ ಸೈನ್ಯ ಪರಾಭವ ಹೊಂದಿತಲ್ಲವೇ? ಮರಾಠ ಸೈನ್ಯದ ಅಶಿಸ್ತು, ಸಾಮಾನ್ಯ ಜನರ ಮೇಲೆ ಅತ್ಯಾಚಾರ, ಹಿಂಸೆ, ಲೂಟಿ, ಅದರ ಅವನತಿಗೆ ಕಾರಣವಾಯಿತಲ್ಲವೇ? ದೇಶದ ಅನೇಕ ರಾಜ, ಮಹಾರಾಜರ ಸೈನ್ಯಗಳಲ್ಲಿನ ಅಶಿಸ್ತು, ಅನೈತಿಕತೆ, ಒಡಕು, ಹೊರದೇಶದವರ ಆಕ್ರಮಣಕ್ಕೆ ಆಮಂತ್ರಣ ಇತ್ತ ಹಾಗೆ ಆಯಿತಲ್ಲವೇ? ನಮಗೆ ನಮ್ಮನ್ನೇ ಆಳಿಕೊಳ್ಳುವುದನ್ನು ಕಲಿಯಲಿಲ್ಲವೆಂದು ಹೊರದೇಶದವರು ಹೇಳುವುದರಲ್ಲಿ ನಿಜಾಂಶವಿದೆಯಲ್ಲವೇ? ಇಲ್ಲದೇ ಹೋದ ಪಕ್ಷದಲ್ಲಿ, ನಮ್ಮ ದೇಶವನ್ನು ಸಾವಿರಾರು ವರ್ಷಗಳಿಂದ ಪರಕೀಯರು ಆಳಲಿಕ್ಕೆ ಹೇಗೆ ಸಾಧ್ಯವಾಗುತ್ತಿತ್ತು? ಅಶಿಸ್ತು, ಆಲಸ್ಯ ಮತ್ತು ಉದಾಸೀನತೆಗಳಿಗೆ ಮಹಲು ಕಟ್ಟಿ, ಅದರಲ್ಲಿ ಸುಭದ್ರವಾಗಿ, ವಾಸಿಸುತ್ತೇವೆಂದರೆ ಹೇಗೆ ಸಾಧ್ಯ? ಶಿಸ್ತಿನ ಅವಲಂಬಿಕೆಯ, ಗೆಲುವುಗಳಿಸಬೇಕೆಂಬ ಹಟವಿರುವ, ಚಟುವಟಿಕೆ ಹುರುಪಿನ ಮಿಂಚು, ಗುಡುಗು, ಸಿಡುಲು ಮಳೆಗಳ ಎದುರು ಭದ್ರವಾಗಿ ನಿಲ್ಲುವ ಮಹಲ್‌ಗಳಲ್ಲಿ ವಾಸಿಸುತ್ತಿದ್ದೇವೆಂದು ಭ್ರಮಿಸುತ್ತಿರುವ ನಮಗೆ ಶಾಂತಿ,

ಸಂತೋಷ, ಉಲ್ಲಾಸ, ಗೆಲುವು ಹೇಗೆ ದೊರೆಯುತ್ತದೆ? ಅಪಾಯ, ಆಪತ್ತು, ಗಂಡಾಂತರ, ಕಂಟಕಗಳನ್ನು ಎದುರಿಸಲು ಅಪಾರ ಸೈನ್ಯ, ನೌಕಾಪಡೆ, ವಾಯುಪಡೆ, ಟ್ಯಾಂಕ್‌ಪಡೆ, ಮಿಸ್ಸೈಲ್‌ಗಳ ಅವಶ್ಯಕತೆಗಳಂತೆ ಶಿಸ್ತು, ಸ್ಥೈರ್ಯ, ಸ್ವಾಮಿನಿಷ್ಠೆ, ರಾಜನಿಷ್ಠೆ, ಸ್ವಾಭಿಮಾನ, ಆತ್ಮಗೌರವ, ಆತ್ಮವಿಶ್ವಾಸ, ಮನೋಧಾರ್ಢ್ಯ, ಪ್ರಾಮಾಣಿಕತನ ಇವುಗಳ ಅವಶ್ಯಕತೆ ಇವೆಯಲ್ಲವೇ? ಇವುಗಳ ಕೊರತೆಯಿಂದ ದೇಶ ಹಿಂಸಾಚಾರ, ಭಯೋತ್ಪಾದನೆ, ಆತಂಕತನಗಳಿಂದ ಬಳಲಿ ಬೆಂಡಾಗಿದೆ ಯಲ್ಲವೇ?

ಶಿಸ್ತು, ಸ್ಥೈರ್ಯ, ಶ್ರದ್ಧೆ, ನಿಷ್ಠೆ, ನಿಯತ್ತು ಇವುಗಳನ್ನು ಪಾಲಿಸಿರಿ ಎಂದರೆ ಯಾಕೆ ನಮ್ಮ ಜನಗಳು ರೊಚ್ಚಿಗೆದ್ದು ಎಗರಿಬೀಳುತ್ತಾರೆ? ಕರ್ತವ್ಯನಿಷ್ಠ, ನಿಷ್ಠಾ ವಂತರಾಗಿ ಎಂದರೆ ಕೋಪಿಷ್ಠರಾಗಿ ಹಲ್ಲು ಮಸೆಯುತ್ತಾರೆ! ಈ ಮನೋಭಾವ, ಉತ್ಸಾಹ, ಆಕಾಂಕ್ಷೆಗಳ ಅಭಾವದಿಂದಲೇ ನಾವು ಶತಮಾನಗಳಿಂದ ದಾಸ್ಯಕ್ಕೆ ಗುರಿಯಾದವೇ?

ಸ್ವತಂತ್ರರಾಗಬೇಕೆಂಬ ಕಲ್ಪನೆ, ಆ ಸೆ, ಉತ್ಸಾಹ, ಭಾರತೀಯರಲ್ಲಿ ಇಲ್ಲ ದಿರುವಾಗ, ಒಬ್ಬ ಐರಿಷ್ ವ್ಯಕ್ತಿ, ಹ್ಯೂಮ್ ಮಹಾಶಯ, ಇಂಡಿಯನ್ ನ್ಯಾಷನಲ್ ಕಾಂಗ್ರೆಸ್‌ನ್ನು ಸ್ಥಾಪಿಸಿದವ, ೧೮೮೫ರಲ್ಲಿ ಒಂದು ಹೇಳಿಕೆ ನೀಡಿ, ತನ್ನ ಅಳಲನ್ನು ತೋಡಿಕೊಂಡಿದ್ದ...... "..... ತಮ್ಮ ನಾಡಿನ ಬಗ್ಗೆ ಸಾಕಷ್ಟು ಪ್ರೇಮ ಮತ್ತು ಸ್ವಾಭಿಮಾನ, ಹೊಂದಿದ್ದು, ಮುನ್ನುಗ್ಗಿ ಸಾಕಷ್ಟು ನಿಜವಾದ ಮತ್ತು ನಿಸ್ವಾರ್ಥ ದೇಶಾಭಿಮಾನ ಇದ್ದ ಕೊನೇ ಪಕ್ಷ ಐವತ್ತು ಮಂದಿಯೂ ಸಿಗದಿದ್ದರೆ..... ಭಾರತಕ್ಕೆ ಯಾವ ಆಸೆಯೂ ಇರುವುದಿಲ್ಲ. ಅದರ ಮಕ್ಕಳು, ವಿದೇಶಿಯರ ಸ್ವತ್ತಾಗಿ ಹೀನ, ಧಾರುಣ ಕೈಗೊಂಬೆಗಳಾಗಿರುತ್ತಾರೆ."

ನಮ್ಮ ಧಾರುಣ, ಕರುಣಾಜನಕ ದಾಸ್ಯದ ಪರಿಸ್ಥಿತಿಯನ್ನು ಒಬ್ಬ ವಿದೇಶಿ ಎತ್ತಿ ತೋರಿಸಿಕೊಡಬೇಕಾದದ್ದು ನಮ್ಮ ದಾಸ್ಯ ಮನೋಭಾವದ ಹೀನಸ್ಥಿತಿ ಎಷ್ಟು ಶೋಚನೀಯ? ನಿರಂತರವಾಗಿ ದಾಸ್ಯಕ್ಕೆ ಗುರಿಯಾದದ್ದು ಈ ಮನೋಭಾವಕ್ಕೆ ಕಾರಣವೇ? ಉತ್ಕಟ ದೇಶಾಭಿಮಾನದ ಕೊರತೆ ಯಾಕೆ ನಮ್ಮನ್ನು ಆವರಿಸಿ ಕೊಂಡಿತು?

ನಮ್ಮನ್ನೂ ಆಳಿದವರು ಪ್ರೀತಿ ವಾತ್ಸಲ್ಯಗಳಿಂದ ಆಳಿದರೆ ನಮ್ಮ ಮೇಲೆ ದಬ್ಬಾಳಿಕೆ, ಹಿಂಸೆ, ದುರಾಚಾರಗಳನ್ನು ಎಸೆಗಿದ್ದರೆ ನಾವು ಧರಣಿ ಎದ್ದು ಅವರ ಹಿಡಿತದಿಂದ ಬಿಡಿಸಿಕೊಂಡು ವಿಮುಕ್ತರಾಗುತ್ತಿರಲಿಲ್ಲವೇ? ನಮ್ಮ ದೇಶದ ಮೇಲೆ, ನಮ್ಮ ಧ್ಯೇಯಗಳ ಮೇಲೆ, ನಮ್ಮ ಧರ್ಮ, ಸಂಸ್ಕೃತಿಗಳ ಮೇಲೆ, ನಮ್ಮ ನೆಲದ

ಮೇಲೆ, ನಮ್ಮ ಗುಡಿಗೋಪುರಗಳ ಮೇಲೆ ಅತ್ಯಾಚಾರ, ಹಿಂಸೆ ನಡೆದವೆ? ಎಲ್ಲಿ ಹಿಂಸೆ, ಅತ್ಯಾಚಾರ ಜರುಗಿದವೋ ಅಲ್ಲಿ ಕ್ರಾಂತಿ ನಡೆದು, ಹೊಸ ಧರ್ಮ, ಜನಾಂಗ, ರಾಜ್ಯಗಳಿಗೆ ಹುಟ್ಟುಕೊಂಡಿವೇ. ಔರಂಗ್‌ಜೇಬ್‌ನ ಅತ್ಯಾಚಾರದಿಂದ ಸಿಖ್‌ರು ಕತ್ತಿ ಹಿಡಿದು ರಾಜ್ಯ ಕಟ್ಟುವಂತಾಯಿತಲ್ಲವೆ? ಶಿವಾಜಿ ಪ್ರಬಲ ಮರಾಠ ರಾಜ್ಯ ಸ್ಥಾಪನೆಗೆ ಕಾರಣನಾದನಲ್ಲವೇ? ಬ್ರಿಟಿಷ್‌ರ ಜಲಿಯನ್‌ವಾಲಾಬಾಗ್‌ನ ಹಿಂಸಾಚಾರದಿಂದ ಭಾರತದ ಸ್ವಾತಂತ್ರ್ಯ ಕಹಳೆ ಊದುವಂತಾಯಿತಲ್ಲವೇ?

ನಮ್ಮ ರಾಷ್ಟ್ರೀಯ ಗುಣಗಳು ಏನು? ಯಾವುವು? ಹೇಗೆ ಹುಟ್ಟಿಕೊಂಡವು. ಈ ಪ್ರಶ್ನೆಗಳಿಗೆ ಉತ್ತರ ಎಲ್ಲಿ ಹುಡುಕುವುದು?

ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯ ಸ್ಥಾಪನೆಗೆ ಮುಖ್ಯ ಕಾರಣಕಾರನಾಗಿ, ಪ್ರತಿಷ್ಠಿತ ಬ್ರಿಟಿಷ್ ಆಡಳಿತಗಾರ ಮನ್ರೋಮಹಾಶಯ ತನ್ನ ಅನಿಸಿಕೆಯನ್ನು ತನ್ನ ಕಳಕಳಿಯನ್ನು ಬಹಳ ಸಮರ್ಥವಾಗಿ ೧೮೭೦ರಲ್ಲಿ ಅರ್ಪಿಸಿದ್ದಾನೆ. "ಇಲ್ಲಿನ ಜನರು, ಅವರನ್ನು ಆಳುವವರು ಯಾರೇ ಆಗಿರಲಿ- ಯುರೋಪಿಯನ್, ಮುಸ್ಲಿಮ್ ಅಥವಾ ಸ್ಥಳೀಯ ರಾಜರಾಗಿರಲಿ, ಉದಾಸೀನರಾಗಿ, ತಟಸ್ಥರಾಗಿ ಬಿಡುತ್ತಾರೆ. ಸೋಲು ಅಥವಾ ಗೆಲುವು, ಅವರಿಗೆ ಸಂಬಂಧಪಟ್ಟ ವಿಷಯವಾಗಿರದೆ, ಅದು ತಮ್ಮನ್ನು ಆಳುವವರ ಒಳ್ಳೆಯ ಅಥವ ಕೆಟ್ಟ ಅದೃಷ್ಟ, ಎಂಬ ನಿಲುವು ಹೊಂದಿರುತ್ತಾರೆ; ಮತ್ತೆ ಅವರು ತಮಗೆ ಯಾರು ತಮ್ಮ ಧಾರ್ಮಿಕ ಪದ್ಧತಿಯನ್ನು ಗೌರವಿಸುತ್ತಾರೋ ಅಥವಾ ಕರಭಾರ ಕಡಿಮೆ ಮಾಡುತ್ತಾರೋ, ಅಂತಹ ಆಳುವವರನ್ನು ಆಶಿಸುತ್ತಾರೆ."

ನಮ್ಮ ಧಾರ್ಮಿಕ ಪದ್ಧತಿಗಳಿಗೆ ಕೈ ಹಾಕದಿದ್ದರೆ, ಯಾರು ಬೇಕಾದರೂ ನಮ್ಮನ್ನು ಆಳಿ ಸಂತುಷ್ಟರಾಗಿ ನಮ್ಮನ್ನು ಸಂತುಷ್ಟರನ್ನಾಗಿ ಮಾಡಬಹುದಾಗಿತ್ತೆ? ಕರಭಾರ ಕಡಿಮೆಮಾಡಿದಾಗ, ಆಳುವವರು ಯಾರೇ ಆಗಿರಲಿ, ಯಾವ ಜಾತಿಕುಲ, ಧರ್ಮೀಯರೇ ಆಗಿರಲಿ, ಯಾವ ದೇಶದವರೇ ಆಗಿರಲಿ, ಅವರನ್ನು ನಾವು ಪ್ರೀತಿಯಿಂದ ಕಂಡು, ಅವರ ಜೈಕಾರ ಮಾಡುವ ಪ್ರವೃತ್ತಿ ನಮ್ಮಲ್ಲಿ ಬೆಳೆದು ಬಂದಿದೆಯೆ? ಹಾಗಾದರೆ, ನಮ್ಮಲ್ಲಿ ಕೆಚ್ಚು, ರೊಚ್ಚು, ಪ್ರತೀಕಾರ ಮನೋಭಾವ, ರಾಷ್ಟ್ರೀಯ ಮನೋಭಾವ ಬೆಳೆಯಬೇಕಾದರೆ, ನಮ್ಮ ಕಣ್ಣೆದುರು, ನಮ್ಮ ಮುಂದೆ, ಹೆಣ್ಣು ಮಕ್ಕಳ ಅಪಹರಣ, ಮಾನಹಾನಿ, ಕಿರುಕುಳ, ದುರಾಚಾರ, ನೀಚತನ, ಹೆಂಗಸರ ಮೇಲೆ ಅತ್ಯಾಚಾರ, ಹಸುಳೆಗಳ ಹತ್ಯೆ, ನಿರಪರಾಧಿಗಳ ಹಿಂಸೆ, ದುರಾಚಾರ, ಮನೆ ಮಠಗಳ ನಾಶ, ಧ್ವಂಸ, ಬೆಳೆಹಾನಿ ಜರುಗಿಸಬೇಕೆ? ತಾಯಂದಿರ ಕಣ್ಣೆದುರು ಹಸುಗೂಸಿನ ಕರಳು ಕಿತ್ತು ಒಗಾಯಿಸಬೇಕೆ? ತಂದೆತಾಯಂದಿರ ಕಣ್ಮುಂದೆ ಅವರ ಹೆಣ್ಣು ಮಕ್ಕಳ ಶೀಲಹರಣ ಮಾಡಿ, ಅಟ್ಟಹಾಸ ಗೈಯಬೇಕೆ? ಗಂಡನ ಮುಂದೆ ಹೆಂಡತಿಯ

ಅಪಹರಣವಾಗಿ ಅವರ ಮಾನಮರ್ಯಾದೆ ಶೀಲಹರಣ ಮಾಡಬೇಕೆ? ಮನೆ-ಮಠಗಳಿಗೆ ಬೆಂಕಿ ಇಟ್ಟು, ನಿಶ್ಕಳಂಕ ಜನರನ್ನು ನಿರ್ಗತಿಕರನ್ನಾಗಿ ಮಾಡಬೇಕೆ?

ಹಗಲುಗನಸು ಕಾಣುತ್ತಿದ್ದ ನನಗೆ ಒಮ್ಮೆಲೆ ತಮಿಳುಹುಡುಗಿ ಕಮಲಳ ನೆನಪಾಯಿತು. ಯಾಕೆ ಅವಳನ್ನು ಕಂಡು ಮಾತನಾಡಿಸಿ ಬರಬಾರದು? ಹೇಗೂ ಈ ದಿನ ಅವಳು ಕೆಲಸ ಮಾಡುವ ಮಾಲವೀಯನಗರ ಶಾಖೆಗೆ ರಜೆ ಇಲ್ಲ. ನನ್ನ ರಜಾದಿನವನ್ನು ಆ ಶಾಖೆಯಲ್ಲಿ, ಸ್ನೇಹಿತರ ಜೊತೆ ಕಳೆಯಬಾರದು ಎಂದು ಎಣಿಸಿ, ಹೊದ್ದಿದ್ದ ರಜಾಯಿಯನ್ನು ಪಕ್ಕಕ್ಕೆ ಸರಿಸಿ, ಮೇಲಕ್ಕೆದ್ದು, ಕಿಟಕಿಯ ಬಾಗಿಲನ್ನು ಸರಿಸಿದೆ. ತಣ್ಣಗಿನ ಗಾಳಿ ಒಳಕ್ಕೆ ನುಗ್ಗಿ, ಸ್ವೆಟರ್‌ನ ನೂರಾರು ಸಂದುಗಳಿಂದ ನುಸುಳಿ ನನ್ನ ದೇಹವನ್ನು ಚುಚ್ಚಿತು. ಒಡನೆ ಕಿಟಕಿ ಬಾಗಿಲನ್ನು ಮುಚ್ಚಿ ಲಗುಬಗನೆ ಪ್ರಾರ್ಥ ವಿಧಿಯನ್ನು ಪೂರೈಸಿ, ಕುತುಬ್‌ಮೀನಾರ್ ಮೆಟ್ಟಿಲಿಳಿದು, ರಸ್ತೆಗೆ ಕಾಲಿರಿಸಿದೆ. ನಡೆದೇ, ಹತ್ತಿರದಲ್ಲಿದ್ದ ಉಡುಪಿ ಹೋಟೆಲ್‌ಗೆ ನುಗ್ಗಿ ಬಿಸಿಬಿಸಿ ಇಡ್ಲಿ, ಕಾಫಿ ಹೊಟ್ಟೆಗೆ ಹಾಕಿಕೊಂಡು, ಬಸ್ ಹಿಡಿದು ಮಾಲವೀಯನಗರದ ನಮ್ಮ ಶಾಖೆಗೆ ಬಂದಾಗ, ಗಂಟೆ ಹನ್ನೊಂದಾಗಿತ್ತು.

ಮೇನೇಜರ್ ಸೀಟ್‌ನಲ್ಲಿ ಕುಮಾರ್ ಕುಳಿತಿದ್ದ. ನನ್ನನ್ನು ನೋಡಿ, ಸಂತೋಷ ಗೊಂಡ. ಗುಂಡೇಟು ಬಿದ್ದು, ಸ್ವಲ್ಪದರಲ್ಲಿ ಬಚಾವ್ ಆಗಿ ಬದುಕಿ ಉಳಿದ ಕುಮಾರ್, ದಿಲ್ಲೀಯಿಂದ ಬಿಡುಗಡೆ ಹೊಂದಲು, ತನ್ನೂರಾದ ಹುಬ್ಬಳ್ಳಿಗೆ ವರ್ಗ ಮಾಡಿರಿ ಎಂದು ಪ್ರಾರ್ಥನೆ ಸಲ್ಲಿಸಿದ್ದ.

"ಇದೇ ಊರಿನಲ್ಲಿದ್ದರೆ, ನನ್ನನ್ನು ಜೀವಸಹಿತ ಉಳಸೋದಿಲ್ರೀ!"

ಎತ್ತರದ ಧ್ವನಿಯಲ್ಲಿ ಮಾತನಾಡಿದ ಕುಮಾರ್.

ಗುಂಡೇಟು ತಿಂದರೂ, ಗಂಡು ಧ್ವನಿಯ ಅಬ್ಬರ ಕಡಿಮೆಯಾಗಿರಲಿಲ್ಲ!

"ನೀವು ಯಾಕ್ರೀ ಗನ್‌ಮೆನ್ ಜವಾನನ ಹತ್ತಿರ ಜಗಳವಾಡಲಿಕ್ಕೆ ಹೋದ್ರಿ?" ಕೇಳಿದೆ.

"ಜಗಳ? ಅವನ ಕೂಡ? ನಾ ಯಾಕೆ ಆಡ್ಲೀ? ಅವ ಕುಡಿದು ಬಂದಿದ್ದ ರೀ! ಕುಡಿದು ಬಂದಿದ್ದ ಆ ದಿನ!"

"ಕುಡಿದು ಬಂದಿದ್ದ ಮೇಲೆ, ಜಗಳ ಆಡಾಕೆ ಯಾಕೆ ಹೊಂಟ್ರೀ?" ಅವನದೇ ಧಾಟಿಯಲ್ಲಿ ಕೇಳಿದೆ.

"ಜಗಳ ಮಾಡಲಿಲ್ಲಪ್ಪಾ! ಬ್ಯುಸಿನೆಸ್ ಟಾಯಿಮ್ ಆದ ಮೇಲೆ ಯಾರಿಗೂ ಬಾಗಿಲು ತೆಗೀಬೇಡ. ಬಾಗಿಲು ಬಂದ್ ಮಾಡಿಬಿಡು, ಅಂತ ತಾಕೀತು ಕೊಟ್ಟಿದ್ದೆನ್ರೀ! ಅದೇ ರೀತಿ ಶಿಸ್ತಿನಿಂದ ಮಾಡುತ್ತಿದ್ದ ಅವ! ಅಂದ ಮಾತ್ರ, ಬ್ಯುಸಿನೆಸ್ ಟಾಯಿಮ್

ಆಗಿ, ಊಟದ ಸಮಯದಲ್ಲಿ, ನಮ್ಮ ಶಾಖೆಯ ಕಸ್ಟಮರ್- ಶರ್ಮಾಂತ ಅವರ ಹೆಸರು. ನನ್ನ ಭೇಟಿಯಾಗಲಿಕ್ಕೆ ಬಂದರೀ. ಇವ ಬಾಗಿಲೇ ತೆಗೆಯವಲ್ಲ! ಸಾಹೇಬರ ಅಪ್ಪಣೆಯಾಗಿದೆ ಬಾಗಿಲು ತೆಗೆಯಬಾರದು ಎಂದು ಹೇಳಿ ಬಾಗಿಲು ತೆರೆಯಲೇ ಇಲ್ಲ! ನಾ ತೆಗೆಯಪಾ ಬಾಗಿಲಾ ಎಂದರೇ ತೆಗೆಯುವುದಿಲ್ಲ ಅಂತಾನಾ!"

ನನಗೆ ಆಶ್ಚರ್ಯವಾಗಿತ್ತು. ಶಿಸ್ತಿನ ಸಿಪಾಯಿ ಈ ಜಾಟ್ ಜವಾನ-ಗನ್‌ಮನ್! ಸೈನ್ಯದಲ್ಲಿ ಸೇವೆ ಸಲ್ಲಿಸಿದವ! ಇವ ಯಾಕೆ ಹೀಗೆ ಮಾಡಿದ? ವಾಚ್‌ಮನ್ ಆಗಿ ಕೆಲಸಕ್ಕೆ ಸೇರಿಕೊಂಡವ ಹೀಗೇಕೆ ವರ್ತಿಸಿದ? ಕುಡಿದ ಕಾರಣಕ್ಕಿರಬಹುದೇ?

"ಕೊನೆಗೇ ನಾನೇ ಹೋಗಿ ಬಾಗಿಲು ತೆರೆದು, ಶರ್ಮಾರನ್ನು ಒಳಗೆ ಬರಮಾಡಿಕೊಂಡೆನ್ರೀ! ಗನ್‌ಮನ್ ಮೇಲೆ ಕೋಪ ಬಂತ್ರೀ. ಎಲಾ ಇವನಾ! ನನ್ನ ಮಾತಿಗೆ ಬೆಲೆ ಕೊಡದೇ, ಕಸ್ಟಮರ್, ಸ್ಟಾಫ್‌ನೆದುರು ಮಾನ ತೆಗೆಯಾಕೆ ಹತ್ತಾನಲ್ರೀ ಅಂತ!"

"ಕಾರಣ ಕೇಳಲಿಲ್ಲವಾ?"

"ಕೇಳದನ್ರೀ, ಕೇಳಿದೆ! ಅವ ಏನ್ ಹೇಳಿದಾ ತಿಳಿತೇನ್ರೀ? 'ಮೇನೇಜರ್ ಆಗಿ ನೀವೇ ನಿಯಮ ಮುರಿದ್ರೆ ಹೇಗ್ರಿ? ಬಾಗಿಲು ತೆಗೀಬಾರದೂ ಎಂದು ಹೇಳಿ, ನೀವೇ ತೆಗೀ ಅಂದರೆ ನಾನು ಹೇಗೆ ತೆಗೀಲೀ?' ಅಂತಾನ್ರೀ! ಇವನಿಗೆ ಏನು ಹೇಳುವುದು? ನಾ ಹೆಡ್ ಆಫೀಸ್‌ಗೆ ದೂರು ಕೊಡ್ತೇನೆ ಅಂತ ಹೆದರಿಸಿ, ರಿಪೋರ್ಟ್ ಬರೀಲಿಕ್ಕೆ ಶುರುಮಾಡಿದೇನ್ರೀ! 'ಬೇಡ! ಸಾಬ್! ರಿಪೋರ್ಟ್ ಮಾಡಬೇಡ್ರಿ! ನಾ ಏನ್ ತಪ್ಪು ಮಾಡಿಲ್ರೀ! ಮಾಡಬೇಡ್ರೀ! ಅಂತ ಹೇಳಲಿಕ್ಕೆ ಶುರುಹಚ್ಚಿದ. ನಾನು ಬರೀತಾನೆ ಇದ್ದೇನ್ರೀ! ಬಂದೂಕ ತೆಗೆದು ನನ್ನ ಎದೆಗೆ ಗುರಿ ಇಟ್ಟು, 'ಸುಟ್ಟುಬಿಡ್ತೇನೆ' ಎಂದು ಹೆದರಿಸಿದ ನೋಡ್ರೀ. ನಾ ಬರೀತಾನೆ ಇದ್ದೇನ್ರೀ. ಅವ ತಮಾಷೆ ಮಾಡ್ತಾನೇ ಇದ್ದಾನ್ರೀ ಎಂದು ನೆನೆಸಿದೇರೀ! 'ನಾನು ಫಾಯಿರ್ ಮಾಡ್ತೇನೆ!' ಮಾರ್ ಡಾಲೂಂಗಾ!' ಅಂತ ಹೇಳುತ್ತಾನೆ ಇದ್ದಾನ್ರೀ! ನಮ್ಮ ಕಸ್ಟಮರ್ ಶರ್ಮಾರು ಇದ್ದಲ್ರೀ- ಅವರಿಗೆ ಗಾಬರಿಯಾತ್ರೀ. ಅವರು ಕುಳಿತಿದ್ದವರು ಎದ್ದು, ನನ್ನ ಏದೀಗೆ ಹಿಡಿದಿದ್ದ ಬಂದೂಕನ್ನು ಪಕ್ಕಕ್ಕೆ ಎಳೆದರು ನೋಡ್ರೀ! ಢಮ್ ಅಂತ ಹೊಡೆದೇ ಬಿಟ್ಟಿದ್ದ ಗನ್‌ನ್ನು ಜವಾನ! ನನ್ನ ಕೈ ತೋಳಕ್ಕೆ ಗುಂಡು ಸವಿರುಕೊಂಡು, ಗೋಡೆಗೆ ಹೋಗಿ ಬಿತ್ತು ನೋಡ್ರೀ! ನನಗೆ ಮೂರ್ಛೆ ಹೋಗಿತ್ತು ರೀ! ಹಾಗೆ ಒರಗಿಬಿದ್ದೆ ನೋಡ್ರೀ!"

ಕುಮಾರ್ ಸತ್ತಿರಲಿಲ್ಲ! ಆದರೆ ಅವನ ತೋಳಿನಿಂದ ಒಸರಿದ ರಕ್ತ ಮೂರ್ಛೆಯಿಂದ ಬಿದ್ದ ಅವನ ದೇಹವನ್ನು ಕಂಡ, ಜನರು, ಅವನು ಸತ್ತನೆಂದು

ಬಗೆದಿದ್ದರು. ಆಸ್ಪತ್ರೆಗೆ ಸಾಗಿಸಿದಾಗ, ಡಾಕ್ಟರ್ ಅವನಿಗೆ ಪ್ರಥಮ ಚಿಕಿತ್ಸೆ ನೀಡಿ, ಮನೆಗೆ ಕಳುಹಿಸಿದ್ದರು. ಸುದ್ದಿ ಹರಡಿತ್ತು. ಕುಮಾರ್‌ಗೆ ಗುಂಡೇಟು ಬಿದ್ದು ಸತ್ತನೆಂದು. ಸುದ್ದಿ ತಿಳಿದ ಕಪೂರ್ ನನಗೂ ಫೋನ್ ಮಾಡಿ ತಿಳಿಸಿದ್ದ- ಕುಮಾರ್‌ಗೆ ಗುಂಡೇಟು ಬಿದ್ದಿದೆ ಎಂದು!

"ನಮಸ್ಕಾರ!" ಬಾಗಿಲ ಬಳಿ ನಿಂತಿದ್ದಳು ತಮಿಳುಕುಮಾರಿ ಕಮಲ!

"ನಮಸ್ಕಾರ" ಎಂದು ಹೇಳಿ, ಕುಳಿತುಕೊಳ್ಳಲಿಕ್ಕೆ ಹೇಳಿದೆ ಅವಳಿಗೆ. ಪಕ್ಕದ ಕುರ್ಚಿಯಲ್ಲಿ ಕುಳಿತು ಅವಳು ಹೇಳಿದಳು:

"ಕುಮಾರ್ ಸತ್ತು ಬದುಕಿದ ಕಥೆ ಕೇಳುತ್ತಿದ್ದೀರಾ ಸಾರ್!"

"ಹೌದು!" ಎಂದೆ.

"ನಾನು ಹೇಳಿದೆ ಸಾರ್ ಇವರಿಗೆ-ನಿಮ್ಮ ಈ ಸಾಹಸದ ಕಥೆಯನ್ನು ಟೇಪ್‌ನಲ್ಲಿ ರೆಕಾರ್ಡ್ ಮಾಡಿ, ಬಂದವರಿಗೆಲ್ಲಾ ಅದನ್ನು ಹಾಕಿ, ಕೇಳಿಸಿ ಬಿಡಿ, ಯಾಕೆ ಬಾಯಿ ಒಣಗಿಸಿಕೊಳ್ಳುತ್ತೀರಿ ಎಂದು! ಆದರೆ ಇವರು ಕೇಳಬೇಕಲ್ಲಾ! ಯಾರೇ ಬರಲಿ, ಬಾಯಿ ಬೀಗ ತೆಗೆದು, ಟೇಪ್ ಹಚ್ಚಿಬಿಡುತ್ತಾರೆ. ಇವರ ಕಥೆ ಎಷ್ಟು ರಿಪೀಟ್ ಆಗಿದೆ ಎಂದರೆ, ಅದು ಗ್ರಾಹಕರಿಗೆ ಬೋರ್ ಆಗಿ, ಇವರು ಬ್ಯಾಂಕ್‌ನಲ್ಲಿದ್ದರೆ, ಒಳಗೇ ಬರುವುದಿಲ್ಲ!"

ಗನ್‌ಮನ್- ಜವಾನನ ಗುಂಡೇಟಿಗಿಂತ, ಈಕೆ ಹೊಡೆದ ಗುಂಡೇಟು ತೀವ್ರವಾಗಿತ್ತು!

ಕುಮಾರ್‌ನ ಹುಮ್ಮಸ್ಸು ಬರ್‍ರನೆ ಇಳಿಯಿತು. ಹುಬ್ಬು ಗಂಟಿಕ್ಕಿದ.

"ನನ್ನ ಹತ್ಯೆಯಾಗಿದ್ದರೆ, ಏನು ಹೇಳುತ್ತಿದ್ದಿರಿ? ಖುಷಿ ಪಡುತ್ತಿದ್ದಿರಿ ಅಂತ ಕಾಣುತ್ತದೆ?" ಕಾರವಾಗಿ ಹೇಳಿದ.

"ಏನೂ ಹೇಳುತ್ತಿರಲಿಲ್ಲ! ನಮಗೆ ಒಂದು ದಿನದ ರಜೆ ಸಿಗುತ್ತಿತ್ತು!"

ಗೊಳ್ಳನೆ ನಕ್ಕೆ ನಾನು! ಮರುಕ್ಷಣ ಎಚ್ಚೆತ್ತುಕೊಂಡೆ. ಅವಳ ಜೋಕಿಗೆ ನಗಬಾರದಿತ್ತು ಎಂದುಕೊಂಡೆ.

"ಜಾಟ್ ಜವಾನನಿಗೆ ನಿಮ್ಮ ಮೇಲೆ ಏಕೆ ಅಷ್ಟು ಕೋಪ? ಗುಂಡು ಹೊಡೆಯುವಷ್ಟು?" ಸಂವಾದದಲ್ಲಿ ನಾನು ಭಾಗವಹಿಸಲು ಯತ್ನಿಸಿದೆ.

"ಜಾಟ್‌ರಿಗೆ ಕೋಪ ಹೆಚ್ಚು! ಜೊತೆಗೆ ಕುಡಿದಿದ್ದ ಅವ! ಯಾರ್‍ರೀ ಯೋಚಿಸಿದ್ದರು ಅವ ಹಿಂಗ್ ಮಾಡುತ್ತಾನೆ ಅಂತ!"

"ಜಾಟ್‌ನಿಗೆ ಕೋಪ ಜಾಸ್ತಿ ಅಂತ ಯಾಕೆ ಅವನ ಮೇಲೆ ತಪ್ಪು ಕೂರಿಸು

ತ್ತೀರಾ? ನಿಮಗೆ ಕೋಪ ಹೆಚ್ಚಿಲ್ಲವಾ? ನೀವೇನು ಜಾಟ್‌ರೇನು? ಅಹಿಂಸಾ ಪ್ರವಾದಿ ಜೈನ್‌ರು ನೀವು! ನಿಮಗ್ಯಾಕೆ ಕೋಪ ಬರುತ್ತದೆ?"

"ನೋಡಿ ಮೇಡಮ್! ಇಲ್ಲಿ ಧರ್ಮದ ಪ್ರಶ್ನೆ ಬರುವುದಿಲ್ಲ! ನಾನು ಜೈನ್ ಇರಬಹುದು! ಜೈನ್ ಆದರೆ ಕೋಪ ಬರಬಾರದು ಅಂತಿಲ್ಲ!"

ಜೈನ್ ಕುಮಾರ್‌ನಿಗೆ ನಿಧಾನವಾಗಿ ಸಿಟ್ಟು ಏರುತ್ತಿತ್ತು.

"ಮತ್ತೆ ಜಾಟ್‌ರಿಗೆ ಸಿಟ್ಟು ಜಾಸ್ತಿ ಅಂತ ಹೇಳಬಹುದಾ ನೀವು?"

ನಗುತ್ತಾ ಹೇಳಿದಳು ತಮಿಳುಕುಮಾರಿ.

"ಕಾರಣ ಇಲ್ಲದೆ ಕೋಪ ಯಾರೂ ಮಾಡಿಕೊಳ್ಳುವುದಿಲ್ಲ. ಜಾಟ್ ಜವಾನನಿಗೆ ಯಾಕೆ ನಿಮ್ಮ ಮೇಲೆ ಕೋಪ?"

ಸಂವಾದದ ಎಳೆಯನ್ನು ಹಿಡಿದು ಜಗ್ಗಿದೆ ನಾನು. ಅದು ಎಲ್ಲೋ ತಪ್ಪಿಸಿ ಕೊಂಡು ಓಡಿಹೋಗುವುದನ್ನು ಕಂಡುತಪ್ಪಿಸಲು.

"ಕಾರಣ ನಾನು ಹೇಳುತ್ತೇನೆ ಕೇಳ್ರೀ! ಇವರ ದಬ್ಬಾಳಿಕೆ ಜಾಸ್ತಿಯಾಯಿತು ಶಾಖೆಯಲ್ಲಿ! ದಬ್ಬಾಳಿಕೆ ಜಾಸ್ತಿಯಾದರೆ, ವಿರೋಧ ಹುಟ್ಟುಕೊಳ್ಳುವುದು ಸ್ವಾಭಾವಿಕ! ಏನು ಹೇಳ್ತೀರಿ ಸಾರ್!" ಎಂದು ನನ್ನನ್ನು ಪ್ರಶ್ನಿಸಿದಳು.

"ಹೌದು" ಎಂದು ನಾನು ಒಪ್ಪಿಕೊಂಡೆ.

ದಬ್ಬಾಳಿಕೆಯ ವಿಷಬೀಜ ಬಿತ್ತಿದರೆ, ವಿರೋಧದ ಮೊಳಕೆ ಒಡೆದು, ಗಿಡವಾಗಿ, ಹೆಮ್ಮರವಾಗಿ ಬೆಳೆಯುವುದು ಸ್ವಾಭಾವಿಕ! ಇಂತಹ ಗಿಡ, ಮರಗಳನ್ನು ಕಿತ್ತು ಎಸೆಯಲು ಕತ್ತಿ, ಕೊಡಲಿ ಉಪಯೋಗಿಸಿದರೂ, ಮತ್ತೆ ಮತ್ತೆ ಚಿಗುರಿ ಅದು ವಿಷವೃಕ್ಷವಾಗಿ ಜನರಿಗೆ ಕಂಟಕಪ್ರಾಯವಾಗುತ್ತಲೇ ಇರುತ್ತದೆ.

"ಕೆಲಸ ತೆಗೆದುಕೊಳ್ಳಬೇಕಾದರೆ, ಕೆಲವು ಸಲ ಜಬರ್‌ದಸ್ತ್ ಮಾಡಬೇಕಾ ಗುತ್ತದೆ. ಅದನ್ನು ನೀವು 'ದಬ್ಬಾಳಿಕೆ' ಎಂದು ಹೇಳಿ ಹೆಸರಿಡ್ತೀರಿ. ನಯವಾಗಿ, ಚಂದ ಮಾಡಿ, ಮಾತನಾಡಿ, ಆದೇಶ ನೀಡಿದರೆ, 'ಇವ ಪುಕ್ಕ, ಹೆಂಗಸಿನ ಹಾಗೆ, ಕೆಲಸ ತೆಗೆದುಕೊಳ್ಳಲು ಬರುವುದಿಲ್ಲ' ಎಂದು ಹೇಳಿ ಕೆಲಸ ಕೂಡ ಸರಿಯಾಗಿ ಮಾಡುವುದಿಲ್ಲ. ಇದಕ್ಕೇನು ಹೇಳುತ್ತೀರಿ!" ಕುಮಾರ್ ಪ್ರಶ್ನಿಸಿದ.

"ಮಧ್ಯಮ ಮಾರ್ಗವೊಂದಿದೆ. ಎಲ್ಲವೂ ಹಿತಮಿತವಾಗಿ ನಡೆದರೆ ಚೆನ್ನ. ದಬ್ಬಾಳಿಕೆ ಮಾಡಿದರೂ, 'ಬೆನೆವೆಲಂಟ್ ಡಿಕ್ಟೇಟರ್‌ಶಿಪ್' ಅನ್ನುತ್ತಾರಲ್ಲಾ- ಹಾಗೆ ಇದ್ದರೆ ಚಂದ! ಅಲ್ಲವೇ?"

ತಮಿಳು ಕುಮಾರಿ ನಗುತ್ತಾ ಹುಬ್ಬು ಕುಣಿಸುತ್ತಾ, ಕೈಯಾಡಿಸುತ್ತಾ ನುಡಿಯು ವಾಗ, ಹೆಣ್ಣು ಬುದ್ಧಿವಂತೆ ಎನ್ನಿಸಿತು. ಓದಿ ತಿಳಿದುಕೊಂಡಿದ್ದಾಳೆ, ಪರವಾಗಿಲ್ಲ.

"ನಮ್ಮ ಭಾಷೆಯಲ್ಲಿ ಒಂದು ಗಾದೆ ಇದೆ. 'ಬಿಸಿಯಾಗದೆ ಬೆಣ್ಣೆ ಕರಗದು' ಎಂದು. ಇಲ್ಲಿಯ ಜನಗಳಿಗೆ ಬಿಸಿ ಮಾಡದೇ ಹೋದರೆ, ಕರಗುವುದೇ ಇಲ್ಲ. ಇದಕ್ಕೇನು ಹೇಳುತ್ತೀರಿ?"

"ಬೆಣ್ಣೆ ಕಾಸಿ, ಬಿಸಿ ಮಾಡಿ, ಹದ ಮಾಡಿದರೆ ತುಪ್ಪ ಸಿಗುತ್ತದೆ. ಬಿಸಿ ಜಾಸ್ತಿಯಾದರೆ, ಬೆಣ್ಣೆ ಕರಗಿ ಕರಟು, ವಾಸನೆಯಾಗಿ, ಕೆಟ್ಟು ಹೋಗುತ್ತದೆ. ಅಲ್ಲವೇ ಸಾರ್?"

ನಾನು ನಕ್ಕು ಮೌನಿಯಾದೆ.

ಪಂಜಾಬಿನಲ್ಲಿ ಜರುಗುತ್ತಿರುವ ವಿದ್ರೋಹ, ಭಯೋತ್ಪಾದನೆ, ಆತಂಕ, ದಬ್ಬಾಳಿಕೆಯ ವಿರುದ್ಧ ನಡೆಯುತ್ತಿರುವ ಸಂಕೇತಗಳೇ?

"ನಿಮ್ಮ ಶಾಖೆಯಲ್ಲೂ ಗಲಾಟೆ ಜಾಸ್ತಿಯಾಗಿ ನಿಮ್ಮ ದಬ್ಬಾಳಿಕೆ ವಿಪರೀತವಾಗಿದೆಯಂತಲ್ಲಾ ಸಾರ್?"

ತಮಿಳು ಕುಮಾರಿ ನನ್ನ ತಂಟೆಗೆ ಬಂದಳು.

ನಾನು ಉತ್ತರ ನೀಡುವ ಮೊದಲೇ, ಮಾತನ್ನು ಮುಂದುವರೆಸಿದಳು.

"ಈ ಶಾಖೆಯಲ್ಲಿದ್ದಾಗ, ನಿಮ್ಮ ದಬ್ಬಾಳಿಕೆಯ ಕುರುಹೇ ಇರಲಿಲ್ಲ! ಎಷ್ಟು ಚೆನ್ನಾಗಿತ್ತು ನೀವು ಇಲ್ಲಿ ಮೇನೇಜರ್ ಆಗಿದ್ದಾಗ! ಬಜಾರ್ ಶಾಖೆಗೆ ಹೋದ ಕೂಡಲೇ ಚೇಂಜ್ ಆಗಿಬಿಟ್ಟಿದ್ದೀರಂತಲ್ಲಾ!"

ಆಶ್ಚರ್ಯವಾಗಿತ್ತು ಅವಳಿಗೆ. ಹೌದು! ನಾನು ಈ ಶಾಖೆಯಲ್ಲಿ ಒಳ್ಳೇ ಹೆಸರು ಗಳಿಸಿದ್ದೆ. ಎಲ್ಲಾ ನೌಕರರು ನನ್ನ ಬಗ್ಗೆ ಒಳ್ಳೇ ಅಭಿಪ್ರಾಯವಿಟ್ಟಿದ್ದರು. ನನಗೂ ಈ ಶಾಖೆಯ ನೌಕರರ ಬಗ್ಗೆ ಅಭಿಮಾನವಿತ್ತು.

"ಇಲ್ಲಿಯ ಪರಿಸ್ಥಿತಿ ಬೇರೆ ಅಲ್ಲಿಯ ಪರಿಸ್ಥಿತಿಯೇ ಬೇರೆ! ಇಲ್ಲಿಯ ವಾತಾವರಣವೇ ಬೇರೆ, ಅಲ್ಲಿಯ ವಾತಾವರಣವೇ ಬೇರೆ. ಇಲ್ಲಿ ಶಾಂತ ವಾತಾವರಣವಿತ್ತು; ಅಲ್ಲಿ ಪ್ರಕ್ಷುಬ್ಧ ವಾತಾವರಣ. ವಾತಾವರಣಕ್ಕೆ ತಕ್ಕ ಹಾಗೆ ನಾನು ವರ್ತಿಸುತ್ತಿದ್ದೇನೆ. ನಾನು ಆ ಶಾಖೆಗೆ ವರ್ಗವಾಗುವ ಮುನ್ನವೇ, ಪರಿಸ್ಥಿತಿ ನೆಟ್ಟಗಿರಲಿಲ್ಲ. ಮೇನೇಜ್‌ಮೆಂಟ್ ಕೆಲವು ನೌಕರರ ಮೇಲೆ ಶಿಸ್ತಿನ ಕ್ರಮ ಜರುಗಿಸಿದ್ದರಿಂದ, ಅವರು ಸಿಟ್ಟಿಗೆದ್ದು, ಸಂಪು, ಅಸಹಕಾರ ಚಳುವಳಿ ನಡೆಸುತ್ತಿದ್ದಾರೆ. ಅದಕ್ಕೆ ನನ್ನನ್ನು ಟಾರ್ಗೆಟ್ ಮಾಡಿ, ಹಿಂಸಿಸುತ್ತಿದ್ದಾರೆ.!"

"ನೀವೇ ಅವರಿಗೆ ಹಿಂಸೆ ಕೊಡುತ್ತೀದ್ದೀರಂತೆ!"

"ಶಿಸ್ತು ಪಾಲಿಸುವಾಗ ಸ್ವಲ್ಪ ಹಿಂಸೆ ಆಗುತ್ತದಲ್ಲಾ! ಏನು ಮಾಡುವುದು? ಕೆಲವು

ಕ್ಷಣ ಹಿಂಸೆಯಾದರೂ ಕ್ರಮೇಣ ಅದೇ ರೂಢಿಯಾಗಿ, ಹಿಂಸೆಯೇ ಸುಖವಾಗ ಬಹುದಲ್ಲವೇ?"

"ನೀವು ಕಮ್ಯುನಿಸ್ಟ ಸಿದ್ಧಾಂತದಲ್ಲಿ ನಂಬಿಕೆ ಇಟ್ಟಿರೋ ಹಾಗಿದೆಯಲ್ಲಾ!"

ಕುಮಾರಿ ಬಾಯಿಯನ್ನು ದೊಡ್ಡದಾಗಿ ತೆರೆದು ತನ್ನ ಬಿಳೀ ಹಲ್ಲುಗಳನ್ನು ಪ್ರದರ್ಶಿಸಿದಳು.

"ಕಮ್ಯುನಿಸಂ ಸಿದ್ಧಾಂತ? ಹೇಗೆ?"

"ಕಮ್ಯುನಿಸ್ಟರು ಹಿಂಸೆಯಲ್ಲಿ ನಂಬಿಕೆ ಇಟ್ಟಿರುತ್ತಾರೆ. ಹಿಂಸೆಯ ಮುಖಾಂತರ ಕ್ರಾಂತಿ ಮಾಡಿ, ಹೊಸ ಸಮಾಜ ನಿರ್ಮಾಣ ಮಾಡುತ್ತೇವೆ ಎಂದು ಸಾರುತ್ತಾರೆ! ನೀವು ಅದೇ ಜಾತಿಗೆ ಸೇರಿದವರಾ?"

ಮಾತು ಎಲ್ಲಿಗೋ ತಿರುಗಿದರೂ, ಹುಡುಗಿಯ ಬಗ್ಗೆ ಮೆಚ್ಚುಗೆ ಸ್ವಲ್ಪ ಸ್ವಲ್ಪವಾಗಿ ನನ್ನಲ್ಲಿ ಬೇರೂರತೊಡಗಿತು. ಜ್ಞಾನದಾಹವಿರುವ ಹಾಗೆ ತೋರಿತು. ಮನೆ, ಮಕ್ಕಳು, ಗಂಡ, ಅತ್ತೆ, ಮಾವ, ತಂದೆ ತಾಯಿ, ಅಣ್ಣ ತಮ್ಮ, ನೌಕರಿ ಮಾಡುತ್ತಾ ಇದ್ದರೆ, ಆಫೀಸನ ವಿಷಯ, ಅಥವಾ, ಒಂಟಿಯಾಗಿದ್ದರೆ, ಪ್ರೇಮ ಪ್ರೀತಿ, ಟೀವಿ, ಸಿನಿಮಾ ಮುಂತಾದ ಪ್ರಪಂಚದಲ್ಲಿ ಮುಳುಗಿರುವ ಹೆಂಗೆಳೆಯರಿಗೆ, ರಾಜಕೀಯದ ಬಗ್ಗೆ ಜ್ಞಾನ -ಏಕೆ ಆಸಕ್ತಿ ಕೂಡ ಬಹಳ ಕಡಿಮೆ ಎಂದು ನಂಬಿದ್ದ ನನಗೆ ಈಕೆಯ ಅನಿಸಿಕೆಗಳನ್ನು ಕೇಳಿದಾಗ, ಮನಸ್ಸು ಹಗುರವಾಯಿತು.

"ತಾಯಿಯಾದವಳು ರಕ್ತ ಚೆಲ್ಲಿ, ಹಿಂಸೆ ಪಟ್ಟು, ಒಂದು ಶಿಶುವಿಗೆ ಜನ್ಮ ಕೊಡುವ ರೀತಿಯಲ್ಲಿ, ಕಮ್ಯುನಿಸ್ಟರು, ರಕ್ತ ಚೆಲ್ಲಿ, ಕ್ರಾಂತಿ ಮಾಡಿ, ಹೊಸ ಸಮಾಜ ಕಟ್ಟುವ ಹೊಣೆಗಾರಿಕೆ ಇಟ್ಟುಕೊಂಡಿದ್ದಾರಲ್ಲ! ಇದಕ್ಕೆ ಏನು ಹೇಳುತ್ತೀರಿ?"

"ನಾನು ಹೇಳುವುದೇನು? ಹಿಂಸೆಯಿಂದಲೇ ಕಾಯಕ ಸಿದ್ಧಿಯಾಗುತ್ತದೆ ಎಂದರೆ ನಂಬುವುದು ಕಷ್ಟ! ಅಹಿಂಸೆಯಿಂದಲೇ ಕಾರ್ಯಸಿದ್ಧಿಯಾಗುತ್ತದೆ ಎಂದರೆ ಅದೂ ಕಷ್ಟವೇ? ನೀವೇ ಹೇಳಿದರಲ್ಲ!ಮಾಡರೇಶನ್ -ಹಿತಮಿತವಾಗಿ ಏನೂ ಮಾಡಿದರೂ ಸಾಧಿಸಬಹುದು!"

"ಸಾಹೇಬರು ಹೇಳಿದ್ದನ್ನೂ ನಾನು ಸಂಪೂರ್ಣ ಒಪ್ಪುತ್ತೇನೆ!" ಎಂದು ಹೇಳುತ್ತಾ ಒಳಗೆ ಬಂದ ಕಪೂರ್‌ನ್ನು ನೋಡಿ, ತಮಿಳು ಕುಮಾರಿ ನಸು ನಕ್ಕಳು.

ಇವನಿಗೆ ಯಾರು ಹೇಳಿದರು ನಾನು ಇಲ್ಲಿಗೆ ಬಂದ ವಿಷಯ?ನನ್ನನ್ನು ನೋಡಲು ಇವ ಯಾಕೆ ಬಂದ ಎಂದು ಯೋಚಿಸುತ್ತಿರುವಾಗಲೇ ನನಗೆ ಅರಿವಾಯಿತು. ಭಾನುವಾರವೆಂದರೆ, ಅರ್ಧ ದಿನದ ಕೆಲಸ ಬ್ಯಾಂಕ್‌ಗೆ. ಕಮಲಕುಮಾರಿಯ

ಸಂಗ, ಇನ್ನರ್ಧ ದಿನ ಕಳೆಯುವುದಕ್ಕೆ, ಈತ ಪ್ರತೀ ಭಾನುವಾರ ಶಾಖೆಗೆ ಬಂದು, ಅವಳನ್ನು ಹೊರಗೆ ಕರೆದುಕೊಂಡು ಹೋಗುತ್ತಿದ್ದ.

ಕುರ್ಚಿಯೊಂದನ್ನು ಎಳೆದು ಕುಳಿತ ಕಪೂರ್, ಹೇಳಿದ.

"ಅಹಿಂಸೆ ಎಂದು ಜಪ ಮಾಡಿ ಕುಳಿತರೆ, ನಾವು ಹಿಂಸೆಗೆ ಈಡಾಗಿ ಬಿಡುತ್ತೇವೆ!"

"ಹಿಂಸಾರಾಜಾ! ನೀನೊಬ್ಬ ಬೇರೆ ಬಂದೆಯಾ ನನ್ನ ಹಿಂಸಿಸುವುದಕ್ಕೆ! ಕರೆದುಕೊಂಡು ಹೋಗು ಈಕೆಯನ್ನು!"

ಕುಮಾರ್‌ನಿಗೆ, ಕಪೂರ್‌ನ ಜೊತೆ ಚರ್ಚಿಸಲು ಅಪೇಕ್ಷೆ ಪಡದಿರುವುದು ಸ್ಪಷ್ಟವಾಗಿತ್ತು, ಅವನ ಮಾತಿನಿಂದ.

"ನಿಮಗೇನು ಹಿಂಸೆ ಮಾಡುವುದಿಲ್ಲ!ಹೆದರಬೇಡಿ!"

"ಬ್ಯಾಲೆನ್ಸ್ ಇಲ್ಲದಿದ್ದರೂ, ಚೆಕ್ ಪಾಸ್ ಮಾಡ್ರೀ ಎಂದು ಹಿಂಸೆ ಮಾಡುತ್ತೀಯಲ್ಲಾ, ಅಷ್ಟೇ ಸಾಕು ನಿನ್ನ ಹಿಂಸೆ!" ನಗಾಡಿದ ಕುಮಾರ್

"ಇದನ್ನು ಹಿಂಸೆ ಎನ್ನುತ್ತೀರಾ? ಹಿಂಸೆ ಎಂದರೆ ನಿಮ್ಮ ರಕ್ತ ಹೀರಿದರೆ ಅದು ಹಿಂಸೆ ಎಂದಾಗುತ್ತದೆ"

"ನಿನ್ನ ಜಾತಿಯವನೇ ಆದ ಜಾಟ್ ಜವಾನ ಅದೂ ಮಾಡಿ ತೋರಿಸಿ ಬಿಟ್ಟನಲ್ಲಾ!" ವ್ಯಂಗ್ಯವಿತ್ತು ಅವನ ಮಾತಿನಲ್ಲಿ.

"ನೀವು ನೌಕರರಿಗೆ ಹಿಂಸೆ ಮಾಡಿದರೆ, ವಾಪಸ್ಸು ಅದೇ ಸಿಕ್ಕರೆ, ಯಾರೇನು ಮಾಡಲಿಕ್ಕೆ ಆಗುತ್ತದೆ?" ಕುಮಾರಿ ಕಮಲ ನುಡಿದಳು.

"ನಾನು ಹಿಂಸೆ ಕೊಟ್ಟೆನಾ ನಿಮಗೆ? ತೊಂದರೆ ಕೊಟ್ಟೆನಾ? ಕೆಲಸ ಶಿಸ್ತಾಗಿ ಮಾಡ್ರೀ ಎಂದರೆ, ತೊಂದರೆ ಎನ್ನುತ್ತೀರಾ! ನೋಡ್ರೀ! ನೀವು ಏನು ಹೇಳಿದರೂ ನನ್ನ ಧ್ಯೇಯ ಬಿಡುವುದಿಲ್ಲ. ನೀವು ನನಗೆ ಬೈದರೂ ಗುಂಡಿಕ್ಕಿ ಕೊಂದರೂ ಚಿಂತಿಲ್ಲ! ನಾನು ಕೆಲಸ ಮಾಡುವುದೇ ಹೀಗೆ!"

"ಹೇಗೆ? ಇನ್ನೊಬ್ಬರಿಗೆ ತೊಂದರೆ, ಹಿಂಸೆ ಕೊಟ್ಟು?"

"ನೋಡ್ರೀ! ನಿಮಗೆ ತೊಂದರೆ ಆಗುತ್ತದೆ, ಹಿಂಸೆ ಆಗುತ್ತದೆ ಅಂತ ನಾನು ಕೈ ಕಟ್ಟಿ ಕುಳಿತುಕೊಳ್ಳಲಿಕ್ಕೆ ಆಗುವುದಿಲ್ಲ! ನನಗೆ ಕೆಲಸ ಆಗಬೇಕು ಈ ಊರಲ್ಲಿ ಮೂರು ವರ್ಷ ಇದ್ದು ನಿಮ್ಮಿಂದ ಕೆಲಸ ತೆಗೆದುಕೊಂಡು ಬ್ಯಾಂಕ್‌ನ ಬೆಳವಣಿಗೆ ಮಾಡುವುದೇ ನನ್ನ ಕೆಲಸ! ನಿಮ್ಮನ್ನು ನಗಿಸಿ, ಮನೋರಂಜನೆ ನೀಡಿ, ನಿಮ್ಮ ಮನಸ್ಸಂತೋಷ ಪಡಿಸುವುದಕ್ಕಲ್ಲ!"

"ಬಾ ಹೋಗೋಣ! ಇವರ ಜೊತೆ ಮಾತಾಡುತ್ತಾ ಕೂತರೆ, ನಮ್ಮ ಸಮಯ ಹಾಳು! ಇವರ ಗೋಳು ದಿನವಹೀ ಇದ್ದದ್ದೇ!"

ಕಪೂರ್ ನುಡಿದು ಎದ್ದ. ಕುಮಾರ್‌ನ ಕೂಡ ಅವನ ಸಲಿಗೆ ಹೆಚ್ಚಿತ್ತು ಎನ್ನುವುದಕ್ಕೆ ಅವನ ಮಾತುಗಳೇ ಸಾಕ್ಷಿಯಾಗಿದ್ದವು. ತಮಿಳು ಕುಮಾರಿ ಕೂಡ ಎದ್ದಳು.

"ನೀವು ಬನ್ನಿ ಸಾಬ್!ಹೋಗೋಣ!ಇವರ ಜೊತೆ ಕೂತರೆ, ಬರೀ ಚಾ ಕುಡಿಸಿ ಕಳುಹಿಸುತ್ತಾರೆ.ನಮ್ಮ ಜೊತೆಗೆ ಬನ್ನಿರಿ! ಚಿಕನ್ ಪಲಾವ್ ತಿನ್ನುವರಂತೆ!"

ಕಪೂರ್ ಆಹ್ವಾನಿಸಿದ.

ನನಗೆ ತಮಿಳು ಕುಮಾರಿಯ ಜೊತೆ ಚರ್ಚಿಸುವ ಸುಯೋಗ ಒದಗಿತ್ತು. ತಪ್ಪಿಸುಕೊಳ್ಳುವಷ್ಟು ಮೂರ್ಖತನ ತೋರಿಸಲಿಲ್ಲ. ಒಡನೆಯೇ ಎದ್ದು, ಕುಮಾರ್‌ನಿಗೆ ವಿದಾಯ ಹೇಳಿ ಹೊರಗೆ ಬಂದೆ.

ಚಿಕನ್ ಪಲಾವ್ ಕೊಡಿಸುತ್ತೇನೆ ಎಂದು ಹೇಳಿದ ಕಪೂರ್ ನೇರ ಮಾಲವೀಯ ನಗರದ ಬಜಾರ್‌ನಲ್ಲಿದ್ದ ಏಕೈಕ ಹೋಟೆಲ್‌ಗೆ ಕರೆದುಕೊಂಡು ಹೋದ. ಶುದ್ಧ ಶಾಖಾಹಾರೀ ಹೋಟೆಲ್ ಅದು. ಹಿಂದೆ ಇದೇ ಹೋಟೆಲ್‌ನಲ್ಲಿ, ಸರದಾರ್‌ಜೀ, ಕಪೂರ್‌ರ ಭೇಟಿ ಆಗಿತ್ತು.

ಒಳಗೆ ಫ್ಯಾಮಿಲಿ ಕೋಣೆಯಲ್ಲಿ, ಕುಳಿತೆವು.

"ಚಿಕನ್ ಪಲಾವ್ ಎಂದುಹೇಳಿ ಇಲ್ಲಿಗೆ ಯಾಕೆ ಕರೆದುಕೊಂಡು ಬಂದೆ"

ಕಮಲ ಕುಮಾರಿಯ ಕಡೆ ಮುಖ ಮಾಡಿ, ಪೆಚ್ಚಾಗಿ ನಕ್ಕು ನುಡಿದ.

"ಮೇಡಮ್ ವೆಜಿಟೇರಿಯನ್! ಚಿಕನ್ ಎಂದು ಹೇಳಿದರೆ ಸಾಕು, ನನ್ನನ್ನು ಮುರ್ಗೀ ಮಾಡಿ, ಮಸಾಲಾ ಅರೆದು ತಿಂದು ತೇಗಿಬಿಡುತ್ತಾರೆ!"

"ಈಗ ಏನು ಕಡಿಮೆ ಮಾಡಿದ್ದಾರೆ? ನಿಮ್ಮನ್ನು ಮುರ್ಗೀ ಮಾಡಿಲ್ಲವೇ?"

ನಾನು ಮಾತಿಗೆ ಶುರುಹಚ್ಚಿದೆ.

"ಯಾರು ಯಾರಿಗೆ ಮುರ್ಗೀ ಮಾಡಿದ್ದಾರೋ ಯಾರಿಗೆ ಗೊತ್ತು?"

ಕಮಲ ಕುಮಾರಿ, ಕೈ ಎತ್ತಿ ತೋರಿಸುತ್ತಾ, ರಾಗವಾಗಿ ನುಡಿದಳು.ಸ್ವಲ್ಪ ದಪ್ಪ ಶರೀರದ ಈಕೆ, ಚಳಿಗಾಲದ ಸ್ವೆಟರ್ ಧರಿಸಿದ್ದರಿಂದ ಇನ್ನು ದಪ್ಪ ಗಾತ್ರ ಕಾಣಿಸಿಕೊಂಡು, ನೋಡುವವರಿಗೆ, ಮಕ್ಕಳ ತಾಯಿಯ ಹಾಗೆ ತೋರುತ್ತಿದ್ದಳು.

ಮೇಜಿನ ಮೇಲೆ ವೆಜಿಟಬಲ್ ಪಲಾವ್ ಇಟ್ಟು ಹೋದ ಮಾಣಿ. ಎರಡೇ ಪ್ಲೇಟ್ ಇಟ್ಟಿದ್ದು ನೋಡಿ, ನನಗೆ ಆಶ್ಚರ್ಯವಾಗಿ "ಯಾಕೆ?" ಎಂದು ಕೇಳುವ ಮೊದಲು, ಮಸಾಲೆ ದೋಸೆಯ ಪ್ಲೇಟ್‌ನ್ನು ಅವನ ಮುಂದೆ ಇರಿಸಿ ಹೋದ ಮಾಣಿ ಅದನ್ನು ನೋಡಿ, ಕಪೂರ್‌ನುಡಿದ.

"ಅನ್ನ ಅಂದರೆ ನನಗೆ ಚಳಿ ಜ್ವರ ಬರುತ್ತದೆ. ಅದು ಪಲಾವ್ ಆಗಲಿ, ಬಿರಿಯಾನಿ ಆಗಲೀ, ಸಾಂಬಾರ್ ಅನ್ನ ಆಗಲೀ! ಅನ್ನ ತಿನ್ನೋದು ನಮಗೆ ಆರೋಗ್ಯ ಸರಿಯಿಲ್ಲದಿರುವಾಗ! ಹೋಟೆಲ್‌ನಲ್ಲಿ ಮಸಾಲಾ ದೋಸಾ ತಿನ್ನೋದೆ ಒಂದು ಮಜಾ! ಏನಂತೀರಾ?"

ದಿಲ್ಲೀ ಮಸಾಲಾ ದೋಸಾ ತಿಂದು ಹೊಟ್ಟೆ ಹಾಳು ಮಾಡಿಕೊಂಡು ನರಳಿದ ಅನುಭವವಿದ್ದ ನನಗೆ, ಕಪೂರ್‌ನ ಜೀರ್ಣಶಕ್ತಿಯ ಬಗ್ಗೆ ಅಭಿಮಾನ ಉಂಟಾಯಿತು.

ಉತ್ತರ-ದಕ್ಷಿಣ, ಅನ್ನ-ಗೋಧಿ ರೊಟ್ಟಿ, ಮಸಾಲಾ ದೋಸೆ- ಚೋಲೇ-ಬತೂರೆ-ಪೂರೀ ಪಲ್ಯ, ಹಿಂದೀ-ತಮಿಳು, ಪಂಚೆ-ಪೈಜಾಮಗಳ ಅಂತರ, ವಿರೋಧಾಭಾಸಗಳ ನಡುವೆ ಇವರ ಪ್ರೇಮ ವ್ಯವಹಾರ ಹೇಗೆ ಸಂಭವಿಸಿತು?

ಕರೀ- ಬಿಳಿ ಬಣ್ಣ, ದಪ್ಪ-ಸಣ್ಣ ಗಾತ್ರಗಳ ವ್ಯತ್ಯಾಸವೂ ತಮ್ಮ ಇರುವಿಕೆಯನ್ನು ತೋರಿಸುತ್ತಿದ್ದವು.

ಎಲ್ಲದಕ್ಕಿಂತ ಮಿಗಿಲಾಗಿ ಅವರ ಸ್ವಭಾವದ ವ್ಯತ್ಯಾಸಕ್ಕೆ ಏನು ಉಪಾಯ ಮಾಡಿದರು?

ದಿಗ್‌ಭ್ರಮೆಗೊಳಿಸುವ ಈ ವ್ಯತ್ಯಾಸ ವಿರೋಧಾಭಾಸಗಳ ಕಂದಕದ ಮಧ್ಯೆ, ಇವರಿಬ್ಬರನ್ನು ಒಂದುಗೂಡಿಸಿದ ಪ್ರೇಮ ಸೇತುವೆ ಎಷ್ಟು ಭದ್ರವಾಗಿದೆ?

ಒಂದು ಚಮಚ ಪಲಾವ್‌ನ್ನು ಬಾಯಿಗೆ ಹಾಕಿ ಕೊಂಡು, ಅದನ್ನು ಸವಿಯುತ್ತಾ ಮೆಲ್ಲಗೆ ನುಡಿದೆ.

"ನಿಮ್ಮಿಬ್ಬರಲ್ಲಿ ಇಷ್ಟು ವೈಪರೀತ್ಯ, ಭಿನ್ನ, ವೈಲಕ್ಷಣಗಳಿದ್ದರೂ, ಪ್ರೇಮ ಅಂಕುರಿಸಿದ್ದು ಹೇಗೆ?"

"ಭಿನ್ನ? ವೈಪರೀತ್ಯ? ಏನು ಹೇಳುತ್ತಿದ್ದೀರಾ ನೀವು?"

ಇಬ್ಬರೂ ಆಶ್ಚರ್ಯದಿಂದ ಕೇಳಿದರು!

ನಾನು ಕೇಳಿದ್ದರಲ್ಲಿ ತಪ್ಪೇನು? ಇವರೇಕೆ ಅಚ್ಚರಿಗೊಂಡಿದ್ದಾರೆ?

"ಯಾರು ಹೇಳಿದರು ನಿಮಗೆ ನಮ್ಮಲ್ಲಿ ವೈಪರೀತ್ಯವಿದೆ ಎಂದು?"

ಕುಮಾರಿ ಕೇಳಿದಳು. ಪಲಾವ್‌ನ ಚಮಚ ಅವಳ ಕೈಯಲ್ಲೇ ಅರ್ಧದಲ್ಲೇ ನಿಂತಿತ್ತು.

"ಯಾರು ಹೇಳಬೇಕಾಗಿಲ್ಲ!ನೋಡಿದರೆ ತಿಳಿಯುವದಿಲ್ಲವೇ? ಉತ್ತರ - ದಕ್ಷಿಣ, ಹಿಂದೀ-ತಮಿಳು, ಅನ್ನ-ಚಪಾತಿ....."

"ದಪ್ಪ-ಸಣ್ಣ, ಕಪ್ಪು-ಬಿಳಿಪು....."

ಇಬ್ಬರೂ ಜೋರಾಗಿ ನಗತೊಡಗಿದರು. ನಾನೂ ಅವರ ಜೊತೆ ಸೇರಿದೆ ನಗುವುದರಲ್ಲಿ.

ಇಬ್ಬರೂ ಮಾತನಾಡದೇ ತಿಂಡಿ ಕಬಳಿಸುವುದರಲ್ಲಿ ಮಗ್ನರಾದರು. ಹಸಿದಿರ ಬೇಕೆನಿಸಿತು. ಅವರನ್ನೆ ನೋಡುತ್ತಾ, ನಿಧಾನವಾಗಿ ಪಲಾವ್‌ವನ್ನು ತಿನ್ನತೊಡಗಿದೆ. ಮಾತಿಲ್ಲದೆ ಹೊಟ್ಟೆ ತುಂಬಿಸುವ ಕಾರ್ಯವನ್ನು ಬಹಳ ಮುತವರ್ಜಿಯಿಂದ ಪಾಲಿಸ ತೊಡಗಿದೆವು.

"ನಮ್ಮಲ್ಲಿ ಯಾವ ತರಹ ಬೇಧವು ಇಲ್ಲ, ವೈಪರೀತ್ಯವೂ ಇಲ್ಲ, ವಿರೋಧಾ ಭಾಸವೂ ಇಲ್ಲ! ನೀವು ತಿಳಿದ ಹಾಗೆ ನಾನು ತಮಿಳು ಹುಡುಗಿಯಾದರೂ, ಹುಟ್ಟಿ, ಬೆಳೆದಿದ್ದು, ಓದಿದ್ದು, ಕೆಲಸಕ್ಕೆ ಸೇರಿದ್ದು, ಇಲ್ಲೇ ದಿಲ್ಲೀಯಲ್ಲೇ. ನಾನು ನೂರಕ್ಕೆ ನೂರು ದಿಲ್ಲೀವಾಲೀ! ಅದರಲ್ಲೂ ಪಂಜಾಬೀ ಜನಗಳ ಒಡನಾಟದಲ್ಲಿ ಹುಟ್ಟಿ, ಬೆಳೆದುದರಿಂದ ನಾನು ಪಂಜಾಬೀ ಎಂದೇ ಹೇಳಬಹುದು!"

"ತಮಿಳು ಭಾಷೆ ಬರುತ್ತದೆಯೋ?"

"ಮಾತೃ ಭಾಷೆ ಎಂದ ಮೇಲೆ ಮರೆಯಲಿಕ್ಕೆ ಸಾಧ್ಯವೇ?"

"ಹಾಗಾದರೆ ಎರಡು ಸಂಸ್ಕೃತಿಗಳ ಮಿಲನ ಎಂದು ಹೇಳಬಹುದೇ?"

"ಇಲ್ಲ! ಸಂಸ್ಕೃತಿ, ಭಾಷೆ, ನಡೆ, ನುಡಿ, ಭಾವನೆ ಎಲ್ಲಾ ಒಂದೇ!"

"ಮತ್ತೇನು ಅಡ್ಡಿಯಾಗಿದೆ ನೀವು ಮದುವೆಯಾಗುವುದಕ್ಕೆ!"

"ಎಲ್ಲಿ ಅಡ್ಡಿಯಾಗಿದೆ? ಯಾವ ಅಡೆತಡೆಯೂ ಇಲ್ಲವಲ್ಲ!"

ಇದುವರೆಗೂ ಸುಮ್ಮನಿದ್ದ ಕಪೂರ್, ಮಸಾಲೆ ದೋಸೆಗೆ ಬಾಯಿ ಹಾಕಿ, ಅದನ್ನು ಸಂಪೂರ್ಣವಾಗಿ ಕಬಳಿಸಿ, ಬಟ್ಟಲಲ್ಲಿದ್ದ ಸಾಂಬಾರನ್ನು ಚಮಚದಲ್ಲಿ ಹಾಕಿ ಕೊಂಡು, ಸ್ವಲ್ಪ ಸ್ವಲ್ಪವೇ ರುಚಿ ನೋಡಿ, ಅದನ್ನು ಖಾಲಿ ಮಾಡಿದ ಮೇಲೆ, ಸಂವಾದದಲ್ಲಿ ಬಾಯಿ ಹಾಕಿದ್ದ.

"ಕಪೂರ್ ಮದುವೆಯಾದ ಮನುಷ್ಯ. ಅದು ಗೊತ್ತಿದ್ದೂ, ಇವರನ್ನು ಪ್ರೀತಿಸಿ ಮದುವೆಯಾಗುವುದಕ್ಕೆ ಈತನಲ್ಲಿ ಏನು ಅಂತಹ ವಿಶೇಷ ವ್ಯಕ್ತಿತ್ವವನ್ನು ಕಂಡಿರಿ?"

ಇದು ಬಹಳ ಮಹತ್ವವಾದ ಪ್ರಶ್ನೆಯಾಗಿತ್ತು. ಸುತ್ತು ಬಳಸಿ, ಅತ್ತ ಇತ್ತ ನೋಡಿ, ಬೇಲಿ ಹಾಯ್ದು, ನುಗ್ಗುವ ಬದಲು, ನೇರ ಅವಳ ಅಂತರಾಳದ ಬಾಗಿಲು ಬಡಿದಿದ್ದೆ.

ಕುಮಾರಿ ಕಮಲ, ಒಂದು ಬಾರಿ ಕಪೂರ್‌ನ ಕಡೆ ತನ್ನ ದೃಷ್ಟಿ ಹಾಯಿಸಿ, ಒಂದು ಕ್ಷಣ ಅಲ್ಲೇ ಇರಿಸಿ, ಸಾವಕಾಶವಾಗಿ, ದೃಷ್ಟಿಯನ್ನು ನನ್ನ ಮೇಲೆ ಇರಿಸಿದಳು.

ಇನ್ನೂ ಉಳಿದಿದ್ದ, ಪ್ಲೇಟ್‌ನಲ್ಲಿ ಹರಡಿದ್ದ ಅನ್ನದ ಅಗಳನ್ನು ಚಮಚದಲ್ಲಿ, ಒಂದು ಬದಿಯಲ್ಲಿ ಒತ್ತರಿಸುತ್ತಾ ನುಡಿದಳು,

"ಜೀವನವನ್ನು ಹಗುರವಾಗಿ, ನಗುನಗುತ್ತಾ, ತಾನೂ ನಗುತ್ತಾ, ಇತರರನ್ನು ನಗಿಸುತ್ತಾ, ಸಾಗಿಸುವವರನ್ನು ಕಂಡರೆ ಯಾರಿಗೆ ಇಷ್ಟವಾಗುವುದಿಲ್ಲ! ನಾವು ದಕ್ಷಿಣದವರು ಜೀವನವನ್ನು ಬಹಳ ಸೀರಿಯಸ್ ಆಗಿ ತೆಗೆದುಕೊಳ್ಳುತ್ತೇವೆ. ಜೀವನವಿಡೀ ತಮ್ಮ ಜೀವನವನ್ನು ಅಸಂತೋಷ, ದುಃಖ, ತುಮುಲ. ದುಗುಡ, ದುಮ್ಮಾನ, ಕೊರಗು, ಗೋಳು, ವ್ಯಸನಗಳಲ್ಲೇ ಕಳೆಯುವುದಕ್ಕೆ ಪ್ರಯತ್ನಿಸುತ್ತೇವೆ...."

"ಸಾಕು! ಸಾಕು! ನಲಿವು, ಗೆಲವು, ಸುಖ, ಪರಮ ಸುಖ ಅಂತ ವರ್ಣಿಸುವು ದನ್ನು ಬಿಟ್ಟು ದುಃಖ, ಗೋಳು, ವ್ಯಸನ ಅಂತ ಯಾಕೆ ಒದರುತ್ತಾ ಇದ್ದಿಯಾ?"

ಕಪೂರ್ ಕೂಗಿದ್ದ! ಅವನಿಗೆ ದುಃಖ, ವ್ಯೆಸನ ಪದಗಳ ವರ್ಣನೆ ಮನಸ್ಸಿಗೆ ಜಿಗುಪ್ಸೆ ತಂದಿತ್ತು.

ಕಮಲಳು ನಗಲಿಕ್ಕೆ ಶುರು ಮಾಡಿದ್ದಳು.

"ನೋಡ್ರೀ! ನಾನು ಹೇಳಲಿಲ್ಲವೇ? ಇದೇ ನೋಡಿ ವ್ಯತ್ಯಾಸ!"

"ಹಾಗಾದರೆ, ನಮ್ಮಲ್ಲಿ ಒಳ್ಳೆಯ ಗುಣಗಳೇ ಇಲ್ಲವೇ? ನಾವು ಅಳುಬುರುಕ ಸಿನಿಕರೆಂದು ನಿಮ್ಮ ಹೇಳಿಕೆಯೆ?"

ನನ್ನ ಸ್ವಾಭಿಮಾನಕ್ಕೆ ಪೆಟ್ಟು ಬೀಳುವ ಕಾರ್ಯಕ್ಕೆ ಕೈಹಾಕಿದ ತಮಿಳು ಕುಮಾರಿಯ ಮೇಲೆ ಸಿಟ್ಟು ಉಂಟಾಗಿತ್ತು.

"ಇದೆ. ಒಳ್ಳೆಯ ಗುಣಗಳು ಇವೆ. ಅದು ಯಾವುದೆಂದರೆ, ಅತಿ ಭಾವುಕತೆ ಇಲ್ಲದಿರುವುದು. ಪ್ರತಿ ಕೆಲಸವನ್ನು ಯೋಚಿಸಿ, ಚರ್ಚಿಸಿ, ಮಾಡುವುದಕ್ಕೆ ಪ್ರಯತ್ನಿಸುತ್ತೇವೆ. ಇವರು, ಅತಿಭಾವಕರು, ಯಾವ ಕೆಲಸವಾದರೂ ಮೊದಲು ಮಾಡಿ, ಆಮೇಲೆ ಯೋಚಿಸುವುದು!"

"ಹೊಡೆದಾಡುವುದು, ಕೊಲೆ ಮಾಡುವುದು, ದಂಗೆ ಏಳುವುದು, ಆತಂಕವಾದಿಗಳಾಗುವುದು, ಭಯೋತ್ಪಾದಕರಾಗುವುದು-ಇವೆಲ್ಲಾ ಉದಾಹರಣೆಯಾಗಿರಬಹುದು ಎಂದು ಹೇಳಬಹುದೇ?"

ಆಕೆ ಮಾತನಾಡಲಿಲ್ಲ. ತನ್ನ ಮುಂದೆ ಇದ್ದ ಬರಿದಾದ ಪಲಾವ್ ಪ್ಲೇಟ್‌ನ್ನು ಬದಿಗೆ ಇರಿಸಿ, ಬಾಯಿಗೆ ನೀರಿ ಸುರಿದುಕೊಂಡಳು.

"ನನಗೆ ಬಿಸಿಬಿಸಿ ಚಾ!" ಅಂದಳು.

"ನನಗೆ ಕಾಫೀ!" ಎಂದೆ.

ಲವಲವಿಕೆ, ಉಲ್ಲಾಸ, ಉದಾರತೆ, ಆಕರ್ಷಕ ವ್ಯಕ್ತಿತ್ವಗಳಿಗೆ ಆಕರ್ಷಿತಳಾದ ಈ ಕಮಲ ಕುಮಾರಿ ಅತಿ ಭಾವುಕತೆಗೆ ಗುರಿಯಾಗಿಲ್ಲವೇ?

ಬುದ್ಧಿವಂತೆ, ಓದಿದ ಸುಶಿಕ್ಷಿತ ಯುವತಿ, ಒಬ್ಬ ಮದುವೆಯಾದ ಪಂಜಾಬೀ ಯುವಕನೊಂದಿಗೆ ಪ್ರೇಮಪಾಶದಲ್ಲಿ ಸಿಕ್ಕಿಕೊಂಡಿರುವುದೆಂದರೆ, ಆಶ್ಚರ್ಯವಾಗುವ ಸಂಗತಿಯಲ್ಲದೆ ಮತ್ತೇನು? ದಕ್ಷಿಣದ ಶಿಸ್ತು, ಸಂಯಮ, ಸ್ಥಿರಚಿತ್ತ, ಆವೇಶರಹಿತ ಗುಣಗಳ ಪ್ರತೀಕವಾಗಿ ವರ್ತಿಸುತ್ತಿದ್ದಾಳೆಯೆ? ಶಿಸ್ತು, ಆತ್ಮಗೌರವ ಬದಿಗಿಟ್ಟು, ಈ ಮೊದಲೇ ಮದುವೆಯಾಗಿ, ಅದು ಯಶಸ್ವಿಯಾಗದೇ ಮರುಮದುವೆಗೆ ಸಿದ್ಧವಾಗಿ ನಿಂತ ಈ ಪಂಜಾಬಿಯನ್ನು ನಂಬಿ ಬಾಳುವುದಾದರೂ ಹೇಗೆ? ಇವಳ ವರ್ತನೆ, ಮನೋಭಾವ, ಗಾಬರಿ ಹುಟ್ಟಿಸುವಂತದೇ ಆಗಿತ್ತು.

"ಯಾವಾಗ ಮದುವೆ?" ಅಳುಕುತ್ತಾ ಕೇಳಿದೆ.

"ಯಾರ ಮದುವೆ?" ಕೇಳಿದಳು ತಮಿಳು ಹುಡುಗಿ.

"ನಿಮ್ಮ ಮದುವೆ?"

"ನಮ್ಮ ಮದುವೆ ಈ ಜನ್ಮದಲ್ಲಿ ಸಾಧ್ಯವಿಲ್ಲ!"

ನನ್ನ ತಲೆ ಜುಮ್ಮೆಂದಿತು ಅವಳ ಉತ್ತರ ಕೇಳಿ. ಕಪೂರ್‌ನ ಮುಖ ನೋಡಿದೆ. ಅವನು ನಗುತ್ತಿದ್ದ.

"ಯಾಕೆ? ಏನು ಕಾರಣ?"

"ನನ್ನ ತಂದೆ ಈ ಮದುವೆಗೆ ಒಪ್ಪಿಗೆ ನೀಡುತ್ತಿಲ್ಲ!"

ಯಾವ ತಂದೆ ತಾನೆ ಈ ಮದುವೆಗೆ ಒಪ್ಪಿಗೆ ನೀಡುತ್ತಾನೆ?

ಆದರೆ ಇವಳಿಗೆ ಯಾಕೆ ಬೇಕು ತಂದೆಯ ಒಪ್ಪಿಗೆ? ಪ್ರೇಮಿಸಲಿಕ್ಕೆ ಒಪ್ಪಿಗೆ ಪಡೆಯದಿದ್ದವಳು, ಮದುವೆಗೆ ಯಾಕೆ ಒಪ್ಪಿಗೆ?

"ತಂದೆಯ ಒಪ್ಪಿಗೆ ಅವಶ್ಯಕವೇ?"

"ಅತ್ಯಂತ ಅವಶ್ಯಕ!"

"ಬಹಳ ಆಶ್ಚರ್ಯ!"

"ಯಾಕೆ ಆಶ್ಚರ್ಯ?"

"ಇಷ್ಟೆಲ್ಲಾ ಮುಂದುವರೆದೂ, ತಂದೆಯ ಅಪ್ಪಣೆ ದೊರಕದೆ ಮದುವೆಯಾಗುವುದಿಲ್ಲವೆಂದರೆ, ಆಶ್ಚರ್ಯವಲ್ಲದೆ ಇನ್ನೇನು?"

"ಇವಳಿಗೆ ಮದುವೆ ಮುಖ್ಯವಲ್ಲ! ನನ್ನ ಸ್ನೇಹ ಮುಖ್ಯ! ಒಳ್ಳೆ ಸ್ನೇಹಿತರಾಗಿ ಇದ್ದುಬಿಡೋಣ, ಮದುವೆ ಯಾತಕ್ಕೆ, ಎನ್ನುತ್ತಾಳೆ. ನನಗೆ ಹೆಂಡತಿ ಬೇಕು, ಮನೆ ತುಂಬಾ ಮಕ್ಕಳು ಬೇಕು, ಮೊಮ್ಮಕ್ಕಳು ಬೇಕು..."

ಕಪೂರ್ ಬಡಬಡನೇ ಹೇಳಿದ.

"ಸಾಕು! ಸಾಕು! ಮೊಮ್ಮಕ್ಕಳಿಗೆ ನಿಲ್ಲಿಸಿ! ಮರಿಮಕ್ಕಳವರೆಗೂ ಹೋಗಬೇಡಿ. ಮಕ್ಕಳ ಮೇಲೆ ಅಷ್ಟು ಆಸೆ ಇದ್ದರೆ, ದತ್ತು ತೆಗೆದುಕೊಳ್ಳಿ ಒಂದು ಮಗುವನ್ನು!"

ಇವರಿಬ್ಬರ ಮಾತುಕತೆಯ ಗುರಿ ತಪ್ಪಿ, ಅತ್ತಿತ್ತ ಹೊರಳುವ ಲಕ್ಷಣ ಕಂಡೊಡನೆಯೆ, ನಾನು ಬಾಯಿ ಹಾಕಿದೆ.

"ನಿಮ್ಮ ತಂದೆ ಏನು ಮಾಡಿಕೊಂಡಿದ್ದಾರೆ?"

"ಅವರು ಆಯಿಲ್ ಇಂಡಿಯಾದಲ್ಲಿ ಇಂಜಿನಿಯರ್ ಆಗಿದ್ದಾರೆ!" ಎಂದಳು.

"ಇನ್ನೇನು ರಿಟಾಯಿರ್ ಆಗುವವರಿದ್ದಾರೆ. ಮದ್ರಾಸ್‌ನಲ್ಲಿ ನೆಲಸಬೇಕೆಂದಿದ್ದಾರೆ. ಆಗ ನಮ್ಮ ಮದುವೆ ಜರುಗುವ ಸಂಭವ ಹೆಚ್ಚು!"

ಕಪೂರ್ ಚಾ ಹೀರುತ್ತಾ ನುಡಿದ.

"ನಾನು ಮದ್ರಾಸ್‌ಗೆ ವರ್ಗ ಮಾಡಿಸಿಕೊಳ್ಳುತ್ತೇನೆ."

ಉಬ್ಬಿದ ಕೆನ್ನೆಯನ್ನು ಇನ್ನೂ ಉಬ್ಬಿಸಿ ನುಡಿದಳು ತಮಿಳು ಕನ್ಯೆ.

"ನಾನು ಮದ್ರಾಸ್‌ಗೆ ನನ್ನ ಫ್ಯಾಕ್ಟರೀನ ವರ್ಗಾಯಿಸಿಬಿಡುತ್ತೇನೆ!"

ರೆಡಿಮೇಡ್ ಉತ್ತರವಿತ್ತ ಕಪೂರ್!

"ಮದ್ರಾಸಿನಲ್ಲಿ ಇಲ್ಲಿ ಇರುವ ಹಾಗೆ ನಾವು ಇರಲಿಕ್ಕೆ ಸಾಧ್ಯವಿಲ್ಲ. ಅಲ್ಲಿ ಜನ ಸಂಪ್ರದಾಯಸ್ಥರು. ಆದ್ದರಿಂದ ನೀವು ಇಲ್ಲೇ ಇರಿ! ನಾನು ಅಲ್ಲಿ ತಂದೆಯ ಜೊತೆ ಹಾಯಾಗಿ ಇರುತ್ತೇನೆ!"

ಇವರಿಬ್ಬರೂ ಹಗುರವಾಗಿ ಚಕ್ಕಂದ ಆಡುತ್ತಿದ್ದಾರೋ, ಬಹಳ ಗಂಭೀರವಾಗಿ ಚರ್ಚಿಸುತ್ತಿದ್ದಾರೋ ಎಂದು ಚಿಂತಿಸಿ ಗೊಂದಲಕ್ಕೆ ಬಿದ್ದೆ. ಪ್ರೇಮಿಸುವುದು ಹುಡುಗಾಟವೇ? ಅಥವಾ ಚೆಲ್ಲಾಟವೇ? ಅಥವಾ ಬೇಜವಾಬ್ದಾರಿ ಚಕ್ಕಂದದಾಟವೇ?

ಇವರು ಪ್ರೇಮಪಾಶದಲ್ಲಿ ಸಿಕ್ಕಿ ಒದ್ದಾಡುವ ಪ್ರೇಮಿಗಳ ಹಾಗೆ ತೋರುವುದೇ ಇಲ್ಲವಲ್ಲ! ತಮಿಳು ಕುಮಾರಿ ಹೇಳುವ ಹಾಗೆ, ಇವರ ಪ್ರೇಮ, ಲಗ್ನ ಬಂಧನದಲ್ಲಿ ಕೊನೆಗೊಳ್ಳದೇ, ಸ್ನೇಹಬಂಧನದಲ್ಲಿದಿಯೇ?ಒಬ್ಬ ಒಳ್ಳೆಯ ಸ್ನೇಹಿತ ನನ್ನ ಪಡೆಯುವುದು, ದೇವರ ಅತ್ಯುತ್ತಮ ಕೊಡುಗೆ ಎಂದು ಹೇಳುತ್ತಾರೆ, ಸ್ನೇಹಿತನ ಪ್ರೀತಿಗೆ ಬದಲಾಗಿ ಬೆಲೆ ಒಡ್ಡುವುದು ಅಸಾಧ್ಯವೆಂದೂ ಹೇಳುತ್ತಾರೆ. ಇವರ ಸ್ನೇಹವೂ ಬೆಲೆ ಕಟ್ಟಲಾರದಂತಹ ಬಂಧನವೇ? ಮದುವೆಯಾದರೂ, ಜೀವಮಾನವಿಡೀ ಸ್ನೇಹ ಬಂಧನದಲ್ಲಿರುವುದೇ ಆಗಿದೆಯಲ್ಲವೇ?ಕಾಮದ ಲೇಪನವಿಲ್ಲದಿದ್ದರೆ, ಇವರ ಸಂಬಂದ ಸ್ನೇಹ ಬಂಧನದಲ್ಲಿ ಮುಕ್ತಾಯಗೊಳ್ಳುವುದೇನೋ? ಆದರೆ ಲಗ್ನಬಂಧನದ ಹೊಣೆಗಾರಿಕೆಗಿಂತಲೂ, ಸ್ನೇಹ ಬಂಧನದ ಹೊಣೆಗಾರಿಕೆ ಹೆಚ್ಚೆ ಎನ್ನಬಹುದಲ್ಲವೇ?

ಸ್ನೇಹದ ಮೂಲ ಸೂತ್ರ-ತ್ಯಾಗ ಮತ್ತು ಪ್ರೇಮ ಎನ್ನುತ್ತಾರೆ. ಇವರಿಬ್ಬರಲ್ಲಿ ಪ್ರೇಮ ವಿದ್ದರೂ, ತ್ಯಾಗದ ರಾಗ ಕೇಳುವುದೇಇಲ್ಲವಲ್ಲ! ತಮಿಳು ಕುಮಾರಿ, ಪಂಜಾಬಿಯನ್ನು ಬಿಟ್ಟು, ಮದ್ರಾಸ್‌ಗೆ ಹೋಗಲು ತುದಿಗಾಲಿನಲ್ಲಿ ನಿಂತಿದ್ದಾಳೆ. ಕಪೂರ್ ದಿಲ್ಲೀ ತ್ಯಾಗಮಾಡಲಿಕ್ಕೆ ಸಿದ್ಧನಿದ್ದಾನೆ. ಹಾಗಾದರೆ, ಇವರಲ್ಲಿ ನಿಜವಾದ ಪ್ರೇಮವಿದೆಯೋ ಅಥವಾ ತಾತ್ಕಾಲಿಕ ಉದ್ವೇಗಭರಿತ, ಮೋಹಪರವಶರಾಗಿದ್ದಾರೆಯೊ? ಸ್ನೇಹದ ಇನ್ನೊಂದು ಅಂಶ ಪ್ರೇಮ ಇವರಲ್ಲಿ ಇದೆಯೊ? ಸ್ನೇಹದ ಚಿಹ್ನೆಯಾದ ಪ್ರೀತಿ, ಬರೀ ಭ್ರಮೆಯಾಗಿದೆಯೋ ಇವರ ಪಾಲಿಗೆ? 'ಭ್ರಮೆಯು ಭೋಗಗಳಲ್ಲಿ ಅಗ್ರಸ್ಥಾನ ಹೊಂದಿದೆ' ಎಂದು ಆಸ್ಕರ್ ವೈಲ್ಡನ ಹೇಳಿಕೆಯ ನೆನಪಾಯಿತು.

ಈ ಕಮಲ ಕುಮಾರಿ ಬಯಕೆಯ ಬಲೆಯಲ್ಲಿ ಸಿಕ್ಕಿಕೊಳ್ಳದೇ, ನೆಮ್ಮದಿಯಿಂದ ಇರಲಿಕ್ಕೆ ಪ್ರಯತ್ನಿಸುತ್ತಿದ್ದಾಳೆಯೆ? ಪ್ರೇಮ, ಪ್ರೀತಿ, ಆಸೆ ಆಕಾಂಕ್ಷೆಗಳ ಬಲೆಯಲ್ಲಿ ಸಿಕ್ಕಿಹಾಕಿಕೊಳ್ಳದೇ, ತನ್ನದೇ, ಆದ ಸಿದ್ಧಾಂತ ಹೊಂದಿದ್ದಾಳೆಯೊ? ಇದರ ಬಗ್ಗೆ ಚಿಂತಿಸಿ ನೆಮ್ಮದಿ ಕಳೆದು ಕೊಳ್ಳುವ ಬದಲು ಅವಳನ್ನೇ ಕೇಳಿ ತಿಳಿದುಕೊಂಡರೆ ಹೇಗೆ?

" 'ಹಾಯಾಗಿ ಮದ್ರಾಸಿನಲ್ಲಿದ್ದು ಬಿಡುತ್ತೇನೆ" ಎಂದರಲ್ಲ! 'ಪ್ರೇಮ, ಬಯಕೆ, ಮದುವೆ ಎಂಬ ಕಟ್ಟಳೆಗಳಿಗೆ ಸಿಕ್ಕಿ ಹಾಕಿಕೊಳ್ಳಬಾರದೆಂಬ ಭೀತಿಯೇ ನಿಮಗೆ?"

"ಭೀತಿ?...ಭಯ?...ಇಲ್ಲಾ, ಇಲ್ಲ! ಆದರಲ್ಲೂ ಇವರನ್ನು ಮದುವೆಯಾಗುವುದಕ್ಕೆ ಯಾವ ರೀತಿಯ ಭಯವೂ ಇಲ್ಲ! ಆದರೆ, ನಾನು ನನ್ನ ತಂದೆಯನ್ನು ಬಿಟ್ಟು ಇರುವ ಹಾಗೆ ಇಲ್ಲ ಸಧ್ಯದ ಪರಿಸ್ಥಿತಿಯಲ್ಲಿ! ನನ್ನ ತಮ್ಮನ ಓದು ಪೂರೈಸಬೇಕು. ನನ್ನ ತಂದೆಗೆ ನನ್ನ ಅವಶ್ಯಕತೆ ಜಾಸ್ತಿ."

"ನಿಮ್ಮ ತಾಯಿ?"

"ಇದ್ದಾರೆ. ಅವರ ಆರೋಗ್ಯ ಕೂಡ ಸರಿಯಿಲ್ಲ. ಹೀಗಾಗಿ ನಾನು ಮದುವೆ ಮಾಡಿಕೊಂಡು ದಿಲ್ಲೀಯಲ್ಲಿರುವ ಸಾಧ್ಯತೆ ಇಲ್ಲ."

"ನಿಮ್ಮ ತಂದೆ-ತಾಯಿ ಇಲ್ಲೇ ಇರಬಹುದಲ್ಲ!"

"ಮದ್ರಾಸ್‌ನಲ್ಲಿ ಅವರಿಗೆ ಸ್ವಂತ ಮನೆ ಇದೆ. ಬಂಧುಗಳಿದ್ದಾರೆ. ತಮ್ಮ ಕೊನೇ ದಿನಗಳನ್ನು ಅವರು ಅಲ್ಲೇ ಕಳೆಯಲು ನಿರ್ಧರಿಸಿದ್ದಾರೆ."

"ನಿಮ್ಮ ಮದುವೆ ವಿಷಯದಲ್ಲಿ ಅವರ ಅಭಿಪ್ರಾಯ ಏನಿದೆ?"

"ಯಾವನೋ ಒಬ್ಬ ಮದ್ರಾಸೀ ಹುಡುಗನನ್ನು ನನ್ನ ಕುತ್ತಿಗೆಗೆ ಕಟ್ಟಬೇಕೆಂದಿದ್ದಾರೆ. ನಾನು ಒಪ್ಪುತ್ತಿಲ್ಲ!"

"ಯಾಕೆ?"

"ಇವರಿದ್ದಾರಲ್ಲಾ!"

ಕಪೂರ್ ಕಡೆ ಕೈ ತೋರಿಸಿ, ನಗುತ್ತಾ ಹೇಳಿದಳು ತಮಿಳು ಕುಮಾರಿ!

ನನ್ನ ತಲೆ ಚಿಟ್ಟು ಹಿಡಿದು, ನೆಮ್ಮದಿ ಹಾಳಾಗುವ ಹಾಗೆ ತೋರಿತು.

ವಿಚಿತ್ರ ರೀತಿಯ ಕತ್ತಲ ಗುಹೆಯನ್ನು ಹೊಕ್ಕಿ ಬೆಳಕಿಗಾಗಿ ಪರಿತಪಿಸುವಂತಹ ಸ್ಥಿತಿ ನನ್ನದಾಗಿತ್ತು. ಗುಹೆಯಲ್ಲಿ ವಾಸವಾಗಿರುವ ಬಾವಲಿಗಳ ಚೀರುವಿಕೆಯೇ ಪ್ರೇಮ ರಾಗವೆಂದು ಭ್ರಮಿಸುವ ಹಾಗಾಗಿತ್ತು. ಇವರ ಪ್ರೇಮ ಜಾಲದ ಬಗ್ಗೆ ನಾನೇಕೆ ತಲೆ ಕೆಡಿಸಿಕೊಳ್ಳಬೇಕು?ಪ್ರೇಮಿಗಳೇ ಅದರ ಬಗ್ಗೆ ಚಿಂತಾಕ್ರಾಂತರಾಗಿರದೇ, ತಮ್ಮ ಪ್ರೇಮ ಭಗ್ನವಾಗುವ ಸಾಧ್ಯತೆ ಇದೆಯೆಂದು ಕಂಡು ಕೊಂಡು, ಕತ್ತಲೆ ಗುಹೆಯಲ್ಲಿ ತಡಕಾಡು ವುದನ್ನು ಬಿಟ್ಟು, ಬೆಳಕಿನ ಕಿರಣಗಳು ಪ್ರೇಮ ಜಗತ್ತು ಬಿಟ್ಟು ಬೇರೆ ಹೊರಜಗತ್ತಿನಲ್ಲಿಯೂ ಕಾಣಸಿಗುತ್ತೇವೆ ಎಂಬ ಭರವಸೆ ಇಟ್ಟುಕೊಂಡಿದ್ದಾರೆನ್ನಿಸಿತು.

ಇಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸುತ್ತಾರೆ, ಬಯಸುತ್ತಾರೆ, ವಿವಾಹವಾಗ ಬಯಸುತ್ತಾರೆ! ಆದರೆ ಇದು ಹೀಗೇ ಆಗಬೇಕೆಂಬ ನಿರ್ಬಂಧವಿಲ್ಲ! ಪ್ರೀತಿ, ಪ್ರೇಮ ಮದುವೆಗಳಿಗೆ ಬದ್ಧರಾಗಿಲ್ಲ. ಮುಕ್ತ ಚಿಂತನೆ ಮಾಡಿ, ತಮ್ಮ ಸ್ವಾರ್ಥತನಕ್ಕೆ ಬೆಲೆ ಕೊಡದೆ, ವಿವೇಕದ ಧ್ವನಿಗೆ ಬೆಲೆ ನೀಡುತ್ತಾ ಇದ್ದಾರೆನ್ನಿಸಿತು.ತಾಯಿ ತಂದೆ, ತಮ್ಮನ ಜೀವನದೊಳಿಗೆ ತನ್ನ ಜೀವನವನ್ನು ಹಾಸುಹೊಕ್ಕಾಗಿಸಿ, ಅದರಲ್ಲೇ ನೆಮ್ಮದಿ ಕಾಣುವ ಈ ಕುಮಾರಿ ಕಮಲ ಸಾಹಸ, ಮೌಲ್ಯಗಳ ಸಂಕೇತವೆನಿಸಿತು. ಇವಳಿಗೆ ಇದರಲ್ಲೇ ಸುಖ, ನೆಮ್ಮದಿ ಸಿಗುವುದಿದ್ದರೆ ಯಾಕೆ ಹಾಗೆ ಇರಬಾರದು? ಆದರೆ ಸುಖ ಎಂದರೇನು? ಅಷ್ಟಭೋಗ, ಅಂದರೆ, ಮನೆ, ಹಾಸಿಗೆ, ವಸ್ತ್ರ, ಆಭರಣ, ಸ್ತ್ರೀ, ಪುಷ್ಪ, ಗಂಧ, ತಾಂಬೂಲ, ಅನುಭವಿಸಿದರೆ ಸುಖವೇ? ಯಾರು ಇತರರ ಸುಖದಲ್ಲೇ ತನ್ನ ಸುಖವನ್ನು ಕಾಣುತ್ತಾರೋ ಅವರೇ ನಿಜವಾದ ಸುಖಿಗಳು. ಅದೇ ನಿಜವಾದ ಬದುಕು. 'ಪ್ರತಿದಿನ ಸುಖವನ್ನರಸು. ಇಂದು ಸುಖ ಕಾಣದಿದ್ದರೆ, ನಾಳೆಯೂ ಕಾಣಲಾರೆ' ಎಲ್ಲೋ ಓದಿದ ನೆನಪು ಬಂದಿತು. ಸುಖ ಎನ್ನುವುದು ಒಂದು ಮನಸ್ಸಿನ ಪರಿಕಲ್ಪನೆ, ಮನೋಧರ್ಮ, ಸಿದ್ಧತೆಯೆಂದೂ ಹೇಳುತ್ತಾರೆ. ಹಾಗಾದರೆ, ಕಪೂರ್‌ನನ್ನು ಬಿಟ್ಟು, ಒಬ್ಬಳೇ ಸುಖವಾಗಿರಬಲ್ಲಳೇ? ಕಪೂರ್‌ನಿಗೆ ಸುಖ ನೀಡುವುದನ್ನು ಬಿಟ್ಟು, ಒಬ್ಬಂಟಿ ಗಳಾಗಿದ್ದರೆ, ಅದು ಸುಖವೆನ್ನಿಸುವುದೇ?

"ಇನ್ನು ಹೊರಡೋಣವೇ?"

ತಮಿಳು ಕುಮಾರಿ ಕೇಳಿದಳು. 'ಹೂಂ' ಎಂದು ಎಲ್ಲರೂ ಹೊರಗೆ ಬಂದೆವು. ಆಗಲೇ ಗಂಟೆ ಐದು ಆಗಿತ್ತು. ಅವರಿಗೆ ವಿದಾಯ ಹೇಳಿ ಬಸ್ ಹತ್ತಿ

ರಾಜೇಂದ್ರನಗರಕ್ಕೆ ಹೊರಟು ಮನೆಗೆ ಬಂದೆ. ಬಾಗಿಲ, ಬಳಿ, ಜನರ ಸಂತೆ ಸೇರಿತ್ತು. ಗಾಬರಿಯಾಯಿತು, ಮನೆಬಾಗಿಲ ಬಳಿ ಜನ ಸೇರಿದರೆ, ಬಾಗಿಲು ಒಡೆದು ಕಳ್ಳ ನುಗ್ಗಿ ಸಾಮಾನು ದೋಚಿಕೊಂಡು ಹೋದನೇ? ಅಥವಾ ಮಾಲೀಕನ ಮನೆಯಲ್ಲಿ ಕಳ್ಳತನವೇ? ಖೂನೀಯೋ? ಛೆ!ಛೆ! ಯಾಕೆ ಕೆಟ್ಟದ್ದನ್ನೇ ಯೋಚಿಸುತ್ತಿದೆ ಮನಸ್ಸು? ಒಳ್ಳೆಯದನ್ನು ಯೋಚಿಸಬಾರದೇ? ಆದರೆ ದಿಲ್ಲಿಯ ಕಲುಶಿತ ವಾತಾವರಣದಲ್ಲಿ, ಒಳ್ಳೆಯ ಸುದ್ದಿಗಳು, ಸಂಗತಿಗಳು, ವರದಿಗಳು ವದಂತಿಗಳು, ಹಬ್ಬುವುದು ದುಸಾಧ್ಯ! ಕೊಲೆ, ಕೊಳ್ಳೆ, ದಗಾ, ದರೋಡೆ, ದೋಚು, ಡಕಾಯಿತಿ, ದ್ರೋಹ, ದಗಲ್‌ಬಾಜಿ, ಮೋಸ, ಕುಟಿಲ, ಕುಯುಕ್ತಿ, ಕುತಂತ್ರಗಳ ವಿಷವಾಯು ಈ ವಾತಾವರಣದಲ್ಲಿ. ವಿಷವೇಗದಲ್ಲಿ ಬೆಳೆದು ಹರಡುತ್ತಿರುವಾಗ; ಮನಸ್ಸು, ಹೇಗೆ ತಾನೆ ಆಹ್ಲಾದಕರವಾಗಿ, ಹಿತವಾಗಿ ಹಗುರವಾಗಿ ಹಾರಾಡುವಂತಾಗುತ್ತದೆ?

ಗುಂಪಿನಲ್ಲಿ ನನ್ನ ನೆರೆಮನೆಯ ಗೃಹಸ್ಥ ನಿಂತಿದ್ದ.

ಮನೆಯ ಬಾಗಿಲನಲ್ಲಿ ಗುಂಪುಗೂಡುವುದಕ್ಕೆ ಕಾರಣವೇನು ಎಂದು ಆತನಿಗೆ ಕೇಳಿದೆ.

"ಸಿಂಧೀ ಬದ್ಮಾಷ್ ಹೆಂಡತೀಯನ್ನು ಒದ್ದು ಓಡಿಸಿಬಿಟ್ಟ! ಅವಳು ಅಳುತ್ತಾ, ಕೂಗಾಡುತ್ತಾ ಬೈಯುತ್ತಾ, ಶಾಪಹಾಕುತ್ತಾ ಹೊರಟು ಹೋದಳು!"

"ಯಾಕೆ ಓಡಿಸಿದ್ದು?"

"ಅತ್ತೆ ಸೊಸೆ ಜಗಳ!"

ಶತಮಾನಗಳ ಹಳೆಯ ಸಂಗತಿ ಹೊಸ ಸುದ್ದಿಯಾಗಿ ಪ್ರತಿ ದಿನ, ಪ್ರತಿಕ್ಷಣ, ಪ್ರತಿಮನೆ, ಪ್ರತಿಸಂಸಾರದಲ್ಲಿ ಜರುಗುತ್ತಿದೆ.

"ಅತ್ತೆ ಸೊಸೆ ಜಗಳವಾದರೆ, ಸೊಸೆಯನ್ನು ಒದ್ದು ಯಾಕೆ ಓಡಿಸಬೇಕು? ಮರ್ಯಾದೆಯಾಗಿ ಅವಳನ್ನು ಅವಳ ತಾಯಿ ಮನೆಗೆ ಬಿಟ್ಟು ಬರಬಾರದೇ?" ಯಾಕೆ ಈ ಆತಂಕ? ಈ ಹಿಂಸೆ? ಒದಿಸಿಕೊಳ್ಳುವಷ್ಟು ತಪ್ಪು ಮಾಡಿದ್ದಳೆ?"

"ಮಾಡಿದಳಂತೆ!"

"ಒದಿಸಿಕೊಳ್ಳುವ ಹಾಗೆ ತಪ್ಪು ಮಾಡಿದಳೆ?"

ಮತ್ತೇ ಕೇಳಿದೆ. ಅಚ್ಚರಿಯ ಮೇಲೆ ಅಚ್ಚರಿ!

"ಹೌದು! ಅತ್ತೆ ಕೆನ್ನೆಗೆ ಹೊಡೆದಳಂತೆ ಅವಳು!"

"ಅತ್ತೆ ಕೆನ್ನೆಗೆ ಸೊಸೆ ಹೊಡೆಯುವುದೆ?"

ಈ ಕಲಿಯುಗದಲಿ? ಆಶ್ಚರ್ಯವಾಗಿತ್ತು. ಅದೂ ಈ ಗಠಾಣಿ, ಸಿಂಧೀ ಹೆಂಗಸನ್ನು! ಧಡೂತಿ ಸಿಂಧೀ ಹಸುವಿನ ಹಾಗೆ, ಬೆಳ್ಳಗೆ, ಬಿಳೀ ಸೀರೆ, ಉಟ್ಟುಕೊಂಡು,

ಬಾಬ್ ಮಾಡಿದ ಕೂದಲನ್ನೂ ಕೆಂಚಗಾಗಿಸಿ, ಬಿಳೀ ತೊಗಲು ಹೊತ್ತು, ವಟವಟ ರಾಣಿಯ ತರಹ ಮಾತಾಡುತ್ತಾ, ಬೈಯುತ್ತಾ, ನೆರೆ ಹೊರೆಯವರೊಂದಿಗೆ ಜಗಳ ವಾಡುತ್ತಾ, ಸೊಸೆಯನ್ನು ಮುಕ್ಕುತ್ತಾ, ತಿಕ್ಕುತ್ತಾ, ಒಮ್ಮೊಮ್ಮೆ ನಾಲ್ಕು ಬಾರಿಸುತ್ತಲೇ ಇರುತ್ತಿದ್ದ ಈ ಅತ್ತೆಯ ಮೇಲೆ ದಾಳಿ!

"ಕಾರಣ?"

"ಸೊಸೆಗೆ ಮುಂಡೆ ಅಂತ ಬೈದಳಂತೆ ಅತ್ತೆ!"

ತಾಯಿಯೇ ಮಗನ ಮರಣವನ್ನು ಅಪೇಕ್ಷಿಸಿದರೆ, ಸೊಸೆಯಾದವಳು ಸಹಿಸ ಲಿಕ್ಕೆ ಸಾಧ್ಯವಾದೀತೇ? ಸೊಸೆ ಸೂಕ್ತ ಕ್ರಮ ಜರುಗಿಸಿದ್ದು, ಸೂಕ್ತವಾಗಿತ್ತೆಂದು ತೋರಿತು.

ಆದರೆ, ಸೊಸೆ ನೌಕರೀ ಮಾಡುತ್ತಿದ್ದಳು. ಅವಳು ಪ್ರತೀ ತಿಂಗಳು, ವರದಕ್ಷಿಣೆ ರೂಪವಾಗಿ ತರುತ್ತಿದ್ದ ಸಂಬಳಕ್ಕೆ ಖೋತಾ ಬಿದ್ದಿತಲ್ಲಾ! ಕಂಜೂಸ್ ಮಕ್ಕೀ ಚೂಸ್ ಸಿಂಧೀ ಅತ್ತೆ, ಕೆನ್ನೆಗೆ ಹೊಡೆಸಿಕೊಂಡರೂ, ಕಾಸು ಬಿಡುವವಳಲ್ಲ! ಈ ಸಿಂಧೀ ಅತ್ತೆ ಎಷ್ಟು ಕೃಪಣಳಾಗಿದ್ದಳೆಂದರೆ, ಎಲ್ಲೋ ಓದಿದ ಹಾಗೆ, ಬೆಳಗಾದ ಕೂಡಲೆ, ಹಾಸಿಗೆ ಯಿಂದ ಎದ್ದು, ಹಾಳಾದ ನಿದ್ರೆಯನ್ನು ತನ್ನ ದಿಂಬಿನಡಿಯಲ್ಲಿದೆಯೇ ಎಂದು ಹುಡುಕು ತ್ತಿದ್ದಳಂತೆ! ಇಂತಹವಳು ಸೊಸೆಗೆ ಹೊಡೆದು ಓಡಿಸುವುದೇ? ನಂಬಲಸಾಧ್ಯವಾಗಿತ್ತು.

ಕುತುಬ್ ಮಿನಾರ್ ಮೆಟ್ಟಲುಗಳನ್ನು ನಿಧಾನವಾಗಿ ಏರುತ್ತಾ ಬಾಗಿಲು ಬೀಗ ತೆರೆದು ಒಳಗೆ ಬಂದು ಸುಸ್ತಾಗಿದ್ದ ದೇಹವನ್ನು ಮಂಚದ ಮೇಲೆ ಒರಗಿಸಿದೆ. ಕಣ್ಣು ಮುಚ್ಚಿ ನಿದ್ರೆ ಮಾಡಲು ಯತ್ನಿಸಿದೆ. ಕೆಲವೇ ಕ್ಷಣಗಳಲ್ಲಿ ದಣಿವಿದ್ದ ದೇಹವನ್ನು ನಿದ್ರೆ ಆವರಿಸಿತು.

ಬಾಗಿಲು ಬಡಿದ ಶಬ್ದವಾಯಿತು. ನಿದ್ರೆಯ ಮಡಿಲಲ್ಲಿ ನನಗೆ ಶಬ್ದದ ಅರಿವಾದರೂ,ಏಳಲು ಪ್ರಯತ್ನಿಸಲಿಲ್ಲ. ಬಾಗಿಲು ಮತ್ತೊಮ್ಮೆ ಜೋರಾಗಿ ಬಡಿದಾಗ ಆ ಬಡಿತಕ್ಕೆ ನನ್ನ ನಿದ್ರೆ ಹೆದರಿ ಓಡಿಹೋಯಿತು. ಸಾವಕಾಶವಾಗಿ ಮಂಚದಿಂದ ಎದ್ದು,ಬಾಗಿಲು ಚಿಲಕ ತೆರೆದು ನೋಡಿದರೆ, ನಾರಾಯಣ್ ಸಾಗೂ ಪ್ರತ್ಯಕ್ಷನಾಗಿದ್ದ.

ಇವನ್ಯಾಕೆ ಇಲ್ಲಿಗೆ ಬಂದ? ನನ್ನ ಮೆದುಳು ಚುರುಕಾಯಿತು. ಪೀಡೆ ನನ್ನನ್ನು ಹುಡುಕಿ ಮನೆಯವರೆಗೂ ಬಂದಿದ್ದುದರಿಂದ, ಜಾಗ್ರತೆಯಿಂದಿರುವುದು ನನ್ನ ಕರ್ತವ್ಯ ಎಂದು ಮನಸ್ಸು ನುಡಿಯಿತು.

'ಎಟರ್ನಲ್ ವಿಜಿಲೆನ್ಸ್ ಈಸ್ ದ ಪ್ರೈಸ್ ಆಫ್ ಫ್ರೀಡಮ್' ಗಾದೆ ನೆನಪಿಗೆ ಬಂತು. ನನ್ನ ಸ್ವಾತಂತ್ರ್ಯದ ಜೊತೆ ನನ್ನ ಹಣದ ಹರಣ ಮಾಡಲಿಕ್ಕೆ ಬಂದವನಿಂದ ಪಾರಾಗುವ ಬಗೆ ಹೇಗೆ ಎಂದು ಚಿಂತಿಸುತ್ತಾ ನಿಂತಿದ್ದ ನನ್ನನ್ನು ಕಂಡು, ನಗುತ್ತಾ

'ಒಳಗೆ ಬರಬಹುದಾ ಸಾಬ್?" ಎಂದು ಕೇಳುತ್ತಾ, ನನ್ನನ್ನು ಮೆಲ್ಲನೆ ಪಕ್ಕಕ್ಕೆ ತಳ್ಳಿ ಒಳಗೆ ಬಂದು, ಮಂಚದ ಒಂದು ತುದಿಯಲ್ಲಿ ಕುಳಿತ ಸಾಗೂ!

"ಸಾಯಂಕಾಲ ೭ಗಂಟೆ ಆಯಿತಲ್ಲಾ! ಬೆಳಗಿಂದಾ ನಿದ್ರೆ ಮಾಡುತ್ತಿದ್ದೀರಾ?"

ನಾನು ಉತ್ತರ ನೀಡದೆ, ಬಚ್ಚಲ ಮನೆಗೆ ಹೋಗಿ,ಮುಖ ತೊಳೆದು, ಟವಲ್‌ನಲ್ಲಿ ಒರಿಸಿಕೊಂಡು, ಬಂದು, ಅವನ ಎದುರು ಕುರ್ಚಿಯಲ್ಲಿ ಕುಳಿತೆ.

"ನೆನ್ನೆ ರಾತ್ರಿ ನಿದ್ರೆ ಮಾಡಲಿಲ್ಲವೇ ಸಾಬ್!"

ಇವನ ಜೊತೆ ಚರ್ಚಾಕೂಟಕ್ಕೆ ಸಿದ್ಧನಿರಲಿಲ್ಲ ನಾನು. ಇವನನ್ನು ಹೇಗೆ ಸಾಗ ಹಾಕುವುದು ಎಂದು ಯೋಚಿಸುತ್ತಾ ಕುಳಿತೆ.

"ಇನ್ನೂ ನಿದ್ರೆಯ ಗುಂಗಿನಲ್ಲೇ ಇದ್ದೀರಾ, ಸಾಬ್!"

ಮಾತಿಗೆ ಎಳೆಯಲು, ತನ್ನ ಹಟವನ್ನು ಬಿಡದೆ, ಸಾಗೂ ಪ್ರಯತ್ನಿಸುತ್ತಲೇ ಇದ್ದ.

"ಇಲ್ಲಿಯವರೆಗೆ ಏಕೆ ಬಂದಿದ್ದು?" ಕೇಳಿದೆ.

ಬಿರುಕುಬಿಟ್ಟಿದ್ದ ಸಹನೆಯ ಅಣೆಕಟ್ಟನ್ನು, ಪೂರ್ತ ಒಡೆಯದಂತೆ, ಕಷ್ಟಪಟ್ಟು ಒತ್ತಿ ಹಿಡಿದು ಮಾತನಾಡಿದ್ದೆ.

"ರಾಜೇಂದ್ರನಗರದಲ್ಲಿ ನನ್ನ ಬಂಧುಗಳಿದ್ದಾರೆ. ಅವರನ್ನು ಭೇಟಿ ಮಾಡಿಕ್ಕೆ ಬಂದಿದ್ದೆ. ನಿಮ್ಮ ಜ್ಞಾಪಕವಾಯಿತು ಬಂದೆ"

"ನಾಳೆ, ಬ್ಯಾಂಕ್‌ನಲ್ಲಿ ನೋಡಬಹುದಾಗಿತ್ತಲ್ಲ, ನನ್ನನ್ನು!"

"ಯಾಕೆ? ನಿಮ್ಮ ಮನೆಗೆ ಬಂದಿದ್ದು ತಪ್ಪಾಯಿತೇ?"

"ನೀವು ಏನು ಮಾಡಿದರೆ ಸರಿಯಾಗುತ್ತೆ? ಅದು ಮೊದಲು ಹೇಳಿ!" ಎಂದೆ.

ನಕ್ಕ ಅವ. ಒಡನೆಯೆ ಗಂಭೀರನಾದ.

"ನಿಮ್ಮ ಸಹಾಯ ಬೇಕು ಸಾಬ್!"

ನಾನು ಮಾತನಾಡಲಿಲ್ಲ, ನನಗೆ ತಿಳಿದಿತ್ತು, ಅವನಿಗೆ ಏನು ಸಹಾಯ ಬೇಕು ಎಂದು. ಹಣದ ಸಹಾಯ ಬೇಕು ಎಂದು. ಹಣದ ಸಹಾಯವಲ್ಲದೆ ಮತ್ತೇನು? ಇವನಿಗೆ ಹಣ 'ಕೊಟ್ಟು ಬರುವ ನಿಷ್ಠೂರಕ್ಕಿಂತ, ಕೊಡದೇ ಬರುವ ಮುನಿಸು ಲೇಸು' ಎಂದು ತೀರ್ಮಾನಿಸಿದೆ.

"ಹಣ ಆದರೆ, ಜಾಗ ಖಾಲಿ ಮಾಡಿ!" ಎಂದೆ.

"ಹಣ ಬೇಡ ಸಾಬ್! ಹಣ ಬೇಡ!"

ಚೀರಿದ ಅವನು! ನಾನು ಬೆಪ್ಪನಂತೆ ಅವನ ಮುಖ ನೋಡಿದೆ.

"ಹಣ ಯಾರಿಗೆ ಬೇಕು?"

ಇವನಿಗೆ ಹಣ ಬೇಡ! ಮತ್ತೇನು ಬೇಕು? ಸಾಗೂವಿಗೆ ಹಣ ಬೇಡವಾದರೆ, ಅವನು ಹೆಣವಾಗುವುದು ಖಂಡಿತ! ಸನ್ಯಾಸಿಯಾಗ ಬಯಸಿದ್ದರೆ, ದೇವರೇ ಹೆದರಿ, ಈ ಪ್ರಪಂಚ ಬಿಟ್ಟು ಓಡಿಹೋಗುವ ಪ್ರಮೇಯ ಹೆಚ್ಚು!

ಹಣ ಬೇಡದೇ ಇದ್ದ ಮೇಲೆ ಇನ್ನೇನು ಕೇಳ್ಯಾನು ಇವನು? ಬೇರೆ ಊರಿಗೆ ವರ್ಗ? ಬೇರೆ ಕೆಲಸ? ಸ್ನೇಹಿತರಿಗೆ ಸಾಲ ಕೊಡಿಸಲಿಕ್ಕೆ ಅವನ ಶಿಫಾರಸ್ಸೇ? ಏನೇ ಆಗಿರಲಿ! ಧೈರ್ಯದಿಂದ ಕೇಳಿದೆ.

"ಮತ್ತೇಕೆ ಬಂದಿದ್ದೀರಿ?"

"ನಿಮ್ಮ ಮನೆಯಲ್ಲಿ ಉಳಿದುಕೊಳ್ಳಲಿಕ್ಕೆ ಜಾಗ ಕೊಡಿ ಸಾಬ್!"

# 13

"ಸಾಬ್! ನಿಮ್ಮ ಹತ್ತಿರ ಸ್ವಲ್ಪ ಮಾತಾಡಬೇಕು."

ದಪ್ಪ ಗಂಟಲಿನ, ಉಬ್ಬುಹಲ್ಲಿನ ಲಾಲ್, ಕುಗ್ಗಿದ ಧ್ವನಿಯಲ್ಲಿ ನನ್ನ ಬಳಿ ಬಂದು, ಹೇಳಿದ. ನನ್ನ ರಿಪೋರ್ಟ್ ಮೇರೆಗೆ, 'ನೋ ವರ್ಕ್ – ನೋ ಪೇ' ಎಂಬ ಸೂಕ್ತಿ ಜಾರಿಗೆ ತಂದು ಒಂದು ದಿನದ ಸಂಬಳ ಕಡಿತ ಮಾಡುವಂತೆ ಹೆಡ್ ಆಫೀಸ್ ಸೂಚಿಸಿದ್ದರು.

ಸಂಬಳ ಕಳೆದುಕೊಂಡ ಮೇಲೆ ಅವನ ಗಂಟಲು ಕುಗ್ಗಿ, ರೊಟ್ಟಿ ಜಾರಿ ಹೊಟ್ಟೆಯೊಳಗೆ ಬೀಳಲು ತಡವರಿಸುತ್ತಿತ್ತು. ಕೆಲಸ ಕೂಡ ಅಪ್ಪಿ ತಪ್ಪಿಯೂ ಬಾಕಿ ಇಡದೆ, ಮುಗಿಸಿ ಮನೆಗೆ ಹೋಗುತ್ತಿದ್ದ. ಈ ದಿನ, ಮತ್ತೆ ನನ್ನ ಬಳಿ ಮಾತನಾಡಲಿಕ್ಕೆ ಬಂದಿರುವುದನ್ನು ನೋಡಿದರೆ, ಏನೋ ಕರಾಮತ್ ಮಾಡಲಿಕ್ಕೆ ಬಂದಿದ್ದಾನೆ ಎಂದು ಅನುಮಾನವಾಯಿತು. ದಪ್ಪ ಗಂಟಲಿನ ಲಾಲ್ ಏನು ಆತಂಕ ತಂದಿದ್ದಾನೆಂದು ಆಲೋಚನೆಗೀಡಾದೆ.

ನಾನು ತೆಗೆದುಕೊಂಡ ಕ್ರಮದಿಂದ, ಕುಪಿತಗೊಂಡ ಲಾಲ್ ನನ್ನ ಮೇಲೆ ಸೇಡು ತೀರಿಸಿಕೊಳ್ಳಲು, ಕಾದು ಕುಳಿತಿದ್ದಾನೆಂದು ನನಗೆ ಅರಿವಿತ್ತು. ಸಂಬಳ ನಷ್ಟ, ಮರ್ಯಾದೆಯ ನಷ್ಟ, ಅಭಿಮಾನದ ನಷ್ಟ ಸಾಕಷ್ಟು ಸಂಕಷ್ಟ ತಂದಿತ್ತು ಅವನಿಗೆ. ಆದರೆ, ಪ್ರಪಂಚದ ಎಲ್ಲಾ ಜನರಂತೆ, ಇವನಿಗೂ ಅರಿವಾಗಿರಲಿಲ್ಲ,-ಎಲ್ಲವೂ, ಎಲ್ಲ ಕೆಲಸವೂ, ಕಷ್ಟಕರವಾದದ್ದು ಎಂದು. ಕಷ್ಟಪಟ್ಟು ದುಡಿಯುವ, ಸಂಬಳಕ್ಕೆ ಸರಿಯಾಗಿ ದುಡಿಯುವ, ಮೈ ಬಗ್ಗಿಸಿ ದುಡಿಯುವ ಹಂಬಲ ಒಗ್ಗಿಸಿಕೊಳ್ಳದಿದ್ದರೆ, ಒಂದಲ್ಲ ಒಂದು ದಿನ, ಅಭಿಮಾನ ಭಂಗ, ಮಾನ ಭಂಗ, ಧನ ಭಂಗ ಆಗುವುದರಲ್ಲಿ ಸಂಶಯವೇ ಇಲ್ಲ!

ಈಗ, ನನ್ನ ಮೇಲೆ ಸೇಡು ತೀರಿಸಿಕೊಳ್ಳಲಿಕ್ಕೆ ಬಂದಿದ್ದಾನೆ ಲಾಲ್! ಆದರೆ, ಅವನ ಕಣ್ಣಿನಲ್ಲಿ ಸೇಡಿನ ಕಿಡಿ ಉದುರುವ ಲಕ್ಷಣ ಕಾಣುತ್ತಿಲ್ಲವೇಕೆ? ಬಹಳ ಉದಾಸೀನನಾಗಿದ್ದಾನಲ್ಲಾ?

"ಏನು ವಿಷಯ?" ಕೇಳಿದೆ.

"ನಿಮಗೆ ಒಂದು ವಿಷಯ ಹೇಳಬೇಕೆಂದು ಇದ್ದೇನೆ ಸಾಬ್!"

ನಾನು ಅವನ ಸಂಬಳ ಕಡಿದದ್ದು, ನನ್ನನ್ನು ಕಡಿದು ಸೀಳಿ ಬಿಡುವಷ್ಟು ಕೋಪ ಬಂದು, ಸಮಯ ಸಾಧಿಸಿ, ಹಗೆ ತೀರಿಸುಕೊಳ್ಳುವ ಸನ್ನಾಹ ಮಾಡುತ್ತಿರಬಹುದೆಂದು ಎಣಿಸುತ್ತಿರುವ ನನಗೆ ಏನು ಹೇಳಲು ಬಯಸುತ್ತಿದ್ದಾನೆ ಈ ಲಾಲ್?

"ಒಂದು ರಾಂಗ್ ಕ್ರೆಡಿಟ್ ಆಗಿಬಿಟ್ಟಿದೆ ಸಾಬ್!"

"ರಾಂಗ್ ಕ್ರೆಡಿಟ್?"

"ಹೌದು ಸಾಬ್! ಮೂರು ತಿಂಗಳ ಹಿಂದೆ, ನಾನು ಕರೆಂಟ್ ಅಕೌಂಟ್ ಡಿಪಾರ್ಟ್‌ಮೆಂಟ್‌ನಲ್ಲಿ ಕೆಲಸಮಾಡುತ್ತಿರುವಾಗ, ಒಂದು ಲಕ್ಷ ಇಪ್ಪತ್ತೈದು ಸಾವಿರ ರೂಪಾಯನ್ನು ರಾಂಗ್ ಕ್ರೆಡಿಟ್ ಮಾಡಿಬಿಟ್ಟಿದ್ದೆ."

"ಯಾರ ಅಕೌಂಟ್ ಅದು?"

"ಡೆಲ್ಫೀ ಟ್ರೇಡಿಂಗ್ ಕಂಪನಿಯ ಅಕೌಂಟ್‌ನಲ್ಲಿ ಕ್ರೆಡಿಟ್ ಮಾಡಿಬಿಟ್ಟಿದ್ದೆ!"

"ಯಾರ ಅಕೌಂಟ್‌ಗೆ ಜಮಾ ಆಗಬೇಕಿತ್ತು?"

"ಡೆಲ್ಲಿ ಟ್ರೇಡಿಂಗ್ ಕಂಪನಿಗೆ ಜಮಾ ಆಗಬೇಕಿತ್ತು."

"ತಪ್ಪು ಯಾವಾಗ ಗೊತ್ತಾಯ್ತು?"

"ಕಳೆದ ವಾರ."

"ರಿವರ್ಸ್ ಮಾಡಿಬಿಡಿ ಎಂಟ್ರಿಗಳನ್ನು!"

ನನ್ನ ಮುಖವನ್ನೇ ದೀನವಾಗಿ ನೋಡಿದ ಲಾಲ್!

"ಯಾಕೆ ಹಾಗೆ ನೋಡ್ತೀರಿ?.... ಹಣ ಇಲ್ಲವೇ ಡೆಲ್ಫೀ ಖಾತೆಯಲ್ಲಿ?"

ಕೇಳಿಸಿದರೂ ಕೇಳದಂತೆ ಉಸುರಿದ! ದಪ್ಪ ಗಂಟಲಿನ ಲಾಲ್.

"ಇಲ್ಲ ಸಾಬ್!"

ಒಂದು ಲಕ್ಷ ಇಪ್ಪತ್ತೈದು ಸಾವಿರ ರೂಪಾಯಿಗಳು?

"ಡೆಲ್ಲಿ ಟ್ರೇಡಿಂಗ್ ಕಂಪನಿಯವರಿಗೆ ಈ ವಿಷಯ ತಿಳಿಯಲಿಲ್ಲವೇ?"

"ಅವರ ಅಕೌಂಟ್ಸ್ ಟ್ಯಾಲೀ ಆಗಿರಲಿಲ್ಲವಂತೆ! ದಿನಾಗಲೂ ಬ್ಯಾಂಕ್‌ಗೆ ಬಂದು ಕೇಳುತ್ತಿದ್ದರಂತೆ. ನಮ್ಮಲ್ಲಿ ಯಾರೂ ಅವರಿಗೆ ಸಮನಾದ ಉತ್ತರ ನೀಡಲಿಲ್ಲ."

"ಡೆಲ್ಫೀ ಟ್ರೇಡಿಂಗ್ ಕಂಪನಿಯವನು ಏನು ಹೇಳುತ್ತಾನೆ?"

"ಅವನು ಹಣ ತೆಗೆದುಕೊಂಡು ಹೋಗಿದ್ದಾನೆ. ಕೇಳಿದರೆ, ಹಣ ಇಲ್ಲ ಈಗ. ನಿಧಾನವಾಗಿ ಕೊಡುತ್ತೇನೆ ಎನ್ನುತ್ತಾನೆ!"

ಒಂದು ಲಕ್ಷ ಇಪ್ಪತ್ತೈದು ಸಾವಿರ ರೂಪಾಯಿಗಳನ್ನು ವಸೂಲಿ ಮಾಡಬೇಕು. ಪಾರ್ಟೀ ಕೊಡದಿದ್ದರೆ, ದಪ್ಪ ಗಂಟಲಿನ ಲಾಲ್, ಖಾತೆ ಪರೀಕ್ಷಿಸಿದ ಅಕೌಂಟೆಂಟ್ ಸ್ವಾಮಿಯಿಂದ ಅರ್ಧ ಹಣ ವಸೂಲಿ ಮಾಡುತ್ತಾರೆ ಬ್ಯಾಂಕ್‌ನವರು.

ಹೆಪ್ಪು ಮೋರೆಯ, ಉಬ್ಬು ಹಲ್ಲಿನ ಲಾಲ್‌ನನ್ನು ನೋಡಿ ಮನಸ್ಸು ಕರಗಿತು.

ಅವನ ಉಬ್ಬಿದ ಹಲ್ಲಿನ ಜೊತೆಗೆ, ಉಬ್ಬಿದ ಜಂಬ, ದರ್ಪ, ಕೊಬ್ಬು ಕುಗ್ಗಿ ಕರಗಿ, ಕಣ್ಣಿಂದ ನೀರಾಗಿ ಹರಿಯುವ ದೃಶ್ಯ ಕಂಡು ಬೇಸರವಾಯಿತು.

"ಡೆಲ್ಫೀ ಟ್ರೇಡಿಂಗ್ ಕಂಪನೀ ಅಕೌಂಟ್‌ನಲ್ಲಿ ಓವರ್‌ಡ್ರಾಫ್ಟ್ ಬಿಟ್ಟು, ಡೆಲ್ಲಿ ಟ್ರೇಡಿಂಗ್ ಕಂಪನಿ ಅಕೌಂಟ್‌ಗೆ ಕ್ರೆಡಿಟ್ ಕೊಟ್ಟಿಡಿ!" ಆದೇಶ ನೀಡಿದೆ ಲಾಲ್‌ಗೆ.

ನಿಂತ ಸ್ಥಳದಿಂದ ಲಾಲ್ ಕದಲಲಿಲ್ಲ. ಕಂಬದ ತರಹ ನಿಂತ ಅವನನ್ನು ನೋಡಿ ನನಗೆ ಅನುಮಾನವಾಯಿತು. ಏನಾಯಿತು ಇವನಿಗೆ?

"ಹೆಡ್ ಆಫೀಸ್‌ಗೆ ರಿಪೋರ್ಟ್ ಮಾಡಬೇಡಿ ಸಾಬ್! ನನ್ನ ಬಳಿ ಹಣ ಇಲ್ಲ. ಕೆಲಸ ಕಳೆದುಕೊಳ್ಳಲಿಕ್ಕೂ ತಯಾರಿಲ್ಲ!"

"ನೀವು ಹಣಾನೂ ಕಳೆದುಕೊಳ್ಳಬೇಕಿಲ್ಲ, ಕೆಲಸಾನೂ ಕಳೆದು ಕೊಳ್ಳಬೇಕಿಲ್ಲ! ಒಂದೇ ತರಹದ, ಒಂದೇ ಹೆಸರಿನ ಖಾತೆಗಳಲ್ಲಿ ಈ ತರಹದ ತಪ್ಪು ಆಗುವುದು ಸಾಮಾನ್ಯ! ನೀವು ಯೋಚನೆ ಮಾಡಬೇಡಿ. ಹೋಗಿ ಕೆಲಸ ಮಾಡಿ!"

ನಿಧಾನವಾಗಿ ನಿರ್ಗಮಿಸಿದ ಲಾಲ್. ಹೊರಗೆ, ಸುದ್ದಿ ಸಂತೆ ಸೇರಿತ್ತು. ಎಲ್ಲರೂ ತಮ್ಮ ತಮ್ಮ ಕೆಲಸ ಬಿಟ್ಟು, ಲಾಲ್‌ನನ್ನು ಸುತ್ತುವರೆದಿದ್ದರು.

ಅಂದು ಧರಣಿ, ಮುಷ್ಕರ, ಘೇರಾವ್‌ಗಳ ಮೆರವಣಿಗೆ ನನ್ನ ಶಾಖೆಯಲ್ಲಿ ಬಂದಾಗಿತ್ತು!

ನಾನು ಮಾತ್ರ ಓಡಿದೆ, ಡೆಲ್ಫಿ ಟ್ರೇಡಿಂಗ್ ಕಂಪನಿಯ ಅಂಗಡಿ ಹುಡುಕಿ ಕೊಂಡು. ಶಾಖೆಯ ಸನಿಹದಲ್ಲೇ ಒಂದು ಗಲ್ಲಿಯಲ್ಲಿತ್ತು ಅವನ ಅಂಗಡಿ. ಅಂಗಡಿ ಸುಮಾರಾಗಿ ದೊಡ್ಡದಾಗಿ ಇತ್ತು. ರೆಕ್ಸೀನ್ ಬಟ್ಟೆ ದಂಧೆ ಇಟ್ಟುಕೊಂಡಿದ್ದ. ಸಾಕಷ್ಟು ಸರಕು ಇದ್ದವು ಅಂಗಡಿಯಲ್ಲಿ. ಯುವಕನೊಬ್ಬ ಕುಳಿತಿದ್ದ ಕುರ್ಚಿಯಲ್ಲಿ. ಗ್ರಾಹಕ ರ್‍ಯಾರೂ ಇರಲಿಲ್ಲ. ನನ್ನ ಪರಿಚಯ ಮಾಡಿಕೊಂಡೆ. ವಿಷಯ ತಿಳಿಸಿದೆ.

"ನನಗೆ ಗೊತ್ತಿತ್ತು ನೀವು ನನ್ನ ಬಳಿಗೆ ಬಂದೇ ಬರುತ್ತೀರೆಂದು. ಇಷ್ಟು ದಿನ ಬೇಕಾಯಿತೇ ನಿಮಗೆ ಬರಲಿಕ್ಕೆ?"

ಎಲಾ ಇವನಾ!ನನ್ನ ಬರುವಿಕೆಯನ್ನು ಕಾದು ಕುಳಿತಿದ್ದನಂತೆ, ಶಬರಿಯಂತೆ! ತಾನೇ ಬಂದು ಹಣ ವಾಪಸ್ಸು ಕೊಡಬಹುದಾಗಿತ್ತಲ್ಲ?

"ಈಗ ನನ್ನ ಹತ್ತಿರ ಕಾಸು ಇಲ್ಲ!" ಎಂದ ಮಲ್‌ಹೋತ್ರಾ! ಅದು ಅವನ ಹೆಸರಾಗಿತ್ತು. ಹೆಸರಿನಿಂದ ಅವ ಪಂಜಾಬೀ ಎಂದು ಅರಿವಾಗಿತ್ತು.

"ನಿಮ್ಮ ಖಾತೆಯಲ್ಲಿ ತಪ್ಪಿ ಹಣ ಜಮಾ ಆಗಿದ್ದು ನಿಮಗೆ ಗೊತ್ತಾಗಿತ್ತೆ?"

"ಗೊತ್ತಾಗಿತ್ತು!" ನಸುನಗುತ್ತಾ ನುಡಿದ ಮಲ್‌ಹೋತ್ರಾ!

"ಹಾಗಾದರೆ, ಹಣ ಯಾಕೆ ಡ್ರಾ ಮಾಡಿದಿರಿ....? ನಮಗೆ ಹೇಳಬಹುದಾಗಿತ್ತಲ್ಲ!" ದೂರಿದೆ ಅವನನ್ನು.

"ಸಾಬ್! ಆ ಉಬ್ಬು ಹಲ್ಲಿನ ಮನುಷ್ಯ ಇದ್ದಾನಲ್ಲಾ- ಲಾಲ್, ಅವನಿಗೆ ಹೇಳಿದೆ: ಇದು ನನ್ನ ಹಣ ಅಲ್ಲ. ನನ್ನ ಖಾತೆಯಲ್ಲಿ ಲಕ್ಷ ರೂಪಾಯಿ ವಹಿವಾಟು ಯಾವಾಗಲೂ ಆಗಿಲ್ಲ. ಬರೀ ಸಾವಿರಗಟ್ಟಲೆ ಆಗಿದೆ. ಸ್ವಲ್ಪ ಚೆಕ್ ಮಾಡಿ ಎಂದು ಕೇಳಿದೆ. ಅದಕ್ಕೆ ಅವನು ಕೊಟ್ಟ ಉತ್ತರ ಏನು ಗೊತ್ತಾ?"

ನಾನು ಉತ್ತರಿಸಲಿಲ್ಲ.

ಅವನು ಮುಂದುವರೆಸಿದ ತನ್ನ ವಿವರಣೆಯನ್ನು.

"ನಮ್ಮ ಬುಕ್ಸ್ ಎಲ್ಲಾ ಟ್ಯಾಲೀ ಆಗಿದೆ. ಇದು ನಿಮ್ಮದೇ ಹಣ. ನಿಮಗೆ ಬೇಡದಿದ್ದರೆ, ನಮಗೆ ಕೊಟ್ಟಿಡಿ ಎಂದ ಬದ್ಮಾಷ್!"

"ಅದಕ್ಕೆ ನೀವು ನಿಮ್ಮದಲ್ಲದ ಹಣವನ್ನು ತೆಗೆದುಕೊಂಡುಬಿಡುವುದಾ? ನನ್ನ ಬಳಿ ಬಂದು ತಿಳಿಸಬಹುದಾಗಿತ್ತಲ್ಲಾ"

"ನಿಮ್ಮ ಬಳಿ ಬರುವುದೇ? ಚೆನ್ನಾಗಿದೆ ನೀವು ಹೇಳುವುದು? ನಿಮಗೆ ನೆನಪಿದೆಯಾ? ನಾನು ಒಮ್ಮೆ ಈಗ ಆರು ತಿಂಗಳ ಹಿಂದೆ, ನಿಮ್ಮ ಬಳಿ ಬಂದಿದ್ದೆ.ಸಾಲ ಕೇಳಿದೆ. ಬರೀ ಇಪ್ಪತ್ತು ಸಾವಿರ ರೂಪಾಯಿಗಳು ಮಾತ್ರ. ನನ್ನ ವ್ಯಾಪಾರ ಕುದುರಿಸಲಿಕ್ಕೆ ಬಂಡವಾಳ ಸಾಲದಾಗಿತ್ತು.ಆಗ ನೀವೇನು ಹೇಳಿದಿರಿ ಗೊತ್ತಾ?"

ಗಾಬರಿಯಾಗುವ ಸರದಿಯಾಗಿತ್ತು ನನಗೆ. ಅವನ ಕಣ್ಣಿನಲ್ಲಿ ಕೋಪದ ಕಿಡಿಗಳು ಹಾರುತ್ತಿದ್ದವು. ಭಯಂಕರ ಆತಂಕವಾದಿಯ ತರಹ ಕಂಡ. ನಾನು ಉತ್ತರ ನೀಡಿದರೆ, ಕೆನ್ನೆಗೆ ಎರಡು ಬಾರಿಸಲು ಹಿಂದೇಟು ಹಾಕಲಾರ ಎನ್ನಿಸಿತು. ಮೌನದ ಶರಣು ಹೋದೆ.

"ನಾನು ಹೊಸದಾಗಿ ಬಂದಿದ್ದೇನೆ ಈ ಶಾಖೆಗೆ. ಸದ್ಯಕ್ಕೆ ಸಾಲ ಕೊಡುವುದನ್ನು ನಿಲ್ಲಿಸಿದ್ದೇವೆ. ಕೊಟ್ಟ ಸಾಲವನ್ನು ವಾಪಸ್ಸು ಪಡೆದುಕೊಳ್ಳುವ ಪ್ರಯತ್ನದಲ್ಲಿದ್ದೇನೆ. ಇನ್ನು ಏನೇನೋ ಸಬೂಬು ಹೇಳಿದಿರಿ. ಗೊತ್ತಿದೆಯಾ?"

ಸಾಲಕೇಳಲು ಹಲವಾರು ಜನರು ಬರುವಾಗ ಈ ಮಲ್‌ಹೋತ್ರಾನ ನೆನಪಾದರೂ ಹೇಗೆ ಆಗುತ್ತದೆ? ಇವನನ್ನು ನೋಡಿದ್ದ ನೆನಪಿದೆ ನನಗೆ. ಇವನ ಸಂಗಡ ಮಾತನಾಡಿದ್ದು ಹೇಗೆ ನೆನಪು ಆಗುತ್ತದೆ?

ಬಾಯಿ ಬಿಟ್ಟರೆ ಬಂಡಗೇಡು ಎಂದು ಮೌನ ವಹಿಸಿದೆ.

"ಸರಕಾರೀ ಬ್ಯಾಂಕ್ ಇದು. ಸಾಮಾನ್ಯ ಜನರಿಗೆ ಸಾಲ ಕೊಟ್ಟು ಸಹಾಯ

ಮಾಡುವುದಾಗಿ ಜಾಹಿರಾತು ನೀಡುತ್ತೀರಾ! ನಿಮ್ಮ ಬಳಿ ಬಂದು ಕೇಳಿದರೆ, ನಾಯಿಗಳನ್ನು ಹೊರಗಟ್ಟಿದ ಹಾಗೆ ಹೊರಗಟ್ಟುತ್ತೀರಾ?"

ಇವನ ಮಾತು ಯಾಕೋ ಉದ್ಧವಾಯಿತು, ಎನ್ನಿಸಿತು. ಇನ್ನೊಬ್ಬರ ಹಣ ದೋಚಲು ಎಷ್ಟು ಮುತುವರ್ಜಿ ವಹಿಸುತ್ತಾರೆ ಈ ಪಾಪಿಗಳು! ಬೇರೊಬ್ಬರ ಸ್ವತ್ತು ಉಪಯೋಗಿಸಲು ಇವರಿಗೆ ಎಷ್ಟು ಸುಖ ದೊರೆಯುತ್ತದೆ! ಪ್ರಾಯಶಃ ಪ್ರಪಂಚದ ಎಲ್ಲಾ ಸುಖಗಳಿಗಿಂತ, ಮತ್ತೊಬ್ಬರ ಆಸ್ತಿ, ಹಣ ಲಪಟಾಯಿಸಿ ಉಪಭೋಗಿಸು ವಂತಹ ಸುಖ ಮತ್ತೊಂದಿಲ್ಲ! ಇದಕ್ಕೆ ಉದಾಹರಣೆಯಾಗಿ, ಸಾಗೂ ಜೀವಂತ ಸಾಕ್ಷಿಯಾಗಿದ್ದ. ಅವನಿಗೆ ಜೊತೆಯಾಗಿ ಈ ಮಲ್‌ಹೋತ್ರಾ ತನ್ನ ಬೆಂಬಲ ನೀಡುತ್ತಾ ಇದ್ದಾನೆ.

"ನನ್ನ ಬಲವಂತಕ್ಕೆ ಕೊನೆಗೆ 'ಆಗಲಿ' ಎಂದು ಒಪ್ಪಿ ಸಾಲ ಕೊಡಲು ಒಪ್ಪಿದರಿ. ಆದರೆ ಸಾಲಕ್ಕೆ ಆಧಾರ ಬೇಕು ಅಂದಿರಿ, ಏನು ಆಧಾರ ಎಂದರೆ, ಮನೆ, ಸೈಟ್, ಜಮೀನು, ಶೇರುಗಳು, ಇನ್‌ಷೂರೆನ್ಸ್ ಪಾಲಿಸೀ, ಇನ್ನು ಏನೇನೋ ಕೇಳಿದಿರಿ, ನನ್ನ ಹತ್ತಿರ ಯಾವ ಆಧಾರಾನೂ ಇರಲಿಲ್ಲ. ಪೆಚ್ಚಾಗಿ ವಾಪಸ್ಸು ಬಂದೆ!"

ಆಧಾರ ಕೊಡದೆ ಹೋದರೆ, ಸಾಲ ನೀಡುವುದೇ? ಹಾಗೆ ನೀಡಿದರೆ, ಬ್ಯಾಂಕ್ ದಿವಾಳಿ ಆಗೋದರಲ್ಲಿ ಸಂಶಯವೇ ಇರಲಿಲ್ಲ!

"ನೀವಾಗೇ ನನ್ನ ಖಾತೆಯಲ್ಲಿ ಒಂದು ಲಕ್ಷ ರೂಪಾಯಿ ಜಮಾ ಮಾಡಿದರೆ, ನಾನು ಅದನ್ನು ಉಪಯೋಗಿಸಿಕೊಳ್ಳದಿದ್ದರೆ ನನ್ನನ್ನು ಹೆಡ್ಡ ಎಂದು ನೀವೇ ಹೇಳುತ್ತಿದ್ದಿರಿ!"

ನಿನ್ನನ್ನು ಹೆಡ್ಡ ಎಂದು ಹೇಳುತ್ತಿದ್ದನೆ?

"ಮನೆಗೆ ಬಂದ ಮಹಾಲಕ್ಷ್ಮಿಯನ್ನು ಯಾರು ಒದೆಯುತ್ತಾರೆ? ನೀವೇನೋ ನನ್ನನ್ನು ಒದ್ದು ಹೊರಗೆ ಹಾಕಿದರೆ ನನ್ನ ಮಡಲಿಗೆ ಬಿದ್ದ ಲಕ್ಷ್ಮಿಯನ್ನು ಒದ್ದು ಹೊರಗೆ ಹಾಕುವಷ್ಟು ಕ್ರೂರಿಯಾಗಿರಲಿಲ್ಲ! ಬಹಳವಾಗಿ, ವಿನಯದಿಂದ, ಅವಳನ್ನು ಒಳಗೆ ಬರಮಾಡಿಕೊಂಡು, ಉಪಚರಿಸಿದೆ, ಇದರಲ್ಲಿ ನನ್ನ ತಪ್ಪೇನಿದೆ?"

"ತಪ್ಪಾಗಿ ನಿಮ್ಮ ಖಾತೆಗೆ ಜಮಾ ಮಾಡಿದ ಹಣವನ್ನು ಉಪಯೋಗಿಸಿ ಕೊಂಡದ್ದು, ತಪ್ಪಲ್ಲ ಏನ್ನುತ್ತೀರಾ?"

"ಹೇಗೆ ತಪ್ಪಾಗುತ್ತದೆ? ನನ್ನ ಖಾತೆಗೆ ಜಮಾ ಮಾಡಿ ಎಂದು ನಾನು ಕೇಳಿದನೆ? ಅದನ್ನು ಉಪಯೋಗಿಸಿಕೊಂಡೆ!"

"ನಿಮ್ಮದಲ್ಲದ ಹಣವನ್ನು ಉಪಯೋಗಿಸಿಕೊಂಡಿದ್ದಾಗಿದೆ. ಈಗ ವಾಪಸ್ಸು ಕೊಟ್ಟಿಡಿ!" ಎಂದೆ.

"ಉಪಯೋಗಿಸಿಬಿಟ್ಟಿದ್ದಾದ ಮೇಲೆ, ಹಣ ಎಲ್ಲಿ ಕೈಯಲ್ಲಿರುತ್ತದೆ?"

ಸಿಟ್ಟಿನಿಂದ ಮೈ ಉರಿಯತೊಡಗಿತು. ಸಿಟ್ಟುಮಾಡಿದರೆ,ಕಾಸು ಹಿಂದಿರಿಗಿಸುತ್ತಾನೆಯೆ?

"ನೋಡಿ ಮಿಸ್ಟರ್ ಮಲ್‌ಹೋತ್ರಾ! ನೀವು ಹಣ ವಾಪಸ್ಸು ಕೊಡದಿದ್ದರೆ, ಬ್ಯಾಂಕ್ ಸುಮ್ಮನೆ ಕೂರುವುದಿಲ್ಲ. ಯಾರು ತಪ್ಪು ಮಾಡಿ ನಿಮ್ಮ ಖಾತೆಗೆ ಹಣ ಜಮಾ ಮಾಡಿದ್ದರೋ ಅವರಿಂದ ವಾಪಸ್ಸು ಪಡೆಯುತ್ತಾರೆ. ಅಂದರೆ ಆ ಪಾಪದ ಕಾರಕೂನ ಮತ್ತು ಚೆಕ್ ಮಾಡದ ಅಧಿಕಾರಿಗಳಿಂದ ಹಣ ವಾಪಸ್ಸು ಪಡೆಯುತ್ತಾರೆ. ಅವರು ಹೊಟ್ಟೆಪಾಡಿಗಾಗಿ ಕೆಲಸಕ್ಕೆ ಬಂದಿರುತ್ತಾರೆ. ಒಂದು ತಪ್ಪಿನಿಂದ ಅವರ ಜೀವನ ನಾಶವಾಗಿ ನರಕವಾಗುತ್ತದೆ."

ಮಲ್‌ಹೋತ್ರಾ ತಲೆಕೆಳಗೆ ಮಾಡಿ ಕುಳಿತ. ಅವನ ತಲೆಯಲ್ಲಿ ತುಮುಲ ನೆಡೆದಿರಬೇಕೆಂದು ಎಣಿಸಿದೆ. ಮನಕರಗಿ, ಹಣ ವಾಪಸ್ಸು ಕೊಡುವೆನೆಂದು ಬಗೆದೆ. ನನ್ನ ಭಾಷಣ ಅವನ ಮೇಲೆ ತೀವ್ರ ಪರಿಣಾಮ ಬೀರಿರಬಹುದೆಂದು ಬಗೆದು, ತನ್ನದಲ್ಲದ ಹಣದ ಉಪಯೋಗದಿಂದ, ಇತರರಿಗೆ ಆಗುವ ಅಪಮರಿತವಾದ ಕ್ಲೇಶ, ಕೇಡು, ನಷ್ಟ ಅವನಿಗೆ ಮನವರಿಕೆಯಾಗಿರಬಹುದೇ?

"ನನ್ನ ಬಳಿ ಹಣವಿಲ್ಲ ವಾಪಸ್ಸು ಕೊಡಲಿಕ್ಕೆ!"

ನನ್ನ ಯೋಚನೆಗಳೆಲ್ಲಾ ತಲೆಕೆಳಗಾಗಿ ನಡುಗ ಹತ್ತಿದೆವು. ಇವನು ಧೂರ್ತ, ಠಕ್ಕ, ವಂಚಕ, ದಗಾಕೋರನಷ್ಟೇ ಅಲ್ಲದೇ, ಇತರರಿಗೆ ಆತಂಕ ತಂದೊಡ್ಡುವ ಪಾತಕಿ ಕೂಡ ಆಗಿದ್ದಾನೆಂದು ಮನದಟ್ಟಾಯಿತು. ಇನ್ನು ನಯ, ವಿನಯ, ಆತ್ಮೀಯತೆ, ಸರಳತೆ, ಸ್ನೇಹಪರತೆಗಳಿಂದ ಇವನನ್ನು ಗೆದ್ದು, ಹಣವನ್ನು ವಸೂಲಿ ಮಾಡುವುದು ಕಷ್ಟ ಎಂದು ತಿಳಿಯಿತು.

ಇವನನ್ನು ಹೇಗೆ ನಿಭಾಯಿಸುವುದು?

"ಇನ್ನೊಬ್ಬರ ಹಣ ಲಪಟಾಯಿಸುವುದು, ಅಪರಾಧವಾಗುತ್ತದೆ. ನಾನು ಈಗ ನೇರ ಪೋಲೀಸ್ ಸ್ಟೇಷನ್ ಹೋಗಿ ದೂರು ನೀಡುತ್ತೇನೆ. ಬರುತ್ತೇನೆ! ನಮಸ್ಕಾರ" ಎಂದು ಹೇಳಿ, ಸೀದಾ, ಶಾಖೆಗೆ ವಾಪಸ್ಸು ಬಂದೆ. ಪೋಲೀಸ್ ಸ್ಟೇಷನ್‌ಗೆ ಹೋಗಿದ್ದರೆ, 'ಇದು ಸಿವಿಲ್ ಕೇಸ್'ಎಂದು ಹೇಳಿ ನನ್ನನ್ನು ಹೊರಗೆ ಅಟ್ಟುವ ಸಂಗತಿ ನನಗೆ ಅರಿವಿತ್ತು!

ನೈತಿಕ ನೀಚತನದ ಪರಮಾವಧಿ ಮುಟ್ಟಿದ ಮಲ್‌ಹೋತ್ರನನ್ನು ಯಾಕೆ ಈ ಆತಂಕವಾದಿಗಳು ಗುಂಡಿಕ್ಕಿ ಕೊಲ್ಲಬಾರದು? ಏನೂ ಅರಿಯದ, ಪಾಪದ, ನಿಶ್ಕಳಂಕ

ಜನರ ಹತ್ಯೆಯನ್ನು ದಿನವಹೀ ಮಾಡುತ್ತಿರುವ ಈ ಆತಂಕವಾದಿಗಳು ಕೂಡ ನೈತಿಕ ನೀಚತನದ ಪರಮಾವಧಿ ಮುಟ್ಟಿದ್ದಾರಲ್ಲವೇ?

ಬ್ಯಾಂಕ್‌ನ ನನ್ನ ಕೊಠಡಿಯಲ್ಲಿ ಕಾಲಿರಿಸಿದಾಗ, ಕಂಡು ಬಂದಿದ್ದು, ಶಾಮ ಲಾಲ್‌ನ ಶ್ಯಾಮಲ ವರ್ಣದ ಮುಖ. ಕುರ್ಚಿಯಲ್ಲಿ ಕುಳಿತೊಡನೆ ನನ್ನ ಮುಂದೆ ಒಂದು ಕಾಗದ ಇರಿಸಿದ ಶಾಮಲಾಲ್. ಅದು ಇನ್‌ಕಮ್ ಟ್ಯಾಕ್ಸ್ ಕ್ಲಿಯರೆನ್ಸ್ ಸರ್ಟಿಫಿಕೇಟ್ ಆಗಿತ್ತು. ಆ ಚಳಿಗಾಲದಲ್ಲೂ ಮೈ ಬೆವರಿತು. ಇನ್‌ಕಮ್ ಟ್ಯಾಕ್ಸ್ ಬಾಕಿ ಇದ್ದು, ಕಳ್ಳ ಹಣದ ಪತ್ತೆ ಮಾಡಿ, ಅದರಿಂದ ಸಿಕ್ಕಿಹಾಕಿಕೊಂಡ ಶಾಮಲಾಲ್ ನಿಗೆ 'ಕರಬಾಕಿ ಇಲ್ಲ'ಎಂಬ ಸರ್ಟಿಫಿಕೇಟ್ ನೀಡಿರುವುದು ಎಂತಹ ಹಾಸ್ಯಾಸ್ಪದ ಮತ್ತು ವಿಪರ್ಯಾಸ!

"ನಿಮ್ಮ ಕಂಡೀಶನ್ ಪೂರೈಸಿದಕ್ಕೆ ಎಷ್ಟು ಹಣ ಖರ್ಚು ಮಾಡಿದೆಯಪ್ಪಾ" ಎಂದು ಕೇಳುವ ಮನಸ್ಸಾಯಿತು "ಇನ್ನೇನಾದರು ಬೇಕಾ, ಕಾಗದ ಪತ್ರಗಳು?"

ಕೇಳಿದ ಶಾಮಲಾಲ್.

"ಇನ್ನೇನು ಬೇಡ. ನೀವು ನಾಳೆ ಬನ್ನಿ. ನಾನು ಲೋನ್ ಪೇಪರ್ಸ್ ತಯ್ಯಾರು ಮಾಡುತ್ತೇನೆ. ನಾಳೆ ಸಹಿ ಮಾಡಿ, ಸಾಲ ಪಡೆಯಬಹುದು." ಎಂದು ಹೇಳಿದೆ.

ಶಾಮಲಾಲ್‌ನ ಮುಖ ಸಂತುಷ್ಟದಿಂದ ಬೀಗಿತು.

"ತಮಗೇನಾದರೂ ನನ್ನಿಂದ ಸೇವೆಯಾಗಬೇಕೆ?" ದಿಲ್ಲೀಯ ಪ್ರತಿಯೊಬ್ಬ ಪ್ರಜೆ, ತನ್ನ ಕೆಲಸ ಆದ ಮೇಲೆ, ಅಥವಾ ಆಗುವ ಮುನ್ನ, ಬಹಳ ನಮ್ರತೆಯಿಂದ ನಿವೇದಿಸುವ ಬಹು ಪ್ರಸಿದ್ಧ ವಾಕ್ಯ.!

"ನಿಮ್ಮ ಸೇವೆಯಿಂದ ನಮ್ಮ ಶಾಖೆಯ ಹತ್ತು ಜನಕ್ಕೆ ತೊಂದರೆಯಾಗಿದೆ. ನಾನು ಹನ್ನೊಂದನೆಯವನಾಗಿ ಬಿಡುತ್ತೇನೆ, ನಿಮ್ಮ ಸೇವೆಯಿಂದ !"

ನನ್ನ ವ್ಯಂಗ್ಯದ ಮಾತಿನಿಂದ ವ್ಯಗ್ರನಾದ ಆತ. ಕಪ್ಪಗಿನ ಮುಖ ಮತ್ತಷ್ಟು ಕಪ್ಪಿಟ್ಟಿತು "ನಿಮಗೆ ಇಷ್ಟವಿಲ್ಲದಿದ್ದರೆ, ಈಗಲೂ ಹೇಳಿಬಿಡಿ! ದಿಲ್ಲಿಯಲ್ಲಿ ನೂರಾರು ಬ್ಯಾಂಕ್‌ಗಳಿವೆ. ಸಾಲ ಕೊಡಲಿಕ್ಕೆ ಸಾಲಾಗಿ ನಿಂತಿದ್ದಾರೆ."

"ಈಗ ಆ ಮಾತು ಏಕೆ? ದಯವಿಟ್ಟು, ನಾಳೆ ಬನ್ನಿ. ವೃಥಾ ಚರ್ಚೆ ಏಕೆ?"

ಅವನನ್ನು ಹೊರಗೆ ಸಾಗಿ ಹಾಕಿದೆ.

ಅಕೌಂಟೆಂಟ್ ವರ್ಮನನ್ನು ಕರೆದು, ವಿಷಯ ತಿಳಿಸಿದೆ. ಅವನು ಯೋಚಿಸ ತೊಡಗಿದ. ಹೇಗೆ ಈ ಕುತ್ತಿನಿಂದ ಪಾರಾಗುವುದು ಎಂದು ಚರ್ಚಿಸತೊಡಗಿದೆವು. "ನೋ ಡ್ಯೂಸ್ ಸರ್ಟಿಫಿಕೇಟ್' ತಂದ ಮೇಲೆ ಸಾಲ ನೀಡಲೇಬೇಕು. ಆದರೆ ಹೇಗೆ ಈ 'ನೋ ಡ್ಯೂಸ್ ಸರ್ಟಿಫಿಕೇಟ್' ಪಡೆದ ಈ ಖದೀಮ?

"ವರ್ಮಾ! ಒಂದು ಕೆಲಸ ಮಾಡಿ. ಇನಕಮ್ ಟ್ಯಾಕ್ಸ್ ಅಧಿಕಾರಿಯನ್ನು ಭೇಟಿ ಮಾಡಿ. ಅವನಿಗೆ ಈ ಶಾಮಲಾಲ್‌ನ ಚರಿತ್ರೆಯನ್ನು ತಿಳಿಸಿರಿ. ಈ 'ನೋ ಡ್ಯೂಸ್ ಸರ್ಟಿಫಿಕೇಟ್' ನೀಡಿದ್ದರಿಂದ ಅವರು ಮುಂದೆ ಎದುರಿಸಬೇಕಾಗಬಹುದಾದ ದುಷ್ಪರಿಣಾಮ, ಕಂಟಕ, ತೊಂದರೆಗಳಿಗೆ ನಾವು ಹೊಣೆಗಾರರಲ್ಲ ಎಂದು ಎಚ್ಚರಿಕೆ ನೀಡಿರಿ."

ವರ್ಮಾ, ಸರ್ಟಿಫಿಕೇಟ್ ತೆಗೆದುಕೊಂಡು, ಹೊರಟುಹೋದ. ಅವನ ಮುಖದಲ್ಲಿ ನನ್ನ ಆದೇಶದ ಉದ್ದೇಶ ಸಫಲ ಮಾಡಿಕೊಂಡೇ ಬರುವ ಅಚಲ ನಿರ್ಧಾರವಿತ್ತು.

"ಮಲ್‌ಹೋತ್ರಾನಿಂದ ಹೇಗೆ ಹಣ ವಸೂಲಿ ಮಾಡುವುದು?"

ನಾನು ಚಿಂತಾಕ್ರಾಂತನಾದೆ. ಲಾಲ್‌ಗೆ ಭರವಸೆ ನೀಡಿದ್ದಾಗಿದೆ. ಅವನು ಈ ಮೊದಲೇ ಮಲ್‌ಹೋತ್ರಾನ ಬಳಿ ಹೋಗಿ, ಪ್ರಯತ್ನ ನಡೆಸಿ, ನಿರಾಶೆಯಾಗಿ ಬಂದಿರುವ ವಿಷಯ ತಿಳಿದಿತ್ತು.

ಥಟ್ಟನೆ ನೆನಪಾಯಿತು-ಬಜಾರ್‌ನಲ್ಲಿ, ಸಮಸ್ತ ವ್ಯಾಪಾರಿಗಳ ಸಹಕಾರ ಸಂಸ್ಥೆಯೊಂದು ಕಾರ್ಯ ನಡೆಸುತ್ತಿರುವ ವಿಷಯ. ಈ ಸಂಸ್ಥೆಯ ಅಧ್ಯಕ್ಷ ನನಗೆ ಪರಿಚಯಸ್ಥ. ಅವನಿಗೆ ಫೋನ್ ಮಾಡಿ ವಿಷಯ ತಿಳಿಸಿದೆ.

"ಈ ವಿಷಯದಲ್ಲಿ ನಾವು ತಲೆ ಹಾಕುವಂತಿಲ್ಲ. ಇದು ಮೆಂಬರ್‌ಗಳ ಖಾಸಗೀ ವಿಷಯ. ಆದರೆ ನಾನು ಒಂದು ಕೆಲಸ ಮಾಡಬಲ್ಲೆ" ಎಂದ.

"ಏನು?" ಕುತೂಹಲದಿಂದ ಕೇಳಿದೆ.

"ಇತರ ಎಲ್ಲಾ ಮೆಂಬರ್‌ಗಳಿಗೆ ಅವನ ಬಗ್ಗೆ ಎಚ್ಚರಿಕೆ ವಹಿಸಬೇಕೆಂದು ತಿಳಿಸಿಬಿಡುತ್ತೇನೆ. ಅದು ಎಷ್ಟರ ಮಟ್ಟಿಗೆ ಪರಿಣಾಮ ಉಂಟಾಗುತ್ತದೆಯೋ ನೋಡಬೇಕು."

ಎಲ್ಲಾ ವ್ಯಾಪಾರಿಗಳಿಗೂ ವಿಷಯ ತಿಳಿದರೆ, ಅವನ ಬಗ್ಗೆ ಅವರು ಎಚ್ಚರ ವಹಿಸುವುದು ಖಂಡಿತ. ಈ ಕೆಲಸ ನಾನೇ ಯಾಕೆ ಮಾಡಬಾರದು? ತಕ್ಷಣ ಕಾರ್ಯ ತತ್ಪರನಾದೆ. ನಮ್ಮ ಶಾಖೆಯ ಪ್ರತಿಯೊಬ್ಬ ಗ್ರಾಹಕ ವ್ಯಾಪಾರಿಗೂ ಫೋನ್ ಮಾಡಿ, ವಿಷಯ ತಿಳಿಸಿ, ನನಗೆ ಆ ಮಲ್‌ಹೋತ್ರಾನಿಂದ ಹಣ ವಾಪಸ್ಸು ಸಿಗುವ ಹಾಗೆ ಸಹಾಯ ಮಾಡಬೇಕೆಂದು ಕೇಳಿಕೊಂಡೆ.

ಫೋನ್‌ನಲ್ಲಿ ಗಂಟೆಗಟ್ಟಲೆ ಮಾತನಾಡಿದ್ದರ ಫಲ ಗಂಟಲು ಒಣಗಿ ಬೆಂಗಾಡಾಗಿತ್ತು. ನೀರು ಕುಡಿಯಲಪೇಕ್ಷಿಸಿ, ಜಾಟ್ ಜವಾನನಿಗೆ ಹೇಳಿ ಕಳಿಸಿದೆ. ಅವ ಬಂದೊಡನೆ, ಅವನ ಜೊತೆಯಲ್ಲೇ ಹೆಂಡದ ವಾಸನೆಯನ್ನು ತಂದ!

"ನೀರು ಬೇಕಿತ್ತು?" ಅಳುಕುತ್ತಾ ಕೇಳಿದೆ.

"ಹೊರಗಡೆ ಗರಂ ಹವಾನಾ ಸಾಬ್?"

ಈ ಕೊರೆಯುವ ಚಳಿಯಲ್ಲಿ, ತಣ್ಣೀರು ಕುಡಿಯುವುದೆಂದರೆ, ತಲೆಕೊಟ್ಟಿರಬೇಕು!

"ಹೊರಗಡೆ ಗರಂ ಹವಾ ಇಲ್ಲ; ಒಳಗಡೆ ಗರಂ ಹವಾ ಬೀಸುತ್ತಾ ಇದೆ." ನಸುನಗುತ್ತಾ ನನ್ನ ಮುಖವನ್ನೇ ನೋಡಿದ ಜಾಟ್ ಜವಾನ.

"ಗರಂ ಹವಾ ಜೊತೆಗೆ ಶರಾಬಿನ ಬದ್‌ಬೂ ಕೂಡ ಹರಡಿದೆ!"

"ಶರಾಬಿನ ಬದಬೂ?" ಏನೂ ಅರಿಯದವನ ಹಾಗೇ ಪ್ರಶ್ನಿಸಿದ.

"ಹೌದು! ಶರಾಬಿನ ವಾಸನೆ! ಬೆಳಿಗ್ಗೆ ಬೆಳಿಗ್ಗೆ ಆಫೀಸ್‌ಗೆ ಕುಡಿದು ಬಂದರೆ, ಇಲ್ಲಿನ ಹವಾ-ಕೆಟ್ಟು, ಕುಲಗೆಟ್ಟು ಹೋಗುತ್ತದೆ. ಈಗಾಗಲೇ ಈ ಶಾಖೆಯ ಹವಾ ಕೆಟ್ಟು, ಬದಬೂ ಹರಡಿ, ನಮ್ಮೆಲ್ಲರ ಆರೋಗ್ಯ ಕೆಟ್ಟುಹೋಗಿದೆ. ನೀನು ಬೇರೆ ಶರಾಬಿನ ಬದಬೂ ಹರಡಿ, ಕೆಟ್ಟಿರುವ ಆರೋಗ್ಯ ಮತ್ತೂ ಕೆಡಿಸಬೇಕೆಂದು ಮಾಡಿದ್ದೀಯಾ?"

"ಸಾಬ್! ನಾವು ಶರಾಬು ಕುಡಿಯದಿದ್ದರೆ, ಶರಾಬು ತಯಾರು ಮಾಡುವವರಿಗೆ ಬಂಗಲೇ, ಕಾರು, ಚಿನ್ನ, ಒಡವೆ, ಸಕಲ ವೈಭವ ದೊರಕುವುದಾದರೂ ಹೇಗೆ? ಅವರು ನಡೆಸುತ್ತಿರುವ ಕಾರ್ಖಾನೆಯಲ್ಲಿ ನೌಕರಿ ಮಾಡುವವರಿಗೆ ಸಂಬಳ ಸಿಗುವುದಾದರೂ ಹೇಗೆ? ಸರಕಾರಕ್ಕೆ ಲಾಭ ಆಗಿ ನಮ್ಮನ್ನು ಆಳುವುದಾದರೂ ಹೇಗೆ?"

ಅವನ ಮಾತು ಕೇಳಿ ಸುಮ್ಮನಾದೆ.

ಎದ್ದು ಕಿಟಕಿಯ ಬಳಿ ನಿಂತು ಸ್ವಚ್ಛ ಗಾಳಿ ಕುಡಿಯಲಿಕ್ಕೆ ಸ್ವಲ್ಪ ಹೊತ್ತು ನಿಂತೆ. ಕೆಳಗಡೆ ರಸ್ತೆ ಎಂದಿನಂತೆ, ಜನನಿಬಿಡವಾಗಿತ್ತು. ಹಳೇ ದಿಲ್ಲೀಯ ಪ್ರಸಿದ್ಧ ಮೊಘಲ್ ಕಾಲದ ಬಜಾರ್ ಇದು. ಇಲ್ಲಿಯ ಸಂದು ಗುಂದಿಯ ಪೆಟ್ಟಿಗೆಯಂತಹ ಸಾವಿರಾರು ಅಂಗಡಿಗಳಲ್ಲಿ ಕೋಟ್ಯಾಂತರ ರೂಪಾಯಿಗಳ ವ್ಯವಹಾರ ದಿನವಿಡೀ ನಡೆಯುತ್ತಿರುವ ದೃಶ್ಯ ಕಾಣಬಹುದು. ಸಣ್ಣ ಪಿನ್‌ನಿಂದ ಹಿಡಿದು, ದೊಡ್ಡ ಆನೆಯವರೆಗೆ ಇಲ್ಲಿ ಸರಕುಗಳ ವ್ಯಾಪಾರ ನಿರಂತರವಾಗಿ ನಡೆಯುತ್ತದೆ. ಮುಖ್ಯವಾಗಿ, ಖನಿಜಗಳಾದ, ತಾಮ್ರ, ಹಿತ್ತಾಳೆ, ಕಬ್ಬಿಣ, ಉಕ್ಕುಗಳ ವ್ಯಾಪಾರದಂಗಡಿಗಳಿಂದ ತುಂಬಿದ್ದರೆ, ಹತ್ತಿ, ಉಣ್ಣೆ ಬಟ್ಟೆಯ ಉಡುಪಿನ ಕಾರ್ಖಾನೆಗಳು, ಅಂಗಡಿಗಳು, ಮಾಳಿಗೆಗಳು ಎಲ್ಲೆಲ್ಲೂ ಕಾಣಸಿಗುತ್ತವೆ. ಜನಜಂಗುಳಿ, ಸೈಕಲ್ ರಿಕ್ಷಾಗಳು, ಆಟೋರಿಕ್ಷಾಗಳು, ಟೆಂಪೋ, ಟಾಂಗಾ, ಮಿನಿಬಸ್‌ಗಳ ಓಡಾಟದ, ಆರ್ಭಟದ ಶಬ್ದ

ಕಿವಿಗೆ ಅಪ್ಪಳಿಸಿ, ತಲೆ ಸುತ್ತುವಂತಾಯಿತು. ಈ ಶಬ್ದಗಳ ಆರ್ಭಟ ಶತಮಾನಗಳಿಂದ ಕೇಳುತ್ತಿರುವಂತೆ ತೋರಿತು. ಈ ಜನಜಂಗುಳಿಗಳ ಕಾಲಿನ ಭರ, ವಿವಿಧ ವಾಹನಗಳ ಓಡಾಟದ ಶಬ್ದ ವಾಹನಗಳ ಶಬ್ದ ಸಂಪತ್ತು, ಚಿಂತೆ, ಆಕಾಶದಲ್ಲಿ ನಿರಂತರವಾಗಿ, ಹಾರಾಡುತ್ತಿರುವ ಕಾಗೆ, ಹದ್ದುಗಳ ಚೀರುವಿಕೆಯ ಶಬ್ದ ಕೆಲವು ವೇಳೆ, ಶಬ್ದವೇದಿಯ ಹಾಗೆ ಕಿವಿಯನ್ನು ತಿವಿದು ಘಾಸಿಗೊಳಿಸುವುದೂ ಉಂಟು. ಯಾಕೆಂದರೆ, ದಿಲ್ಲೀಯ ಏಕೈಕ ಕಸಾಯಿಖಾನೆ, ಮೊಘಲ್ ಕಾಲದ ಈ ಮೃಗ ವಧಾಸ್ಥಾನ, ನಮ್ಮ ಶಾಖೆಯ ಸಮೀಪವೇ ಇದೆ. ದಿನವಿಡೀ ಸಾವಿರಾರು ಪ್ರಾಣವಧೆ ಕಾರ್ಯ ನಡೆಸುವ ಈ ಸ್ಥಾನ ದಿಲ್ಲೀ ಶಹರಿನ ಮಧ್ಯ ಭಾಗದಲ್ಲಿದ್ದು, ಲಕ್ಷಾಂತರ ದಿಲ್ಲೀವಾಲರ ಹೊಟ್ಟೆಗಳಿಗೆ ಮಾಂಸಾಹಾರ ಒದಗಿಸುವ ಏಕ ಮಾತ್ರ ಪುರಾತನ ಸ್ಥಳ. ದಿಲ್ಲೀಯ ಎಲ್ಲಾ ಖಾನಾವಳಿಗಳಿಗೂ ಖಾನಾ ಒದಗಿಸುವ ಈ ಕಸಾಯಖಾನಾದಿಂದ ಹರಡುವ ಬದಬೂ ನಮ್ಮ ಶಾಖೆಗೂ ಹರಡಿ ಕೆಲವು ಸಲ ನನ್ನ ಹೊಟ್ಟೆ ತೊಳಸಿ, ವಾಂತಿ ಮಾಡಿಕೊಂಡಿದ್ದೂ ಉಂಟು. ಬಜಾರ್ ಬಾರಾಟೂಟೀ ಚೌಕ್‌ನಲ್ಲಿದ್ದ ನಮ್ಮ ಶಾಖೆಯ ಎದುರಿಗೆ ಒಂದು ಸಾರ್ವಜನಿಕ ಪಿಶಾಬ್‌ಗರ್ ಇದೆ. ಈ ಪಿಶಾಬ್‌ಗರ್‌ನಲ್ಲಿ ಮೂತ್ರ ವಿಸರ್ಜಿಸಲು ಬಂದ ವ್ಯಾಪಾರಸ್ಥರು, ಗ್ರಾಹಕರು, ಗೃಹಸ್ಥರು, ಗೃಹಿಣಿಯರು, ಪಕ್ಕದಲ್ಲೇ ಇರುವ ಶಾಲೆಯ ಮಕ್ಕಳು, ಪಿಶಾಬ್‌ಗಳಿಗೆ ಅಂಟಿಕೊಂಡಿರುವ ಸಾರ್ವಜನಿಕ ಮುಚ್ಚುಮರೆಯಿಲ್ಲದ, ಯಾವ ಅಡೆತಡೆಯೂ ಇಲ್ಲದ, ಛಾವಣಿ ಇಲ್ಲದ, ಕೈಗಾಡಿಯಲ್ಲಿ ಬಿಸಿ ಬಿಸಿಯಾಗಿ ಮಾಡಿ ಮಾರುವ ಜಿಲೇಬಿಗಳಿಗೆ ಇರುವೆ ಮುತ್ತುವಂತೆ ಮುತ್ತುವ ದೃಶ್ಯ ಪ್ರಾಯಶಃ ಈ ನಗರದಲ್ಲಿ ಮಾತ್ರವೇ ಕಾಣಸಿಗಬಹುದಾದಂತಹ ದೃಶ್ಯ! ವಾಹನಗಳು ಉಗುಳುವ ಪೆಟ್ರೋಲ್-ಡೀಸಲ್ ಹೊಗೆಯ ವಾಸನೆ, ಪಿಶಾಬ್‌ಗರ್‌ನಿಂದ ಹೊರ ಸೂಸುವ ಮಲಮೂತ್ರದ ದುರ್ಗಂಧ, ಸಿಹಿತಿಂಡಿ ಜಿಲೇಬಿ-ಜಹಂಗೀರ್, ಬಾದ್ ಶಾಹಾಗಳ ಸುವಾಸನೆ, ಕಸಾಯಿ ಖಾನೆಯಿಂದ ಹೊರಬರುವ ಬಿಸಿರಕ್ತದ ಉಸಿರು ಕಟ್ಟುವ ಕೆಟ್ಟನಾತ, ಎಲ್ಲವೂ ಮಿಶ್ರಿತಗೊಳ್ಳುವುದು ಈ ಬಾರಾಟೂಟಿ ಚೌಕ್‌ನಲ್ಲಿ! 'ಬಾರಾ-ಟೂಟಿ' ಎಂದರೆ ಉರ್ದೂವಿನಲ್ಲಿ ೧೨ ನಳಗಳು ಎಂದರ್ಥ. ಮೊಘಲ್ ಕಾಲದಲ್ಲಿ ಈ ಚ್‌ಕ್‌ನಲ್ಲಿ ೧೨ ನೀರಿನ ನಳಗಳನ್ನು ಇರಿಸಿದ್ದರಂತೆ, ಪ್ರಾಣಿಗಳಿಗೆ ಮತ್ತು ಮನುಷ್ಯರ ಉಪಯೋಗಕ್ಕೆಂದು. ಈಗ ನಳಗಳ ಬದಲಾಗಿ ಪಿಶಾಬ್ ಗರ್‌ಗಳು, ಕುದುರೆಲಾಯಗಳು, ಸಿಹಿತಿಂಡಿ ಮಾಡುವ ದುಕಾನುಗಳು ಕಾಣಸಿಗುತ್ತವೆ. ಶತಮಾನಗಳಿಂದ ಒಂದೇ ಸಮನೆ ದುಡಿಯುತ್ತಿರುವ, ದಿಲ್ಲೀ ಕಟ್ಟಡಗಳು, ಸ್ಮಾರಕಗಳು ಮತ್ತು ಇತರ ಮಹಲ್‌ಗಳನ್ನು ಕಟ್ಟುತ್ತಿರುವ ಬಡ ಕೂಲಿಕಾರರು, ಗಾರೆ ಕೆಲಸದವರು, ಮರಗೆಲಸದವರು, ಕೊಳಾಯ ಕೆಲಸದವರು, ಬಣ್ಣ ಬಳಿಯು

ವವರು, ತಮ್ಮ ತಮ್ಮ ಆಯುಧಗಳನ್ನು ಹಿಡಿದು, ಕೆಲಸಕ್ಕಾಗಿ ಕಾದು ಕುಳಿತಿರುವ ದೃಶ್ಯ ಸಾಮಾನ್ಯ. 'ಬಾರಾಟೂಟಿ' ಹನ್ನೆರಡು ನಳಗಳಿಂದ ನೀರು ಕುಡಿಯುತ್ತಿದ್ದ ಮೊಘಲ್ ಕಾಲದ ದಿಲ್ಲೀ ಜನರಿಗೆ ಸುಖ ಸಿಕ್ಕಿ ಆನಂದಗೊಳ್ಳುತ್ತಿದ್ದರೇನೋ ನಿಜ. ಆದರೆ, ತಮ್ಮ ಹೃದಯದೊಳಗಿನ ಸಂತಸದ ನೀರು ಕುಡಿದು ಆನಂದಿಸಲು ಪ್ರಯತ್ನ ಮಾಡಲಿಲ್ಲವೇಕೆ? ಸದಾ ಪ್ರಜೆಗಳ, ಪ್ರಾಣಿಗಳ ರಕ್ತ ಕುಡಿದು ತಮ್ಮ ತನುಮನ ತೃಪ್ತಿಗೊಳ್ಳುತ್ತಿದ್ದ ಇವರ ಸಂತತಿಯವರು ಇನ್ನೂ ಈ ಶಹರದಲ್ಲಿ ಉಳಿದಿದ್ದಾರಲ್ಲವೇ? 'ಬಾರಾಟೂಟಿ ಚೌಕ್'ನೊಂದಿಗೆ, ದಿಲ್ಲೀ ಜನರಿಗೆ 'ಬಾರಾ' ಅಂದರೆ '12' ಎಂಬ ಹೆಸರು ಬಹಳ ಆಪ್ತ. 'ಬಾರಾ ಕಮಾನ್' 'ಬಾರಾ ಕಂಭಾ' 'ಬಾರಾ ಬಜೇ' ಇತ್ಯಾದಿ! ಇದರ ಜೊತೆಯಲ್ಲಿ ನಮ್ಮ ಬ್ಯಾಂಕಿನ ಶಾಖೆಯೂ ತನ್ನ ಇರುವನ್ನು ಸೂಚಿಸುತ್ತಾ ಇದೆ.

"ತೆಗೆದುಕೊಳ್ಳಿ ನೀರು!"

ಜಾಟ್ ಜವಾನ ಕೈಯಲ್ಲಿ ಒಂದು ಲೋಟ ನೀರು ಹಿಡಿದು, ನನಗೆ ಹೇಳಿದ ತೆಗೆದುಕೊಳ್ಳಲು.

ಕೈಗೆ ಲೋಟ ತೆಗೆದುಕೊಂಡು, ಅವನ ಮುಖವನ್ನೇ ದಿಟ್ಟಿಸಿ ನೋಡಿದೆ. ಎಳೇ ಪ್ರಾಯದ ಕಟ್ಟು ಮಸ್ತಾದ ಎತ್ತರದ ಆಳು. ಆರೋಗ್ಯವಂತನಾಗಿ ಕಾಣುವ ಈತ ಯಾಕೆ ಕುಡಿಯುವ ಹವ್ಯಾಸಕ್ಕೆ ಬಿದ್ದ?

"ಕುಡಿದು ಆಫೀಸ್‌ಗೆ ಬರುವುದು ತಪ್ಪಲ್ಲವೇ?"

ಉತ್ತರ ನೀಡಲಿಲ್ಲ ಜಾಟ್. ಆದರೆ 'ನನ್ನ ಹಣ, ನನ್ನ ಹೆಂಡ! ನೀನು ಯಾರು ಕೇಳುವುದಕ್ಕೆ?' ಎಂದು ಹೇಳಲಿಲ್ಲ ಸಧ್ಯ!

"ಆಫೀಸ್‌ಗೆ ಬರುವಾಗ, ಇಲ್ಲಿ ಕೆಲಸ ಮಾಡುವಾಗ ಕುಡಿದು ಬಂದರೆ, ನಿನ್ನ ಆರೋಗ್ಯ ಮತ್ತು ಬ್ಯಾಂಕ್‌ನ ಆರೋಗ್ಯ, ಎರಡೂ ಹಾಳಾಗುತ್ತದೆ. ಹಾಗಾಗ ಬಾರದಲ್ಲ!"

"ಆಫೀಸಿನಿಂದ ಮನೆಗೆ ಹೋಗುವಾಗ ಕುಡಿದರೆ, ಬ್ಯಾಂಕ್‌ನ ಆರೋಗ್ಯ ಹಾಳಾಗುತ್ತದೆಯಾ ಸಾಬ್?"

"ಹಾಳಾಗದಿರಬಹುದು. ಅದು ನೀನು ಎಷ್ಟು ಶರಾಬು ಕುಡಿಯುತ್ತೀಯಾ ಎನ್ನುವುದರ ಮೇಲೆ ಅವಲಂಬಿಸಿದೆ" ಎಂದೆ. ಅವನಿಗೆ ಅರ್ಥವಾದಂತೆ ತೋರಲಿಲ್ಲ.

"ಆಫೀಸ್ ಕೆಲಸ ಮುಗಿದ ಮೇಲೆ, ವಿಪರೀತ ಕುಡಿದು, ಶಾಖೆಯ ಬಾಗಿಲಿನಲ್ಲೇ ಬಿದ್ದರೆ, ಬ್ಯಾಂಕ್‌ನ ಆರೋಗ್ಯ ಹಾಳಾಗುವ ಸಂಭವ ಜಾಸ್ತಿ. ಇದೇ ಇಲಾಖೆಯಲ್ಲಿ, ಕುಡಿದು ಬಿದ್ದರೆ, ಆರೋಗ್ಯ ಸಾಮಾನ್ಯವಾಗಿರುತ್ತದೆ. ಅಷ್ಟೇನು ಹಾಳಾಗುವ

ಸಂಭವವಿಲ್ಲ. ನಿನ್ನ ಊರಿನಲ್ಲಿ, ನಿನ್ನ ಮನೆಯಲ್ಲೇ ಕುಡಿದು ಬಿದ್ದರೆ, ನಿನ್ನ ಆರೋಗ್ಯ ಮಾತ್ರ ಹಾಳಾಗುವುದರಲ್ಲಿ ಸಂಶಯವೇ ಇಲ್ಲ!"

ನನ್ನ ವ್ಯಾಖ್ಯಾನ ಕೇಳಿ ಅವನಿಗೆ ಅರ್ಥವಾಯಿತೋ ಇಲ್ಲವೋ, ಉದ್ದ ಗಡ್ಡದ ಮುಖ ಅಗಲವಾಯಿತು. ಹಸನ್ಮುಖನಾಗಿ ಹೊರಗೆ ಹೋದ.

ಫೋನ್ ಶಬ್ದ ಮಾಡಿತು. ಆ ಕಡೆಯಿಂದ ರಾಜಕುಮಾರ್ ಡೀ.ಎಮ್. ಮಾತನಾಡುತ್ತಿದ್ದ.

"ಶಾಮಲಾಲ್ 'ನೋ ಡ್ಯೂಸ್ ಸರ್ಟಿಫಿಕೇಟ್' ತಂದು ಕೊಟ್ಟರೇನ್ರೀ?"

ಧ್ವನಿಯಲ್ಲಿ ಕಾತುರತೆ ತುಂಬಿತ್ತು. ನಯವೂ ಇತ್ತು. ನಯವಿನಯದಿಂದ ಕೂಡಿದ ಮಾತಿಗೆ ಹೆದರಲೇ ಬೇಕಷ್ಟೆ! ಬೆನ್ನಿಗೆ ಬಾಕು ಹಾಕುವವನ ಸಂಗಡ ಮಾತನಾಡುವಾಗ ಹುಷಾರಾಗಿರಬೇಕಷ್ಟೆ!

"ತಂದು ಕೊಟ್ಟಿದ್ದಾನೆ ಸಾರ್! ಅದನ್ನು ನಿಮಗೆ ಕಳುಹಿಸಿ ಕೊಡುತ್ತಾ ಇದ್ದೇನೆ" ಎಂದೆ.

ಇನಕಮ್ ಟ್ಯಾಕ್ಸ್ ಆಫೀಸ್‌ಗೆ ಅದನ್ನು ಪರಿಶೀಲನೆಗೆ ಕಳುಹಿಸಿದ ವಿಷಯ ಮರೆಮಾಚಿದೆ.

"ಇಂದೇ ಕಳುಹಿಸಿರಿ!" ಎಂದು ಹೇಳಿ ಫೋನ್ ಕೆಳಗಿಟ್ಟ, 'ಬಾಯಲ್ಲಿ ಬಸಪ್ಪ, ಹೊಟ್ಟೆಯಲ್ಲಿ ವಿಷಪ್ಪ'!

ಈ ವಿಷಪ್ಪನ ಕಾಟದಿಂದ ಎಂದು ತಪ್ಪಿಸಿಕೊಳ್ಳುವುದು? ಯಾವಾಗ, ಎಲ್ಲಿ, ಹೇಗೆ ಕಡಿದುಬಿಡುತ್ತದೆಯೋ ಈ ವಿಷಪ್ಪ? ಆತಂಕ ಹುಟ್ಟುತ್ತಾ ಹೋಯಿತು ಮನಸ್ಸಿನಲ್ಲಿ! ಪಂಜಾಬಿನಲ್ಲೇ ಹುಡುಕಬೇಕೆ ಆತಂಕವಾದಿಗಳನ್ನು? ನಮ್ಮ ಬ್ಯಾಂಕ್‌ನಲ್ಲೇ ಇದ್ದಾರಲ್ಲಾ, ಹೊರೆಹೊರೆಯಾಗಿ, ಆತಂಕವಾದಿಗಳು! ಹೊಲಸಾಗಿ, ಸೊಗಸಾಗಿ ಬೆಳೆಸಿ ಹರಡುತ್ತಿದ್ದಾರಲ್ಲಾ ಆತಂಕವನ್ನು!

ಅವರು ಹಾಕಿದ, ಹೇಳಿದ ಧಾಟಿಯಲ್ಲಿ ಕಾರ್ಯ ನಡೆಸದಿದ್ದರೆ, ಆತಂಕ ಒಡ್ಡುತ್ತಾರೆ! ಹೇಳಿದ ಹಾಗೆ ನಡೆದರೆ, ಮುಂದೆ ಹೆಚ್ಚು ಕಡಿಮೆಯಾದರೆ, ತಾವು ನುಳಿಚಿ, ನುಸುಳಿ, ಸಿಕ್ಕಿಹಾಕಿಕೊಳ್ಳದ ಹಾಗೆ ನಟಿಸಿ, 'ತಾರಾಮೈಯಾ' ಎಂದು ಕೈಯಾಡಿಸಿ, ಕೈ ತೊಳೆದು, ನಮ್ಮನ್ನು ನಡುನೀರಿನಲ್ಲಿ ಬಿಟ್ಟು ಪಾರಾಗುತ್ತಾರೆ ಈ ಖದೀಮರು. 'ನೀವು ಶಿಫಾರಸ್ಸು ಯಾಕೆ ಮಾಡಿದಿರಿ? ಈಗ ಅನುಭವಿಸಿ' ಎಂದು ಹೇಳಿ ನೇಣುಗಂಬಕ್ಕೆ ಕಳುಹಿಸಿಕೊಡುತ್ತಾರೆ ಆಧುನಿಕ ನಕ್ಷತ್ರಿಕರು!

ಅಕೌಂಟೆಂಟ್ ವರ್ಮಾ ಒಳಗೆ ಬಂದ. ಹೋದ ಕೆಲಸ ಏನಾಗಿರಬಹುದು ಎಂದು ಊಹಿಸುವ ಮೊದಲೇ, ಒಂದು ಪತ್ರ ನನ್ನ ಮುಂದೆ ಇಟ್ಟ. ಯತಾಃಪ್ರಕಾರ,

ಅವನ ಮುಖದಲ್ಲಿ ಗೆಲುವಿನ ನಗುವಿತ್ತು. ಪತ್ರ ಓದಿದೆ. ಅದರಲ್ಲಿ ಇನ್‌ಕಮ್ ಟ್ಯಾಕ್ಸ್ ಇಲಾಖೆಯವರು ರದ್ದುಗೊಳಿಸಿದ್ದಾಗಿ, ಇದಕ್ಕಾಗಿ ಅವರು ವಿಷಾದವನ್ನ ವ್ಯಕ್ತಪಡಿಸಿದ್ದಾಗಿ ತಿಳಿಸಿದ್ದರು.

ವರ್ಮನ ಮುಖ ನೋಡಿದೆ.

"ಹಣ ಏನೂ ಬೇಕಾದರೂ ಮಾಡುತ್ತದೆ ಸಾಬ್! ಶಾಮಲಾಲ್ ಹಣದ ಶಕ್ತಿ ಉಪಯೋಗಿಸಿ, ಸರ್ಟಿಫಿಕೇಟ್ ಪಡೆದ. ನಾನು ಬುದ್ಧಿಶಕ್ತಿ ಉಪಯೋಗಿಸಿ ಅದನ್ನು ರದ್ದು ಪಡಿಸಿದೆ!" ಎಂದ.

"ಬುದ್ಧಿಶಕ್ತಿಯೋ, ಯುಕ್ತಿಯೋ?" ಎಂದೆ.

"ನೀವು ಏನು ಬೇಕಾದರೂ ಕರೆಯಿರಿ! ಒಟ್ಟಿನಲ್ಲಿ ನಮ್ಮ ಕೆಲಸ ಆಯಿತಲ್ಲಾ!"

"ಈ ಎರಡು ಪತ್ರಗಳನ್ನು ಕೇಂದ್ರ ಕಛೇರಿಗೆ ಕಳುಹಿಸಿರಿ. ಅವರು ಏನು ಹೇಳುತ್ತಾರೋ, ನೋಡೋಣ!" ಎಂದು ವರ್ಮನಿಗೆ ಆದೇಶ ನೀಡಿದೆ.

ಜಾಟ್ ಜವಾನನ ನೆನಪಿಗೆ ಬಂದು, ವರ್ಮನನ್ನು ಕೇಳಿದೆ:

"ಈ ಜಾಬ್ ಈ ದಿನ ಕುಡಿದು ಬಂದಿದ್ದನಲ್ಲಾ! ಏನು ಮಾಡುವುದು ಅವನಿಗೆ?"

"ಕರೆದು ಬುದ್ಧಿವಾದ ಹೇಳಿ ಸಾಬ್! ಬೇರೇ ಏನೂ ಮಾಡಲಿಕ್ಕೆ ಆಗೋದಿಲ್ಲ. ಕೆಲಸ ಚೆನ್ನಾಗಿ ಮಾಡುತ್ತಾ ಇದ್ದಾನಲ್ಲಾ! ಅಷ್ಟೇ ಸಾಕು!" ಎಂದು ಹೇಳಿ ಹೊರಗೆ ಹೋದ ವರ್ಮಾ.

ಇವನಿಗೆ ಏನು ಬುದ್ಧಿವಾದ ಹೇಳುವುದು? ಬುದ್ಧಿವಾದ ಹೇಳಲಿಕ್ಕೆ ಹೋಗಿ, ಅವನಿಂದ ಒದೆ ತಿನ್ನುವಂತಾದರೆ? ಜಾಟ್‌ರಿಗೆ ಕೋಪ ಜಾಸ್ತಿ ಎನ್ನುತ್ತಾರೆ. ಕುಮಾರ್‌ನಿಗೆ ಗುಂಡೇಟು ಕೊಟ್ಟ ಹಾಗೆ ನನಗೆ ಏಟು ಕೊಟ್ಟರೆ? ಕುಡುಕನ ಸಹವಾಸ ಹುಡುಕಿಕೊಂಡು ಹೋಗಿ, ಕೆಡಕು ಯಾಕೆ ಮಾಡಿಕೊಳ್ಳುವುದು?

ಆದರೆ ಅಂದೇ ಅವನಿಗೆ ಬುದ್ಧಿವಾದ ಹೇಳುವ ಸಂದರ್ಭ ಒದಗಿ ಬಂತು.

ಸಾಯಂಕಾಲ ಏಳು ಗಂಟೆ ಆದರೂ, ಇನ್ನೂ ಶಾಖೆಯಲ್ಲಿ ಕುಳಿತಿದ್ದ ಜಾಟ್! ಕೇಳಿದೆ 'ಯಾಕೆ' ಎಂದು.

ಉತ್ತರ ಹೇಳಲು ನಾಚಿದ.

"ಏನು ವಿಷಯ?"

"ಮನೆಗೆ ಹೋಗುವಂತಿಲ್ಲ!" ಎಂದ.

"ಯಾಕೆ?"

"ದಿಲ್ಲೀಯಲ್ಲೇ ಮನೆ ಮಾಡಿದ್ದೇನೆ!"

"ಒಳ್ಳೇಯದೇ ಆಯಿತಲ್ಲ! ಬೇಗ ಮನೆ ಸೇರಬಹುದು."

ಪೆಚ್ಚು ಪೆಚ್ಚಾಗಿ ನಕ್ಕ ಜಾಬ್!

"ಯಾಕೆ ನಗುತ್ತೀಯಾ?" ಅಚ್ಚರಿಯಾಗಿತ್ತು ನಗು.

"ದಿನವಿಡೀ ತಡವಾಗಿ ಮನೆಗೆ ಹೋಗುತ್ತಿದ್ದೆ. ಯೋಚನೆ ಇರಲಿಲ್ಲ. ಈಗ ಬೇಗ ಹೋದರೆ 'ಯಾಕೆ ಬೇಗ ಬಂದೆ' ಎಂದು ತಕರಾರು ಮಾಡುತ್ತಾಳೆ ನನ್ನ ಹೆಂಡತಿ!"

ಎಂತಹ ಸಂಗಾತಿ ಈ ಹೆಂಡತಿ? ಬೇಗ ಬಂದರೆ ತಕರಾರು! ಕಾರಣ?

"ಕುಡಿದು ಬೇಗ ಬಂದರೆ, ಎಲ್ಲರಿಗೂ ತಿಳಿಯುತ್ತದೆ. ತಡವಾಗಿ ಬಂದರೆ, 'ಯಾರಿಗೂ ತಿಳಿಯುವುದಿಲ್ಲ. ಊಟ ಮಾಡಿ, ಮಲಗಬಹುದು."

"ಮಕ್ಕಳೆಷ್ಟು ನಿನಗೆ?"

"ಮೂರು, ಒಂದು ಗಂಡು, ಎರಡು ಹೆಣ್ಣು"

ಇನ್ನೂ ೨೪, ೨೫ ವರ್ಷದ ಯುವಕ. ಆಗಲೇ ಮೂರು ಮಕ್ಕಳ ತಂದೆ! ಅದೂ ಕುಡುಕ ತಂದೆ! ಮಕ್ಕಳು ಹೇಗೆ ಉದ್ಧಾರವಾದಾವು? ಹೆಂಡತಿ ತಾನೇ ಹೇಗೆ ಬಾಳಿಯಾಳು ಈ ಕುಡುಕನ ಸಂಗಡ? ಬೇಗ ಮನೆ ಸೇರಲಿಕ್ಕೆ ತಕರಾರು ಮಾಡುವುದು ಸಹಜವಾದುದೇ! ಮನೆಗೆ ಬರಲೇಬಾರದೆಂಬ ನಿರ್ಭಂಧ ಹಾಕಲಿಲ್ಲವಲ್ಲ, ಸಧ್ಯ! ಥಕ್ಕನೆ ಸಾಗೂವಿನ ನೆನಪಾಯಿತು. ಅಕೌಂಟೆಂಟ್ ವರ್ಮನನ್ನು ಕರೆದೆ. ಅವನು ಮನೆಗೆ ಹೊರಡುವ ತಯಾರಿಯಲ್ಲಿದ್ದ.

"ಸಾಗೂ ಇಂದು ಬರಲಿಲ್ಲವೇ?"

"ಇಲ್ಲ!" ಎಂದು ಹೇಳಿ "ಯಾಕೆ?" ಎಂದು ಕೇಳಿದ.

"ನೆನ್ನೆ ಮನೆಗೆ ಬಂದು, ನನ್ನ ಮನೆಯಲ್ಲಿ ತಂಗಲು ಕೇಳಿಕೊಂಡ."

ವರ್ಮನ ಮುಖದಲ್ಲಿ ಆಶ್ಚರ್ಯ ಮತ್ತು ತುಸು ಕೋಪ ಎರಡೂ ಕಾಣಿಸಿ ಕೊಂಡವು.

"ನಿಮ್ಮ ಮನೆಯಲ್ಲಿ ತಂಗಲು ಕಾರಣವೇನಂತೆ?"

"ಅವನ ಹೆಂಡತಿ ಕೂಡ ಜಗಳವಾಗಿ, ಅವಳು ಓಡಿಸಿದಳಂತೆ ಮನೆಯಿಂದ ಅವನನ್ನು!"

"ಅವಳು ಓಡಿಸಲಿಲ್ಲ ಸಾಬ್! ಅವನೇ ಓಡಿ ಬಂದಿರಬೇಕು! ನೀವು ಅವನಿಗೆ ಉಳಿದುಕೊಳ್ಳಲಿಕ್ಕೆ ಜಾಗ ಕೊಟ್ಟಿರಾ?"

"ಕೊಡುವ ಮನಸ್ಸಾಯಿತು. ಆದರೆ, ಅವನ ಚರಿತ್ರೆ, ಚಾರಿತ್ರ್ಯ ಎರಡು ಸರಿಯಿಲ್ಲದ ಕಾರಣ, ಹೆದರಿದೆ. ನಾನಾ ಖಾಯಿಲೆಯಿಂದ ನರಳುತ್ತಾ ಇರುವ ಅವನಿಗೆ

ಜಾಗ ಕೊಟ್ಟರೆ, ನನಗೆ ಅಂಟಿಬಿಡುತ್ತದೆ ಎಂಬ ಭಯ! ಅವನ ಚರಿತ್ರೆ, ಹಣ, ಸಾಮಾನು ಲಪಟಾಯಿಸಿ ಬಿಟ್ಟರೆ ಎಂಬ ಭಯ! ಎರಡೂ ಕಾರಣಗಳಿಂದ 'ಆಗೋದಿಲ್ಲ' ಎಂದು ಹೇಳುವ ಮನಸ್ಸಾಯಿತು. ಆದರೆ ಹೇಗೆ ಹೇಳುವುದು? ಕಷ್ಟದಲ್ಲಿದ್ದವನಿಗೆ ಸಹಾಯ ಮಾಡದಿದ್ದರೆ ಹೇಗೆ? ಒಂದು ಉಪಾಯ ಮಾಡಿದೆ. ಅವನ ಕೈಗೆ ನೂರು ರೂಪಾಯಿ ಕೊಟ್ಟು 'ಯಾವುದ್ಧಾದರೂ ಧರ್ಮಶಾಲೆಯಲ್ಲಿ ತಂಗು ಈ ರಾತ್ರಿ! ನಾಳೆ ಬೇರೆ ವ್ಯವಸ್ಥೆ ಮಾಡೋಣಾ' ಎಂದು ಹೇಳಿದೆ. ಅವ ಹೊರಟು ಹೋದ?"

"ಎಂಥಹ ಕೆಲಸ ಮಾಡಿದಿರಿ ಸಾಬ್? ಅವನಿಗೆ ಬೇಕಾದದ್ದು ನೀಡಿದಿರಿ. ನಿಮ್ಮಲ್ಲಿ ತಂಗಲಿಕ್ಕೆ ಅವನು ಬರಲಿಲ್ಲ, ಕಾಸು ಕೇಳುವುದಕ್ಕೆ! ಅವನನ್ನು ಮನೆ ಬಿಟ್ಟು ಓಡಿಸುವಷ್ಟು ನೀಚಳಲ್ಲ ಅವನ ಹೆಂಡತಿ?

ಎಂತಹ ಮೋಸ? ಮನಸ್ಸು ಕುದಿಯಿತು ವರ್ಮನ ಮಾತು ಕೇಳಿ.

"ನಿಮಗೆ ಅವನ ಕಥೆ ಹೇಳಿದ್ದಾಗಿದೆ. ಆದರೂ ನೀವು ಮೋಸ ಹೋದರೆ, ಯಾರು ಏನೂ ಮಾಡುವ ಹಾಗಿಲ್ಲ?"

ವೃಥಾ ನೂರು ರೂಪಾಯಿ ಕಳೆದುಕೊಂಡೆನಲ್ಲಾ! ತಿಳಿದೂ ತಿಳಿದೂ ಹಗಲು ಕಂಡ ಬಾವಿಯಲ್ಲಿ ಹಾರಿದ ಪೆದ್ದನಾದನಲ್ಲಾ! ಆದರೂ ನಾನು ಮಾಡಿದ್ದು ಒಳಿತಾಯಿತು ಎಂದಿತು, ನನ್ನ ಒಳಮನಸ್ಸು! ಕಳ್ಳನನ್ನು ಒಳಗೆ ಸೇರಿಸಿದ್ದರೆ, ಎಲ್ಲವನ್ನೂ ದೋಚಿ, ನನ್ನ ಮಾನವನ್ನು ತೆಗೆದು ಹರಾಜು, ಮಾಡುವ ಬದಲು ಬರೀ ಒಂದು ನೂರು ರೂಪಾಯಿ ನಷ್ಟಕ್ಕೆ ಅವನಿಂದ ತಪ್ಪಿಸಿಕೊಂಡ ಹಾಗಾಯಿತು. ಕಳ್ಳನನ್ನು ಮನೆಗೆ ಸೇರಿಸಿದರೆ, ಅವನು ಮನೆಯನ್ನೇ ತಿಂದಾನು 'ಮನೆ ತಿನ್ನುವವನಿಗೆ, ಬಾಗಿಲು, ಕಿಟಕಿ, ಹಪ್ಪಳ, ಸಂಡಿಗೆ' ಎನ್ನುವ ಗಾದೆ ನೆನಪಿಗೆ ಬಂದು ಸಣ್ಣಗೆ ನಕ್ಕೆ.

"ಇವನ ಹೊಸಾ ಎಡ್ವಂಚರ್ ತಿಳಿದಿದೆಯಾ ನಿಮಗೆ?" ಕೇಳಿದ ವರ್ಮಾ.

"ಇಲ್ಲ" ಎಂದು ತಲೆ ಅಲ್ಲಾಡಿಸಿದೆ.

" 'ನಿಮ್ಮ ಪಾಪಕಾರ್ಯಗಳಿಗೆಲ್ಲಾ ಕೊನೆಗಾಣಿಸಬೇಕು. ದೇವರಿಗೆ ನಾನು ಹರಕೆ ಹೊತ್ತಿಕೊಂಡಿದ್ದೇನೆ. ನೀವು ಹರಕೆ ಹೊತ್ತಿಕೊಳ್ಳಿ" ಎಂದು ಸಾಗೂವಿನ ಹೆಂಡತಿ ಹೇಳಿದಳಂತೆ. 'ನೀನು ಹೊತ್ತಾದ ಮೇಲೆ ನಾನು ಯಾಕೆ ಹೊತ್ತುಕೊಂಡು ಬೆನ್ನ ನೋಯಿಸಿಕೊಳ್ಳಲಿ?' ಎಂದು ಹೇಳಿ ನಗಾಡಿದನಂತೆ ಸಾಗೂ.

"ಏನು ಹರಕೆ?" ಕೇಳಿದನಂತೆ. 'ಹರಿದ್ವಾರಕ್ಕೆ ಹೋಗಿ ಗಂಗಾ ಸ್ನಾನ ಮಾಡಿ ಬಂದರೆ, ನಿಮ್ಮ ಈ ಕೆಟ್ಟ ಚಟವೆಲ್ಲಾ ಹೋಗಿಬಿಡುತ್ತದೆ. ಅದರಲ್ಲೂ ನಿಮ್ಮ ಕುಡಿಯುವ ಚಟ ಮಾಯವಾಗಿಬಿಡುತ್ತದೆ. ಗಂಗಾಮಾಯಿ ನಿಮ್ಮ ಎಲ್ಲಾ ಪಾಪ

ಗಳನ್ನು ತನ್ನ ಒಡಲಲ್ಲಿ ಹಾಕಿಕೊಂಡು, ನಿಮಗೆ ಸದ್ಬುದ್ಧಿ ನೀಡುತ್ತಾಳೆ. ಹರಿದ್ವಾರಕ್ಕೆ ಹೋಗೋಣ ಬನ್ನಿರಿ" ಎಂದು ಅವನನ್ನು ಕಾಡಿ, ಬೇಡಿ, ಅತ್ತು ಕರೆದು, ಹೆದರಿಸಿ, ದೇವರ ಭಯ ಹುಟ್ಟಿಸಿ, ಕೊನೆಗೆ ಒಪ್ಪಿಸಿ, ಹರಿದ್ವಾರಕ್ಕೆ ಕರೆದುಕೊಂಡು ಹೋದಳಂತೆ. ಅಲ್ಲಿ ಭಯಭಕ್ತಿಯಿಂದ ಅವನಿಗೆ ಗಂಗಾ ಸ್ನಾನ ಮಾಡಿಸಿ, ತಾನೂ ಮಾಡಿ, ಗಂಗಾ ಮಾತೆ ಪೂಜೆ ಮಾಡಿಸಿಕೊಂಡು, ಒಂದು ದಿನ ಅಲ್ಲೇ ಇದ್ದು, ರಾತ್ರಿ ನಡೆಯುವ ಗಂಗಾಮಾತೆ ಪೂಜೆ ನೋಡಿಕೊಂಡು, ಮಾರನೆಯ ಬೆಳಿಗ್ಗೆ ವಾಪಸ್ಸು ಸೋನೇಪತ್ತಿಗೆ ಹೊರಡೋಣವೆಂದು ಹೇಳಿ ಅಲ್ಲೇ ತಂಗುತ್ತಾರಂತೆ ಇಬ್ಬರೂ. ಸಾಯಂಕಾಲ ಏಳು ಗಂಟೆಗೆ ಗಂಗಾ ಪೂಜೆ ಬಹಳ ವಿಜೃಂಭಣೆಯಿಂದ ನೆರವೇರುತ್ತದೆ. ನೀವು ನೋಡಿದ್ದೀರಾ ಸಾಬ್!" ನನ್ನನ್ನು ಕೇಳಿದ ವರ್ಮಾ.

"ಇಲ್ಲ" ಎಂದೆ.

ಗಂಗಾಪೂಜೆ ಬಹಳ ವಿಜೃಂಭಣೆ, ಸಂತಸ, ಉತ್ಸುಕತೆ ಹಾಗೂ ಧಾರ್ಮಿಕ ನಿಷ್ಠೆಯಿಂದ ಜರುಗುವ ಒಂದು ಉತ್ಸವ. ದಿನವಹೀ ರಾತ್ರಿ ನಡೆಯುವ ಉತ್ಸವಕ್ಕೆ ಸಾವಿರಾರು ಯಾತ್ರಿಕರು ಸೇರಿ, ವೀಕ್ಷಿಸಿ, ಆನಂದಿಸುತ್ತಾರೆ. ನನಗೆ ಇದನ್ನು ನೋಡಲು ಇದುವರೆಗೆ ಅವಕಾಶ ದೊರೆತಿರಲಿಲ್ಲ.

"ನೀವು ನೋಡಲೇಬೇಕಾದ ಉತ್ಸವ ಇದು ಸಾಬ್!"

ಹೌದು! ಗಂಗಾ ನದೀಗೆ ನಿಜವಾದ ಪೂಜೆ ಇಲ್ಲಿ ನಡೆಯುತ್ತದೆ. ಪರಿಶುದ್ಧ ಗಂಗೆಗೆ ಇಲ್ಲಿ ಕೃತಜ್ಞಾತಾಪೂರ್ವಕವಾದ ಪೂಜೆಯನ್ನು ಸಲ್ಲಿಸಿ, ಮುಂದೆ ಅದು ಸಾವಿರಾರು ಮೈಲಿ ಭಾರತ ಭೂಮಿಯನ್ನು ತಣಿಸಿ, ಭಾರತೀಯರ ನೀರಿನ ಅವಶ್ಯಕತೆಯನ್ನು ಪೂರೈಸಿ, ಅವರಿಗೆ ಸಂತೋಷ, ಹರ್ಷ, ನಲಿವು, ಗೆಲುವು ನೀಡಿ, ಅವರಿಗೆ ಜೀವನಾಡಿಯಾಗಿ ಅವರಿಂದ ಹಲವು ರೀತಿಯಲ್ಲಿ ಪೂಜಿಸಿಕೊಂಡು, ಪ್ರಸಿದ್ಧ ಯಾತ್ರಾ ಸ್ಥಳ ಕಾಶಿಯಲ್ಲಿ, ಸಹಸ್ರಾರು ಯಾತ್ರಾರ್ಥಿಗಳ ಉದಾರತನದಿಂದ ಕುರೂಪ ಗೊಂಡು, ಕಲುಷಿತಗೊಂಡು, ತನ್ನತನವನ್ನು ಕಳೆದುಕೊಂಡು, ಹೀನಾವಸ್ಥೆಗೆ ಇಳಿದಿದೆಯಷ್ಟೆ! ಭಾರತೀಯರಿಗೆ ಶುಚಿತ್ವಕ್ಕಿಂತ ದೈವತ್ವವೇ ಶ್ರೇಷ್ಠವಲ್ಲವೇ! ನದೀ ನೀರು ಹಾಳಾದರೆ ನಷ್ಟವಿಲ್ಲ;! ಅದಕ್ಕೆ ಪೂಜೇ ಮಾತ್ರ ಸಲ್ಲಿಸಲೇ ಬೇಕು; ಪೂಜಾ ಸಾಮಗ್ರಿಗಳನ್ನು ಅದರಲ್ಲಿ ತೇಲಾಡಿಸಬೇಕು; ಮಲಮೂತ್ರ ವಿಸರ್ಜನೆ ನದಿಯಲ್ಲೇ ಆಗಬೇಕು; ಅರ್ಧ ಸುಟ್ಟ ಹೆಣಗಳನ್ನು ಅದರಲ್ಲಿ ಬಿಸಾಡಿ, ಮೃತಪಟ್ಟವರಿಗೆ ಮೋಕ್ಷ ಸಿಗುವ ಹಾಗೆ ಮಾಡಲೇಬೇಕು! ಮೃತದೇಹಗಳನ್ನು ನುಂಗಿದ ಗಂಗೆ ಅದಕ್ಕೆ ಮೋಕ್ಷ ನೀಡುವುದಾದರೆ, ಸಾಗೂವಿನ ಹೆಂಡತಿ ಯಾಕೆ ತನ್ನ ಗಂಡನನ್ನು ಗಂಗೆಯಲ್ಲಿ ಮುಳುಗಿಸಿ, ತಾನು ಮೋಕ್ಷ ಪಡೆಯಬಾರದು?

"ಸಾಯಂಕಾಲ ಪೂಜಾ ಸಮಯಕ್ಕೆ ಸರಿಯಾಗಿ ಗಂಡ-ಹೆಂಡತಿ ಗಂಗಾತಟಕ್ಕೆ ಹೊರಟರು. ಸಾವಿರಾರು ಜನ ಸೇರಿದ್ದರು, ಅಲ್ಲಿ. ಬಹಳ ಕಷ್ಟಪಟ್ಟು ಜಾಗ ಸರಿಮಾಡಿ ಕೊಂಡು, ಇಬ್ಬರೂ ಕುಳಿತರು; ಪೂಜೇ ವೀಕ್ಷಿಸಲಿಕ್ಕೆ. ಪೂಜೆ ಶುರುವಾಯಿತು. ಬಹಳ ಆಕರ್ಷಕವಾಗಿತ್ತು ಪೂಜೆ! ತರಹ ತರಹವಾದ ಮಂಗಳಾರತಿಗಳ ಪೂಜೆ ಜರುಗಿತು. ವಿವಿಧ ಮಂಗಳಾರತಿ, ಮಂತ್ರ ಘೋಷಣೆ, ದೇವರ ಸ್ತುತಿಗಳ ಮಧ್ಯ, ಅದ್ಯಾವಗಲೋ ಸಾಗೂ ಅಂತರ್ಧಾನವಾಗಿದ್ದ! ಅವನ ಹೆಂಡತಿ ಪೂಜಾವಿಧಿಗಳನ್ನು ನೋಡುವುದರಲ್ಲಿ ಮಗ್ನಳಾಗಿದ್ದು, ಗಂಡ ಅಂತರ್ಧಾನ ವಾಗಿದ್ದು ಗೊತ್ತಾಗಲೇ ಇಲ್ಲ!" ವರ್ಮಾ ಕಥೆ ಮುಂದುವರೆಸಿದ್ದ.

ನನಗೂ ಕುತೂಹಲ ಉಂಟಾಗಿತ್ತು, ಇವನ ಕಥೆ ಕೇಳಿ.

"ಎಲ್ಲಿ ಹೋದ ಸಾಗೂ? ನದಿಯಲ್ಲಿ ಮುಳುಗಿದನೊ?"

ನನ್ನ ಪ್ರಶ್ನೆಗೆ ವರ್ಮಾ ಗಟ್ಟಿಯಾಗಿ ನಕ್ಕ.

"ನದೀಯಲ್ಲಿ ಮುಳುಗಿ ಬಿಟ್ಟಿದ್ದರೆ, ಅವನಿಗೆ ಮೋಕ್ಷ ಸಿಗುತ್ತಿತ್ತು. ಆದರೆ ಅವನು ಶರಾಬಿನಲ್ಲಿ ಮುಳುಗಿಬಿಟ್ಟಿದ್ದ. ಉಳಿದುಕೊಂಡಿದ್ದ ಧರ್ಮಚತ್ರದ ಕೋಣೆ ಯಲ್ಲಿ ಕುಡಿದು ಮತ್ತನಾಗಿ ಬಿದ್ದಿದ್ದ!"

ಗಾಬರಿಯಾಗುವ ಪರಿಸ್ಥಿತಿ ನನ್ನದಾಗಿತ್ತು. ಯಾಕೆಂದರೆ, ಹರಿದ್ವಾರದಲ್ಲಿ ಶರಾಬು ಕುಡಿಯುವಂತಿಲ್ಲ; ಶರಾಬು ಅಂಗಡಿಗಳಿಲ್ಲ; ಶರಾಬು ಮಾರುವುದಾಗಲೀ, ಕುಡಿಯುವುದಾಗಲೀ ನಿಷೇಧ! ಈ ಸಾಗೂವಿಗೆ ಹೇಗೆ ಶರಾಬು ದೊರಕಿತು? ಯಾರು ಅದನ್ನು ದಯಪಾಲಿಸಿದರು?

"ಅವನಿಗೆ ಶರಾಬು ಎಲ್ಲಿ ಸಿಕ್ಕಿತು?"

"ಸೋನೇಪತ್‌ನಿಂದಲೇ ಕಳ್ಳತನದಲ್ಲಿ ಹೆಂಡತಿಗೆ ಗೊತ್ತಾಗದ ಹಾಗೆ, ಶರಾಬು ಬಾಟ್ಲಿಯನ್ನು ತೆಗೆದುಕೊಂಡು ಬಂದಿದ್ದ ಹೆಂಡತಿ ಕಣ್ಣಿಗೆ ಮಣ್ಣೆರಚಿ, ಶರಾಬಿನಲ್ಲಿ ಮುಳುಗಿ ಬಿಟ್ಟಿದ್ದ!"

"ಆಮೇಲೆ?"

"ಆಮೇಲೆ ಏನು? ಹೆಂಡತಿಗೆ ವಿಷಯ ತಿಳಿದೊಡನೆ, ಹುಚ್ಚಳಾದಳು. ಕೈಗೆ ಸಿಕ್ಕಿದ್ದ ಸಾಮಾನಿನಿಂದ ಅವನಿಗೆ ಹೊಡೆದು ಬಾರಿಸಿದಳು. ಬಕೆಟ್‌ಗಟ್ಟಲೆ ಗಂಗಾ ನೀರು ಸುರಿದಳು ಅವನ ತಲೆಯ ಮೇಲೆ. ಬೆಳಿಗ್ಗೆ ಎದ್ದೊಡನೆ ಅವನನ್ನು ಎಳೆದು ಕೊಂಡು ಹೋಗಿ, ನದೀಯಲ್ಲಿ ಮುಳುಗಿಸಿ, ಗಂಗಾಸ್ನಾನ ಮಾಡಿಸಿದಳು. ಒಂದು ಸಲವಲ್ಲ, ಮೂರು ಸಲ ಮುಳುಗಿಸಿಧಳು . ಸಾಗೂ ಸುಸ್ತಾಗಿ, ಹೆಣವಾದ. ಹೇಗೊ

ಸಾವರಿಸಿಕೊಂಡು, ಮನೆಗೆ ಬಂದ. ಬಸ್ ಹತ್ತಿ ಸೋನೇಪತ್‌ಗೆ ಬಂದರು ಇಬ್ಬರೂ. ಈಗ ಹೆಂಡತಿಗೆ ಹೆದರಿ ಸಾಯುತ್ತಿದ್ದಾನೆ"

"ಅಂತೂ ಹೆಂಡತಿ ಅವನನ್ನು ಹತೋಟಿಗೆ ತಂದಿದ್ದಾಳೆ!"

"ಹತೋಟಿಗೆ ತರುವುದು ಈ ಜನ್ಮದಲ್ಲಿ ಸಾಧ್ಯವಿಲ್ಲ!"

"ಯಾಕೆ ಹಾಗೆ ಹೇಳುತ್ತೀರಾ?"

"ಯಾಕೆಂದರೆ, ಅವನ ಹೆಂಡತಿಗೆ ಹುಚ್ಚು ಹಿಡಿದು ಬಿಟ್ಟಿದೆ ಎಂದು ಹೆದರಿದ್ದಾನೆ!"

"ಅದಕ್ಕೆ ಹೆದರುವುದಾದರೂ ಏಕೆ? ಆಸ್ಪತ್ರೆಗೆ ಸೇರಿಸಿ ಮದ್ದು ಕೊಡಿಸಬಹುದಲ್ಲ!"

"ಮದ್ದು ಕೊಟ್ಟು, ಸರಿಯಾಗೋ ಖಾಯಿಲೆ ಅಲ್ಲ ಅದು!"

ಇದು ಏನೋ ಒಂದು ತರಹದ ಕೌತುಕದ ಕಥೆ ಹೇಳುತ್ತಿದ್ದಾನಲ್ಲಾ ಇವನು! ತಲೆ ತುರಿಸಿಕೊಳ್ಳುವ ಹಾಗೆ ಆಯಿತು.

"ಎಂತಹ ಖಾಯಿಲೆ ಆಗಿದೆ ಅವರಿಗೆ?"

"ಗಂಡನನ್ನು ಹೇಗಾದರೂ ಮಾಡಿ ಸರಿಪಡಿಸಬೇಕೆಂಬ ಆಸೆ ಇಟ್ಟುಕೊಂಡಿದ್ದಾಳೆ."

"ಇಂತಹ ಆಸೆಗೆ ಖಾಯಿಲೆ ಎಂದು ಹೇಗೆ ಹೇಳುತ್ತೀರಾ?"

"ಆಸೆ, ದುರಾಸೆಯಾದರೆ, ಅದು ಕ್ಯಾನ್ಸರ್ ಕಾಯಿಲೆಯಾಗುತ್ತದೆ. ವಾಸಿಯಾಗದ ಕಾಯಿಲೆ ಅದು!"

# 14

"ನೀವು ಇಲ್ಲೇ ಹೊರಗಡೆ ಕಾಯುತ್ತಾ ಇರಿ! ನಾನು ಒಳಗೆ ಹೋಗಿ ಅವರು ಇದ್ದಾರೋ ಇಲ್ಲವೋ ನೋಡಿಕೊಂಡು ಬರ್ತೀನಿ."

ಕಪೂರ್, ನನ್ನನ್ನು ಮಂತ್ರಿಯ ಮನೆ ಬಾಗಿಲ ಬಳಿ ನಿಲ್ಲಿಸಿ ತಾನು ಒಳಗೆ ಹೋದ.

ನನ್ನ ಶಾಖೆಯ ಠೇವಣಿ ಹೆಚ್ಚಿಸಲಿಕ್ಕೆ, ಹುಚ್ಚನಂತೆ ಓಡಾಡುತ್ತಿದ್ದ ನನ್ನನ್ನ ನೋಡಿ, ಕನಿಕರಗೊಂಡು, ಕಪೂರ್ ಹೇಳಿದ್ದ.

"ನನಗೆ ಒಬ್ಬ ಕೇಂದ್ರ ಮಂತ್ರಿಯ ಗುರುತಿದೆ. ಅವನು ಅರುಣಾಚಲ ಪ್ರದೇಶದವನು. ನಾಳೆ ಬೆಳಿಗ್ಗೆ ಅವನ ಮನೆಗೆ ಹೋಗೋಣ" ಎಂದು ಆಹ್ವಾನಿಸಿದ್ದ.

ಕೇಂದ್ರ ಮಂತ್ರಿ, ಮನಸ್ಸು ಮಾಡಿದರೆ, ಠೇವಣಿ ಬಹಳ ಸುಲಭವಾಗಿ ಕೊಡಿಸಬಹುದು. ಆದರೆ ಯಾರೂ ಠೇವಣಿಯನ್ನು ಪುಕ್ಕಟೆ ನೀಡುವುದಿಲ್ಲ. ಕಮೀಷನ್ ಎಂಬ ಲಂಚದ ಅಮಿಷ ತೋರಿಸಿ, ಅವರ ಮನವೊಲಿಸಿ, ಠೇವಣಿಯನ್ನು ಕೊಂಡುಕೊಳ್ಳಬೇಕು. ಕೇಂದ್ರ ಸರಕಾರದ ಹಣ ವಿಧವಿಧ ಕಛೇರಿ, ಕಾರ್ಯಾಲಯಗಳಿಗೆ, ಬಡ್ಜೆಟ್‌ನಲ್ಲಿ ನಮೂದಿಸಿದಂತೆ ಪಾಸಾದನಂತರ, ಖರ್ಚುಮಾಡಲಕ್ಕೆಂದು ಕೊಟ್ಟನಂತರ, ಅಂತಹ ಕಾರ್ಯಾಲಯದ ದಕ್ಷ ಅಧಿಕಾರಿಗಳಾದ, ಚೆರ್‌ಮನ್, ಡೈರಕ್ಟರ್, ಸೆಕ್ರೆಟರಿ, ಅಕೌಂಟ್ಸ್ ಆಫೀಸರ್ ಹೀಗೆ ಹಲವಾರು ಅಧಿಕಾರಿಗಳು ಕಮೀಶನ್ ಪಡೆದು, ತಮ್ಮಲ್ಲಿದ್ದ ಸರಕಾರೀ ಹಣವನ್ನು ಈ ಬ್ಯಾಂಕ್‌ನಿಂದ, ಆ ಬ್ಯಾಂಕ್‌ಗೆ ವರ್ಗಾಯಿಸುತ್ತಾರೆ. ಯಾರಿಗೆ, ಹೆಚ್ಚಿನ ಕಮೀಶನ್ ಸಿಗುತ್ತದೆಯೋ ಅವರಿಗೆ ಅಂದರೆ ಆ ಬ್ಯಾಂಕ್‌ಗೆ ಡಿಪಾಸಿಟ್ ದೊರೆಕುತ್ತದೆ. ಬ್ಯಾಂಕಿನ ಮೇನೇಜರ್ ಈ ಕಮೀಶನ್ ಹೇಗೆ ಕೊಡುತ್ತಾನೆ?

ಸಾವಿರಾರು ರೂಪಾಯಿ, ಏಕೆ? ಲಕ್ಷಾಂತರ ರೂಪಾಯಿಗಳ ಕಮೀಶನ್ ಬ್ಯಾಂಕ್ ಮೇನೇಜರ್ ತನ್ನ ಕೈಯಿಂದ ಕೊಡುವುದು ದುಸಾಧ್ಯ. ಇದಕ್ಕೆ ಒಂದು ಉಪಾಯ ಕಂಡು ಹಿಡಿದಿದ್ದಾರೆ ಬ್ಯಾಂಕ್ ಅಧಿಕಾರುಗಳು. ಸಾಲ ನೀಡುವಾಗ, ಇಷ್ಟು ಡಿಪಾಸಿಟ್ ತರಬೇಕು ಎಂದು ತಾಕೀತು ಹೊರಡಿಸುತ್ತಾರೆ, ಸಾಲ ಪಡೆದವರಿಗೆ. ಸಾಲಗಾರ ಗ್ರಾಹಕ, ಸರಕಾರೀ ಅಧಿಕಾರಿಗೆ, ತನ್ನ ಕೈಯಿಂದ ಕಮೀಶನ್ ತೆತ್ತು, ಡಿಪಾಸಿಟ್‌ನ್ನು ಅವನ ಬ್ಯಾಂಕ್‌ಗೆ ತರಿಸುತ್ತಾನೆ. ಈ ವ್ಯವಹಾರದಿಂದ ಮೂವರಿಗೆ ಲಾಭ-ಬ್ಯಾಂಕ್‌ಗೆ ಡಿಪಾಸಿಟ್, ಗ್ರಾಹಕನಿಗೆ ಸಾಲ, ಸರಕಾರೀ ಅಧಿಕಾರಿಗೆ ಲಂಚದ ಹಣ.

ಕಾಯುತ್ತಾ ನಿಂತ ನನಗೆ ಕಾಲು ನೋವು ಕಾಣಿಸತೊಡಗಿತು. ಕುಳಿತುಕೊಳ್ಳಲು

ಜಾಗವಿಲ್ಲ. ನಾನು ನಿಂತ ರಸ್ತೆಗೆ ಔರಂಗಜೇಬ್ ಲೇನ್ ಎಂದು ಹೆಸರಿಟ್ಟು, ಔರಂಗಜೇಬ್‌ನ ಹೆಸರನ್ನು ಅಮರಗೊಳಿಸಿರುವ, ಸ್ವತಂತ್ರ ಭಾರತದ ಸರಕಾರದ ಉದಾರ ನೀತಿ, ಹೃದಯಕ್ಕೆ ಮೆಚ್ಚಬೇಕಾದ್ದೇ ಎಂದೆನಿಸಿತು. ಸರಕಾರದ ಬಹುಪಾಲು ಅಧಿಕಾರಿಗಳು, ಮಂತ್ರಿಗಳು, ನೌಕರವರ್ಗದವರು, ಔರಂಗಜೇಬ್‌ನ ಉದಾತ್ತ ತತ್ವಗಳನ್ನು ಪಾಲಿಸುತ್ತಿರುವ ವಿಷಯ ಎಲ್ಲರಿಗೂ ತಿಳಿದ ವಿಷಯ. ಡಿಪಾಸಿಟ್‌ಗಾಗಿ ಕಾಯುತ್ತಾ ನಿಂತ ನಾನು ಯೋಚಿಸತೊಡಗಿದೆ. ಯಾಕೆ ಈ ಡಿಪಾಸಿಟ್‌ಗಾಗಿ ಇಷ್ಟು ಪರದಾಡಬೇಕು? ಯಾರ ಯಾರ ಕಾಲನ್ನೋ ಕಟ್ಟಬೇಕು. ಬ್ಯಾಂಕ್ ಡಿಪಾಸಿಟ್ ಟಾರ್ಗೆಟ್ ಮಾಡಿದರೆ ಪ್ರಮೋಶನ್ ಸಿಗುವ ಆಸೆಯೊ? ಜನರಲ್ ಮೇನೇಜರ್ ಅಥವಾ ಚೇರಮನ್ ಆಗಬೇಕೆಂಬ ಆಸೆಯೋ? ನಮ್ಮ ಚೇರ್‌ಮನ್, ಬಹಳ ಚಿಕ್ಕ ವಯಸ್ಸಿನಲ್ಲೇ ಚೇರ್‌ಮನ್ ಆಗಿ, ಯಾವ ಸುಖ ಅನುಭವಿಸಿದ್ದಾನೆ? ಪುಕ್ಕಟೆ ಮನೆ, ವಿಮಾನಯಾನ, ವಿದೇಶ ಯಾತ್ರೆ, ಅಧಿಕಾರದ ಸುಖ, ಅಷ್ಟಮದಗಳಾದ, ಅನ್ನ, ಅರ್ಥ, ಯೌವನ , ಸ್ತ್ರೀ, ವಿದ್ಯೆ, ಕುಲ, ರೂಪ, ಉದ್ಯೋಗ, ಅನುಭವಿಸುತ್ತಿದ್ದಾನೆಯೊ? ಒಂದು ವೇಳೆ ಎಲ್ಲಾ ಮದಗಳನ್ನೂ ಅನುಭವಿಸಿದರೂ, ಇನ್ನೂ ಬೇಕು ಮೇಲೆ ಏರಬೇಕು, ಸಾಧಿಸಬೇಕು ಎಂಬ ಮಹತ್ವಾಕಾಂಕ್ಷೆ, ಅತ್ಯಾಶೆ ಯಾಕೆ? 'ಗುಲಾಮನಿಗೆ ಒಬ್ಬನೇ ಯಜಮಾನ, ಅತ್ಯಾಶೆಯುಳ್ಳ ಮನುಷ್ಯನಿಗೆ ಹಲವಾರು ಯಜಮಾನರು' ಎಂಬ ನುಡಿ ನೆನಪಿಗೆ ಬಂತು. ಡಿಪಾಸಿಟ್ ಗುರಿ ಮುಟ್ಟಲು, ಡಿಪಾಸಿಟ್ ಯಜಮಾನರ ಕಾಲು ಹಿಡಿಯಬೇಕು;ಸಾಲ ಪಡೆಯುವ ಹಕ್ಕನ್ನು ಪಡೆದ ಒಳ್ಳೆಯ ಗುಣವುಳ್ಳ ಗ್ರಾಹಕರ ಯಜಮಾನರ ಕಾಲು ಹಿಡಿಯಬೇಕು;ಸಾಲ ನೀಡಿದ ಮೇಲೆ ವಸುಲಿ ಮಾಡಲಿಕ್ಕೆ ಅದೇ ಯಜಮಾನರ ಕಾಲನ್ನು ಮತ್ತೊಮ್ಮೆ ಹಿಡಿಯಬೇಕು; ಶಾಖೆಯ ಅಂತರಿಕ ಕೆಲಸಗಳು ಸುಗಮವಾಗಿ ಸಾಗಬೇಕೆಂದು, ನೌಕರ ಯಜಮಾನರ ಕಾಲನ್ನು ಹಿಡಿಯಬೇಕು; ಬಡ್ತಿ-ಪದವಿಗಾಸೆಪಟ್ಟು, ಮೇಲಧಿಕಾರಿ-ಯಜಮಾನರ ಕಾಲುಗಳನ್ನು ಬಲವಾಗಿ ಹಿಡಿಯಬೇಕು! ಇಷ್ಟೆಲ್ಲಾ ಮಾಡಿದ ಮೇಲೂ ಅದೃಷ್ಟ ಖೋತಾ ಆಗಿದ್ದರೆ, ಮೇಲಧಿಕಾರಿಗಳ ಆಪ್ತನೆಂಟನಾಗಿಲ್ಲದಿದ್ದರೆ, ಒಂದೇ ಜಾತಿ, ಭಾಷೆಯವನಾಗಿಲ್ಲದಿದ್ದರೆ, ನೌಕರೀಗೆ ಕತ್ತರಿ ಬೀಳುವ ಸಂಭವ ಹೆಚ್ಚು!

ನನ್ನ ಯೋಚನಾಲಹರಿ ದಿಕ್ಕಿಲ್ಲದೇ ಹರಿಯ ತೊಡಗಿದ್ದುದರ ಅನುಭವ ನನ್ನ ಕಾಲುಗಳು ಪದ ಹೇಳಲು ಉಪಕ್ರಮಿಸಿತೊಡಗಿದಾಗ. ಈ ಕಪೂರ್ ಎಲ್ಲಿ ಹೋದ? ಮಂತ್ರಿಯ ಸಂಗಡ ಪಟ್ಟಂಗ ಹೊಡೆಯಲಿಕ್ಕೆ ಕುಳಿತ ಒಬ್ಬನೇ?ಸಮಯ ಪ್ರಜ್ಞೆ ಮಂತ್ರಿಗಳಿಲ್ಲದಿದ್ದರೆ, ಇವನಿಗೂ ಇರಬೇಡವೇ?ಇನ್ನೊಬ್ಬರನ್ನು ಕಾಯಿಸುವುದು ಎಷ್ಟು ಸಮಂಜಸ ಮತ್ತು ಉಚಿತ?

ಈ ಕಾಯುವ ಕಾಯಕ ಮಾನವನ ಪ್ರಮುಖ ಶತ್ರು ಎಂದು ಹೇಳುತ್ತಾರೆ ತಿಳಿದವರು. ಪ್ರಿಯರಿಗಾಗಿ ಕಾಯುವುದು, ಅವರಿಗೆ ಏನು ಕೇಡಾಗಿದೆಯೋ, ಹಾನಿಯಾಗಿದೆಯೋ, ಸಾವು ಅವರನ್ನು ಕೊಂಡು ಒಯ್ದಿದೆಯೋ, ಮುಂತಾದ ಕೆಟ್ಟ ಯೋಚನೆಗಳಿಂದ ಕೆಂಗೆಟ್ಟುಪರಿತಪಿಸುವುದು; ಕಾರ್ಮೋಡ, ಬಿರುಗಾಳಿ, ಮಳೆಬರುವ ಸೂಚನೆ ಕಂಡೊಡನೆ, ಅವು ಬಂದು ನಮ್ಮನ್ನು ಯಾವಾಗ ಅಪ್ಪಳಿಸುತ್ತ ವೆಯೋ ಎಂಬ ಭೀತಿಯಿಂದ ಕಾಯುವುದು; ರಾತ್ರಿಯಿಡೀ ನಿದ್ರೆ ಇಲ್ಲದೆ ಹೊರಳಾಡಿ, ಬೆಳಿಗ್ಗೆ ಯಾವಾಗ ಆಗುವುದೋ ಎಂದು ಒದ್ದಾಡಿ, ರಾತ್ರಿ ಕಳೆಯುವುದು ಮುಗಿಯದ ಯುದ್ಧವಾದಾಗ, ಉದಯವಾಗದೇ ಇರುವ ಸೂರ್ಯನಿಗೋಸ್ಕರ ಕಾಯುವುದು, ಮಾನವನ ಶತ್ರುವೇ ಸರಿ!

ಈ ಕೇಂದ್ರಮಂತ್ರಿಯನ್ನು ನೋಡುವ ಸಲುವಾಗಿ ಕಾಯುವ ಕಾರ್ಯ ಯಾವ ಶತ್ರುವಿಗೂ ಬೇಡವೆನಿಸಿತು. ಇವನನ್ನು ನೋಡಲು ಹೋದ ಕಪೂರ್ ಎಲ್ಲಿ ಹೋದ? ಶತ್ರುವಿನ ಪಾಳ್ಯಕ್ಕೆ ಹೋಗಿ ಸಿಕ್ಕಿಹಾಕಿಕೊಂಡುಬಿಟ್ಟನೆ? ಕಾಯುವ ಕೆಲಸದಷ್ಟು ಹೇಯವಾದಷ್ಟು ಕಾರ್ಯ ಬೇರೊಂದಿಲ್ಲವೆನ್ನಿಸಿತು. ಸಮಯ ಪ್ರಜ್ಞೆ, ಕಾಲ ಪ್ರಜ್ಞೆ ಇಲ್ಲದ ಜನರು ಅನಾಗರೀಕ; ಅಸಂಸ್ಕೃತರೆ ಸರಿ, ಎನ್ನಿಸಿತು.

ಕಾಲು ನೋವಿನ ಜೊತೆಗೆ, ತಲೆ ನೋವು ತಾಳ ಹಾಕಲಾರಂಭಿಸಿತು. ಕಪೂರ್‌ನಿಗೆ ಹಿಡಿ ಶಾಪ ಹಾಕಿದೆ. ಅವನನ್ನು ನಂಬಿ ಬಂದದ್ದೇ ತಪ್ಪಾಯಿತಲ್ಲಾ ಎಂದು ನನ್ನನ್ನೇ ಹಳಿದುಕೊಂಡೆ. ನಿಧಾನವಾಗಿ ಕಾಲೆಳೆದು ವಾಪಸ್ಸು ಬ್ಯಾಂಕಿಗೆ ವಾಪಸ್ಸಾಗಲು ಹವಣಿಸಿದೆ. ಡಿಪಾಸಿಟ್‌ನ ಮರೀಚಿಕೆ ನನ್ನನ್ನು ಹಿಡಿದು ನಿಲ್ಲಿಸಿತು. ಸ್ಮರಣೆಯಿದ್ದರೆ ಸಾಕು, ಡಿಪಾಸಿಟ್‌ನ ಸ್ಮರಣೆ ಯಾಕೆ? ವಾಪಸ್ಸು ನಡೆದು ಬಂದೆ ಮಂತ್ರಿಯ ಮನೆಯ ತನಕ.

ಹೊರಗೆ ಓಡೋಡಿ ಬಂದ ಕಪೂರ್. ಬಂದವನೆ, ತನ್ನ ಸ್ಕೂಟರ್‌ನಲ್ಲಿಟ್ಟಿದ್ದ ಚೀಲವೊಂದನ್ನು ತೆಗೆದುಕೊಂಡು ಒಳಗೆ ಓಡಿದ. ಓಡುವಾಗ, ನನಗೆ ಹಿಂಬಾಲಿಸುವಂತೆ ಸನ್ನೆ ಮಾಡಿದ. ಲಗುಬಗೆಯಿಂದ ನಾನು ಅವನನ್ನು ಹಿಂಬಾಲಿಸಿದೆ. ಒಳಗೆ ಬಿಡಲು ನಿರಾಕರಿಸಿದ ಕಾವಲುಗಾರ. ಅವನ ಕೈಲಿದ್ದ ಬಂದೂಕು ನೋಡಿ ನಾನು ತೆಪ್ಪಗಾದೆ. ಐದು ನಿಮಿಷದಲ್ಲಿ, ಕಪೂರ್ ಪುನಃ ಹೊರಗೆ ಬಂದು, ನನ್ನನ್ನು ಮಂತ್ರಿಯ ಮನೆಯೊಳಗೆ ಕರೆದೊಯ್ದ.

ಹೊರಕೋಣೆಯಲ್ಲಿ ಕುಳಿತಿದ್ದ ಮಂತ್ರಿಯ ಸಖ-'ಪೀ.ಏ' ನಮ್ಮನ್ನು ಒಳ ಕೋಣೆಗೆ ಕರೆದೊಯ್ದ. ಅಲ್ಲಿ ಒಂದು ಕುರ್ಚಿಯಲ್ಲಿ ಆಸೀನರೂಢನಾಗಿದ್ದ ಮಂತ್ರಿ. ಅಂತಹ ಬಿಳುಪಿಲ್ಲದ ದುಂಡು ಮಂಗೋಲ್ ಮುಖದಲ್ಲಿ ಪುಟ್ಟ ಪುಟ್ಟ ನಕ್ಷತ್ರದ ಕಣ್ಣುಗಳು ಪಿಳಿ ಪಿಳಿ ನನ್ನನ್ನು ನೋಡಿದವು.

"ಇವರು ಬ್ಯಾಂಕ್ ಮೇನೇಜರ್. ಇವರಿಗೆ ಡಿಪಾಸಿಟ್ ಬೇಕಂತೆ. ನಿಮ್ಮ ಇಲಾಖೆಯಲ್ಲಿ ಕೇಂದ್ರ ಸರಕಾರದ ಹಣ ಬೇಕಾದಷ್ಟಿದೆ ಎಂದು ತಿಳಿಯಿತು. ಸ್ವಲ್ಪ ಸಹಾಯ ಮಾಡಿದರೆ ಇವರಿಗೆ ಅನುಕೂಲವಾಗುತ್ತದೆ".

ಕಪೂರ್ ಒಂದೇ ಸಮನೆ ಬಡಬಡಿಸಿದ. ನಾನು ಮಂತ್ರಿಗೆ ನಮಸ್ಕರಿಸಿ ಕುರ್ಚಿಯಲ್ಲಿ ಕುಳಿತೆ.

"ನಿಮ್ಮ ಚೇರ್‌ಮನ್‌ಗೆ ನಾನು ಡಿಪಾಸಿಟ್ ಕೊಟ್ಟಾಯಿತಲ್ಲಾ! ೨೫ ಕೋಟಿ ರೂಪಾಯಿ ನೀಡಿದ್ದೇನೆ. ನಿಮ್ಮ ಚೇರ್‌ಮನ್‌ರನ್ನೇ ಕೇಳಿ, ಡಿಪಾಸಿಟ್ ಕೊಡುವಂತೆ!"

ಡಿಪಾಸಿಟ್‌ಗೋಸ್ಕರ ನಮ್ಮ ಚೇರ್‌ಮನ್‌ರನ್ನೇ ಕೇಳುವುದೇ? ಇವನು ನೂರಕ್ಕೆ ನೂರು ರಾಜಕಾರಣಿ ಎಂದು ಸಾಬೀತು ಮಾಡಿದ! ತನ್ನದಲ್ಲದ ಹಣ, ಸರಕಾರದ ಹಣ, ತನಗೆ ಸಿಗುವ ಲಾಭ ಮರೆತು, ಬ್ಯಾಂಕ್ ಚೇರ್‌ಮನ್‌ಗೆ ನೀಡುವ ಬದಲು, ನನ್ನಂತಹ ಬಡ, ಪ್ರಭಾವವಿಲ್ಲದ ಅಸಾಮಾನ್ಯ ಪುತ್ರನಿಗೆ ಡಿಪಾಸಿಟ್ ನೀಡುವುದಕ್ಕೋಸ್ಕರ, ಅವನು ಲಕ್ಷಾಂತರ ರೂಪಾಯಿ ಖರ್ಚು ಮಾಡಿ, ವೋಟುಗಿಟ್ಟಿಸಿ, ಮಂತ್ರಿಪದವಿಗಳಿಸಿದನೇ?

"ಬ್ಯಾಂಕ್ ಮೇನೇಜರ್ ಆಗಿ ನಾನು ನಿಮ್ಮಂತಹ ಪ್ರಭಾವಿತ, ಪ್ರತಿಷ್ಠಿತ ಗ್ರಾಹಕರನ್ನು ಡಿಪಾಸಿಟ್‌ಗಾಗಿ ಕೇಳಬಹುದೇ ವಿನಾ, ನನ್ನದೇ ಬ್ಯಾಂಕ್‌ನ ಚೇರ್‌ಮನ್‌ರನ್ನು ಡಿಪಾಸಿಟ್‌ಗಾಗಿ ಕೇಳುವುದು ಮೂರ್ಖತನ ಎಂದು ನನ್ನ ಎಣಿಕೆ!" ಎಂದೆ.

ಮಂತ್ರಿಯಿಂದ ಡಿಪಾಸಿಟ್ ದಕ್ಕುವುದು ದುರ್ಲಭವೆಂದು ಅರಿತ ಮೇಲೆ, ನನ್ನ ಮನಸ್ಸಿಗೆ ಬಂದ ಮಾತನ್ನಾಡುವುದಕ್ಕೆ ಸಂಕೋಚವೇಕೆ?

ದುಂಡು ಮಂಗೋಲ್ ಮುಖದಲ್ಲಿ ನಗು ಕಾಣಿಸಿಕೊಂಡಿತು.

"ನಿಮ್ಮ ಮಾತು ನಿಜ. ಆದರೆ ನಾನು ಅಸಹಾಯನಾಗಿದ್ದೇನೆ. ನನ್ನ ಬಳಿ ಹಣವಿದ್ದಿದ್ದರೆ ನಿಮಗೆ ಡಿಪಾಸಿಟ್ ಕೊಡುತ್ತಿದ್ದೆ. ನನ್ನಲ್ಲಿ ಇಲ್ಲವಲ್ಲ!"

ಮಾರಾಟಗಾರನಿಗೆ, ಚುರುಕು ಬುದ್ಧಿಯ ಜೊತೆಗೆ, ಚತುರ ಮಾತುಗಾರಿಕೆ ಕೂಡ ಇರಬೇಕು ಎನ್ನುತ್ತಾರೆ. ಸರಕು ಮಾರಾಟ ಮಾಡುವಾಗ ಕೇವಲ ಸರಕಿನ ಬಗ್ಗೆ ಮಾತನಾಡದೆ, ಅವುಗಳ ಗುಣಗಳ ಗಾನ ಮಾಡದೆ, ಅವುಗಳೇ ಮಾತನಾಡುವ ಹಾಗೆ, ಭಾವನಾತ್ಮಕವಾಗಿ, ಮಾತನಾಡುವ ಕಲೆ ಹೊಂದಿರಬೇಕೆನ್ನುತ್ತಾರೆ, ಮಾರಾಟ ತಜ್ಞರು. ಉದಾಹರಣೆಗೆ, ಹಾಸಿಗೆ, ದಿಂಬು, ಮೆತ್ತೆ ಇತ್ಯಾದಿ ಮಾರಾಟ ಮಾಡುವಾಗ, ಮಾರಾಟಗಾರ,ಹಾಸಿಗೆ, ಮೆತ್ತೆಗಳನ್ನು ಮಾರಾಟ ಮಾಡಲಿಕ್ಕೆ ಪ್ರಯತ್ನಿಸುವುದು ಬೇಡವಂತೆ. ಬದಲಿಗೆ, ಅವನು, ಮಾರಾಟವಾಗುವ ಹಾಸಿಗೆ, ಮೆತ್ತೆಯಲ್ಲಿ ಮಲಗಿದರೆ, ಸಿಹಿಕನಸುಗಳನ್ನು ಮತ್ತು ರುಚಿಕರವಾದ ಕಾಮಕೇಳಿಗಳನ್ನು ಮಾರಾಟ ಮಾಡು

ತ್ತಾನಂತೆ! ಈ ಪುಢಾರಿಗೆ ಯಾವ ತರಹದ ಡಿಪಾಸಿಟ್‌ನ ಕನಸನ್ನು ಮಾರಾಟ ಮಾಡಲಿ?

ನಾವು ಕುಳಿತಲ್ಲಿಂದ ಎದ್ದು ಅವನಿಗೆ ವಿದಾಯ ಹೇಳಿ ಹೊರಗೆ ಬಂದೆವು.

"ಎಷ್ಟು ಹೊತ್ತು ಕಾಯಿಸಿಬಿಟ್ಟಿರಿ ನನಗೆ?" ದೂರಿದೆ ನಾನು.

"ಹೌದು! ತುಂಬಾ ಕಾಯಿಸಿಬಿಟ್ಟೆ. ಆ ಬದ್ಮಾಷ್ ಪಿ.ಎ. ಇದ್ದಾನಲ್ಲಾ, ಅವನಿಂದ ತಡವಾಯಿತು. ಒಳಗೆ ಮಂತ್ರಿ ಸಾಹೇಬರನ್ನು ಭೇಟಿ ಮಾಡಲಿಕ್ಕೆ ತುಂಬಾ ಅಡ್ಡಿ ಮಾಡಿದ. ನೂರೆಂಟು ಸಬೂಬು ಹೇಳಿದ. ಒಳಗೆ ಬಿಡಲೇ ಇಲ್ಲ! ಕೊನೆಗೆ ನಾನು ಬಂದಿದ್ದೇನೆ ಎಂದು ಹೇಳು ಅಂದರೂನೂ ಕುರ್ಚಿಯಿಂದ ಕದಲೇ ಇಲ್ಲ ಕಮೀನೇ!"

ಹಿಂದೀ ಭಾಷೆಯಲ್ಲಿನ ಬೈಗಳ ಸುರುಮಳೆ ಹೊಯ್ದ ಆ ಮಂತ್ರಿ ಸಖನ ಮೇಲೆ.

"ಕೊನೆಗೆ ಹೇಗೆ ಒಳಗೆ ಬಿಟ್ಟ, ಅವನು?"

"ಹೊರಗೆ ಬಂದು ಸ್ಕೂಟರ್‌ನಲ್ಲಿದ್ದ ಚೀಲ ತೆಗೆದುಕೊಂಡು ಹೋಗಿದ್ದು ನೋಡಲಿಲ್ಲವೇ ನೀವು?"

"ನೋಡಿದೆ!"

ಚೀಲ ತೆಗೆದುಕೊಂಡು ಓಡಿದ ಕಪೂರ್ ನೆನಪಿಗೆ ಬಂದಿತು.

"ಅದರಲ್ಲಿ ಏನಿತ್ತು ಎಂದುಕೊಂಡಿದ್ದೀರಿ?"

"ಏನಿತ್ತು?"

ನನಗೆ ಹೇಗೆ ತಿಳಿಯಬೇಕು ಚೀಲದೊಳಗಿನ ಸರಕು? ನಾನೇನು ಜಾದೂ ಗಾರನೇ?

"ಅದರಲ್ಲಿ ವಿದೇಶಿ ವಿಸ್ಕೀ ಬಾಟ್ಲಿ ಇತ್ತು!"

"ವಿದೇಶಿ ವಿಸ್ಕೀ?"

"ಹೌದು! ವಿದೇಶಿ ವಿಸ್ಕೀ!"

"ಆ ಕಮೀಷನ್ನೇ ಪೀ.ಏ. ಗೆ ಕೊಟ್ಟಿರಾ?

"ಅವನಿಗ್ಯಾಕೆ ಕೊಡಲಿ? ಈ ಚೀಲ ತೆಗೆದುಕೊಂಡು ಹೋಗಿ, ಮಂತ್ರಿ ಮಹಾ ಶಯನಿಗೆ ಕೊಡಿ ಎಂದು ನಿವೇದಿಸಿದೆ. ಅವ ತೆಗೆದುಕೊಂಡು ಹೋಗಿ ಕೊಟ್ಟ ಒಡನೆಯೇ ಒಳಗೆ ಬರಲು ಪರವಾನಿಗಿ ಸಿಕ್ಕಿತು!" ನಗತೊಡಗಿದ ಕಪೂರ್!

ಮಂತ್ರಿ ಮಹಾಶಯನ ಭೇಟಿಗೆ, ಪ್ರವೇಶ ಶುಲ್ಕ ಒಂದು ವಿದೇಶಿ ವಿಸ್ಕಿ!

"ವಿದೇಶಿ ವಿಸ್ಕೀ ಏಕೆ? ದೇಶಿ ವಿಸ್ಕೀ ಆಗದೇ?"

ಕಪೂರ್ ಮತ್ತಷ್ಟು ನಗತೊಡಗಿದ.

"ಸಾಬ್!ದೇಶೀ ಮಂತ್ರಿ ದೇಶಿ ವಿಸ್ಕೀ ಕುಡಿಯೋ ಪರದೇಶೀನಾ?"

"ವಿದೇಶಿಯರನ್ನು ಓಡಿಸಿದ ಈ ರಾಜಕಾರಣಿಗಳು ಮತ್ತು ಮಂತ್ರಿ ಮಹಾಶಯರು ವಿದೇಶೀ ವಿಸ್ಕೀ ಕುಡಿಯದಷ್ಟು ರಾಷ್ಟ್ರೀಯ ಮನೋಭಾವ ಹೊಂದಿಲ್ಲ!"

ರಾಜಕೀಯ ಬಲ, ಮಂತ್ರಿ ಪದವಿಯ ಬಲ, ಜನಬಲವಿದ್ದರೂ, ನೈತಿಕ ಬಲವಿರದ ಈ ಪುಢಾರಿಗಳ ಸಂಖ್ಯೆ ಹೆಚ್ಚಿರುವುದರಿಂದಲೇ, ದೇಶ ಬಲಹೀನವಾಗಿದೆಯೇನೋ! ಸರಕಾರ ನೀಡಿದ ಮನೆಯನ್ನೇ ಬಾಡಿಗೆಗೆ ಕೊಟ್ಟು, ಹಣ ಮಾಡಿಕೊಳ್ಳುವ ಈ ಪುಢಾರಿಗಳ ನೈತಿಕ ಮಟ್ಟ, ಎಷ್ಟರ ಮಟ್ಟಿಗೆ ಇರಬಹುದು?

ಸ್ಕೂಟರ್ ಹಿಂದುಗಡೆ ಕುಳಿತೊಡನೆ, ಬರ್ ಎಂದು ಗಾಡಿ ಹೊರಡಿಸಿ, ಸಾಗಿದ ಕಪೂರ್. ಇಬ್ಬರೂ ಮಾತನಾಡಲಿಲ್ಲ, ದಾರಿಯಲ್ಲಿ. ಹಳೇ ದಿಲ್ಲೀಯ ಬಜಾರ್‌ನ ನನ್ನ ಶಾಖೆಯ ದಿಕ್ಕಿಗೆ ಹೋಗದೇ, ಇಂಡಿಯಾ ಗೇಟ್ ಮುಖಾಂತರ, ಬಹದ್ದೂರ್ ಶಾ ಜಫರ್ ಮಾರ್ಗವಾಗಿ, ಸ್ಕೂಟರ್‌ನ್ನು ಓಡಿಸಿದ, ಕಪೂರ್!

"ಎಲ್ಲೀ ಕರೆದುಕೊಂಡು ಹೋಗುತ್ತಿದ್ದೀರಾ ಕಪೂರ್?" ಕೇಳಿದೆ.

"ಇಂಡಿಯನ್ ಎಕ್ಸ್‌ಪ್ರೆಸ್ ಬಿಲ್ಡಿಂಗ್"

"ಏಕೆ?"

"ಅಲ್ಲಿ ನನ್ನ ಸ್ನೇಹಿತನೊಬ್ಬನಿದ್ದಾನೆ. ಅವನಿಗೆ ದಿಲ್ಲೀ ಕಾರ್ಪೋರೇಶನ್‌ನ ಅಧಿಕಾರಿಗಳ ಸ್ನೇಹವಿದೆ. ಅವನನ್ನು ಹಿಡಿಯೋಣ. ಡಿಪಾಸಿಟ್ ಕೊಡಿಸಬಹುದು".

'ಬ್ರಾಹ್ಮಣ, ಭೋಜನವೆಂದರೆ, ಯೋಜನವಾದರೂ ನಡೆಯುತ್ತಾನಂತೆ' ನಾನು 'ಡಿಪಾಸಿಟ್ ಎಂದರೆ, ಎಲ್ಲೇ ಇರಲಿ, ಹೇಗೆ ಇರಲಿ, ಯಾರಲ್ಲೇ ಇರಲಿ, ಗೋ ಗೆಟ್ ಇಟ್' ಎಂಬ ಗಾದೆಯಲ್ಲಿ ನಂಬಿಕೆ ಇಟ್ಟಿರುವವ! 'ಹೊಡಿ ನಗಾರಿ ಮೇಲೆ ಕೈಯ್ಯಾ' ಎಂದು ಸ್ಕೂಟರ್ ನ ಸೀಟಿಯ ಮೇಲೆ ಕೈ ಇಟ್ಟೆ. ಅದು ಜೋರಾಗಿ ಬಡಿದುಕೊಳ್ಳಲಿಕ್ಕೆ ಶುರುಮಾಡಿತು. ನನ್ನ ತುಂಟಾಟಕ್ಕೆ ಹೆದರಿ, ಸ್ಕೂಟರ್ ಕುದುರೆಯ ತರಹ ಜೋರಾಗಿ ಓಡತೊಡಗಿತು.

"ಡಿಪಾಸಿಟ್ ಎಂದ ಕೂಡಲೇ ಹುರುಪು ಬಂದು ಬಿಡುತ್ತದೆಯಲ್ಲಾ ನಿಮಗೆ?"

ಕಪೂರ್ ಕೇಳಿದ.

"ಹೌದು ಡಿಪಾಸಿಟ್ ಬ್ಯಾಂಕ್ ಎಂಬ ಕಾರ್ಖಾನೆಗೆ ಕಚ್ಚಾ ಸಾಮಗ್ರಿ. ಅದಿಲ್ಲದಿದ್ದರೆ, ಕಾರ್ಖಾನೆ ನಡೆಯುವುದೇ ಇಲ್ಲ. ಈ ಕಾರ್ಖಾನೆಯಲ್ಲಿ ಉತ್ಪಾದನೆ ಏನೂ ಆಗುವುದಿಲ್ಲ, ಆದರೆ, ಉತ್ಪಾದನಾ ಕಾರ್ಖಾನೆಗಳಿಗೆ ಬಂಡವಾಳ ಒದಗಿಸುತ್ತದೆ".

"ಉತ್ಪಾದನಾ ಕಾರ್ಖಾನೆಗಳು ಉತ್ತಮವಾಗಿ ಕೆಲಸಮಾಡಿದರೆ, ಬ್ಯಾಂಕ್

ಬದುಕುತ್ತದೆ. ಇಲ್ಲದೇ ಹೋದರೆ, ಬ್ಯಾಂಕ್ ಕಾಯಿಲೆ ಬಿದ್ದು, ನರಳಿ ಸಾಯುತ್ತದೆ, ಅಲ್ಲವೇ?" ಕಪೂರ್ ವಿಶ್ಲೇಷಿಸಿದ.

"ಹೌದು" ಎಂದು ಒಪ್ಪಿಕೊಂಡೆ.

ಬಹುಮಹಡಿಯ 'ಇಂಡಿಯನ್ ಎಕ್ಸಪ್ರೆಸ್' ಕಟ್ಟಡದ ಬಳಿ ಬಂದು, ಸ್ಕೂಟರ್ ನಿಲ್ಲಿಸಿ, ಒಳಗೆ ಹೋದೆವು. ಪತ್ರಿಕಾ ಕಛೇರಿಯಲ್ಲಿ ನೌಕರಿ ಮಾಡುತ್ತಿದ್ದ ಕಪೂರ್‌ನ ಸ್ನೇಹಿತನನ್ನು ಭೇಟಿ ಮಾಡಿದೆವು. ಅವ ಡಿಪಾಸಿಟ್ ಕೊಡಸಲಿಕ್ಕೆ ಒಪ್ಪಿಕೊಂಡ. ಆದರೆ, ಕಮೀಶನ್ ಕೊಡಲೇ ಬೇಕು ಎಂದ. ಬಂದ ಕೆಲಸವಾಗದೇ, ಹಿಂದಿರುಗಿ ಬಂದೆವು. ಸ್ಕೂಟರ್ ಹತ್ತಿ, ವಾಪಸ್ಸು ಬರುವಾಗ ಫಿರೋಜ್ ಶಾ ಕೋಟ್ಲಾದ ಬಳಿ ಬಂದೆವು.

"ನೀವು ಕೋಟ್ಲಾ ನೋಡಿದ್ದೀರಾ?"

"ಇಲ್ಲ!" ಎಂದೆ.

"ಬನ್ನಿ ನೋಡೋಣ" ಎಂದು ಸ್ಕೂಟರ್ ತಿರುಗಿಸಿದ.

ನೂರಾರು ವರ್ಷಗಳಿಂದ, ಮಳೆ, ಗಾಳಿ, ಉರಿಬಿಸಿಲಿಗೆ ಕಪ್ಪಾದ ಕಗ್ಗಲ್ಲುಗಳ, ಮುರಿದು, ಹಾಳಾದ ಕೋಟೆಯ ಮಹಾದ್ವಾರದ ಮುಖಾಂತರ ಒಳಗೆ ಹೋದ ನಮಗೆ, ದೊಡ್ಡ ಅಂಗಳ ಕಂಡು ಬಂದಿತು. ಅಂಗಳದ ಒಂದು ತುದಿಯಲ್ಲಿ ನಿಂತಿತ್ತು ದಿಲ್ಲೀಯ ಪ್ರಸಿದ್ಧ ಅಶೋಕ ಸ್ತಂಭ. ರಕ್ತ ಚೆಲ್ಲಿ, ಸಾವು ನೋವು, ಸುತ್ತಲೂ ಆತಂಕ ಉಂಟು ಮಾಡಿದ ದಿಲ್ಲೀ ಸಿಂಹಾಸನವೇರಿದ ಫಿರೋಜ್ ಶಾ ತೊಘಲಖ್, ಶಾಂತಿ, ಕರುಣೆ, ಪ್ರೀತಿ ಮತ್ತು ಅಹಿಂಸೆಯನ್ನು ಉಪದೇಶಿಸಿದ ಭಗವಾನ್ ಬುದ್ಧನ ಅನುಯಾಯಿ, ಅಶೋಕನ ಬೃಹತ್ ಸ್ಥಂಭವನ್ನು ದೂರದ ಮೀರತ್‌ನಿಂದ ತಂದು ಇಲ್ಲಿ ನಿಲ್ಲಿಸಿದ್ದು ಒಂದು ವಿಪರ್ಯಾಸವಲ್ಲವೇ?

ಸ್ಥಂಭದ ಬುಡಹತ್ತಿ ಅಲ್ಲಿಂದ ವೀಕ್ಷಿಸಿದಾಗ, ಪೂರ್ವಕ್ಕೆ ಜಮುನಾ ನದಿ ಹರಿಯುವ ದೃಶ್ಯ ಕಂಡು ಬಂತು.

"ನಮ್ಮ ನದೀದಡದಲ್ಲಿ ಮನೆ ಮಠ ಕಟ್ಟಿ, ಮನೆ ಹಿತ್ತಲನ್ನು ನದೀಗೆ ಮುಖ ಮಾಡಿ, ಹರಿಯುವ ನದಿಯ ಸೌಂದರ್ಯವನ್ನು ಯಾಕೆ ಸವಿಯದಂತೆ ಮಾಡಿ ಕೊಳ್ಳುತ್ತಾರೆ?"

ಮಂದಗಮನವಾಗಿ, ದಿಲ್ಲೀಯ ರಾಡಿ ನೀರಾಗಿ, ಜನರ ಪಾಪದ ಫಲವನ್ನು ಹೊರಲಾರದೆ ಹೊತ್ತು, ನರಳುತ್ತಾ, ಯಮುನಾ ನದಿಯನ್ನು ನೋಡುತ್ತಾ ಹೇಳಿದ. "ತಮ್ಮ ಸೌಂದರ್ಯ ಹಾಳಾಗದಂತೆ, ತಾವು ಶುಚಿಯಾಗಿರುವುದಕ್ಕೆ ಮನೆ ಹಿತ್ತಲಲ್ಲಿ ನೀರು ಸಿಗುವಂತೆ ಮನೆ ಕಟ್ಟಿಕೊಂಡರೆ, ನಿಮ್ಮದೇನು ಕೊರಗು?"

ಕಪೂರ್, ನನ್ನ ಪ್ರಶ್ನೆಗೆ ಮರುಪ್ರಶ್ನೆ ಹಾಕಿದ.

"ಸೌಂದರ್ಯ ಪ್ರಜ್ಞೆ ಇಲ್ಲದ ನಾವು ಬಚ್ಚಲ ಮನೆ ಕಕ್ಕಸು ನದೀ ದಡದ ಮೇಲೆ ಕಟ್ಟಿ, ಮನೆಯ ಮುಂಭಾಗ ಮತ್ತು ಅಂಗಳ ರಸ್ತೆಯಂಚಿಗೆ ಕಟ್ಟಿ, ನೀರಸವಾಗಿ ದಿನ ನೂಕುತ್ತೇವೆ?"

"ರಸ್ತೆಗೆ ಮನೆ ಬಾಗಿಲಿಡುವುದು ಸೌಕರ್ಯಕ್ಕೆ, ಸುಖಕ್ಕೆ. ನದಿಗೆ ಹೆಬ್ಬಾಗಿಲಿಟ್ಟರೆ, ನದೀ ರಸ್ತೆಯಾಗುತ್ತದೆಯೆ? ಅದೂ ಅಲ್ಲದೆ, ಮಳೆಗಾಲದ ಮಳೇ ನೀರು, ಬಿರುಗಾಳಿಗೆ ಬೀಸಿ, ಉಕ್ಕಿದ ನದೀನೀರು ಮನೆ ಹೆಬ್ಬಾಗಿಲಿನಿಂದ ಒಳಕ್ಕೆ ಬರಮಾಡಿಕೊಳ್ಳಬೇಕೆ?"

"ನದೀ ಉಕ್ಕಿದರೆ, ಹೆಬ್ಬಾಗಿಲಾದರೂ ಒಂದೇ, ಹಿಂಬಾಗಿಲಾದರೂ ಒಂದೇ; ನದೀ ಸೌಂದರ್ಯವನ್ನು ಅನುಭವಿಸಲಿಕ್ಕೆ ಮನೆ ಮುಂದೆ ಕುಳಿತು, ಅದರ ಜುಳು-ಜುಳು ನಾದ ಆಲೈಸುವುದೇ ಒಂದು ಬಗೆಯ ಸುಖ! ಏನಂತೀರಿ?"

ಕಪೂರ್, ನನ್ನ ಮುಖವನ್ನೇ ಎರಡು ಕ್ಷಣ ದಿಟ್ಟಿಸಿ ನೋಡಿ, ನಸುನಗುತ್ತಾ ಕೇಳಿದ.

"ವಿಚಿತ್ರವಾಗಿದೆ ನಿಮ್ಮ ಬಯಕೆ! ನಿಮ್ಮ ಊರಿನಲ್ಲಿ ನದಿ ಇದೆಯೊ?"

ಬೆಂಗಳೂರಿನಲ್ಲಿ ನದಿ? ಇದೆ, ಆದರೆ ಅದು ಕೊಚ್ಚೆ, ರಾಡಿ ನೀರಿನ ದೊಡ್ಡ ಗಟಾರವಾಗಿ ಪರಿವರ್ತಿಸಿದೆ, ವೃಷಭಾವತಿ ನದಿ!

ಕಪೂರ್‌ನಿಗೆ ಉತ್ತರ ನೀಡದೆ, ಸುತ್ತಲೂ ಕಣ್ಣು ಹಾಯಿಸಿದೆ. ಪಶ್ಚಿಮಕ್ಕೆ ಮುರಿದುಬಿದ್ದ ಕಪ್ಪು ಕಲ್ಲಿನ ರಾಶಿ ಕಂಡು ಬಂತು. ಒಂದು ಕಾಲಕ್ಕೆ ಬೃಹತ್ ಮಹಲ್‌ಗಳು, ಮಸೀದಿಗಳು, ಅರಮನೆಗಳು, ಕೋಟೆ ಕೊತ್ತಲಗಳು ಇಲ್ಲಿ ವಿಜೃಂಭಿಸಿ, ಕವಿಗಳು, ದಾರ್ಶನಿಕರು, ಸುಲ್ತಾನರು ಮೆರೆದಿದ್ದು, ಈಗ ಹಾಳು ಸುರಿಯುತ್ತಿರುವ ಈ ಕಲ್ಲಿನ ರಾಶಿಯನ್ನು ಕಂಡು ಮನ ಮಿಡಿಯಿತು. ವಿಜೃಂಭಿಸಿದ ಈ ಕೋಟೆ, ಮಹಲ್ ಅರಮನೆಗಳನ್ನು ವಿಕ್ರೂಪಗೊಳಿಸಿ, ಕಲ್ಲುಗಳನ್ನು ಕೊಂಡೊಯ್ದು, ಹೊಸ ರಾಜಧಾನಿ, ಹೊಸ ಕೋಟೆ ಕೊತ್ತಲ, ಹೊಸ ಅರಮನೆ, ಮಹಲ್‌ಗಳನ್ನು ಕಟ್ಟಲು ಉಪಯೋಗಿಸಿಕೊಂಡರು, ಪ್ರದೇಶವನ್ನು ಗೆದ್ದ ಬಾದಶಹರೂ ಮತ್ತು ಸುಲ್ತಾನ್‌ರು. ಚರಿತ್ರೆ ಮರುಕಳಿಸುವಂತೆ, ಹೊಸ ಕೋಟೆ, ಅರಮನೆ ಮಹಲ್‌ಗಳು ಆಕ್ರಮಣ ಕಾರರಿಗೆ ತುತ್ತಾಗಿ, ಮತ್ತೆ ವಿಕ್ರೂಪಗೊಂಡು, ಭಗ್ನಾವಶೇಶವಾಗಿ ಉಳಿಯಿತಲ್ಲವೆ?

ಕಾಲೀಸ್ಥಾನ ಕಟ್ಟಲು ಶ್ರಮಿಸುತ್ತಿರುವ ಸರದಾರ್‌ಜೀ ಏನಾದ? ಅವನ ಆಕ್ರೋಶ ಯಾಕೆ ಇಷ್ಟು ತೀವ್ರವಾಗಿದೆ? ಕಾರಣವಾದರೂ ಏನು?

ಹಠಾತನೆ ಸರದಾರಜೀಯ ನೆನಪಿಗೆ ಬಂದಿದ್ದು ನನಗೇ ಆಶ್ಚರ್ಯ ತಂದಿತು.

"ಸರದಾರ್‌ಜೀಯ ಭೇಟಿ ಆಯಿತಾ?"

"ಪದೇ ಪದೇ ಬರುತ್ತಲೇ ಇರುತ್ತಾನೆ. ಬಂದಾಗಲೆಲ್ಲಾ ಭೇಟಿ ಮಾಡುತ್ತಾನೆ."

"ಹೇಗಿದ್ದಾನೆ?"

"ಮಜೆಯಲ್ಲಿದ್ದಾನೆ!"

"ಮಜೆಯಲ್ಲಿದ್ದಾನೆ?"

"ಹಾಂ! ಏಕೆ ಅನುಮಾನವೇ?"

"ಅನುಮಾನದ ಪ್ರಶ್ನೆ ಅಲ್ಲ. ಆಶ್ಚರ್ಯವಾಯಿತು!"

"ಆಶ್ಚರ್ಯ? ಏಕೆ?"

"ಹಿಂಸಾವೃತ್ತಿಯಲ್ಲಿದ್ದವ ಮಜೆಯಲ್ಲಿದ್ದಾನೆ ಎಂದರೆ ಆಶ್ಚರ್ಯವಾಗದೆ ಸಂತೋಷವಾಗುವುದೇ?"

"ಅವನು ಆತಂಕವಾದಿ; ಹಿಂಸಾವಾದಿ ಅಲ್ಲ!"

ಕಪೂರ್‌ನ ಮುಖವನ್ನೇ ದಿಟ್ಟಿಸಿ ನೋಡಿದೆ ನಾನು. ಕಪೂರ್‌ನ ಮುಖದಲ್ಲಿ ತುಂಟತನದ ಲಕ್ಷಣವಿದೆಯೋ ಎಂದು ಹುಡುಕಿತು ನನ್ನ ಕಣ್ಣುಗಳು. ಈ ಹಿಂದೆ, 'ಸರದಾರ್‌ಜೀ ಭಯೋತ್ಪಾದಕನೂ ಅಲ್ಲ, ಅಭಯೋತ್ಪಾದಕನೂ ಅಲ್ಲ!' ಎಂದು ಕಪೂರ್ ಹೇಳಿದ್ದು ನೆನಪಿಗೆ ಬಂತು. ಈಗ ಅವನು ಆತಂಕವಾದಿ ಎಂದು ಒಪ್ಪಿಕೊಂಡಿದ್ದಾನಲ್ಲ!

"ಆತಂಕವಾದಿ ಹಿಂಸಾವೃತ್ತಿಯಲ್ಲಿದ್ದ ಮೇಲೆ ಅವನು ಹಿಂಸಾವಾದಿ ಎಂದು ಏಕೆ ಕರೆಯಬಾರದು?" ಕೇಳಿದೆ ನಾನು.

"ಕರೆಯಬಾರದು! ಅವರಿಬ್ಬರಲ್ಲಿ ವ್ಯತ್ಯಾಸವಿದೆ. ಹಿಂಸಾವಾದಿಗೆ ಯಾವ ಧ್ಯೇಯವೂ, ಗುರಿಯೂ ಇರುವುದಿಲ್ಲ. ಅವನಿಗೆ ಹಿಂಸೆಯೇ ಗುರಿ. ಆದರೆ, ಆತಂಕವಾದಿಗೆ, ಒಂದು ಗುರಿ ಇರುತ್ತದೆ. ಆ ಗುರಿ ಸಾಧನೆಗೆ ಹಿಂಸೆಯ ನೆರವು ಪಡೆಯುತ್ತಾನೆ!"

"ಇರಬಹುದು. ಆದರೆ ನಿರ್ದೋಷಿ, ಏನೂ ಅರಿಯದ ಪಾಪದ ಜನರಿಗೆ ಹಿಂಸೆ ಮಾಡುವುದರ ಅರ್ಥ ಏನು? ಇದರಿಂದ ಯಾವ ಧ್ಯೇಯ, ಗುರಿ ಸಾಧಿಸಿದಂತಾಗುತ್ತದೆ?"

"ಇಲ್ಲೇ ಇರುವುದು ನಿಜವಾದ ವ್ಯತ್ಯಾಸ! ನಿರ್ದೋಷಿ ಜನರಿಗೆ ಹಿಂಸೆ ಮಾಡುವುದರಿಂದ ಆತಂಕ ಒಡ್ಡಿದಂತಾಗುತ್ತದೆ. ಆತಂಕ ಹರಡಿಸಬೇಕಾದರೆ, ಪಾಪದ, ಏನೂ ಅರಿಯದ ಜನರಿಗೆ ಹಿಂಸೆ ಕೊಡಬೇಕಾಗುತ್ತದೆ. ಕಳ್ಳರು, ಡಕಾಯಿತರು,

ಪಾಪಿಷ್ಟರಿಗೆ ಹಿಂಸೆ ಮಾಡಿದರೆ ಜನಸಾಮಾನ್ಯರಲ್ಲಿ ಆತಂಕ ಹುಟ್ಟುವುದಾದರೂ ಹೇಗೆ?"

"ಆತಂಕ ಯಾಕೆ ಹುಟ್ಟಿಸಬೇಕು?"

"ತಮ್ಮ ಗುರಿ ಸಾಧಿಸಲಿಕ್ಕೆ!"

ಥಟ್ಟನೆ ನನ್ನ ಶಾಖೆಯಲ್ಲಿ ಜರುಗುತ್ತಿರುವ ಆಗುಹೋಗುಗಳು, ಘಟನೆಗಳ ನೆನಪು ಮನಸ್ಸಿನಲ್ಲಿ ಹಾದುಹೋಯಿತು. ಈ ಘಟನೆಗಳು ಜರುಗುವುದಕ್ಕೆ ನನ್ನ ಪಾತ್ರವೇನು? ನಾನು ಒಂದು ರೀತಿಯ ಆತಂಕ ಹರಡುತ್ತಿದ್ದೇನೆಯೆ? ನೌಕರರ ಮನಸ್ಸಿನಲ್ಲಿ ಆತಂಕ ಹುಟ್ಟು ಹಾಕಲಿಕ್ಕೆ ನಾನು ಪ್ರಯತ್ನಿಸುತ್ತಿದ್ದೇನೆಯೆ? ಅವರು ನನ್ನ ನೀತಿಗೆ, ರೀತಿಗೆ ಜಾಡಿಗೆ, ನಡೆಯಲೆಂದು, ಅವರ ಮನಸ್ಸಿನ ಮೇಲೆ ನನ್ನ ಹತೋಟಿ ಇಟ್ಟು, ಅವರ ಮೇಲೆ ನನ್ನ ಸಾರ್ವಭೌಮತ್ವವನ್ನು ಸಾಧಿಸಲೆಂದು ಆತಂಕದ ಜಾಲ ಬೀಸಿ, ಅವರಿಗೆ ಭಯ, ಹಿಂಸೆ ಉಂಟಾಗುವಂತೆ ಮಾಡುತ್ತಿರುವುದು ಸುಳ್ಳೇ?

ನೌಕರರು, ತಮ್ಮ ನುಡಿ, ನಡೆಗಳಿಂದ, ತಮ್ಮದೇ ಆದ ಅಧಿಕಾರವನ್ನು ನನ್ನ ಮೇಲೆ ಚಲಾಯಿಸಬೇಕೆಂದು, ಸಂಪು, ಧರಣಿ, ಮುಷ್ಕರ, ಅಸಹಾಯಕರ ಚಳುವಳಿಗಳ ಆತಂಕ ಎಬ್ಬಿಸಿ, ನನಗೆ ಅದರ ರುಚಿ ತೋರಿಸಿ, ಹಿಂಸಿಸುತ್ತಿದ್ದಾರೆಯೊ?

ಯಾರಿಗೆ ಯಾರು ಆತಂಕ ಒಡ್ಡುತ್ತಿದ್ದಾರೆ?

ಆತಂಕದ ಸುಳಿಯಲ್ಲಿ ಸುತ್ತಿ, ನಾವೆಲ್ಲರೂ ಒದ್ದಾಡುತ್ತಿದ್ದೇವೆಯೊ?

ಹಾಗಾದರೆ, ಆತಂಕವಾದಿಗಳು ಒಡ್ಡುತ್ತಿರುವ ಆತಂಕ, ಸರಕಾರ, ಅದರ ಅಧಿಕಾರಿಗಳು, ರಾಜಕಾರಣಿಗಳು ಅವರ ಚೇಲಾಗಳು, ಬೀಸುತ್ತಿರುವ ಆತಂಕದ ಪಾಪದ ಫಲವೇ?

ಆತಂಕ, ಭೀತಿ ಮನಸ್ಸಿನಲ್ಲಿ ಹುಟ್ಟಿಸದೇ ಹೋದ ಪಕ್ಷದಲ್ಲಿ, ಮನುಷ್ಯನ ಮೇಲೆ ಹತೋಟಿ, ಅಧಿಕಾರ ಚಲಾಯಿಸಲಿಕ್ಕೆ ಸಾಧ್ಯವಾಗುವುದಿಲ್ಲವೇ?

"ಗುಮ್ಮ ಬರುತ್ತದೆ!" ಎಂದು ದಿಗಿಲು ಹುಟ್ಟಿಸಿ, ಪುಟ್ಟ ಮಗುವಿನ ಮನಸ್ಸಿಗೆ ಆತಂಕ ಪಡಿಸುವುದರಿಂದ ಆತಂಕವಾದಿಯ ಜನ್ಮ ಉಂಟಾಗುತ್ತದೆಯಲ್ಲವೇ?

ವಿದ್ಯಾರ್ಥಿಗಳಿಗೆ, ಪರೀಕ್ಷೆಯ ಆತಂಕ ಹುಟ್ಟಿಸಿ, ಅವರಿಗೆ ಹಿಂಸಿಸುವುದಿಲ್ಲವೇ?

ನೌಕರಿ ಸಿಗದೆ ಒದ್ದಾಡುತ್ತಾ, ಅಲೆಯುತ್ತಾ ಇರುವ ಯುವಜನರಿಗೆ, ಜೀವನ ಸಾಗಿಸುವ ಬಗ್ಗೆ ಆತಂಕ ಹುಟ್ಟಿ, ಹಿಂಸೆಯಿಂದ ನರಳುತ್ತಿಲ್ಲವೇ?

ಮದುವೆಯಾಗದೇ ಕನ್ಯೆಯಾಗಿ ಉಳಿದಿರುವ ಮಹಿಳೆ ನಿರಂತರ ಆತಂಕದಿಂದ ನರಳುತ್ತಿಲ್ಲವೇ?

ಮದುವೆಯಾದ ಮಹಿಳೆ ಪ್ರತಿ ಹೆಜ್ಜೆಗೂ ಗಂಡನಿಂದ, ಅತ್ತೆ, ಮಾವ, ಮೈದುನರಿಂದ, ಪ್ರತಿಯೊಂದು ವಿಷಯದಲ್ಲಿ ಆತಂಕ ಎದುರಿಸುತ್ತಿಲ್ಲವೇ?

ಮಾನವ, ಪ್ರತಿಕ್ಷಣ, ಪ್ರತಿದಿನ, ಪ್ರತಿ ತಿಂಗಳು, ಪ್ರತಿಯೊಂದು ವಿಷಯದಲ್ಲೂ ಆತಂಕ ಎದುರಿಸುತ್ತಾ ಇರುವುದು ನಿಜವಲ್ಲವೇ?

ಹಾಗಾದರೆ, ಆತಂಕವಾದಿಗಳು ತಮ್ಮ ಗುರಿ ಸಾಧಿಸಲಿಕ್ಕೆ ಆತಂಕ, ಹಿಂಸೆ ಹರಡಿದರೆ, ತಪ್ಪಾಗುತ್ತದೆಯೊ?

ಪ್ರಶ್ನೆಗೆ ಉತ್ತರವೇನು?

"ಒಮ್ಮೆಲೆ ಯೋಚನೆಗಳಲ್ಲಿ ಮುಳುಗಿಬಿಡುತ್ತೀರಲ್ಲಾ ನೀವು? ಏನು ಸಮಾಚಾರ?" ಕಪೂರ್ ನನ್ನ ಭುಜ ಹಿಡಿದು ಕೇಳಿದ.

"ಏನೂ ಇಲ್ಲ! ಬನ್ನಿ ಹೋಗೋಣ!"

ಎಂದು ಹೇಳಿ ಹೊರಟೆ. ನಿರ್ಜನವಾದ ದಾರಿಯಲ್ಲಿ, ಮಾತನಾಡದೆ ನಡೆದು, ಸ್ಕೂಟರ್ ಇಟ್ಟ ಸ್ಥಳಕ್ಕೆ ಬಂದು, ಸ್ಕೂಟರ್ ಚಾಲೂ ಮಾಡಿ, ಬಜಾರ್ ಕಡೆ ಹೊರಟೆವು.

"ತಮಿಳು ಕುಮಾರಿ ಕಮಲಳು ಹೇಗಿದ್ದಾಳೆ?"

"ಮದ್ರಾಸ್‌ಗೆ ಹೋಗಿ ನೆಲಸಬೇಕೆಂದು ತೀರ್ಮಾನಿಸಿದ್ದಾಳೆ."

"ನಿನ್ನ ಗತಿ?" ನಕ್ಕು ಕೇಳಿದೆ.

"ನನ್ನ ಗತಿಗೇನಾಗಿದೆ? ಚೆನ್ನಾಗಿದೆ. ಅವಳು ದಿಲ್ಲೀ ಹುಡುಗಿ. ಮದ್ರಾಸ್ ಹವಾ, ಜನ, ಸಂಸ್ಕೃತಿ ಯಾವುದೂ ಅವಳಿಗೆ ಸರಿಹೋಗುವುದಿಲ್ಲ. ವಾಪಸ್ಸು ಬಂದೇ ಬರುತ್ತಾಳೆ. ನಾನು ಕಾಯುತ್ತೇನೆ."

ಎಂತಹ ಭರವಸೆ, ಆಸೆ, ಆಕಾಂಕ್ಷೆ ಹೊಂದಿದ್ದಾನೆ ಈ ಕಪೂರ್! ಆದರೆ, ಕಾಯುವ ಕಾರ್ಯ ಇವನ ಪರಮ ಮಿತ್ರನೇ? ಕಾಯುವ ಕಾರ್ಯವನ್ನು ಬಹಳ, ಪ್ರೀತಿ, ಆಸೆಯಿಂದ ಮಾಡುವಂತೆ ತೋರುತ್ತದಲ್ಲವೇ?

ಇವನ ಆಸೆಯ ಬೀಜಕ್ಕೆ ನೀರು ಹೊಯ್ದು, ಆಸರೆ ನೀಡಿ ಗಿಡವಾಗಿಸಿ, ಬೆಳಸಿ, ಫಲ ಕೊಡುವ ಮೊದಲೇ, ಗಿಡವನ್ನು ಕತ್ತರಿಸಿ ಹಾಕುವ ಸನ್ನಾಹದಲ್ಲಿದ್ದಾಳಲ್ಲ ಈ ಕುಮಾರಿ ಕಮಲ!

"ನಿನ್ನ ಹೃದಯ ಭಗ್ನ ಮಾಡಹೊರಟಿದ್ದಾಳಲ್ಲ ಈ ತಮಿಳು ಕುಮಾರಿ, ಅವಳ ಬಗ್ಗೆ ಬೇಸರವಿಲ್ಲವೇ?"

"ಬೇಸರ? ಯಾಕೆ ಬೇಸರ? ಇದೇ ಅಲ್ಲವೇ ಜೀವನ? ಎಲ್ಲವೂ ನಮ್ಮ ಇಷ್ಟದಂತೆ ನಡೆದು ಬಿಟ್ಟರೆ, ಪ್ರಪಂಚ ಹೀಗಿರಲಿಕ್ಕೆ ಸಾಧ್ಯವೇ?"

"ಅವಳು ನಿನ್ನನ್ನು ತ್ಯಜಿಸಿ, ಮದ್ರಾಸಿಗೆ ಹೋಗುವುದರಿಂದ, ಬೇಸರವಾಗ ದಿದ್ದರೂ, ಆತಂಕ ಆಗಬಹುದಲ್ಲವೇ?"

ಉದ್ದೇಶಪೂರ್ವಕವಾಗಿ 'ಆತಂಕ'ಪದವನ್ನು ಉಪಯೋಗಿಸಿದೆ.

"ಆತಂಕ?.....ಇರಬಹುದು! ಆದರೆ, ನಾನು ಆತಂಕ ಪಟ್ಟರೆ ತಾನೇ ಆತಂಕ ಗೊಳ್ಳುವುದು? ಆತಂಕ ಇಲ್ಲ ಎಂದುಕೊಂಡರೆ, ಇಲ್ಲ! ಏನು ಹೇಳ್ತೀರಿ?"

ನಾನು ಏನು ಹೇಳುವುದು?

ನನ್ನ ಶಾಖೆಯ ಬಳಿ, ಸ್ಕೂಟರ್ ನಿಲ್ಲಿಸಿ, ಬಳಿಯಲ್ಲೇ ಇದ್ದ ಪಾನ್ ಅಂಗಡಿಗೆ ಹೋಗಿ, ಪಾನ್ ಕೊಂಡು, ಬಾಯಿಗೆ ಹಾಕಿಕೊಂಡು, ಕಪೂರ್, ನನಗೆ ವಿದಾಯ ಹೇಳಿ ಹೊರಟು ಹೋದ.

ಒಳಗೆ ಹೋಗಿ, ನನ್ನ ಕೊಠಡಿಯ ಬಾಗಿಲು ತೆರೆದು, ಕುರ್ಚಿಯಲ್ಲಿ ಕುಳಿತೆ. ನನ್ನ ಬರುವನ್ನೇ ಕಾಯುತ್ತಿದ್ದ ವರ್ಮಾ ಓಡಿ ಬಂದ.

"ಎಲ್ಲಿ ಹೋಗಿದ್ದಿರಿ ಸಾಬ್ ಇಷ್ಟು ಹೊತ್ತು?"

"ಯಾಕೆ?"ಅವನ ಧ್ವನಿಯಲ್ಲಿನ ದುಗುಡವನ್ನು ಗುರುತಿಸಿ, ಕೇಳಿದೆ.

"ಖಂಡೇಲ್‌ವಾಲ್‌ನ ಗೋಡೌನ್ ನಾಪತ್ತೆ ಆಗಿಬಿಟ್ಟಿದೆ!"

ಗೋಡನ್ ನಾಪತ್ತೆ? ಗೋಡನ್ ಎಲ್ಲಿ ಓಡಿ ತಪ್ಪಿಸಿಕೊಂಡುಬಿಟ್ಟಿತು?

ಹೊಸ ಪಿಡುಗು ಅಂಟಿಕೊಂಡಿತಲ್ಲಾ! ಮತ್ತೊಂದು ಆತಂಕದ ಗಾಳಿ ಬೀಸ ತೊಡಗಿತ್ತು!

"ಸರಿಯಾಗಿ ಹೇಳಪ್ಪಾ! ಗೋಡನ್ ಎಲ್ಲಿ ಹೋಗುತ್ತದೆ?"

ಬೇಸರದ ಧ್ವನಿಯಲ್ಲಿ ನುಡಿದೆ.

"ಗೋಡನ್ ಬೀಗದ ಕೈ ತೆಗೆದು ಕೊಂಡು, ನಬೀ ಕರೀಮ್‌ನಲ್ಲಿದ್ದ ಖಂಡೇಲ್ ವಾಲ್‌ನ ಗೋಡನ್‌ಗೆ ಸರಕು ಪರೀಕ್ಷೆ ಮಾಡಿಬರೋಣವೆಂದು ನೋಡಲಿಕ್ಕೆ ಹೋಗಿದ್ದೆ. ಬ್ಯಾಂಕ್‌ನ ಬೀಗದ ಬದಲು ಬೇರೆ ಯಾರದೋ ಬೀಗ ಹಾಕಿಬಿಟ್ಟಿದ್ದಾರೆ. ವಿಚಾರಿಸಿದಾಗ, ಇಡೀ ಕಟ್ಟಡವನ್ನು, ಮಾಲಿಕ ಮಾರಿ ಬಿಟ್ಟನಂತೆ. ಮಾರುವ ಮುನ್ನ ಗೋಡನ್ ಬೀಗ ಒಡೆದು, ಸಾಮಾನೆಲ್ಲಾ ಸಾಗಿಸಿಬಿಟ್ಟನಂತೆ!"

ನನ್ನ ಎದೆ ಢಬ ಢಬ ಎಂದು ಹೊಡೆದುಕೊಳ್ಳಲಿಕ್ಕೆ ಶುರುವಾಯಿತು. ಬ್ಯಾಂಕ್ ಬೀಗ ಒಡೆದು ಗೋಡನ್ ಒಳಗಿನ ಸಾಮಾನುಕೊಂಡು, ಒಯ್ಯುವವರೆಗೆ, ಬ್ಯಾಂಕ್ ಮೇನೇಜರ್ ಆದ ನಾನು ಕಣ್ಣು ಮುಚ್ಚಿ ಕುಳಿತುಕೊಳ್ಳುವುದೇ?

"ಗೋಡನ್‌ನ ಮಾಲೀಕ ಯಾರು?"

"ಚಮನ್‌ಲಾಲ್!ಪ್ರಸಿದ್ಧ ವಜ್ರ ವ್ಯಾಪಾರಿ".

"ಖಂಡೇಲ್‌ವಾಲ್‌ಗೆ ಈ ವಿಷಯ ತಿಳಿದಿದೆಯೆ?"

"ಅವನಿಗೆ ತಿಳಿದಿರುವ ಸಾಧ್ಯತೆ ಇಲ್ಲ. ಅವನ ಮೇಲೆ ಕೇಸ್‌ಹಾಕಿದ್ದೇವಲ್ಲಾ!"

ಹೌದು! ಅವನ ಮೇಲೆ ಕೇಸ್ ಹಾಕಿ ಕೂತಿದ್ದೆವು. ಕೇಸ್ ಹಾಕುವ ಮುನ್ನ, ಗೋಡನ್‌ನಲ್ಲಿದ್ದ ಸರಕುಗಳು-ಬಣ್ಣ ಮತ್ತು ಇತರ ರಸಾಯನಿಕ ಪದಾರ್ಥಗಳು ಹಾಳಾಗಿಹೋಗಿದ್ದರಿಂದ, ಅವಕ್ಕೆ ಬೆಲೆ ಕಡಿಮೆಯಾಗಿ ಕೊಳ್ಳುವವರಿರಲಿಲ್ಲ. ಬ್ಯಾಂಕ್‌ನ ಕೇಂದ್ರ ಕಛೇರಿಯವರು, ಸರಕು ಮಾರುವುದರಲ್ಲಿ ವಿಳಂಬ ತೋರಿದ್ದಕ್ಕೆ ಕುಪಿತಗೊಂಡು, ಶಾಖೆಯ ಅಧಿಕಾರಿಗಳ ಮೇಲೆ ಶಿಸ್ತಿನ ಕ್ರಮ ಜರುಗಿಸುವುದಾಗಿ ಹೆದರಿಸಿದ್ದರು. ಶಿಸ್ತಿನ ಕ್ರಮ ತೆಗೆದುಕೊಂಡರೆ, ಹಿಂದಿನ ಮೇನೇಜರ್ ಮತ್ತು ಇತರ ಅಧಿಕಾರಿಗಳ ತಲೆ ಉರುಳುವ ಸಂಭವವಿದ್ದರಿಂದ, ನಾನು ಕೇಸ್ ಹಾಕಿ, ಆದಷ್ಟು ಬೇಗ ಹಣ ವಸೂಲು ಮಾಡುವ ಕ್ರಮ ಕೈಗೊಂಡಿದ್ದೆ. ಈ ಸಮಯದಲ್ಲೇ ಚಮನ್ ಲಾಲ್ ನನ್ನ ಮೇಲೆ ಬಾಂಬ್ ದಾಳಿ ಮಾಡಿದ್ದ.

ಚಮನ್‌ಲಾಲ್‌ನ ಮನೆ ಹುಡುಕಿಕೊಂಡು ಹೊರಟೆ ನಾನು ಮತ್ತು ವರ್ಮಾ. ದಿಲ್ಲೀ ವಿಶ್ವವಿದ್ಯಾಲಯದ ಬಳಿ ಇದ್ದ, ಅವನ ಮನೆಗೆ ಬಂದಾಗ, ಅವನು ಮನೆಯೊಳಗೆ ಇದ್ದ. ವಿಶಾಲ ಕಾಂಪೌಂಡ್ ಹೊಂದ್ದಿದ್ದ ಅವನ ಮನೆ ಹೊರಗಿನಿಂದ ಅಷ್ಟೇನೂ ದೊಡ್ಡದಾಗಿ ಕಾಣಬರಲಿಲ್ಲ. ಒಳಗೆ ಹೋದರೆ, ಅದೊಂದು ಮಹಲ್ ಆಗಿತ್ತು. ವಜ್ರದ ಖ್ಯಾತ ವ್ಯಾಪಾರಿ ಅಂದ ಮೇಲೆ ಆತ ಆಗರ್ಭ ಶ್ರೀಮಂತ. ಚಾಂದನೀ ಚೌಕ್ ದಾರೀಬಾ ಕಲಾನ್‌ನಲ್ಲಿದೊಡ್ಡ ಚಿನ್ನ, ಬೆಳ್ಳಿ, ವಜ್ರದ ಮಳಿಗೆ ಇದೆ. ಕೋಟ್ಯಾಂತರ ರೂಪಾಯಿಗಳ ವಹಿವಾಟು.

ಅವನ ನೌಕರ ನಮ್ಮನ್ನು ಡ್ರಾಯಿಂಗ್ ಹಾಲ್‌ನಲ್ಲಿ ಕೂಡಿಸಿದ. ಸುಮಾರು ಮೂವತ್ತು ಅಡಿ ಉದ್ದ, ಅಷ್ಟೇ ಅಗಲದ ಈ ಹಾಲ್ ಒಂದು ವಸ್ತುಪ್ರದರ್ಶನ ವಾಗಿತ್ತು. ಹಲವಾರು ಸೋಫಾಗಳು, ವಿವಿಧ ಶೈಲಿಯ, ಚಿತ್ರ ವಿಚಿತ್ರ ಕಸೂತಿಕಲೆಯ ಕುರ್ಚಿ ಮೇಜುಗಳು ಇರಿಸಿದ್ದರು. ನಾಲ್ಕೂ ಗೋಡೆಗಳಲ್ಲಿ ಗಾಜಿನ ಬಾಗಿಲುಗಳನ್ನು ಹೊಂದಿದ ದೊಡ್ಡ ದೊಡ್ಡ ಶೋಕೇಸ್‌ಗಳು. ಎದ್ದು ಹೋಗಿ ಶೋಕೇಸ್‌ಗಳಲ್ಲಿ ಇರಿಸಿದ್ದ ಸಾಮಾನುಗಳನ್ನು ವೀಕ್ಷಿಸತೊಡಗಿದೆ. ಪಿಂಗಾಣಿ, ಗಾಜು, ಕಟ್‌ಗ್ಲಾಸ್ ಗಳಿಂದ ನಿರ್ಮಿಸಿದ ತರಹಾವಾರಿ ಆಟಿಕೆಗಳು, ಮೂರ್ತಿಗಳು, ದೇವ ದೇವತೆಯರ ಮೂರ್ತಿಗಳು ನಯನ ಮನೋಹರವಾಗಿದ್ದವು. ಯೂರೋಪ್ ಖಂಡದ ವಿವಿಧ ದೇಶದ ಹಲವಾರು ಪಿಂಗಾಣಿ ಮತ್ತು ಕಟ್‌ಗ್ಲಾಸ್‌ನಿಂದ ಮಾಡಿದ ಸ್ತ್ರೀ ವಿಗ್ರಹಗಳು,

ಅತ್ಯಂತ ಸುಂದರ ಮೂರ್ತಿಗಳು. ಇನ್ನೊಂದು ಕಡೆ, ಕಲ್ಲಿನಲ್ಲಿ ರೂಪುಗೊಂಡ ಮನೋಹರವಾದ ದೇವ ದೇವತೆಯರ ಪುಟ್ಟ ಪುಟ್ಟ ವಿಗ್ರಹಗಳು. ಹಲವಾರು ಶೈಲಿಯ ಗಾಜಿನ ಬಾಟ್ಲಿಗಳು, ಲೋಟಗಳು, ನೂರಾರು ಕಣ್ಣಿಗೆ ಕಂಡವು. ಚಮನ್‌ಲಾಲ್‌ನ ಉತ್ತಮ ಅಭಿರುಚಿಯನ್ನು ಮೆಚ್ಚಿಕೊಂಡೆ. ಹಣ ಸಂಪಾದಿಸುವುದರ ಜೊತೆಗೆ ಉತ್ತಮ ಅಭಿರುಚಿಯನ್ನು ಸಂಪಾದಿಸಿದ್ದ ಈ ಚಮನ್‌ಲಾಲ್‌ನನ್ನು ಭೇಟಿಯಾಗಲು ಮನಸ್ಸು ಹಾತೊರೆಯಿತು.

'ಒಳಗೆ ಬನ್ನಿ' ಎಂದು ನೌಕರ, ಒಳಗೆ ಕರೆದ.

ಒಳಕೋಣೆಯೊಳಗೆ ಕರೆದು ತಾನು ಹೊರಗೆ ಹೋದ ನೌಕರ. ಒಳಕೋಣೆ ಚಿಕ್ಕದಾದರೂ, ಸುಂದರವಾಗಿತ್ತು.

ಕುರ್ಚಿಯ ಮೇಲೆ ಕುಳಿತಿದ್ದ ಚಮನ್‌ಲಾಲ್ ನಮ್ಮನ್ನು ಬರಮಾಡಿಕೊಂಡ. ಈ ಕೋಣೆ, ಅವನ ಆಫೀಸ್ ಕೋಣೆ ಎಂದು ನಮಗೆ ಮನವರಿಕೆಯಾಯಿತು.

"ಏನು ಬೇಕು? ಚಂದಾ ಎತ್ತಲಿಕ್ಕೆ ಬಂದಿದ್ದೀರಾ?"

ಚಮನ್‌ಲಾಲ್‌ನ ಪ್ರಶ್ನೆ ನಮ್ಮನ್ನು ಗಲಿಬಿಲಿ ಎಬ್ಬಿಸುವಂತೆ ಮಾಡಿತು.

"ಚಂದಾ? ಯಾವ ಚಂದಾ?" ಕೇಳಿದೆ ನಾನು.

"ಮತ್ತೆ ಏಕೆ ಬಂದಿದ್ದೀರಾ?"

ಅವನಿಗೂ ಗಲಿಬಿಲಿಯಾಗಿರಬೇಕು ನನ್ನ ಗಿಲಿಬಿಲಿಯ ಪ್ರಶ್ನೆಯಿಂದ.

"ನಾನು ಬ್ಯಾಂಕ್ ಮೇನೇಜರ್. ಇವರು ನನ್ನ ಅಕೌಂಟೆಂಟ್. ನಮ್ಮ ಕಸ್ಟಮರ್ ಖಂಡಲ್‌ವಾಲ್‌ನ ಗೋಡನ್‌ನ ಮಾಲೀಕರು ತಾವು. ಆ ಗೋಡನ್ ನಲ್ಲಿದ್ದ ಸಾಮಾನಿನ ಮೇಲೆ ನಾವು ಸಾಲ ಕೊಟ್ಟಿದ್ದೇವೆ. ಈಗ ನಮಗೆ ತಿಳಿದ ವಿಷಯ ವೆಂದರೆ, ತಾವು ಆ ಗೋಡನ್ ಇದ್ದ ಕಟ್ಟಡವನ್ನು ಮಾರಿಬಿಟ್ಟರಂತೆ. ಗೋಡನ್‌ನ ಬೀಗ ಒಡೆದು ಸಾಮಾನು ಸಾಗಿಸಿಬಿಟ್ಟಿದ್ದೀರಂತೆ!"

"ಬ್ಯಾಂಕ್ ಮೇನೇಜರ್?......ಇಷ್ಟು ದಿನ ಎಲ್ಲಿ ಹೋಗಿದ್ದಿರಿ ನೀವು? ಆರು ತಿಂಗಳ ಹಿಂದೆ ನೋಟೀಸ್ ಕೊಟ್ಟಿದ್ದನಲ್ಲಾ! ಆಗ ಯಾಕೆ ಬರಲಿಲ್ಲ? ಆ ಬದ್ಮಾಷ್ ಖಂಡೇಲ್‌ವಾಲ್ ಮೂರು ವರ್ಷದಿಂದ ಬಾಡಿಗೆ ಕೊಡಲಿಲ್ಲ. ನಾನು ಏನು ಮಾಡಲೀ? ಅವನು ಸಾಲ ತೆಗೆದುಕೊಂಡಾಕ್ಷಣ, ನಾನು ನನ್ನ ಕಟ್ಟಡ ಮಾರದೇ ಇರಲಿಕ್ಕೆ ಆಗುತ್ತದೆಯೊ?"

ಅರಳು ಹುರಿದ ಹಾಗೆ ಪಟ ಪಟನೆ ಮಾತನಾಡಿದ ಚಮನ್‌ಲಾಲ್. ಬೆಳ್ಳಗೆ, ದಪ್ಪಗಿನ ಬನಿಯಾ ಚಮನ್‌ಲಾಲ್, ಹೆಚ್ಚು ವಯಸ್ಸಾಗಿಲ್ಲದ ಕಾರಣ, ಅವನ ಧ್ವನಿಯೂ ಚುರುಕಾಗಿತ್ತು.

"ಏನಾದರೂ ಬೀಗ ಒಡೆದಿದ್ದು ತಪ್ಪಾಗಲಿಲ್ಲವೇ?"

ಅಳುಕುತ್ತಾ ಕೇಳಿದೆ. ಎಷ್ಟಾದರೂ ಈ ಚಮನ್‌ಲಾಲ್ ವಜ್ರ ಮಾಣಿಕ್ಯಲಾಲ್ ಅಲ್ಲವೇ? ಕೊಳೆತು ನಾರುತ್ತಿರುವಷ್ಟು ಹಣವಿರುವ ಈ ಐಶ್ವರ್ಯಲಾಲ್, ಕೋಪ ಗೊಂಡರೆ ನನ್ನನ್ನು ಉಪ್ಪು ನೀರಿಗೆ ಎಸೆದು ನನ್ನ ದೇಹ ಕೊಳೆತು ನಾರುವಂತ ಮಾಡಿಯಾನು!

"ಕಟ್ಟಡ, ಗೋಡನ್ ನನ್ನದು. ಬೀಗ ನಿಮ್ಮದು. ಒಳಗಿನ ಸಾಮಾನು ಆ ಬದ್ಮಾಶ್‌ನದು! ಬೀಗ, ಸಾಮಾನು ನಿಮ್ಮದಾದರೆ, ಕಟ್ಟಡ, ಗೋಡನ್ ನಿಮ್ಮ ದಾಯಿತೆ? ನನಗೆ ನನ್ನ ಸ್ವತ್ತು ಮಾರಲಿಕ್ಕೆ ಹಕ್ಕು ಇಲ್ಲವೇ?"

ಬಿಳೀ ಮುಖ ಕೆಂಪಾಗಿತ್ತು, ಉಸಿರು ಬಿಗಿಹಿಡಿದು ಮಾತನಾಡುತ್ತಿದ್ದ ಚಮನ್‌ಲಾಲ್.

ತಪ್ಪು ನಮ್ಮದಾಗಿತ್ತು. ನೋಟೀಸ್ ಕೊಟ್ಟ ಮೇಲೆ, ಸಾಮಾನು ಬೇರ ಗೋಡನ್‌ಗೆ ಸಾಗಿಸಬೇಕಾಗಿತ್ತು. ಇನ್ನು ಚರ್ಚೆ ಮಾಡಿ ಪ್ರಯೋಜನವಿಲ್ಲ ವೆಂದೆನಿಸಿತು. ಸಾಮಾನಾದರೂ ಎಲ್ಲಿ ಇಟ್ಟಿದ್ದಾನೋ ಮಹಾರಾಯ?

"ಡ್ರಾಯಿಂಗ್ ಹಾಲ್‌ನಲ್ಲಿಟ್ಟಿರುವ ಕೆಲವು ಕಲಾಕೃತಿಗಳು ಬಹಳ ಚೆನ್ನಾಗಿವೆ. ನಿಮ್ಮ ಅಭಿರುಚಿ ಚೆನ್ನಾಗಿದೆ" ಹೊಗಳಿದ ನಾನು. ಅವನ ಮುಖದ ಗಂಟು ಸ್ವಲ್ಪ ಸಡಿಲಾಯಿತು.

"ಅವೆಲ್ಲಾ ನಾನು ಯೂರೋಪಿಗೆ ಹೋದಾಗ ಕೊಂಡಿದ್ದು. ತಿಂಗಳಿಗೊಮ್ಮೆ ಯೂರೋಪಿಗೆ ಹೋಗುತ್ತೇನೆ. ಕಣ್ಣಿಗೆ ಕಂಡಿದ್ದು, ಮನಸ್ಸಿಗೆ ಆನಂದ ತಂದಿದ್ದ ಕೃತಿಗಳನ್ನು ಕೊಂಡು, ಒಟ್ಟು ಹಾಕುವ ಹವ್ಯಾಸ ನನಗೆ. ಲಕ್ಷಾಂತರ ರೂಪಾಯಿ ಹಾಳು ಮಾಡಿದ್ದೇನೆ ಇದಕ್ಕೋಸ್ಕರ. ನನ್ನ ಪುಟ್ಟತೋಟ ನೋಡಿದ್ದೀರೇನು? ಬನ್ನಿ ತೋರಿಸುತ್ತೇನೆ!"

ಅವನ ಮುಖದ ಗಂಟು ಸಂಪೂರ್ಣ ಸಡಿಲಾಗಿ, ಹರ್ಷವದನನಾಗಿದ್ದ.

ಹೊರಗೆ ಬಂದು, ಮನೆಯ ಹಿಂಭಾಗಕ್ಕೆ ಕರೆದುಕೊಂಡು ಹೋದ. ಅಲ್ಲಿ ಒಂದು ಸಣ್ಣ ಬಾಗಿಲು ತೆರೆದ. ಒಳಗೆ ಹೋದರೆ, ಹಚ್ಚ ಹಸಿರು ಹುಲ್ಲಿನ ಹಾಸಿನ ನೆಲ ಕಾಣಿಸಿತು. ಸುಮಾರು ಕಾಲು ಎಕರೆ ವಿಸ್ತೀರ್ಣದ ಹುಲ್ಲುಗಾವಲು. ಕಣ್ಣಿಗೆ ಹಬ್ಬವನ್ನುಂಟು ಮಾಡಿತು ಆ ನೋಟ. ಹುಲ್ಲು ಹಾಸಿಗೆಯ ಮಗ್ಗುಲಲ್ಲೇ ಪುಟ್ಟ ಕಾಲು ಹಾದಿಯಲ್ಲಿ ನಮ್ಮನ್ನ ಕರೆದು, ಮುಂದೆ ಸಾಗಿದ ಚಮನ್‌ಲಾಲ್. ಅಲ್ಲೇ, ಅನತಿ ದೂರದಲ್ಲೇ, ಪುಟ್ಟ ಹೂದೋಟ ಕಾಣಿಸಿತು. ಗುಲಾಬಿ, ದಾಸವಾಳ, ಡೇರಾ ಮತ್ತು ನಂಜಬಟ್ಟಲ ಹೂಗಿಡಗಳ ಗುಂಪು ತಲೆ ಎತ್ತಿ ನಿಂತಿದ್ದವು. ದಿಲ್ಲೀಯಲ್ಲಿ

ಇಷ್ಟು ಬಗೆಯ ಹೂಗಿಡಗಳ ಸಂಪತ್ತು ಕಂಡದ್ದು ಅಪರೂಪವಾಗಿತ್ತು. ಹಣಕಾಸಿನ ಸಂಪತ್ತಿನ ಜೊತೆಗೆ, ಸಸ್ಯಶ್ಯಾಮಲ ಸಂಪತ್ತು ಹೊಂದಿರುವ ಈ ಚಮನ್‌ಲಾಲ್‌ನ ಅಭಿರುಚಿ ನನಗೂ ರುಚಿಸಿತು.

"ಇಲ್ಲಿ ನೋಡಿ, ಈ ಮಾವಿನ ಹಣ್ಣು! ಪುಟ್ಟ ಮಾವಿನ ಗಿಡದಲ್ಲಿ ಒಂದೇ ಒಂದು ಮಾವಿನ ಹಣ್ಣು!"

ಬಹಳ ಉತ್ಸಾಹದಿಂದ, ಎರಡೇ ಅಡಿ ಎತ್ತರದ ಕುಳ್ಳ ಮಾವಿನ ಮರದ ಬಳಿ ನಿಂತು, ಅದರಲ್ಲಿ ಒಂದು ಸಣ್ಣ ಕೊಂಬೆಯಲ್ಲಿ ನೇತಾಡುತ್ತಿದ್ದ ಒಂದು ಸಾಮಾನ್ಯ ಗಾತ್ರದ ಮಾವಿನ ಹಣ್ಣನ್ನು ತನ್ನ ಕೈ ಬೆರಳಿಂದ ನೇವರಿಸುತ್ತಾ ಹೇಳುತ್ತಿದ್ದ ಚಮನ್ ಲಾಲ್.

ಇಷ್ಟು ಪುಟ್ಟ ಗಿಡದಲ್ಲಿ ಒಂದೇ ಒಂದು ಹಣ್ಣು!ಇದು ಯಾವ ಜಾತಿಯ ಮಾವಿನ ಮರ? ಜಪಾನೀ ಬಾನ್‌ಸೋಯ್ ಮಾದರಿಯ ಕುಳ್ಳ ಗಿಡದ ತಳಿಯೊ?

"ಈ ಗಿಡ ಬೆಳಸಲಿಕ್ಕೆ ಸಾವಿರಾರು ರೂಪಾಯ ಖರ್ಚು ಮಾಡಿದೆ. ಬೆಳೆಸುವುದು ತುಂಬಾ ಕಷ್ಟವಾಯಿತು!"

ಒಂದೇ ಒಂದು ಮಾವಿನ ಹಣ್ಣು ಫಲ ಕೊಡುವ ಗಿಡ ಬೆಳೆಸಲಿಕ್ಕೆ ಸಾವಿರಾರು ರೂಪಾಯಿ ಖರ್ಚು ಮಾಡುವ ವಜ್ರ ವ್ಯಾಪಾರೀ!

"ನಿಮ್ಮ ಖಂಡೇಲ್‌ವಾಲ್‌ನ ಸರಕುಗಳನ್ನು ನನ್ನದೇ ಇನ್ನೊಂದು ಗೋಡನ್ ನಲ್ಲಿ ಇರಿಸಿದ್ದೇನೆ, ಭದ್ರವಾಗಿ ನಿಮ್ಮ ಬ್ಯಾಂಕ್‌ನ ಬೀಗ ಹಾಕಿ ಅದಕ್ಕೆ. ಹಾಕಿ ಭದ್ರ ಮಾಡಿಕೊಳ್ಳಿ.. ಹಾಂ.ಗೋಡನ್‌ನ ಬಾಡಿಗೆ ತಿಂಗಳಿಗೆ ಐನೂರು ರೂಪಾಯ".

ವಜ್ರ ವ್ಯಾಪಾರೀಗೆ ವಿದಾಯ ಹೇಳಿ ಹೊರಗೆ ಬಂದೆವು. ಶಾಖೆಗೆ ಬರುವ ತನಕ, ನನ್ನ ಮನಸ್ಸಿನಲ್ಲಿ ಆ ಒಂಟಿ ಮಾವಿನ ಹಣ್ಣಿನ ಮರದ ಬಗ್ಗೆ ಚಿಂತನೆ ಮಾಡಿ ಬೇಸತ್ತೆ. ಸಾವಿರಾರು ರೂಪಾಯಿ ಖರ್ಚು ಮಾಡುವ ಬದಲು, ಸಾವಿರಾರು ಮಾವಿನ ಹಣ್ಣುಗಳನ್ನುಕೊಂಡು, ಬಡ ಬಗ್ಗರಿಗೆ ಹಂಚಬಹುದಲ್ಲವೇ? ದಿಲ್ಲಿಯ ಐಶ್ವರ್ಯವಂತರೆಲ್ಲರೂ ಒಂದಾದರೆ, ದಿಲ್ಲೀ ಮೇಲೆ ದಂಡಯಾತ್ರೆ ಮಾಡುತ್ತಿರುವ ಬಡತನವೆಂಬ ವೈರಿಯನ್ನು ಹೊಡೆದು ಓಡಿಸಬಹುದಲ್ಲವೇ? ಆದರೆ, 'ಒಗ್ಗಟ್ಟು' ಎನ್ನುವ ಪದವೇ ನಮ್ಮ ಅರ್ಥಕೋಶದಲ್ಲಿ ಇಲ್ಲದಿರುವಾಗ, ಆ ಪದದ ಅರ್ಥವೇ ನಮ್ಮ ಜನಕ್ಕೆ ತಿಳಿದಿಲ್ಲದಿರುವಾಗ, ನಾವು ಬಡತನದ ವಿರುದ್ಧ ಗೆಲುವುದಾದರೂ ಹೇಗೆ ಸಾಧ್ಯ? ಉತ್ತರ ಭಾರತದ ರಾಜ ಮಹಾರಾಜರೆಲ್ಲರೂ ಒಗ್ಗಟ್ಟಾಗಿ ಹೋರಾಡಿದ್ದರೆ, ಘಸ್ನೀ, ಘೋರಿ, ಮೊಹಮದರ ದಂಡಯಾತ್ರೆಗಳನ್ನು ಹಿಮ್ಮೆಟ್ಟಿಸ ಬಹುದಾಗಿತ್ತಲ್ಲವೇ?ರಾಜಕಾರಣಿಗಳೆಲ್ಲಾ ಒಗ್ಗಟ್ಟಾದರೆ, ಹಸಿವಿನ ದವಡೆಯಲ್ಲಿ ಸಿಕ್ಕಿ ನರಳು

ತ್ತಿರುವ ಬಡಜನತೆಯನ್ನು ಕಾಪಾಡಬಹುದಲ್ಲವೇ? ರಾಜಕಾರಣಿಗಳು ಒಗ್ಗಟ್ಟಾಗುವುದು, ಎರಡು ಹೆಂಗಳೆಯರು ಒಗ್ಗಟ್ಟಾಗುವುದು, ಹಾವು ಮುಂಗುಸಿ ಒಗ್ಗಟ್ಟಾಗಿ ಬಾಳುವುದು ಅಸಾಧ್ಯವೇ ಸರಿ.

"ಮೂರನೆಯ ಕ್ಯಾಶಿಯರ್ ನಮ್ಮ ಯೂನಿಯನ್‌ನವರಿಗೆ ಕೊಡಬೇಕು."

ಶಾಖೆಗೆ ಬಂದ ಕೂಡಲೇ, ಯೂನಿಯನ್ ಮುಖ್ಯಸ್ಥ ಸಿಂಗ್ ನನ್ನ ಬಳಿ ಬಂದು ನಿವೇದಿಸಿಕೊಂಡ. ಅವನ ಹಿಂದೆಯೇ ಬಂದ ಕಶ್ಮೀರೀ ನಾಯಕ್, 'ನಮ್ಮ ಯೂನಿಯನ್‌ಗೆ ಸೇರಿದ ಕ್ಲರ್ಕ್‌ಗೆ ಮೂರನೆಯ ಕ್ಯಾಶಿಯರ್ ಹುದ್ದೆ ಕೊಡಬೇಕು!"

ನಮ್ಮ ಶಾಖೆಯಲ್ಲಿ ಮೂರು ಕ್ಯಾಶ್ ಕೌಂಟರ್‌ಗಳಿದ್ದವು. ಎರಡು ಕೌಂಟರ್‌ಗಳಿಗೆ, ಎರಡು ಯೂನಿಯನ್‌ಗೆ ಸೇರಿದ ಕ್ಲರ್ಕ್‌ಗಳನ್ನು ಕೂರಿಸಿದ್ದೆವು ಮೂರನೆಯ ಕ್ಯಾಶ್ ಕೌಂಟರ್‌ಗೆ, ಯಾವ ಯೂನಿಯನ್‌ಗೆ ಸೇರಿದ್ದ ಕ್ಲರ್ಕ್‌ನ್ನು ಕೂರಿಸಬೇಕೆಂಬ ವಿಷಯದಲ್ಲಿ ಸಮಸ್ಯೆ ಹುಟ್ಟಿಕೊಂಡಿತ್ತು. ಕ್ಯಾಷಿಯರ್ ಕೆಲಸಕ್ಕೆ ಸಂಬಳ ಜಾಸ್ತಿಯಷ್ಟೇ! ಈ ಸಮಸ್ಯೆ ನನಗೆ ಬೇಡವಾಗಿತ್ತು.

"ಈ ಸಮಸ್ಯೆಯನ್ನು ನೀವೇ ಬಗೆಹರಿಸಿಕೊಳ್ಳಿರಿ. ನಿಮ್ಮಿಂದ ಆಗದಿದ್ದ ಪಕ್ಷದಲ್ಲಿ, ನನಗೆ ಇಷ್ಟ ಬಂದ ಪ್ರಕಾರ, ನಾನು ಮಾಡುತ್ತೇನೆ!" ಎಂದೆ.

ಅವರು ದಿನವಹೀ, ತಮ್ಮ ಕೆಲಸ ಮಾಡದೆ, ಈ ಸಮಸ್ಯೆಯನ್ನು ಬಗೆಹರಿಸಲು, ಮಾತುಕತೆಗೆ ಶುರು ಮಾಡಿದರು. ಇಂಡಿಯ-ಪಾಕಿಸ್ಥಾನ :ಕಾಶ್ಮೀರ ಸಮಸ್ಯೆ ಪರಿಹಾರ ಕಂಡುಕೊಳ್ಳುವ ಉಪಾಯದ ತರಹ, ಬಹಳ ಗಂಭೀರದಿಂದ ಚರ್ಚಿಸ ತೊಡಗಿದ್ದರು. ಸುಮಾರು ಗಂಟೆ ಚರ್ಚಿಸಿದ ನಂತರ, ಸಾಯಂಕಾಲ ಆರು ಗಂಟೆ ಆದನಂತರ, ಚರ್ಚೆ ಮೂರನೆಯದಿನ ಶಾಖೆಯಲ್ಲಿ ಮುಂದುವರೆಸುವುದಾಗಿ ಹೇಳಿಕೆ ಇತ್ತರು.

"ಆಗುವುದಿಲ್ಲ!" ಎಂದೆ, 'ಇಂದೇ ಮುಗಿಯ ಬೇಕು. ನಾಳೆ ನಾನು ಇತ್ಯರ್ಥ ತೆಗೆದುಕೊಳ್ಳುತ್ತೇನೆ".

ಅವರು ಪುನಃ ಚರ್ಚೆಗೆ ಕುಳಿತರು. ರಾತ್ರಿ ೯ಗಂಟೆಯವರೆಗೆ ಘನಘೋರ ಚರ್ಚೆ ನಡೆದು,'ಮಾತುಕತೆ ವಿಫಲಗೊಂಡಿತು'ಎಂದು ಹೇಳಿಕೆ ಇತ್ತು ಹೊರಟು ಹೋದರು.

ಒಂದೇ ಶಾಖೆಯಲ್ಲಿ ನೌಕರಿ ಮಾಡುತ್ತಿರುವ ನೌಕರರಲ್ಲಿ ಒಗ್ಗಟ್ಟಿಲ್ಲವೆಂದ ಮೇಲೆ, ದೇಶದ ರಾಜಕಾರಣಿಗಳಿಂದ ಹೇಗೆ ಬಯಸಬೇಕು ಒಗ್ಗಟ್ಟನ್ನು? ಜನತೆಗೆ ಹಿತವನ್ನು ಬಯಸುವುದರಲ್ಲಿ ಒಗ್ಗಟ್ಟಿಲ್ಲದ ಮೇಲೆ, ಬೇರೆ ಯಾವ ಕಾರಣ ಕ್ಷೇತ್ರಗಳಲ್ಲಿ ಒಗ್ಗಟ್ಟು ಕಂಡುಬರಲು ಸಾಧ್ಯ?

ಶಾಖೆಯ ಬಾಗಿಲು ಮುಚ್ಚಿ ಮನೆಗೆ ಬಂದೆ. ಬೆಳಗಿನಿಂದ ಊರು ಸುತ್ತಿ ಸುತ್ತಿ, ಮೈಮನ ಬಳಲಿತ್ತು. ಹಾಸಿಗೆಯ ಮೇಲೆ ಉರುಳಿದೊಡನೆಯೆ ನಿದ್ರೆ ಓಡಿಬಂತು.

ಓಡಿ ಬಂದ ನಿದ್ರೆ, ಬೆಳಗಿನ ಜಾವದಲ್ಲಿ ಓಡಿಯೋ ಹೋಯಿತು! ಹಿಂದಿನ ದಿನದ ಘಟನೆಗಳ ನೆನಪು ಸುರುಳಿ ಸರುಳಿಯಾಗಿ ಬಿಚ್ಚತೊಡಗಿತು. ಕಪೂರ್‌ನ ನಡತೆ, ಅವನ ಮನಸ್ಸು, ಅವನ ನುಡಿಗಳು ಮತ್ತೆ ಮತ್ತೆ ಮರುಕಳಿಸಿದವು.

"ಕಮಲಳಿಗಾಗಿ ಕಾಯುತ್ತೇನೆ!" ಅವನ ಮಾತುಗಳು ನನ್ನ ಕಿವಿಯಲ್ಲಿ ಪ್ರತಿಧ್ವನಿಸಿದವು. ಪ್ರೇಯಸಿಗಾಗಿ ಕಾಯುವುದು, ಅವಳ ಅಗಲಿಕೆಗಾಗಿ ನರಳುವುದು ಪ್ರೀತಿಸಿದ್ದಕ್ಕೆ ಶುಲ್ಕ! ಕಪೂರ್ ಕೂಡ ಈ ಶುಲ್ಕ ತೆತ್ತು ಕೂತಿದ್ದಾನೆಯೊ? ಪ್ರೇಮ-ಪ್ರೀತಿ ಎಂದ ಮೇಲೆ, ನೋವು ಕಾವು ಇದ್ದೇ ಇರಬೇಕು. ಮದ್ರಾಸ್‌ಗೆ ತಂದೆ ತಾಯಿಯ ಜೊತೆ ವಲಸೆ ಹೋದ ತಮಿಳು ಕುಮಾರಿ ನಿಜವಾಗಿ ಕಪೂರ್‌ನನ್ನು ಪ್ರೀತಿಸಿದ್ದಳೆ?

ಒಂದು ವೇಳೆ ಪ್ರೀತಿಸಿದ್ದರೂ, ತನ್ನ ಪ್ರೀತಿ ತಮಿಳುನಾಡಿನತ್ತ ಹರಿಸಿದಳೇಕೆ? ನಾಡು, ನುಡಿ, ತಂದೆ-ತಾಯಿಗಳ ಮೇಲಿನ ಪ್ರೀತಿ, ತನ್ನ ಪ್ರಿಯತಮನ ಬಗ್ಗೆ ಇರುವ ಪ್ರೀತಿಗಿಂತ ಹೆಚ್ಚಾಯಿತೆ? ಅಗಲಿಕೆ ಪ್ರೇಮವನ್ನು ಗಾಢವಾಗಿ ಆಲಂಗಿಸುವುದಂತೆ! ಕಮಲ, ಉದ್ದೇಶಪೂರ್ವಕವಾಗಿ ಕಪೂರ್‌ನನ್ನು ಅಗಲಿ ದೂರ ಹೋಗಿದ್ದು, ಅವನ ಮೇಲಿನ ಪ್ರೇಮದ ಬಲವನ್ನು ಪರೀಕ್ಷಿಸುವ ಸಲುವಾಗಿ ಇರಬಹುದೇ? ಆದರೆ ಪ್ರೇಮ, ದಿಟವಾಗಲೂ ಘರ್ಷಣೆಗೆ ಎಡೆಕೊಡುವುದಿಲ್ಲ; ಅದು ಚೈತನ್ಯದಾಯಕವೂ ಹೌದಲ್ಲವೇ? ಯಾಕೆಂದರೆ ಅದು ಮನುಷ್ಯನ ಅತಿ ಮುಖ್ಯವಾದ ಅವಶ್ಯಕತೆಯನ್ನು ಪ್ರತಿಬಿಂಬಿಸುತ್ತದೆ: ಆಪ್ತತೆ ಮತ್ತು ಸ್ವಾತಂತ್ರ್ಯ! ಕಮಲ ಕುಮಾರಿ, ಕಪೂರ್‌ನೊಂದಿಗೆ ಆಪ್ತಳಾಗಿದ್ದು, ತನ್ನ ಸ್ವಾತಂತ್ರ್ಯವನ್ನು ಇರಿಸಿಕೊಳ್ಳುವ ಯತ್ನದಲ್ಲಿದ್ದಾಳೆಯೊ? ಶಾಶ್ವತ, ಸ್ಥಿರ ಪ್ರೇಮ ಒಂದು ಪ್ರೇಮಕಥೆಯಾಗುತ್ತದೆಯಂತೆ? ಮದುವೆ ಪ್ರೇಮದ ಪಾಲುಗಾರಿಕೆಯ ಕಥೆಯಂತೆ! ಈ ಪಾಲುಗಾರಿಕೆಯಲ್ಲಿ, ಹುಟ್ಟುವ ಮಕ್ಕಳಿಗೂ ಪಾಲು ಸಿಕ್ಕುವುದಂತೆ! ಬರೀ ಮಕ್ಕಳಿಗೆ ಯಾಕೆ, ಅಣ್ಣ, ತಮ್ಮ, ಅಕ್ಕ, ತಂಗಿ, ಅವರ ಮಕ್ಕಳು ಈ ಕಥೆಯ ಪಾಲುಗಾರಿಕೆಯಲ್ಲಿ ಪಾಲುಗೊಳ್ಳುವವರಂತೆ. ಇದೇ ರೀತಿ, ನಿರಂತರ ವಾಗಿ, ಈ ಪಾಲುಗಾರಿಕೆಯ ಕಥೆ ಮುಂದುವರೆಯುವುದಂತೆ! ಕಪೂರ್, ಕಮಲರ ಪ್ರೇಮದ ಕಥೆ, ವಿವಾಹದ ಪಾಲುಗಾರಿಕೆಯ ಕಥೆಯಲ್ಲಿ ಮುಕ್ತಾಯಗೊಳ್ಳುವುದೇ?

ಛೆ! ಛೆ !ಮುಕ್ತಾಯವಲ್ಲ! ಪಾಲುಗಾರಿಕೆ, ಅವರ ಮಕ್ಕಳ, ಮೊಮ್ಮಕ್ಕಳಿಗೆ ದೊರೆಯಬೇಕಷ್ಟೆ!

ಕಾಗೆಯೊಂದು ಎದ್ದು, 'ಕಾಕಾ' ಎಂದು ಕಿರಿಚಿ, ಬೆಳಗಾಗುತ್ತದೆ ಎಂದು ಸಾರಿತು. ರಾಜೇಂದ್ರನಗರವನ್ನು ಎರಡು ಬದಿಯಿಂದ ಆಲಂಗಿಸಿಕೊಂಡಿದ್ದ, ಶಂಕರ

ರಸ್ತೆ ಮತ್ತು ಪೂಸಾ ರಸ್ತೆಗಳಿಗೆ ಜೀವ ಬಂದು, ಬಡ ಬಡ ಎಂದು ಶಬ್ದಮಾಡಿ, ವಾಹನಗಳ ಓಡಾಟ ಶುರುವಾಗಿದ್ದುದರಿಂದ ಶಬ್ದಗಳ ಭರಾಟೆಯಿಂದ ತಪ್ಪಿಸಿ ಕೊಳ್ಳಲು, ಮಲಗಿರುವ ಬದಲು, ಎದ್ದು ಪ್ರಾತಃವಿಧಿಗಳನ್ನು ಪೂರೈಸುವುದೇ ಮೇಲು ಎಂದು ಬಗೆದು, ಹೊದ್ದಿದ್ದ ರಜಾಯಿಯನ್ನು ಸರಿಸಿ, ಮೇಲಕ್ಕೆದ್ದೆ. ಸಾವಿರ ಸೂಜಿಗಳಿಂದ ಮೈಮುಖಗಳಿಗೆ ಚುಚ್ಚಿಸಿಕೊಂಡ ಅನುಭವವಾಗಿ, ಡಿಸೆಂಬರ್ ಚಳಿಯೂ ತನ್ನ ಇರುವಿಕೆಯನ್ನು ತನ್ನ ಸಹಜ ಗುರುತುಗಳಿಂದ ತೋರಿಸಿ, ನನ್ನನ್ನು ಮತ್ತೆ ರಜಾಯಿಯಡಿ ಮಲಗುವಂತೆ ಮಾಡಿತು. ಮಲಗಿ, ನಿದ್ರೆ ಮಾಡಲು ಪ್ರಯತ್ನಿಸಿದೆ. ಕೊರೆಯುವ ಚಳಿಯು ಮೈ ಚುಚ್ಚಿದರೆ, ಕಪೂರ್‌ನ ಕಥೆ, ಮನಸ್ಸನ್ನು ಕೊರೆಯತೊಡಗಿತು.

"ಆತಂಕ ಪಟ್ಟುಕೊಂಡರೆ ಆತಂಕ; ಆತಂಕ ಇಲ್ಲ ಅಂದುಕೊಂಡರೆ, ಇಲ್ಲ!" ಕಪೂರ್‌ನ ಪ್ರಕಾರ, ಆತಂಕ, ದುಃಖ, ನೋವು, ನಾವೇ ಆಯ್ದುಕೊಂಡ ಮಣಿ ಮುತ್ತು ಗಳು. ಬೇಕೆಂದಾಗ, ಅವನ್ನು ಕಿತ್ತು ಬಿಸಾಡಬಹುದಾದ ಸುವಾಸನೆಯಿಲ್ಲದ ವಾಸನಾ ಹಾರಗಳು.

ಆದರೆ, ಈ ಮಣಿ ಮುತ್ತುಗಳನ್ನು ಅಷ್ಟು ಬೇಗ, ಕಷ್ಟಪಡದೇ, ಆರಾಮಾಗಿ, ಬೇಕೆಂದಾಗ ಕಿತ್ತು ಬಿಸಾಡುವಷ್ಟು ಸುಲಭವಾದುವೇ? ಮನುಷ್ಯನ ಮನಸ್ಸಿಗೆ, ಮೈಗೆ, ಬಹುಬೇಗ ಅಂಟುಕೊಳ್ಳುವ ಈ ರೋಗದ ಮಣಿ ಮುತ್ತುಗಳು, ಜಿಗಣೆಗಳಿಗಿಂತ ಹೆಚ್ಚು ಜಿಗಟು. ಇವುಗಳಿಂದ ತಪ್ಪಿಸಿಕೊಳ್ಳಬೇಕಾದರೆ, ಅಥವಾ ಬಿಡಿಸಿಕೊಳ್ಳ ಬೇಕಾದರೆ, ಮನುಷ್ಯ, ಸಾವಿರಾರು ವರ್ಷಗಳಿಂದ ಶತಪ್ರಯತ್ನ ಮಾಡುತ್ತಿರುವುದು ಸುಳ್ಳೇ? ಧರ್ಮ ಪ್ರಚಾರಕರು, ಸಂತರು, ಬುದ್ಧಿಜೀವಿಗಳು ಈ ವಿಷಯದಲ್ಲಿ ತಮ್ಮ ಬುದ್ಧಿ ಶಕ್ತಿಗಳನ್ನು ತಮ್ಮ ಜೀವನವಿಡೀ, ಜನರಿಗೆ ಉಪದೇಶ ನೀಡುತ್ತಿರುವುದು ಸುಳ್ಳೇ?

ಬೃಹತ್ ನದಿಗಳ ಅಲೆ ಉಕ್ಕಿದ ತರಹ, ವಾಪಸ್ಸು ಬರುವ ಹಾಗೇ ಇಲ್ಲ ನಾವು ಮಾಡಿದ ಕರ್ಮ. ಅನುಭವಿಸಲೇ ಬೇಕು. ಒಳ್ಳೆಯ ಮತ್ತು ಕೆಟ್ಟ ಕರ್ಮಗಳ ಸಂಕೋಲೆಯಿಂದ ಬಂಧಿಸಿದೆ ನಮ್ಮ ಆತ್ಮ ಎಂದು ಹೇಳಿ, ಪ್ರಕೃತಿದತ್ತವಾದ ಮೂರು ಗುಣಗಳಾದ ಸತ್ವ, ರಜ, ತಮ, ನಮ್ಮ ಇಡೀ ಜೀವನವನ್ನು ಹೊಂದಿಕೊಂಡಿದೆ ಎನ್ನುತ್ತಾರೆ, ನಮ್ಮ ಪೂರ್ವಜರು. ಹಾಗೆ ಹೇಳಿ, ದೇವರೆಂಬ ಶಕ್ತಿ ನಮ್ಮ ಹೃದಯ ದಲ್ಲಿ ವಾಸಿಸುತ್ತಿದ್ದು, ನಮ್ಮ ಎಲ್ಲಾ ಕಾರ್ಯಗಳನ್ನು ನಿಯಂತ್ರಿಸುತ್ತಾನೆ ಎಂದೂ ಹೇಳುತ್ತಾರೆ!

ಬಾರದ ನಿದ್ರೆ, ಈ ಚಿಂತನೆಗಳಿಂದ ಹೆದರಿ ನನ್ನ ಬಳಿ ಸುಳಿಯಲೇ ಇಲ್ಲ.

ಅಯ್ಯೋ ದೇವರೆ! ಸ್ವಲ್ಪ ನಿದ್ರೆಯನ್ನಾದರೂ ನೀಡು ಎಂದು ಬೇಡಿಕೊಳ್ಳಲಿಕ್ಕೆ ಶುರು ಹಚ್ಚಿದೆ. ಎಂತಹ ಹುಚ್ಚು ನನ್ನದು! ದೇವರೆಂಬ ಶಕ್ತಿ ನನ್ನ ಹೃದಯದಲ್ಲಿ ವಾಸಿಸುತ್ತಿರುವಾಗ, ಅವನು ನನ್ನ ಕಾರ್ಯ ನಿಯಂತ್ರಿಸುತ್ತಿರುವಾಗ, ನಿದ್ರೆಗಾಗಿ ಪರಿತಪಿಸುವುದು ಯಾತಕ್ಕೆ?

ಎಲ್ಲಾ ದೇವರ ಮೇಲೆ ಭಾರ ಹಾಕಿ ಬಿಟ್ಟರೆ ಹೇಗೆ?

ದೇವರಾದರೂ ಯಾಕೆ ಈ ಭಾರ ಹೊರಬೇಕು? ಅವನಿಗೆ ಬೇರೆ ಕೆಲಸವಿಲ್ಲವೇ? ಅವನಿಗೆ ಯಾಕೆ ಈ ಉಸಾಬರಿ? ಯಾಕೆ ಈ ಪ್ರಪಂಚವನ್ನು ಹುಟ್ಟುಹಾಕಿದ? ಯಾಕೆ ಈ ವಿಶಾಲ ಸಂಸಾರ ಹುಟ್ಟುಹಾಕಿ,ಈ ಸುಖ-ದುಃಖ, ಚಿಂತೆ, ಆತಂಕ, ಹಿಂಸೆಗಳ ತಾಪತ್ರಯಗಳನ್ನು ಹಂಚಿಬಿಟ್ಟಿದ್ದಾನೆ?

ಹಿರಿಯರು ಇದಕ್ಕೆ 'ಅವನ ಲೀಲೆ'ಎಂದು ಬಣ್ಣಿಸಿದ್ದಾರಲ್ಲವೇ? ಜೀವನ ಒಂದು ನಾಟಕ ಎಂದು ನಾವು ಕೂಡ ನಮ್ಮ ಸಂಸಾರ ತಾಪತ್ರಯವನ್ನು ಬಣ್ಣಿಸಿಕೊಂಡಿದ್ದೇವೆ. ನೋಡುವವರಿಗೆ ಚಂದ, ಆಡುವವರಿಗೆ ಮಂದ! ಈ ಆಟವನ್ನು ಆಡುವವರಾದ ನಮಗೆ ಪ್ರಾಣಸಂಕಟ, ನೋಡುವವನಾದ ಆ ಸೃಷ್ಟಿಕರ್ತನಿಗೆ ಆನಂದವೇ? ಎಲ್ಲಾ ಅವನ ಆಟ ನಾವು ಪಾತ್ರಧಾರಿಗಳು ಎಂದಾದರೆ, ಈ ಪುರಾಣ, ಪುಣ್ಯ ಕಥೆ, ಪ್ರವಚನ, ಪಾರಾಯಣ, ನೀತಿ ಪಾಠ, ಧ್ಯಾನ, ಧರ್ಮಗಳು, ತತ್ವಗಳು, ಮೀಮಾಂಸೆಗಳು, ಶಾಸ್ತ್ರಗಳು, ಸಿದ್ಧಾಂತಗಳು, ಏತಕ್ಕಾಗಿ? ದೈವಾನುಗ್ರಹ ಬೇಕು ಎನ್ನುತ್ತಾರೆ. ನಾವು ನಿಮಿತ್ತಮಾತ್ರ ಎನ್ನುತ್ತಾರೆ. ಎಲ್ಲವೂ ಪೂರ್ವನಿಯೋಜಿತವೆನ್ನುತ್ತಾರೆ. ಹಾಗಾದರೆ, ಪುರುಷಪ್ರಯತ್ನ ಕ್ಕೆ ಬೆಲೆಯೇ ಇಲ್ಲವೇ?

'ಟಪ್'ಎಂದು ಬೆಳಗಿನ ಪೇಪರ್ ಬಾಗಿಲ ಬಳಿ ಬಿದ್ದ ಶಬ್ದ ಆಯಿತು. ಪೇಪರನ್ನು ಉರುಟಾಗಿ ಸುತ್ತಿ ಅದಕ್ಕೆ ರಬ್ಬರ್ ಬ್ಯಾಂಡ್ ಹಾಕಿ ಕಟ್ಟಿ, ಮೂರನೇ ಮಹಡಿಯ ಬಾಗಿಲಿಕೆ ಎಸೆಯುವ ವೈಖರಿ, ಪೇಪರ್ ಹುಡುಗರ ವಿಶಿಷ್ಟ ಶೈಲಿ. ನನಗೆ ಇದು ಅಲಾರಾಂ. ಇನ್ನು ಯಾವ ಪುರುಷಾರ್ಥಕಕ್ಕೆ ಮಲಗಿಕೊಳ್ಳುವುದು ಎಂದು ಹಾಸಿಗೆಯಿಂದ ಎದ್ದು, ಮುಖಮಾರ್ಜನ ಮುಗಿಸಿ, ಗಂಟೆ ನೋಡಿದಾಗ, ಆಗಲೇ ಎಂಟು ಹೊಡೆದಿತ್ತು. ಉಡುಪಿ ಹೋಟಲ್‌ನಲ್ಲಿ ನಾಷ್ಟಾ ಮುಗಿಸಿ, ಬ್ಯಾಂಕ್‌ಗೆ ಬಂದಾಗ, ಹತ್ತು ಹೊಡೆದಿತ್ತು.

"ನಮಸ್ಕಾರ ಸಾಬ್!"

ಶಾಮಲಾಲ್ ನನ್ನ ಕೊಠಡಿಯಲ್ಲಿ ಕುಳಿತು ನನಗಾಗಿ ಕಾಯುತ್ತಾ ಕುಳಿತಿದ್ದ. ನನ್ನ ಕೈಯಲ್ಲಿ ಒಂದು ಲಕೋಟೆ ಇರಿಸಿದ. ಲಕೋಟೆ ಒಡೆದು, ಪತ್ರ ತೆಗೆದು ನೋಡಿದರೆ, ಅದು ಡಿಜೀಎಂನ ಪತ್ರವಾಗಿತ್ತು. ಇನ್‌ಕಮ್‌ಟ್ಯಾಕ್ಸ ಸರ್ಟಿಫಿಕೇಟ್

ತೆಗೆದುಕೊಳ್ಳುವುದು ಮಾಫಿ ಮಾಡಲಾಗಿದ್ದು, ಶಾಮಲಾಲ್‌ನಿಗೆ ಸಾಲ ಮತ್ತು ಇತರ ಸೌಲಭ್ಯ ನೀಡಬೇಕೆಂದು ಆದೇಶ ನೀಡಲಾಗಿತ್ತು. ಶಾಮಲಾಲ್‌ನ ಮುಖ ನೋಡಿದೆ. ಅವನ ಅಗಲ ಮುಖ ಊರಗಲವಾಗಿತ್ತು. ನನ್ನ ಕೋಲು ಮುಖ ಊರುಗೋಲಾಗಿರಬೇಕು. ನನ್ನ ಸಿಟ್ಟು ನೆತ್ತಿಗೇರಿ ನೆತ್ತಿ ಸಿಡಿಯತೊಡಗಿತು. ರಾತ್ರಿ ನಿದ್ರೆಯಿಲ್ಲದೆ ತಲೆ ಸಣ್ಣಗೆ ನೋವಿದ್ದರೂ, ಹೇಗೋ ಸಾವರಿಸಿಕೊಂಡು, ಶಾಖೆಗೆ ಬಂದರೆ, ಈ ಹೊಸ ಪಿಡುಗು ಒಡಿದಿತ್ತು. ನನ್ನ ಹೃದಯದಲ್ಲಿ ದೈವಾಂಶಭೂತವಿದೆ ಎಂದು ತಿಳಿದು, ಪುರುಷಯತ್ನ ಮಾಡಿದ್ದಾಗಿದೆ, ಇನ್ನು ಶಾಮಲಾಲ್ ಮತ್ತು ರಾಜಕುಮಾರ್ ಡಿ.ಎಮ್‌ನ ಪುರುಷಯತ್ನ ಸಫಲವಾದರೆ, ನನ್ನ ಗಂಟೇನು ಹೋಯಿತು? ವರ್ಮನನ್ನು ಕರೆದು, ಪತ್ರವನ್ನು ಅವನಿಗೆ ನೀಡಿ, ಶಾಮಲಾಲ್‌ನಿಗೆ ಸಾಲ ನೀಡುವಂತೆ ಹೇಳಿ, ಕೈ ಕಾಲು ಚಾಚಿ ಕುಳಿತೆ.

"ಮಲ್‌ಹೋತ್ರಾನನ್ನು ಭೇಟಿ ಮಾಡಿದ್ದಿರಾ ಸಾಬ್!"

ಲಾಲ್, ತನ್ನ ಉಬ್ಬು ಹಲ್ಲುಗಳನ್ನು ಪ್ರದರ್ಶಿಸುತ್ತಾ ಎದುರಿಗೆ ನಿಂತು ಕೇಳಿದ.

ತಕ್ಷಣ ಎದ್ದು, ಹೊರಗೆ ಕಾಲಿರಿಸಿದೆ.

ಮಲ್‌ಹೋತ್ರಾ, ಅಂಗಡಿಯಲ್ಲಿದ್ದ.

"ಬನ್ನಿ! ಬನ್ನಿ! ಸಾಬ್. ಪೊಲೀಸ್ ಸ್ಟೇಷನ್‌ಗೆ ಹೋಗ್ತೀವಿ ಅಂತ ಹೇಳಿ ಇಲ್ಲಿಗೆ ಯಾಕೆ ಬಂದಿರಿ?" ಆಕ್ಷೇಪಿಸಿದ ಮಲ್‌ಹೋತ್ರಾ.

"ಹೋಗಿದ್ದೆ! ವರಿಷ್ಠ ಅಧಿಕಾರಿಗಳನ್ನು ಕಂಡೆ. 'ಆದಷ್ಟು ನಿಮ್ಮ ಮನ ಒಲಿಸಿ, ಹಣ ವಸೂಲಿ ಮಾಡಿ ಕೊಳ್ಳಿರಿ. ನಿಮ್ಮಿಂದ ಸಾಧ್ಯವಾಗದಿದ್ದಲ್ಲಿ, ನಮ್ಮ ಕಡೆ ಬನ್ನಿರಿ. ಆಮೇಲೆ ವಿಚಾರಿಸಿಕೊಳ್ಳೋಣ!" ಎಂದು ಹೇಳಿದರು. ಆದ್ದರಿಂದ ಪುನಃ ನಿಮ್ಮ ಬಳಿ ಬಂದೆ" ಎಂದು ನನ್ನ ಮುಖವನ್ನೇ ನೋಡಿದ ಮಲ್‌ಹೋತ್ರಾ.

"ನನ್ನ ಹತ್ತಿರ ಹಣ ಇಲ್ಲ!"

ಅದೇ ರಾಗ, ಅದೇ ಹಾಡು! ರಾಗ ಬದಲಾಯಿಸಬೇಕಾದರೆ, ಇವನ ಕಿವಿ ಹಿಂಡಬೇಕಾಗಬಹುದು. ಕಿವಿ ಹಿಂಡಿದರೆ, ಹೊಸ ರಾಗ ಹಾಡಲೂ ಬಹುದು, ಹಣ ಕಕ್ಕಲೂ ಬಹುದು.

"ನಿಮ್ಮ ಅಂಗಡಿಯಲ್ಲಿರುವ ಸರಕುಗಳನ್ನು ಜಪ್ತಿ ಮಾಡಿಸಿ, ನಮ್ಮ ಸುಪರ್ದಿಗೆ ತೆಗೆದುಕೊಳ್ಳುತ್ತೇನೆ. ಅಂಗಡಿ ಮುಚ್ಚಿಸಿಬಿಡುತ್ತೇನೆ. ನೀವು ತಕರಾರು ಮಾಡಿದರೆ, ಪೊಲೀಸರು ಸಹಾಯ ಮಾಡುತ್ತೇವೆ ಎಂದು ಹೇಳಿದ್ದಾರೆ. ಈಗಾಗಲೇ ನೀವು ಬ್ಯಾಂಕ್‌ಗೆ ಮೋಸ ಮಾಡಿರುವ ವಿಷಯ ಇಡೀ ಬಜಾರ್‌ಗೆ ತಿಳಿದಿದೆ. ಯಾರೂ ನಿಮ್ಮ ಸಹಾಯಕ್ಕೆ ಬರುವುದಿಲ್ಲ."

ನನ್ನ ಪೊಳ್ಳು ಬೆದರಿಕೆಗೇ ಅವ ಏನು ಹೇಳುತ್ತಾನೆ ಎಂದು ಕಾದೆ.

"ನನ್ನ ಹತ್ತಿರ ಹಣ ಇಲ್ಲ!"

ನನ್ನ ತಲೆ ನೋವು ಬಾಂಬ್ ತರಹ ಸಿಡಿಯಿತು. ಅಸಹನೆ ಕುದ್ದು ಚೆಲ್ಲಾಡಿತು.

"ಮೋಸದ ಹಣದಿಂದ ಇದುವರೆಗೂ ಯಾರೂ ಉದ್ಧಾರವಾಗಿಲ್ಲ! ನೀನೂ ಉದ್ಧಾರವಾಗೋದಿಲ್ಲ!"

ಹಿಡಿ ಶಾಪ ಹಾಕಿ, ಧಪ ಧಪ ಅಂತ ಕಾಲು ಹಾಕುತ್ತಾ ವಾಪಸ್ಸು ಬಂದೆ ಶಾಖೆಗೆ.

ಈ ಮಲ್‌ಹೋತ್ರಾ ಎಂತಹ ಪಾಪಿ? ಇನ್ನೊಬ್ಬರ ಹಣ ಹೊಡೆದುಹಾಕಿ ಕೊಂಡು, ತಾನು ಉದ್ಧಾರ ಆಗಬೇಕೆಂದುಕೊಂಡಿದ್ದನೆಲ್ಲಾ!

ಈ ಪಾಪವೆಂದರೆ ಏನು? ಹಿರಿಯರು ಹೇಳಿದ ಹಾಗೆ, ಪಾಪವೆಂದರೆ ನೈತಿಕ, ಚಾರಿತ್ರ್ಯ, ಅಧಃಪತನ. ಪರಪೀಡೆಯೇ ಪಾಪ. ಇತರರಿಗೆ ಹಿಂಸೆ, ದುಃಖ ಅಥವಾ ನೋವು ಉಂಟು ಮಾಡುವುದು ಪಾಪ.

ಈ ಮಲ್‌ಹೋತ್ರಾ ಯಾವ ತರಹದ ಪಾಪ ಮಾಡಿದ್ದಾನೆ. ಪರಪೀಡೆ, ಇತರರಿಗೆ ಹಿಂಸೆ, ದುಃಖ, ನೋವು, ಮೋಸ ಮಾಡಿದ ಪಾಪಿಷ್ಟನೇ?

'ನನಗೆ ಶರಣಾಗು ಬಾ, ನಿನ್ನ ಎಲ್ಲಾ ಪಾಪಗಳನ್ನು ನಿವಾರಿಸುತ್ತೇನೆ' ಎಂದು ಶ್ರೀಕೃಷ್ಣನು ಹೇಳಿದನಂತೆ.

ಈ ಮಲ್‌ಹೋತ್ರಾನಿಗೆ ಹೇಗೆ ತಿಳಿಸುವುದು, 'ನೀನು ಪಾಪಿ, ಶ್ರೀಕೃಷ್ಣನಿಗೆ ಶರಣಾಗು' ಎಂದು. ಒಂದು ವೇಳೆ, ಪಶ್ಚಾತ್ತಾಪ ಪಟ್ಟು, ದೇವರನ್ನು ಬೇಡಿ ಕೊಂಡರೂ, ಇವ ನರಕಕ್ಕೆ ಹೋಗುವುದು ಖಂಡಿತ. ಆದರೆ ಇವನು ನರಕಕ್ಕೆ ಹೋಗುವುದು ಖಂಡಿತ ಎಂದು ಕಾಯಂ ಆದರೂ, ಕನ್ನಡ ಗಾದೆಯಂತೆ, ' ಸನ್ಯಾಸಿಗೆ ಕಚ್ಚಿದ ನಾಯಿ ನರಕಕ್ಕೆ ಹೋಗುತ್ತದೆ, ಕಚ್ಚಿಸಿಕೊಂಡ ಸನ್ಯಾಸಿ ಮಾತ್ರ ನರಳಲೇ ಬೇಕಲ್ಲ!' ಮಲ್‌ಹೋತ್ರಾನಿಂದ ಕಚ್ಚಿಸಿಕೊಂಡ ಲಾಲ್ ನರಳಲೇ ಬೇಕಲ್ಲ!

ಮರಳಿ ಶಾಖೆಗೆ ಬಂದರೆ, ಕೂತಿದ್ದ ಹೊಟ್ಟೆ ಡೀ.ಎಮ್! ಶಾಖೆಯ ನೌಕರರು ನನ್ನ ಮೇಲೆ ಹೂಡಿದ್ದ ದೂರಿನ ಬಗ್ಗೆ ವಿಚಾರಿಸಲು ಕಾದು ಕುಳಿತಿದ್ದ.

"ಒಬ್ಬೊಬ್ಬರನ್ನೇ ಕರೆದು ವಿಚಾರಣೆ ನಡೆಸುತ್ತೇನೆ. ಈಗ ಮೊದಲನೆಯದಾಗಿ, ಈ ಸ್ತ್ರೀ ಕ್ಲರ್ಕ್‌ನ್ನು ಕರೀರಿ."

ಸ್ತ್ರೀ ಕಾರ್‌ಕೂನಳು, ತನ್ನ ಕೆಲಸ ಮುಗಿಸದೆ, ವ್ಯವಹಾರದ ವೇಳೆಯಲ್ಲಿ, ತನ್ನ ಮಗುವಿಗೆ ಊಟ ಹಾಕಬೇಕೆಂದು, ಶಾಖೆಯಿಂದ ಹೊರಬಿದ್ದು, ಮನೆಗೆ ಹೋಗಿ ದ್ದಾಗ, ನಾನು ಅವಳು ವಾಪಸ್ಸು ಬಂದಾಗ ತರಾಟೆ ತೆಗೆದುಕೊಂಡಿದ್ದೆ. ಅವಳು

ತನ್ನ ತಪ್ಪನ್ನು ಒಪ್ಪಿಕೊಳ್ಳದೇ ಇದ್ದು, ತನ್ನ ಮೇಲೆ ಕ್ರಮ ಜರುಗಿಸಬಹುದೆಂದು ಆಹ್ವಾನ ನೀಡಿದ್ದಳು. 'ಆಗಲಿ, ನಾನು ನೋಡ್ತೀನಿ' ಎಂದಿದ್ದಕ್ಕೆ, ಹೊರಗೆ ಹೋಗಿ, ನಾನು ಅವಳ ಜೊತೆ 'ಮಿಸ್‌ಬಿಹೇವ್' ಮಾಡಿದ್ದುದಾಗಿ ಅವಳ ಸಹೋದ್ಯೋಗಿಗಳ ಜೊತೆಗೆ ದೂರು ಕೊಟ್ಟಿದ್ದಳು.

ಹೊಟ್ಟೆ ಡೀ.ಎಮ್‌ನನ್ನು ವಿನಂತಿಸಿಕೊಂಡೆ.

" 'ಮಿಸ್‌ಬಿಹೇವ್' ಎಂದರೆ, ಕೆಟ್ಟದಾಗಿ ವರ್ತಿಸುವುದು ಮತ್ತು ಕೆಟ್ಟ ಪದಗಳನ್ನು ಉಪಯೋಗಿಸುವುದು ಎಂಬ ಅರ್ಥ ಕೊಡುತ್ತದೆ. ನೀವು ಇವಳನ್ನು ಪ್ರಶ್ನಿಸುವಾಗ, ದಯವಿಟ್ಟು ಕೇಳಿ-' ಮೇನೇಜರ್, ನಿನ್ನೊಡನೆ ಮಾತನಾಡುವಾಗ, ಏನು ಕೆಟ್ಟ ಪದಗಳನ್ನು ಉಪಯೋಗಿಸಿದ' ಎಂದು.

ಹೊಟ್ಟೆ ಡೀ.ಎಮ್. ನನ್ನನ್ನು ಕೊಠಡಿಯಿಂದ ಹೊರಗೆ ಕಳುಹಿಸಿ, ಅವಳನ್ನು ಒಳಗೆ ಕರೆಸಿ, ನಾನು ಹೇಳಿಕೊಟ್ಟ ಹಾಗೆ ಪ್ರಶ್ನಿಸಿದಾಗ, ಅವಳು 'ಮೇನೇಜರ್ ಸಾಬ್ ಯಾವ ತರಹವಾದ ಕೆಟ್ಟ ಪದ ಉಪಯೋಗಿಸಲಿಲ್ಲ. ಬರೀ 'ನಾನು ನೋಡ್ತೇನೆ' ಎಂದು ಹೇಳಿದರು ಎಂದು ಹೇಳಿ ವಿಚಾರಣೆಗೆ ಮುಕ್ತಾಯ ಹಾಡಿದಳು.

ನನ್ನ ಮೇಲಿನ ದೂರುಗಳು ದಾರ ಕಿತ್ತ ಗಾಳಿಪಟದಂತೆ ಗಾಳಿಯಲ್ಲಿ ಹಾರಿ ಹೋದವು!

ಶಾಖೆಯಲ್ಲಿ, ಆತಂಕದ ವಾತಾವರಣ ತಿಳಿಗೊಂಡು, ನಿರಾಳವಾಗಿ ಉಸಿರಾಡುವ ಹಾಗೆ ಆಯಿತು.

'ಅಂತೂ ನೀವು ಗೆದ್ದುಬಿಟ್ಟರಿ ಸಾಬ್! ಬಚಾವ್ ಆಗಿಬಿಟ್ಟರಿ! ನಿಮ್ಮನ್ನು ಈ ಶಾಖೆಯಿಂದ ಓಡಿಸಿಬಿಡಬೇಕೆಂದು ಮಾಡಿದ ಆಟ ನಡೆಯಲಿಲ್ಲ!"

ಕಾಶ್ಮೀರೀ ನಾಯಕ ಹೇಳಿದ.

"ನಾನು ಗೆಲ್ಲಲೂ ಇಲ್ಲ, ನೀವು ಸೋಲಲೂ ಇಲ್ಲ. ನಮ್ಮ ಅನುಭವದ ರಸ್ತೆಯಲ್ಲಿ ನಡೆದುಹೋಗುವಾಗ ಒಂದು ಘಟ್ಟ ಮುಟ್ಟಿದ ಹಾಗೆ ಆಯಿತು. ಅಷ್ಟೇ!" ಎಂದೆ.

"ಆದರೂ, ನೀವು ಸ್ವಲ್ಪ ಸಹಕಾರ ನೀಡಿದರೆ, ಶಾಖೆಯನ್ನು ಚೆನ್ನಾಗಿ ನಡೆಸಬಹುದು. ಹುಡುಗರು ಸ್ವಲ್ಪ ತಲೆಹರಟೆ ಮಾಡುತ್ತಾರೆ. ಹುಡುಗತನವಲ್ಲವೇ? ನೀವು ಸ್ವಲ್ಪ 'ಅಡ್ಜಸ್ಟ್' ಮಾಡಿಕೊಂಡು ಹೋದರೆ, ಹುಡುಗರು ಸರಿಹೋಗುತ್ತಾರೆ. ಸರಿ ಹೋಗದಿದ್ದರೂ ಸರಿ ಮಾಡಬಹುದು!"

ಈ ಕಾಶ್ಮೀರೀ ನಾಯಕ ನನ್ನ ಶಾಖೆಯನ್ನು ಸಹಕಾರ ಸಂಘವನ್ನಾಗಿ ಮಾಡಲು ಟೊಂಕ ಕಟ್ಟಿ ನಿಂತಹಾಗಿದೆಯಲ್ಲಾ!

'ಹುಡುಗರು ಸರಿ ಹೋಗದಿದ್ದರೂ, ಸರಿ ಮಾಡಬಹುದು!'

ಇವರನ್ನು ಸರಿ ಮಾಡಲಿಕ್ಕೆ ನಾನೇನು ಇವರ ತಂದೆಯೆ? ಹಿತೈಷಿಯೆ? ಆತ್ಮೀಯ ನೆಂಟನೆ? ಅಥವಾ ಡಾಕ್ಟರೇ? ಪೊಲೀಸ್ ಇನ್ಸ್‌ಪೆಕ್ಟರ್‌ರೇ? ಮನೋ ವಿಜ್ಞಾನಿಯೆ?

"ನೋಡಿ ಮಿಸ್ಟರ್! ಈ ಹುಡುಗರ ತಂದೆ ತಾಯಿಗಳಿಗೆ ಇವರನ್ನು ಸರಿ ಮಾಡಲಿಕ್ಕೆ ಆಗದಮೇಲೆ, ಕೇವಲ ಒಬ್ಬ ಮೇನೇಜರ್ ಆದ ನಾನು ಇವರನ್ನು ತಿದ್ದಿ ಸರಿಮಾಡಬಹುದು?"

ಕಾಶ್ಮೀರೀ ನಾಯಕ ಒಂದು ಕ್ಷಣ ಆವಾಕ್ಕಾದ ನನ್ನ ಮಾತುಗಳನ್ನು ಕೇಳಿ.

"ಏನು ಹೇಳಬೇಕೆಂದು ಬಯಸಿದ್ದೀರಿ ನೀವು"

ಹಿಂದೀ ಭಾಷೆಯಲ್ಲಿ ಈ ವಾಕ್ಯ ಬಹುವಾಗಿ ಉಪಯೋಗಿಸುತ್ತಾರೆ ಇಲ್ಲಿನ ಜನಗಳು.

"ಆಪ್ ಕಹನಾ ಕ್ಯಾ ಚಹಾತೇ ಹೈಂ'

('ಏನು ಹೇಳಬೇಕೆಂದು ಬಯಸಿದ್ದೀರಿ?')

"ನಿಮ್ಮ ತಂದೆ ತಾಯಿಗಳಿಗೆ ಆಗದ್ದು, ನಾನು ಹೇಗೆ ಮಾಡಿ ತೋರಿಸಲಿ" ಎಂದು ಹೇಳಿದೆ.

"ನೀವಾಡುವುದು ಸರಿಯಲ್ಲ!" ಎಂದ ಮುಖ ಸಿಂಡರಿಸಿ.

"ನಿಮ್ಮ ತಂದೆ ತಾಯಿಗಳೇ ಸೋತಿರುವಾಗ, ಒಬ್ಬ ಬಡ ಬ್ಯಾಂಕ್ ಮೇನೇಜರ್‌ಗೆ ಈ ಹುಡುಗರನ್ನೂ ತಿದ್ದಿ, ಗೆಲ್ಲುವುದಕ್ಕೆ ಹೇಗೆ ಸಾಧ್ಯ?" ಪುನಃ ಉಚ್ಚರಿಸಿದೆ.

ಕಾಶ್ಮೀರೀ ನಾಯಕ, ಮಾರುತ್ತರ ನೀಡದೆ, ಹೊರಗೆ ಹೋದ. ಹೊರಗೆ, ಸುದ್ದಿಸಂತೆ ಸಭೆ ಸೇರಿತು. ಮತ್ತೊಮ್ಮೆ ನಾಳೆಯಿಂದ ಶುರುವಾಗಬಹುದು ಧರ್ಮ ಯುದ್ಧ ಎಂದುಕೊಂಡೆ. ಧರ್ಮರಕ್ಷಣೆಗೆ ಏನೂ ಅರಿಯದ ಹರೆಯದ ಮಕ್ಕಳನ್ನು ಯುದ್ಧ ಭೂಮಿಗೆ ಕಳುಹಿಸಿ ಅವರ ಬಿಸಿ ರಕ್ತ ಚೆಲ್ಲಾಡಿ ಹರಿಯುವ ನದಿಗಳನ್ನು ರಕ್ತದ ಹೊಳೆಗಳನ್ನಾಗಿಸಿ, ಫಲವತ್ತಾದ ಹೊಲ ಗದ್ದೆಗಳ ಮಣ್ಣನ್ನು ರಕ್ತದಿಂದ ನೆನೆಸಿ, ತೋಯಿಸಿ, ಕಲಸಿ, ಮೇಲೋಗರ ಮಾಡಿ, ಚರಿತ್ರೆಯ ಪುಟಗಳಲ್ಲಿ ತಮ್ಮ ಈ ಘನಕಾರ್ಯವನ್ನು ಸುವರ್ಣಾಕ್ಷರಗಳಲ್ಲಿ ಬರೆದು ಪುಣ್ಯ ಕಟ್ಟಿಕೊಳ್ಳುವ ಸಂಗತಿಗಳನ್ನು ಓದಿದ್ದೇವೆ, ಕೇಳಿದ್ದೇವೆ, ಕಂಡಿದ್ದೇವಲ್ಲವೇ? ಧರ್ಮದ ಹೆಸರಿನಲ್ಲಿ, ಯಹೂದ್ಯರ ಕಗ್ಗೊಲೆ ಕ್ರಿಸ್ತ ಸತ್ತಾಗಿನಿಂದ ನಡೆದು, ಎರಡನೇ ಮಹಾಯುದ್ಧ ಕಾಲದಲ್ಲಿ ಅವರ ಮರಣಹೋಮ ಜರುಗಿತು. ಎಲ್ಲಾ ಧರ್ಮದ ಹೆಸರಿನಲ್ಲೇ! ಕ್ರುಸೇಡ್ಸ್‌ನ ಹೆಸರಿನಲ್ಲಿ, ಕ್ರಿಶ್ಚಿಯನರಿಗೂ, ಮುಸ್ಲಿಮ್‌ರಿಗೂ ಶತ ಮಾನಗಳ

ಯುದ್ಧ ನಡೆದು ಲಕ್ಷಾಂತರ ತಲೆಗಳು ಉದರಿ, ಕೊನೆಗೂ ಕ್ರಿಸ್ತ ಹುಟ್ಟಿದ ಬೆತ್ಲೆಹೆಮ್ ಆಗಲೀ, ಮರಣಿಸಿದ ಜೆರೂಸಲಂ ಆಗಲೀ ಅವರ ಕೈಗೆ ಸಿಗದೇ, ಇಂದಿಗೂ ಈ ಪವಿತ್ರ ನಾಡಿನಲ್ಲಿ ರಕ್ತ ಹರಿದು ಅಲ್ಲಿದ್ದ ಮಣ್ಣು ಅಪವಿತ್ರವಾಗು ತ್ತಿದೆಯಲ್ಲವೇ? ಎಲ್ಲಾ ಧರ್ಮದ ಹೆಸರಿನಲ್ಲೇ!

ಒಬ್ಬ ಮುಸ್ಲಿಮ್‌ನಲ್ಲದ ಮನುಷ್ಯನನ್ನು ಕೊಂದರೆ 'ಗಾಜೀ' ಪಟ್ಟ ಪಡೆಯ ಬಹುದೆಂಬ ಆಸೆಯಿಂದ, ಪಾಪದ, ನಿಷ್ಕಪಟ, ನಿಷ್ಕಳಂಕ ಜನರ ಹತ್ಯಾಕಾಂಡ ಜರುಗಿತು. ಲಕ್ಷಾಂತರ ನಿರಪರಾಧಿ, ನಿರಾಯುಧ, ಶಾಂತಿಮಂತ್ರ ಪಠಿಸುತ್ತಾ ಇದ್ದ, ಜೈನರು, ಬುದ್ಧರು, ಹಿಂದೂಗಳು, ಮುಸ್ಲಿಮರ ಕತ್ತಿಗಳಿಗೆ ಬಲಿಯಾದರು. ಎಲ್ಲಾ ಧರ್ಮದ ಹೆಸರಿನಲ್ಲೇ!ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಈ ಅಧರ್ಮ, ಪೈಶಾಚಿಕ, ಹಿಂಸಾಚಾರಗಳಿಗೆ ಅಂತ್ಯವಿಲ್ಲವೇ? ಮನುಷ್ಯ, ಎಂದು ಕತ್ತಲಿಂದ ಬೆಳಕಿಗೆ ಬರುತ್ತಾನೆ? ಎಂದು ನಾಗರೀಕನೆನಿಸಿಕೊಳ್ಳುತ್ತಾನೆ? ಎಂದು ಒಬ್ಬರನ್ನೊಬ್ಬರ ರಕ್ತ ಚೆಲ್ಲಾಡುವ ಪ್ರವೃತ್ತಿ ತ್ಯಜಿಸುತ್ತಾನೆ? ಆದರೆ ಈ ಪ್ರಶ್ನೆಗಳಿಗೆ ಉತ್ತರವಿದೆಯೆ? ಉತ್ತರ ದೊರಕುವುದು ಕಷ್ಟವಲ್ಲವೇ? ಮಾನವ, ಹೊಡೆದಾಡುವ, ರಕ್ತ ಚೆಲ್ಲುವ ಪ್ರಾಣಿ ಎಂದು ಈಗಾಗಲೇ ಸಮಾಜಶಾಸ್ತ್ರಜ್ಞ ಮತ್ತು ಮಾನವಶಾಸ್ತ್ರಜ್ಞರು ಘೋಷಿಸಿ ದ್ದಾರಲ್ಲವೇ? 'ಪ್ರಬಲ ಶಕ್ತಿಯಲ್ಲಿ ನಂಬಿಕೆಯಿಲ್ಲವೆಂದರೆ, ಗುರುತ್ವಾಕರ್ಷಣ ದಲ್ಲಿಯೂ ನಂಬಿಕೆ ಇಲ್ಲದಿರುವಿಕೆ' ಎಂದು ಟ್ರಾಟ್ಸ್‌ಕೀ ಹೇಳಿದ್ದಾನಲ್ಲವೇ?

"ಸಾಬ್! ಅಮೃತಸರದಲ್ಲಿ ಘರ್ಷಣೆಯಂತೆ. ತುಂಬಾ ಜನ ಸತ್ತರಂತೆ, ಇಡೀ ಬಸ್ಸನ್ನು ಧ್ವಂಸ ಮಾಡಿಬಿಟ್ಟರಂತೆ ಭಯೋತ್ಪಾದಕರು!"

ವರ್ಮಾ ಒಳಗೆ ಬಂದು ಸುದ್ದಿ ತಿಳಿಸಿದ.

ಹೊರಗೆ ಸುದ್ದಿಸಂತೆಯಲ್ಲಿ, ಇದೇ ಸುದ್ದಿ ಹರಡಿ, ನನ್ನ ಹೇಳಿಕೆಯ ವಿರುದ್ಧ ಚರ್ಚೆ ಮುಕ್ತಾಯಗೊಂಡಿರಬೇಕು. ಒಳಗೆ ಕಾಶ್ಮೀರೀ ನಾಯಕ ಬಂದು, ವರ್ಮ ನೀಡಿದ ಸುದ್ದಿಗೆ, ತನ್ನ ದೃಢೀಕರಣವನ್ನು ನೀಡಿದ.

"ಪಂಜಾಬ್‌ನಲ್ಲಿ ಪರಿಸ್ಥಿತಿ ಗಂಭೀರವಾಗಿದೆ ಸಾಬ್! ಹಿಂದೂಗಳ ಕಗ್ಗೊಲೆ ನಡೆಯುತ್ತಾ ಇದೆ. ಹಿಂದೂಗಳು ದಿಲ್ಲೀ, ಚಂಡೀಗಡ್‌ಕ್ಕೆ ವಲಸೆಹೋಗುತ್ತಾ ಇದ್ದಾರಂತೆ."

ಪಂಜಾಬ್‌ನಲ್ಲಿ ಘರ್ಷಣೆಯಾದರೆ, ಅದರ ಪ್ರತಿಕ್ರಿಯೆ ದಿಲ್ಲೀಯಲ್ಲಿ ಆಗುವುದು ಸ್ವಾಭಾವಿಕ. ನಾಳೆ ನಾಡಿದ್ದು, ದಿಲ್ಲೀಯ ಯಾವುದೋ ಬಸ್, ರೈಲು, ಕಾರುಗಳಲ್ಲಿ ಬಾಂಬ್ ಸ್ಫೋಟ ಆಗುವುದು ಖಂಡಿತ.

ರಾತ್ರಿ ನಿದ್ರೆ ಕೆಟ್ಟಿದ್ದರಿಂದ ಮಲ್‌ಹೋತ್ರಾನ ಉದ್ಧಟತನದ ನಡತೆಯಿಂದ,

ಶಾಖೆಯಲ್ಲಿನ ಬಿಗಿ ವಾತಾವರಣದಿಂದ, ತಲೆನೋವು ಜಾಸ್ತಿಯಾಗಿ, ತಲೆಯೊಳಗೆ ಆಸ್ಫೋಟ ಆಗುತ್ತೇನೋ ಎಂಬ ಭಯ ಉಂಟಾಯಿತು. ಬೇಗ ಮನೆಗೆ ಹೋಗಿ ಮಲಗಿ ನಿದ್ರೆ ಮಾಡೋಣವೆಂದು, ವರ್ಮನಿಗೆ ತಿಳಿಸಿ, ಶಾಖೆಯಿಂದ ಕಾಲ್ತೆಗೆದೆ. ಮನೆಗೆ ಹೋಗುವ ಮೊದಲು, ಉಡುಪಿ ಹೋಟೆಲ್‌ನಲ್ಲಿ ಊಟ ಮಾಡಿದೆ. ಆಮೇಲೆ ಮನೆಗೆ ಹೋಗಿ ಹಾಸಿಗೆ ಮೇಲೆ ಬಿದ್ದೊಡನೆ, ನಿದ್ರೆ ತಾನಾಗಿ ಓಡಿಬಂತು.

ಬೆಳಿಗ್ಗೆ ಎದ್ದಾಗ, ಎಂಟಾಗಿತ್ತು. ಸುಖನಿದ್ರೆಯಿಂದ ಮನಸ್ಸು ಗರಿಗೆದರಿ ಗಗನಕ್ಕೆ ಹಾರಿತ್ತು. ಬಹಳ ದಿನಗಳಾಗಿತ್ತು ಈ ತರಹದ ಆಹ್ಲಾದಕರದ ಮನಃಸ್ಥಿತಿಯ ಅನುಭವ. ಚಾ ಮಾಡಿ, ಕುಡಿದು, ಆರಾಮಾಗಿ ಹೊರಟೆ ಬ್ಯಾಂಕ್‌ನತ್ತ.

ಬ್ಯಾಂಕ್‌ಗೆ ಬಂದಾಗ, ನನಗಾಗಿ ಡಾಕ್ಟರ್ ಕಾಲ್ರಾ ನನ್ನ ಕೊಠಡಿಯಲ್ಲಿ ಕುಳಿತಿದ್ದ.

"ಏನು ಸಮಾಚಾರ?" ಕೇಳಿದೆ.

ಆತಂಕದ ಹಾರ ಕೈಯಲ್ಲಿ ಹಿಡಿದುಕೊಂಡೇ ಬಂದಿದ್ದಾನೆ ಎಂದೆನಿಸಿತು.

"ನಾರಾಯಣ್ ಸಾಗೂ ನನಗೆ ಮೋಸ ಮಾಡಿಬಿಟ್ಟಿದ್ದಾನೆ ಸಾಬ್!"

"ಏನು ಮೋಸ?"

"ನನ್ನ ಬಕ್ಕ ತಲೆಗೆ ಒಂದು ಎಣ್ಣೆಕೊಟ್ಟ ಸಾಬ್! 'ಇದು ಹಚ್ಚಿಕೊಳ್ಳಿರಿ, ಕೂದಲು ಸೊಂಪಾಗಿ ಬೆಳೆಯುತ್ತದೆ' ಎಂದ. ಹಚ್ಚಿಕೊಂಡೆ ಸಾಬ್: ಇರೋ ಸ್ವಲ್ಪ ಕೂದಲೂ ಉದುರಿ ತಲೆ ಬೋಳಾಯಿತು!"

ಬಕ್ಕತಲೆಯನ್ನು ನೇವರಿಸಿಕೊಂಡ ತನ್ನ ಬಿಳೀ ಕೈಯಿಂದ. ನನಗೆ ನಗು ಬಂತು.

"ಸಾಗೂವಿನ ವಿಷಯ ನಿಮಗೆ ಗೊತ್ತಿರಲಿಲ್ಲವೇ!"

"ಗೊತ್ತಿತ್ತು! ಆದರೂ ಮೋಸ ಹೋಗಿಬಿಟ್ಟೆ!"

"ಸರಿ! ಈಗ ನಾನೇನು ಮಾಡಬೇಕು?"

"ಅವನನ್ನು ಕರೆಸಿ, ನನ್ನ ಹಣ ವಾಪಸ್ಸು ಕೊಡುವ ಹಾಗೆ ಮಾಡಬೇಕು."

ಅಳುವ ಮುಖ ಮಾಡಿ ಹೇಳಿದ.

"ಎಷ್ಟು ಹಣ ತೆಗೆದುಕೊಂಡಿದ್ದ?"

"ಐದು ನೂರು ರೂಪಾಯಿ!"

"ಐನೂರು ರೂಪಾಯಿ?" ಬೆಚ್ಚಿಬಿದ್ದೆ ನಾನು.

"ಹೌದು! ಐನೂರು ರೂಪಾಯಿಗಳು. ಒಂದು ಶೀಷೆ ಎಣ್ಣೆಗೆ!"

"ಎಂತಹ ಎಣ್ಣೆ ಅದು? ಇಷ್ಟು ದುಬಾರಿ ಬೆಲೆ?"

"ಮೊಲದ ಮಾಂಸದಿಂದ ಮಾಡಿದ ಎಣ್ಣೆಯಂತೆ!"

"ಮೊಲದ ಮಾಂಸದ ಎಣ್ಣೆ?" ಅರ್ಥವಾಗಲಿಲ್ಲ.

ಪಾರಿವಾಳದ ಎಣ್ಣೆ ಲಕ್ವ ಹೊಡೆದವರಿಗೆ ಬೆಂಗಳೂರಿನಲ್ಲಿ ಉಪಯೋಗಿಸುವ ವಿಧಾನ ಕೇಳಿದ್ದೆ. ಮೊಲದ ಮಾಂಸದ ಎಣ್ಣೆ?

"ಇದ್ದ ಬದ್ದ ತಲೆ ಕೂದಲು ಕಳೆದುಕೊಂಡೆ, ಹಣ ಕೂಡ ಕಳೆದುಕೊಂಡೆ!"

ಸಾಗೂಗೆ ಯಾಕೆ ಬಂತು ಈ ದುರ್ಬುದ್ಧಿ?

ಅವನಿಗೆ ಹೇಳಿ ಕಳುಹಿಸಿದೆ. ಬಂದ ಅವ.

"ನಿಮ್ಮ ಮೇಲೆ ಡಾಕ್ಟರ್ ದೂರು ತಂದಿದ್ದಾರೆ."

"ಏನು ದೂರು ಸಾಬ್!" ಏನೂ ಅರಿಯದ ನಿಷ್ಕಪಟಿ ಸಾಗೂ ಕೇಳಿದ.

"ಡಾಕ್ಟರ್ ತಲೆ ಕೂದಲು ಬೋಳಿಸಿಬಿಟ್ಟೆಯಂತೆ ನಿನ್ನ ಮೊಲದ ಎಣ್ಣೆಯಿಂದ!"

"ಓ! ಅದಾ?" ನಕ್ಕ ಸಾಗೂ.

"ಏನು ನಗುತ್ತೀಯಾ?"ಗುಡುಗಿದ ಡಾಕ್ಟರ್.

"ನಗದೇ ಅಳಬೇಕೇ ನಿನ್ನ ಕೂದಲ ನಷ್ಟಕ್ಕೆ?"

"ಕೂದಲು ನಷ್ಟ ಆದರೂ ಪರವಾಗಿಲ್ಲ. ಇವರಿಗೆ ಹಣ ವಾಪಸ್ಸು ಕೊಟ್ಟು ಬಿಡು."

"ಹ್ಯಾಗೆ ಸಾಬ್ ಆಗುತ್ತದೆ ಅದು? ಆರು ತಿಂಗಳು ಎಣ್ಣೆ ಉಪಯೋಗಿಸಿ, ಕೂದಲು ಬೆಳೆಯದೇ ಹೋದರೆ, ಹಣ ವಾಪಸ್ಸು ಅಂತ ಹೇಳಿದ್ದೆ."

"ನೀನು ಆ ರೀತಿ ಹೇಳಲೇ ಇಲ್ಲ. ಈ ಎಣ್ಣೆ ಉಪಯೋಗಿಸಿರಿ, ಕೂದಲು ಸೊಂಪಾಗಿ, ಹಿಮಾಲಯ ತಪ್ಪಲಿನಲ್ಲಿ ಬೆಳೆಯುವ ಕಾಡಿನ ಹಾಗೆ ಬೆಳೆಯುತ್ತದೆ ಎಂದು ಹೇಳಲಿಲ್ಲವೇ?" ರೇಗಿದ ಡಾಕ್ಟರ್!

ಸಾಗೂವಿನ ಮುಖ ನೋಡಿದೆ. ಪಟಿಂಗ, ಗಂಭೀರವದನನಾಗಿ, ಡಾಕ್ಟರ್‌ನ ಬಕ್ಕತಲೆಯನ್ನೇ ನೋಡುತ್ತಿದ್ದ.

ಸಾಗೂವಿನ ಬಕ್ಕತಲೆ ಕ್ಷಣಕ್ಷಣಕ್ಕೂ ಉಬ್ಬಿ, ಬಿಳೀ ಕರಿಗಡಬಿನಾಕಾರ ತಾಳಿ, ನನ್ನ ಮೇಲೆ ಬೀಳಲು ಹವಣಿಸಿದಂತೆ ತೋರಿತು.

"ಬದ್ಮಾಶ್, ಕಮೀನೆ......"

ಡಾಕ್ಟರ್‌ನಿಗೆ ಕೋಪ ಇಮ್ಮಡಿಸಿ, ಬಾಯಿಂದ ಬೈಗಳ ಸುರಿಮಳೆ ಶುರುವಾಯಿತು.

"ಹಣ ವಾಪಸ್ಸು ಕೊಟ್ಬಿಡು!"ಎಂದೆ.

"ಇವನ ತಲೇಲಿ ಕೂದಲು ಹುಟ್ಟೋದು ಒಂದೆ, ನನ್ನ ಕೈಯಿಂದ ಹಣ ವಾಪಸ್ಸು ಪಡೆಯೋದು ಒಂದೆ!" ಎಂದ ಸಾಗೂ ಸೊಗಸಾಗಿ!

"ನೋಡಿ ಸಾಬ್! ನೋಡಿ! ಏನಂತಾನೆ ಈ ಸಾಗೂ?"

"ಇಬ್ಬರೂ ಎದ್ದು ಹೋಗಿ ಕೆಲಸ ಮಾಡಿ! ಈಗ ನನಗೆ ಸಮಯವಿಲ್ಲ ನಿಮ್ಮ ಜಗಳ ಇತ್ಯರ್ಥ ಮಾಡಲಿಕ್ಕೆ."

ಇಬ್ಬರನ್ನು ಹೊರಗೆ ದೂಡಿದೆ. ಹೊರಗೆ ಹೋದ ಸಾಗೂ ಒಳಗೆ ಬಂದು ನಿಂತು, ತನ್ನ ಬಕ್ಕತಲೆ ಮೇಲೆ ಕೈ ಆಡಿಸಿ,

"ಸಾಬ್! ಡಾಕ್ಟರ್ ಪುನಃ ಬಂದರೆ, ಅವನಿಗೆ ಹೇಳಿ, ನಾನೂ ಕೊಂಡಿದ್ದೇನೆ ಮೊಲದ ಎಣ್ಣೆ. ಉಪಯೋಗ ಆಗಿದೆ. ಅವನಿಗೆ ನಂಬಿಕೆ ಬರುತ್ತದೆ. ನನ್ನ ಮೇಲೆ ತಕರಾರು ಮಾಡೋದಿಲ್ಲ!"

ಒದ್ದು ಹೊರಗೆ ಹಾಕುವಷ್ಟು ಕೋಪ ಬಂದಿತು ನನಗೆ. ಆದರೂ, ಕೋಪ ಹತ್ತಿಕ್ಕಿ ಕೇಳಿದೆ ಅವನನ್ನು:

"ನಿಮಗೆ ಯಾರು ಹೇಳಿಕೊಟ್ಟರು ಈ ಎಣ್ಣೆ ಮಾಡುವ ವಿದ್ಯೆ?"

"ಸೋನೇಪತ್‌ನಲ್ಲಿ ಒಬ್ಬನಿದ್ದ. ನನ್ನ ಬಕ್ಕತಲೆ ನೋಡಿ, ಈ ಎಣ್ಣೆ ಕೊಟ್ಟ. ನೂರು ರೂಪಾಯಿ ತೆಗೆದುಕೊಂಡ. ನನ್ನ ತಲೆ ಕೂದಲು ಉದುರತೊಡಗಿತು. ನಾನು ಆಲೋಚಿಸಿದೆ. ಯಾಕೆ ಈ ಎಣ್ಣೆ ಮಾರಿ ಹಣ ಮಾಡಬಾರದು? ಡಾಕ್ಟರನ ಬಕ್ಕತಲೆ ನನ್ನ ನೆರವಿಗೆ ಬಂತು,. ಉಪಯೋಗಿಸಿದೆ ನನ್ನ ತಲೆ, ಅವನು ಉಪಯೋಗಿಸಿದ ನನ್ನ ಎಣ್ಣೆ! ಅಷ್ಟೇ ಸಾಬ್!"

ಭೇಷ್!ಭಡವಾ ಸಾಗೂ! ಮನದಲ್ಲೇ ಬೈದೆ.

"ತಲೆಯೊಳಗೆ ಬುದ್ಧಿ ಬೆಳೆಯದೇ ಹೋದರೂ, ಚಿಂತೆ ಮಾಡುವುದಿಲ್ಲ ಜನರು! ತಲೆಮೇಲೆ ಕೂದಲು ಬೆಳೆಯದೇ ಹೋದರೆ, ಚಿಂತೆ ಮಾಡಿ, ಮಾಡಿ ಇದ್ದ ಬದ್ದ ಕೂದಲು ಕಳೆದುಕೊಳ್ಳುತ್ತಾರೆ! ಅಲ್ಲವೇನು ಸಾಬ್?"

ಸಾಗೂ ಕೇಳಿದ. ಅವನಿಗೆ ಉತ್ತರ ನೀಡದೆ ಯೋಚಿಸತೊಡಗಿದೆ. ಇದ್ದಬದ್ದ ಕೂದಲು ಕಳೆದುಕೊಳ್ಳುವುದರ ಜೊತೆಗೆ, ಕೂದಲು ಬೆಳೆಸುವುದಕ್ಕೋಸ್ಕರ, ಹಣವನ್ನು ಕಳೆದುಕೊಳ್ಳುತ್ತಾರೆ!

ನನ್ನ ತಲೆ ಕೂದಲ ಮೇಲೆ ಕೈ ಆಡಿಸಿದೆ. ಕೂದಲು ಸೊಂಪಾಗಿ ಬೆಳೆದಿತ್ತು. ಬೆಳ್ಳಗೆ ನೆರೆಯತೊಡಗಿದ್ದರೂ, ಉದರತೊಡಗಿರಲಿಲ್ಲ ಸದ್ಯ!

"ಈ ಮೊಲದ ಎಣ್ಣೆ, ಕೂದಲು ಕಪ್ಪಾಗಿಸುತ್ತೆ ಸಾಬ್! ಪರೀಕ್ಷಿಸಿ ನೋಡಿ!" ಅಲ್ಲೇ ನಿಂತಿದ್ದ ಸಾಗೂ ಹೇಳಿದ.

"ನಡೀರಿ ಹೊರಗೆ, ನಿಮ್ಮ ಬಕ್ಕತಲೇಲಿ ಎಣ್ಣೆ ಬರೆಸಿಬಿಡುತ್ತೇನೆ ಹೊರಗೆ ಹೋಗದಿದ್ದರೆ!" ಕೂಗಿದೆ ನಾನು.

"ಕೋಪ ಯಾಕೆ ಸಾಬ್? ನಿಮಗೆ ಇಷ್ಟವಿಲ್ಲದಿದ್ದರೆ ಬೇಡ. ನನಗೆ ಬೇರೆ ಗಿರಾಕಿಗಳಿದ್ದಾರೆ. ದಿಲ್ಲೀ ಶಹರದಲ್ಲಿ ಬಕ್ಕತಲೆಗಳಿಗೆ ಬರಗಾಲವೇ?" ಎಂದು ಹೇಳಿ ನನ್ನ ಬಳಿ ಬಂದು ಕಿವಿಯ ಹತ್ತಿರ ಉಸಿರಿದ, "ಡಾಕ್ಟರ್ ಕಾಲ್ರಾಗೆ ಹೇಳಿ ಸಾಬ್ ಈ ಬ್ಯಾಂಕ್‌ನಲ್ಲಿ ನಾವು ಒಂದು ಬ್ಲಡ್ ಬ್ಯಾಂಕ್ ಶುರು ಮಾಡೋಣ. ಬೇಕಾದರೆ ನಾನು ನನ್ನ ರಕ್ತ ಪುಕ್ಕಟೆ ಕೊಡುತ್ತೇನೆ!" ಅಷ್ಟರಲ್ಲಿ.........

....."ಮಲ್‌ಹೋತ್ರಾ ಹಣ ಕೊಟ್ಟನಾ ಸಾಬ್?"

ಲಾಲ್ ಒಳಗೆ ಬಂದು ಕೇಳಿದ. ಇವನು ಮಾಡದ ತಪ್ಪಿಗೆ ನಾನು ಹೊಣೆಗಾರನೇ? ನಾನೇ ತಪ್ಪು ಮಾಡಿ, ಯಾವ ಯೋಚನೆಯೂ ಇಲ್ಲದೆ, ಹಾಯಾಗಿ ಕುಳಿತು ದಾಸರ ಪದ ಹೇಳುತ್ತಿದ್ದೀರಲ್ಲಾ ಎನ್ನುವ ರೀತಿಯದಾಗಿತ್ತು ಅವನು ನನ್ನನ್ನು ಪ್ರಶ್ನಿಸಿದ ರೀತಿ! ಇವನ ರಕ್ತ ಹೀರಿ ಬ್ಲಸ್‌ಬ್ಯಾಂಕ್‌ಗೆ ಯಾಕೆ ದಾನ ಮಾಡಬಾರದು? "ನೀವು ಪ್ರಯತ್ನ ಮಾಡಬೇಕು!" ಎಂದೆ.

"ನನ್ನ ಮಾತಿಗೆ, ಪ್ರಯತ್ನಕ್ಕೆ ಬೆಲೆ ಎಲ್ಲಿದೆ ಸಾಬ್?"

"ನನ್ನ ಪ್ರಯತ್ನಕ್ಕೂ ಬೆಲೆ ಇಲ್ಲದ ಹಾಗೆ ಮಾಡಿದ್ದಾರೆ ಮಲ್‌ಹೋತ್ರಾ!"

"ಮಲ್‌ಹೋತ್ರಾ ಹಣ ಕೊಡದಿದ್ದರೆ, ನಾನು ಅವನನ್ನು ಕೊಂದು ಹಾಕಿಬಿಡುತ್ತೇನೆ" ಎಂದ ಲಾಲ್ ಸಿಟ್ಟಾಗಿ .

"ಕೊಲ್ಲುತ್ತೀರಾ?"

"ಕೊಲ್ಲುವುದಿಲ್ಲ! ಕೊಲ್ಲಿಸುತ್ತೇನೆ!"

ಅಬ್ಬ, ಧೈರ್ಯವೇ?ಕೈಯಲ್ಲಿ ಮಾಡಿ ತೋರಿಸದಿದ್ದರೂ, ಬಾಯಲ್ಲಿ ಹೇಳಲಿಕ್ಕೆ ಧೈರ್ಯವಿದೆಯಲ್ಲಾ ಈ ಲಾಲ್‌ನಿಗೆ. ಹೇಗೆ ಕೊಲ್ಲುತ್ತಾನೆ? ತನ್ನ ಉಬ್ಬುಹಲ್ಲಿನಿಂದ ಮಲ್‌ಹೋತ್ರಾನ ಹೊಟ್ಟೆ ಬಗೆದು, ಆಧುನಿಕ ನರಸಿಂಹ ಅವತಾರ ತಾಳುತ್ತಾನೆಯೆ? ಮಲ್‌ಹೋತ್ರಾನ ಕೊಲೆ ಮಾಡಿದರೂ, ಇವನ ಹಣ ಹೇಗೆ ವಾಪಸ್ಸು ದೊರೆಯುತ್ತದೆ?

"ಕೊಲೆ ಮಾಡಿಸಿದರೂ, ನಿಮಗೆ ಹಣ ಹೇಗೆ ಸಿಗುತ್ತದೆ?"

"ಹಣ ಸಿಗದಿದ್ದರೂ ಪರವಾಗಿಲ್ಲ. ಕೊಲೆ ಮಾಡಿಸಿಬಿಡುತ್ತೇನೆ."

"ಕೊಲೆ ಮಾಡಿಸಿಬಿಡುತ್ತೇನೆ" ಎಂದು ಹೇಳಬೇಕಾದರೆ, ಯಾರೋ ಇವನಿಗೆ ಕುಮ್ಮಕ್ಕು ಕೊಟ್ಟಿರಬೇಕು. ಅಥವಾ ಹೆದರಿಸುತ್ತಾ ಇರಬೇಕು. ಮಲ್‌ಹೋತ್ರಾ ಹೆದರುವವನೆ?

"ಯಾರಿಂದ ಕೊಲೆ ಮಾಡಿಸುತ್ತೀರಾ?"

"ದಿಲ್ಲೀಯ ಪಹಾರ್‌ಗಂಜ್ ಗೂಂಡಾಗಳ ಬಗ್ಗೆ ನಿಮಗೆ ತಿಳಿದಿದೆಯಾ?"

ನಾನು ಉತ್ತರಿಸಲಿಲ್ಲ.

"ಪಹಾರ್‌ಗಂಜ್ ಗೂಂಡಾಗಳು ಇಡೀ ದಿಲ್ಲೀಗೆ ಪ್ರಸಿದ್ಧಿ ಪಡೆದಿದ್ದಾರೆ. ದುಡ್ಡು ಕೊಟ್ಟರೆ, ಎಷ್ಟು ಕೊಲೆ ಬೇಕಾದರೂ ಮಾಡುತ್ತಾರೆ!"

ಪಹಾರ್‌ಗಂಜ್, ದಿಲ್ಲೀಯ ಅತ್ಯಂತ ಜನಭರಿತವಾದ ಪ್ರದೇಶವೆಂದು ಅರಿತಿದ್ದೆ. ಸುಮಾರು ೨೦೦೦ ಜನ, ಪ್ರತಿ ಕಿಲೋಮೀಟರ್ ಸುತ್ತಳತೆ ಪ್ರದೇಶದಲ್ಲಿ ವಾಸಿಸುತ್ತಾರೆ. ಮೊಘಲ್ ಕಾಲದಿಂದಲೂ ಪ್ರಸಿದ್ಧಿ ಪಡೆದ ಈ ಪ್ರದೇಶ, ಗೂಂಡಾಗಿರಿ, ಪುಂಡಾಟಿಕೆ, ಹಿಂಸಾಚಾರಗಳಿಗೆ ಹೆಸರುವಾಸಿಯಾಗಿದೆ. ದಿಲ್ಲೀಯಲ್ಲಿ ರಕ್ತ ಹರಿಸಿದ, ನಾದಿರ್‌ಶಾನ ಸೈನಿಕರನ್ನು ಹಿಡಿದು, ಚಚ್ಚಿಕೊಲೆ ಮಾಡಿದ್ದು ಈ ಪಹಾರ್‌ಗಂಜ್‌ನ ಜನರೇ! ಇಂದಿಗೂ ಇಲ್ಲಿನ ಗೂಂಡಾಗಳಿಗೆ ಬಹಳ ಬೇಡಿಕೆ. ಗುತ್ತಿಗೆ ಕೊಲೆಗೆ ಹೆಸರುವಾಸಿ ಈ ಗೂಂಡಾಗಳು. ಪ್ರತಿಯೊಂದು ಅಂಗಾಂಗಗಳ ನೋವು-ಊನಕ್ಕೆ ಇಷ್ಟು ಹಣವೆಂದು ಗುತ್ತಿಗೆದಾರರು ನಿಗದಿ ಪಡೆದು, ಕಾರ್ಯ ಬಹಳ ಮುತುವರ್ಜಿಯಿಂದ, ಕಾರ್ಯಕುಶಲತೆಯಿಂದ, ನಿಯತ್ತಿನಿಂದ ನೆರವೇರಿಸಿಕೊಡುತ್ತಾರೆ. ಸಿಕ್ಕಿಹಾಕಿಕೊಂಡರೆ, ಬಿಡಿಸಲಿಕ್ಕೆ ಇವರ ಹಿತ್ಯೆಷಿ ಲಾಯರ್‌ಗಳಿದ್ದಾರೆ. ಹಾಗೂ ಶಿಕ್ಷೆಯಾದಲ್ಲಿ, ಇವರ ಕುಟುಂಬಗಳನ್ನು ನೋಡಿಕೊಳ್ಳುವುದಕ್ಕೆ ಸೂಕ್ತ ವ್ಯವಸ್ಥೆ ಕೂಡ ಏರ್ಪಾಡಾಗಿರುತ್ತದೆ.

ಲಾಲ್‌ನ ಮುಖ ನೋಡಿದೆ. ಅವನ ಉಬ್ಬುಹಲ್ಲುಗಳನ್ನು ನೋಡಿದೆ. ಹಲ್ಲುಗಳು ನನ್ನನ್ನು ತಿವಿದು ಇರಿದು, ಘಾಯಗೊಳಿಸಲು ಹಾತೊರೆಯಲಿಕ್ಕೆ ಸಿದ್ಧವಾಗಿದ್ದಂತೆ ತೋರಿತು. ನನ್ನ ಎದೆ ಢಬ ಢಬ ಎಂದು ಜೋರಾಗಿ ಹೊಡೆದುಕೊಳ್ಳಲು ಶುರುಮಾಡಿತು. ಈ ಶಬ್ಧ, ಲಾಲ್‌ನಿಗೆ ತಿಳಿದರೆ, ಅವನ ಉಬ್ಬುಹಲ್ಲುಗಳಿಗೆ ಹೆಚ್ಚು ಕೆಚ್ಚು ಬರಬಹುದೇನೋ ಎಂದು ಶಂಕೆಯುಂಟಾಯಿತು.

"ನಿಮಗೆ ಹಣ ವಸೂಲಾಗಬೇಕೋ ಅಥವಾ ಅವನ ಹೆಣ ಬೇಕೋ?"

ನನ್ನ ಗಡಸು ಧ್ವನಿಗೆ ಆತ ಸ್ವಲ್ಪ ತಗ್ಗಿದಂತೆ ಕಾಣಿಸಿತು. ತಲೆ ಸ್ವಲ್ಪವೇ ಬಾಗಿಸಿದ. ಉಬ್ಬು ಹಲ್ಲುಗಳ ಮೇಲೆ ಅವನ ಮೇಲ್ತುಟಿ ಕುಳಿತು, ದುಂಡು ನಾಲಿಗೆಯನ್ನು ಮುಚ್ಚಲಿಕ್ಕೆ ಹೆಣಗಾಡಿತು. ಆದರೆ, ಉಬ್ಬುಹಲ್ಲಿಗೆ ನಾಚಿಕೆ ಎಲ್ಲಿಂದ ಬರಬೇಕು?

"ಹಣ ತೆತ್ತು ಮಲ್‌ಹೋತ್ರಾನ ಹೆಣ ಉರುಳಿಸುವ ಬದಲು, ಅದೇ ಹಣವನ್ನು ಬ್ಯಾಂಕ್‌ಗೆ ಕಟ್ಟುಬಿಡಿ. ಯಾವ ಚಿಂತೆನೂ ಇರೋದಿಲ್ಲ!"

ಉಬ್ಬುಹಲ್ಲುಗಳು ಮತ್ತೆ ಕಾಣಿಸಿಕೊಂಡವು. ಉದ್ದುದ್ದ ಚಾಚಿ ನನ್ನ ಮೇಲೆ ಬೀಳಲು ಹವಣಿಸಿದವು.

"ಹಣ ಕೊಟ್ಟು ಹೆಣ ಉರುಳಿಸೋ ಜನ .ಪುಕ್ಕಲು ಜನ! ನಿಯತ್ತಿನಿಂದ, ನಿಷ್ಠೆಯಿಂದ ಕೆಲಸ ಮಾಡಿದ್ದರೆ, ಈ ಪರಿಸ್ಥಿತಿ ಬರುತ್ತಿತ್ತಾ?"

"ಒಂದು ಲಕ್ಷ ರೂಪಾಯಿ ಎಲ್ಲಿಂದ ತರುವುದು ಸಾಬ್? ಹಣ ಬ್ಯಾಂಕ್‌ಗೆ ಕಟ್ಟು, ಅಂತ ಹೇಳಿದರಲ್ಲಾ! ಅದು ಅಷ್ಟು ಸುಲಭಾನಾ?"

ಹಲ್ಲು ಬಾಯಿ ಬಿಟ್ಟ ಲಾಲ್!

"ಕೊಲೆ ಮಾಡಿಸುವುದಕ್ಕಿಂತ ಸುಲಭ!" ಎಂದೆ, ಕಾರವಾಗಿ.

"ಹಣ ಕೂಡಿಹಾಕುವುದು ಕಷ್ಟ, ಸಾಬ್! ಆದರೆ ದಿಲ್ಲೀಯಲ್ಲಿ ಕೊಲೆ ಮಾಡಿಸುವುದು ಬಹಳ ಸುಲಭ!"

ಲಾಲ್‌ನ ಬಾಯಿಂದ ಮಾತು ಹೊರಡುವುದರೊಳಗೆ, ಫೋನ್ ಗಂಟೆ ಬಾರಿಸಿತು. ಕೈಗೆ ಎತ್ತಿಕೊಂಡೆ, ಫೋನ್. ಆ ಕಡೆಯಿಂದ ಕುಮಾರ್ ಮಾತನಾಡುತ್ತಿದ್ದ.

"ಕಪೂರ್‌ನ ತಮ್ಮನ ಕೊಲೆಯಾಗಿದೆ!"

# 15

"ಯಾರೋ ಹೊಸಾ ಮೇನೇಜರ್ ಬಂದಿದ್ದಾರೆ ಎಂದು ತಿಳಿಯಿತು. ದೀಪಾವಳಿ ಉಡುಗೊರೆ ತಂದಿದ್ದೇನೆ. ದಯವಿಟ್ಟು ತೆಗೆದುಕೊಳ್ಳಿ."

ಬ್ಯಾಂಕ್ ಗ್ರಾಹಕನೊಬ್ಬ ಒಂದು ದೊಡ್ಡ ಬಿಸ್ಕತ್ ಪ್ಯಾಕೆಟ್‌ನ್ನು ನನ್ನ ಮೇಜಿನ ಮೇಲಿಟ್ಟ.

ದೀಪಾವಳಿ ಹಬ್ಬ ಮುಗಿದು ಹತ್ತು ದಿನಗಳಾದ ಮೇಲೆ ಉಡುಗೊರೆ ಕೊಡುತ್ತಿದ್ದಾನಲ್ಲಾ ಈತ! ದೀಪಾವಳಿ ಹಬ್ಬದ ಹಿಂದಿನ ದಿನ ಅಥವಾ ಅದೇ ದಿನ, ಹಬ್ಬದ ಪ್ರಯುಕ್ತ ಉಡುಗೊರೆ ಹಂಚುವುದು ಇಲ್ಲಿನ ಜನಪ್ರಿಯವಾದ ರೂಢಿ. ಹತ್ತುದಿನ ತಡಮಾಡಿ, ನನ್ನ ಪರಿಚಯವಿರದ ಈತ, ಉಡುಗೊರೆ ನೀಡುವುದು ಎಂದರೆ ಅಚ್ಚರಿಯ ವಿಷಯವಾಗಿತ್ತು.

"ಹಬ್ಬ ಮುಗಿದ ಮೇಲೆ, ಇಷ್ಟು ದಿನಗಳಾದ ಮೇಲೆ ಏಕೆ ಈ ಉಡುಗೊರೆ?"

"ಉಡುಗೊರೆ ಕೊಡಬಾರದು ಎಂತಲೇ ಇದ್ದೆ. ನನ್ನ ಲಿಸ್ಟ್‌ನಲ್ಲಿ ನಿಮ್ಮ ಹೆಸರು ಕೊನೇಲಿ ಇತ್ತು. ಯಾರೋ ಹೇಳಿದರು, ಹೊಸ ಮೇನೇಜರ್ ಬಂದಿದ್ದಾರೆ, ಈಗ ಬ್ಯಾಂಕ್‌ನ ಸೇವೆ ಸುಧಾರಿಸಿದೆ ಅಂತ. ಈ ಉಡುಗೊರೆ ನೀಡಿ, ನಿಮ್ಮ ಪರಿಚಯವೂ ಆದ ಹಾಗೆ ಆಗುತ್ತದೆ ಎಂದು ಎಣಿಸಿ ಬಂದೆ."

ಸುಂದರ ಮುಖಚರ್ಯೆ ಹೊಂದಿದ್ದು, ಸುಮಾರು ಮೂವತ್ತು ವರ್ಷ ವಯಸ್ಸಾದ ಈ ವ್ಯಕ್ತಿಯ ಹೆಸರನ್ನು ಕೇಳಿದೆ.

"ಸಕ್ಸೇನಾ" ಎಂದು ಹೇಳಿದ.

"ಏನು ವ್ಯಾಪಾರ ನಿಮ್ಮದು?"

"ವುಲ್ಲನ್ ಬಟ್ಟೆ ವ್ಯಾಪಾರ."

"ನಮ್ಮ ಬ್ಯಾಂಕ್‌ನೊಂದಿಗೆ ವ್ಯವಹಾರ ಪುನಃ ಶುರುಮಾಡಿ ನಿಮಗೆ ನನ್ನ ವೈಯಕ್ತಿಕ ಸೇವೆ ನೀಡುತ್ತೇನೆ."

"ನೋಡೋಣ" ಎಂದು ಅವ ಎದ್ದು ಹೋದ. ಜಾಟ್ ಜವಾನನನ್ನು ಕರೆದು, ಬಿಸ್ಕತ್ ಪ್ಯಾಕೇಟ್ ಅವನಿಗೆ ನೀಡಿ ಹೇಳಿದೆ:

"ಇದನ್ನು ತೆಗೆದುಕೊಂಡು ಹೋಗಿ ನಿಮ್ಮ ಮಗುವಿಗೆ ಕೊಡಿ."

ದೀಪಾವಳಿ ಹಬ್ಬ ಉತ್ತರ ಭಾರತದ ಅತಿ ಮಹತ್ವ ಹಬ್ಬಗಳಲ್ಲಿ ಒಂದು. ಇದು ಸಾರ್ವಜನಿಕ ಹಬ್ಬವಾಗಿ, ಜನರು ತಮ್ಮ ಎಲ್ಲಾ ಕಷ್ಟ-ಕಾರ್ಪಣ್ಯ, ವೈಮನಸ್ಸು

ಮರೆತು, ಒಬ್ಬರಿಗೊಬ್ಬರು, ಒಂದು ದಿನದ ಮಟ್ಟಿಗೆ, ಪರಸ್ಪರ ಪ್ರೀತಿ,ವಿಶ್ವಾಸ, ಹರ್ಷ, ಉಲ್ಲಾಸ, ನಲಿವು, ವಿನೋದಗಳಿಂದ ಆಚರಿಸುತ್ತಾರೆ. ಈ ಒಂದು ದಿನದ ಮಟ್ಟಿಗೆ, ಪರಸ್ಪರ ಸ್ನೇಹ, ಆತ್ಮೀಯತೆ, ಸೌಹಾರ್ದತೆ, ತಮ್ಮ ಸಂಗಾತಿ, ನೆಂಟರು, ಇಷ್ಟರು, ಆಪ್ತರೊಡನೆ ತೋರಿ, ಸಿಹಿತಿಂಡಿ ತಿನಿಸು ಮತ್ತು ಇತರ ಉಪಾಹಾರಗಳನ್ನು ಹಂಚಿಕೊಂಡು ನಲಿಯುತ್ತಾರೆ. ಈ ಒಂದು ದಿನದ ಮಟ್ಟಿಗೆ ಹಗೆತನ, ದ್ವೇಷ, ಮನಸ್ತಾಪ, ಅಸೂಯೆ, ಮತ್ಸರ, ಎದೆಯುರಿ ಬದಿಗೊತ್ತಿ ತಮ್ಮ ಒಣಸ್ವಾಭಿಮಾನ, ಹೆಮ್ಮೆ, ಬಿಗುಮಾನ, ಹಠ, ಛಲ, ನಿಷ್ಠುರತನ ಮರೆತು ಒಂದಾಗುತ್ತಾರೆ. ಈ ಒಂದು ದಿನದ ಮಟ್ಟಿಗೆ, ಎಲ್ಲೆಲ್ಲೂ ಆನಂದ, ಖುಷಿ, ಉಲ್ಲಾಸ, ಹರ್ಷಗಳ ವಾತಾವರಣ ದಲ್ಲಿ ಜನರು ಹಬ್ಬವನ್ನು ಆಚರಿಸುವ ನೆಪದಲ್ಲಿ, ವಾತಾವರಣವನ್ನು ಪಟಾಕಿ, ಬಾಣ, ಬಿರುಸುಗಳ ಹೊಡೆತಗಳಿಂದ, ಶಬ್ಧಮಾಲಿನ್ಯ, ಹವಾಮಾಲಿನ್ಯ ಗಳಿಂದ ಕಲುಶಿತಗೊಳಿಸುವುದರಲ್ಲಿ ಸಫಲರಾಗುತ್ತಾರೆ. ರಾತ್ರಿಯೆಲ್ಲಾ ಪಟಾಕಿಗಳನ್ನು ಕಿವಿ ಕಿವುಡಾಗುವ ಹಾಗೆ ಸಿಡಿಸಿ, ನಿದ್ರೆ ಮನಸ್ಸು ಎರಡನ್ನು ಕೆಡಿಸಿ, ತಮ್ಮ ಜನ್ಮ ಸಾರ್ಥಕ ಮಾಡಿಕೊಳ್ಳುತ್ತಾರೆ.

"ಸಾಬ್! ದೀಪಾವಳಿ ರಾತ್ರಿ, ರಿಂಗ್‌ರೋಡ್ ಎಕ್ಸ್‌ಟೆನ್‌ಶನ್ ಶಾಖೆಯಲ್ಲಿ ಡಕಾಯಿತರು ನುಗ್ಗಿ ಹದಿನೈದು ಲಕ್ಷ ದರೋಡೆ ಮಾಡಿದ್ದಾರಂತೆ!"

ವರ್ಮಾ ಹೊಸ ಸುದ್ದಿ ತಂದಿದ್ದ.

ದೀಪಾವಳಿ ರಾತ್ರಿ, ಪಟಾಕಿಗಳ ಶಬ್ಧಗಳ ನಡುವೆ ಕಳ್ಳರು ನಮ್ಮ ಶಾಖೆಯೊಂದಕ್ಕೆ ಕನ್ನ ಹಾಕಿ, ಸ್ಟ್ರಾಂಗ್ ರೂಮಿನ ಬಾಗಿಲ ಬೀಗ, ಗಡಾರಿಗಳಿಂದ ಒಡೆದು, ಒಳಗೆ ನುಗ್ಗಿ, ರಾತ್ರಿ ಇಡೀ ಆರಾಮಾಗಿ, ಹಣ ಎಣಿಸಿ, ಸಿಹಿತಿಂಡಿ ತಿಂದು, ಚಾ ಮಾಡಿ ಕುಡಿದು, ದೀಪಾವಳಿ ಪ್ರಯುಕ್ತ, ಬಾಂಬ್ ಸಿಡಿಸಿ, ಬೆಳಗಿನ ಜಾವ ಹಣದೊಡನೆ ಪರಾರಿಯಾಗಿದ್ದರು!

ದಿಲ್ಲೀಯಲ್ಲಿ ಕೇವಲ ಕವಿಗಳು, ಲೇಖಕರು, ದಾರ್ಶನಿಕರು, ರಾಜಕೀಯ ವ್ಯಕ್ತಿಗಳು, ವರ್ತಕರು, ವಾಣಿಜ್ಯೋದ್ಯಮಿಗಳು, ಸರಕಾರೀ ನೌಕರರು, ಕಾರಖಾನಾ ಕೂಲಿಗಳು, ಬಡವರು, ಐಶ್ವರ್ಯವಂತರು, ಶಾಲಾ ಮಕ್ಕಳು, ಕಾಲೇಜ್ ವಿದ್ಯಾರ್ಥಿ ಗಳು, ಬ್ಯಾಂಕ್ ನೌಕರರು, ಮಹಿಳೆಯರು, ಗೃಹಿಣಿಯರು, ಪೊಲೀಸರು, ಗೂಂಡಾ ಗಳು, ಆತಂಕವಾದಿಗಳು, ಸೈನಿಕರು ಇತರ ನಾಗರೀಕರು ದೀಪಾವಳಿ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸುವುದಿಲ್ಲ! ದರೋಡೆಗಾರರು, ಕಳ್ಳರು, ಡಕಾಯಿತರು, ಬಹು ಅತಿ ಉತ್ಸುಕತೆಯಿಂದ ಪರಮಾನಂದದಿಂದ ಅತ್ಯಂತ ಔಚಿತ್ಯಪೂರ್ಣವಾಗಿ, ಯಾರಿಗೂ ತೊಂದರೆಯಾಗದ ಹಾಗೆ, ಬಹಳ ಜಾಗರೂಕತೆಯಿಂದ ಬಾಂಬ್; ಪಟಾಕಿ

ಸಿಡಿಮದ್ದುಗಳನ್ನು ಸಿಡಿಸಿ, ಬಹಳ ಕುಶಲತೆಯಿಂದ ಬ್ಯಾಂಕ್‌ಗಳ ಭದ್ರಕೋಣೆಗಳೊಳಗೆ ಭದ್ರವಾಗಿಸಿಟ್ಟಿದ್ದ ಹಣ, ಆಭರಣಗಳನ್ನು ದೋಚಿ, ತಮ್ಮ ಜೀವನವನ್ನು ಸುಖ, ಹರ್ಷ ಆನಂದದಿಂದ ಜರುಗಿಸಲು ದೀಪಾವಳಿಯನ್ನು ವಿಜೃಂಭಣೆಯಿಂದ ಆಚರಿಸಿ, ಕೃತಾರ್ಥರಾಗುತ್ತಾರೆ.

"ಇದರಲ್ಲಿ ಆತಂಕವಾದಿಗಳ ಕೈ ಏನಾದರೂ ಇದೆಯೆ?"

ನನ್ನ ಮುಖ ಪ್ರಶ್ನಾರ್ಥವಾಗಿ ನೋಡಿದ ವರ್ಮಾ. ಬ್ಯಾಂಕ್ ದರೋಡೆ, ಕೇವಲ ಕಳ್ಳರು, ಖದೀಮರು; ದರೋಡೆಕಾರರುಗಳಿಗೆ ಸೀಮಿತವಾದ ಕೇಂದ್ರ ಎಂದು ಒಂದು ನಂಬಿಕೆ. ಈ ಕ್ಷೇತ್ರಕ್ಕೆ ಆತಂಕವಾದಿಗಳು ಏಕೆ ಕೈ ಅಥವಾ ತಲೆ ಹಾಕುತ್ತಾರೆ?

"ನಿಮಗೆ ಯಾಕೆ ಬಂತು ಈ ಸಂದೇಹ?"

ಹೌದು! ನನಗೆ ಯಾಕೆ ಬಂದಿತು ಈ ಸಂದೇಹ. ಬಹುಶಃ ಸರ್ದಾರ್ಜೀಯ ನೆನಪು ನನ್ನ ತಲೆಯಲ್ಲಿ ಹುಗಿದುಹೋಗಿ, ಅದು ಅಗೋಚರವಾಗಿ ನನ್ನನ್ನು ಕಾಡುತ್ತಿದೆಯೆ? ಸರ್ದಾರ್ಜೀ ಆತಂಕವಾದಿಯಾಗಿ ಪರಿವರ್ತನೆಯಾದ ಮೇಲೆ ನನ್ನ ಮನಸ್ಸು ಯಾವುದೇ ಹಿಂಸಾತ್ಮಕ ದುರ್ಘಟನೆ ಸಂಭವಿಸುವಾಗ, ಆತಂಕಗೊಂಡು ಆ ದುರ್ಘಟನೆಗೆ ಸರ್ದಾರ್ಜೀ ಕಾರಣನಾಗಿರಬಹುದೇ ಎಂಬ ಸಂಶಯ ಉಂಟಾಗುತ್ತಿದೆಯೆ?

ಈ ಸರ್ದಾರ್ಜೀ ಏನಾದ? ಅವನ ಬಗ್ಗೆ ಸುದ್ದಿಯೇ ಇರಲಿಲ್ಲ. ಅವನನ್ನು ಕಂಡು, ಮಾತನಾಡಿಸಿ, ಅವನ ಗುರಿಯ ಬಗ್ಗೆ ಚರ್ಚಿಸಿ, ವಿಷಯ ಸಂಗ್ರಹಿಸುವ ಹಂಬಲ ಉಂಟಾಯಿತು. ಕಪೂರ್‌ನನ್ನು ಭೇಟಿ ಮಾಡಿ ಬಹಳ ದಿನಗಳೇ ಉರುಳಿದ್ದವು. ಕಪೂರ್‌ನ ತಮ್ಮನ ಕೊಲೆಯಾದ ಆ ದಿನ ನೆನೆಸಿಕೊಂಡರೆ, ಮೈ ಬೆವತು ನೀರಾಗುತ್ತದೆ. ಅಬ್ಬ! ಎಂತಹ ದುರ್ಮರಣ! ಎಂತಹ ದುರಂತ! ಏನೂ ಅರಿಯದ, ನಿಷ್ಕಪಟಿ ರಾಕೇಶ್ ಕಪೂರ್, ತನ್ನ ಶಿಸ್ತು, ಕೆಚ್ಚೆದೆಯ ವಿಶ್ವಾಸ, ನಿರ್ಭಯ, ಗಂಭೀರ ಗುಣಗಳ ಅಪರಾಧಕ್ಕೆ ತನ್ನ ಜೀವವನ್ನೇ ಬಲಿಕೊಟ್ಟಿದ್ದ. ಕೆಟ್ಟ, ಕಲ್ಮಶ, ವಿಷಮಿಶ್ರಿತ ಔಷಧ ತಯಾರಿಸುತ್ತಿದ್ದ ಕಾರ್ಖಾನೆಯನ್ನು ಜಪ್ತಿಮಾಡಿ, ಮಾಲೀಕನ ಮೇಲೆ ಕೇಸ್ ಹಾಕಿದ್ದಕ್ಕೆ, ರೊಚ್ಚಿಗೆದ್ದ ಮಾಲೀಕ, ಕೇಸ್ ವಾಪಸ್ಸು ತೆಗೆದುಕೊಳ್ಳದಿದ್ದರೆ, ಕೊಲೆ ಮಾಡುವುದಾಗಿ ಹೆದರಿಸಿದ್ದರೂ, ಭಯಪಡದ ರಾಕೇಶ್, ನಿರಾಳವಾಗಿ, ನಿರ್ಭಯವಾಗಿ ನೆಮ್ಮದಿಯಿಂದ ಇದ್ದ. ಆದರೆ, ದಿಲ್ಲೀಯಲ್ಲಿ ಘನಘೋರವಾಗಿ ಜರಗುತ್ತಿರುವ ಹಿಂಸಾಚಾರದ ಹುಚ್ಚು ಹೊಳೆಯ ರಭಸದಲ್ಲಿ ಕೊಚ್ಚಿಕೊಂಡು ಹೋಗಿದ್ದ ಕಾರ್ಖಾನೆ ಮಾಲೀಕ ಕ್ರಿಯಸ್ಥ. ಅವನು ಹೆದರಿಸಿದಂತೆ, ರಾಕೇಶ್‌ನನ್ನು ಅವನ ಮನೆಬಾಗಿಲಿನಲ್ಲೇ ಗುಂಡಿನಿಂದ ಹೊಡೆದು ಕೊಲ್ಲಿಸಿದ್ದ!

"ನನಗೆ ಮೊದಲೇ ತಿಳಿದಿದ್ದರೆ, ಅವನಿಗೆ ಬುದ್ಧಿವಾದ ಹೇಳುತ್ತಿದ್ದೆ. ವಿಷಯ ತಿಳಿದಿದ್ದೇ ಅವನು ಸತ್ತ ಮೇಲೆ."

ಕಪೂರ್‌ನನ್ನು ನಾನು ಭೇಟಿ ಮಾಡಿದಾಗ, ನಾನು ಪ್ರಶ್ನಿಸುವ ಮೊದಲೇ ಉತ್ತರ ನೀಡಿದ್ದ.

"ನಿಮ್ಮ ತಂದೆಗೆ ವಿಷಯ ತಿಳಿಯಿತೇ?"

"ತಿಳಿಯಿತು. ಆಸ್ಪತ್ರೆಗೆ ಸೇರಿಸಿದ್ದೇನೆ."

ಕಪೂರ್‌ನಿಗೆ ಒದಗಿದ ಕಷ್ಟಗಳ ಮಹಾಪೂರ ಕಂಡು ನನ್ನ ಮನ ಮರುಗಿತು. ತಾಯಿ, ತಮ್ಮನ ದುರ್ಮರಣ ಹೆಂಡತಿಯೊಡನೆ ವಿರಸದ ವಿಚ್ಛೇದನ, ಅವನ ದುಃಖ'ವರ್ಣಿಸಲು ಅಸಾಧ್ಯವೆಂದು ತೋರಿತು. ಏಟಿನ ಮೇಲೆ ಏಟು ಬಿದ್ದರೆ, ಗಾಯದ ಮೇಲೆ ಗಾಯವಾದರೆ, ಬದುಕು ಹಸನಾಗುವುದಾದರೆ ಹೇಗೆ? ಸಾವು, ಪದೇ ಪದೇ ತೋಳದಂತೆ ಮನೆಯೊಳಗೆ ನುಗ್ಗಿ ನೆಚ್ಚಿನವರನ್ನು ಹಿಡಿದು ಕೊಂಡೊಯ್ದರೆ, ಯಾರನ್ನು ಹಳಿಯಬೇಕು? ವಿಧಿಯನ್ನೇ? ಹಣೆಬರಹವನ್ನೇ? ದೇವರನ್ನೇ?

"ತಂದೆ ಬದುಕುವುದು ಕಷ್ಟವೇ ಎಂದು ತೋರುತ್ತದೆ"

ಕಪೂರ್ ಯಾವ ಭಾವುಕತೆಯಿಲ್ಲದ ಧ್ವನಿಯಲ್ಲಿ ಹೇಳಿದ.

"ಯಾಕೆ? ಏನಾಗಿದೆ ಅವರಿಗೆ?"

"ಡಿಪ್ರೆಶನ್ ಜಾಸ್ತಿಯಾಗಿದೆ. ಅಷ್ಟೆ."

ಅಗೋಚರವಾಗಿ, ನಿರಂತರವಾಗಿ, ಕರಗಿ, ಹರಡುವ ನೋವಿನಿಂದ ಕೂಡಿದ ಮನಸ್ಸು, ತನ್ನ ನೋವಿಗೆ ಯಾವ ವಿಧವಾದ ಪರಿಹಾರವೂ ಇಲ್ಲವೆಂಬ ಬಲವಾದ ನಂಬಿಕೆ ಇಟ್ಟುಕೊಂಡ ಮನಸ್ಥಿತಿಗೆ 'ಡಿಪ್ರೆಶನ್' ಎಂದು ಕರೆಯುತ್ತಾರೆಂದು ಎಲ್ಲೋ ಓದಿ ತಿಳಿದಿದ್ದ ನಾನು ಕಪೂರ್‌ನ ತಂದೆಯ ಮನಃಸ್ಥಿತಿಯನ್ನು ಅರ್ಥಮಾಡಿಕೊಳ್ಳ ಬಲ್ಲವನಾಗಿದ್ದೆ. ಮಗ ಮತ್ತು ಹೆಂಡತಿಯರ ದುರ್ಮರಣ ಅವರನ್ನು ಜರ್ಝರಿತ ರನ್ನಾಗಿ ಮಾಡಿದ್ದರಲ್ಲಿ ಸಂದೇಹವೇ ಇರಲಿಲ್ಲ. ಈ ಇಳಿವಯಸ್ಸಿನಲ್ಲಿ ಇಂತಹ ನೋವು ಅನುಭವಿಸುವುದು ಅಸಹನೀಯ!

ಜನರು ಹೊಟ್ಟೆಗಿಲ್ಲದೆ ಸಾಯುತ್ತಾರೆ;ಕ್ಷುಲ್ಲಕ ಕಾರಣಕ್ಕೆ ಹೊಡೆದಾಡಿ, ಬಡಿದಾಡಿ ಸಾಯುತ್ತಾರೆ; ಜಾತಿ, ಧರ್ಮಗಳ ಬಗ್ಗೆ ಅನಾವಶ್ಯಕವಾಗಿ, ಯುದ್ಧ ಸಾರಿ ಸಾವಿರಾರು ಜನರು ಸಾಯುತ್ತಾರೆ;ಪ್ರಕೃತಿ ವಿಕೋಪದಿಂದ ಲಕ್ಷಾಂತರ ಜನರು ಭೂಕಂಪ, ಬಿರುಗಾಳಿ, ಮಳೆಗಳ ಮಹಾಪುರಗಳಿಗೆ ತುತ್ತಾಗಿ ಸಾಯುತ್ತಾರೆ: ಯುದ್ಧವೆಂಬ ಯಜ್ಞದಲ್ಲಿ ರಕ್ತ-ಮಾಂಸಗಳ ಅಭಿಷೇಕ ಮಾಡಿ ಸಾಯುತ್ತಾರೆ;ಆದರೆ,

ಮನುಷ್ಯ ಮತ್ತೊಬ್ಬ ಮನುಷ್ಯ ಸತ್ತಿದ್ದಕ್ಕೆ ಕೊರಗಿ, ಕೊರಗಿ ಸಾಯುವುದೂ ಒಂದು ವಿಪರ್ಯಾಸವೇ ಸರಿ! ಎಲ್ಲರೂ ಸಾಯುವುದು ಖಂಡಿತ ಎಂದು ತಿಳಿದೂ, ಮನುಷ್ಯ ಕೊರಗಿ ತಾನು ಸಾಯುವುದು ಎಂತಹ ದುರಂತ! ಕೊರಗಿ ಸಾಯುವುದಾದರೂ ಏತಕೆ? ಮನುಷ್ಯನ ಬಹುಮುಖ್ಯ ಸಹಜಪ್ರವೃತ್ತಿ, ಹುಟ್ಟರಿವು ಹಾಗೂ ಮನಸ್ಸಿನ ಆವೇಗ ಗಳಾದ, ತನ್ನದೇ ಆದ ಸ್ವಂತತೆಯನ್ನು ಕಾಪಾಡಿಕೊಳ್ಳುವ ಆಸೆ, ಯಶಸ್ಸು ಗಳಿಸುವಾಸೆ ಮತ್ತು ಒಂಟಿತನದ ಭಯ, ಇವುಗಳಿಂದ ನರಳುತ್ತಾನೆ. ಈ ಆವೇಗಗಳು ಪರಸ್ಪರ ಹೊಂದಾಣಿಕೆ ಸಾಧ್ಯವಾಗದ ಕಾರಣ, ಮನುಷ್ಯನ ಜೀವನ ಸಂಕಟಮಯ ವಾಗಿ ಹೋಗುತ್ತದೆಯಲ್ಲವೇ? ನೂರಾರು ಆಸೆ ಆಕಾಂಕ್ಷೆಗಳನ್ನು ಹೊತ್ತು, ಅವುಗಳನ್ನು ಪೂರೈಸಬೇಕಾದರೆ, ತನ್ನ ಸ್ವತಂತ್ರವನ್ನು, ಒಂಟಿತನವನ್ನು ಒತ್ತೆಯಿಟ್ಟು, ಸಮಾಜ ದಲ್ಲಿ, ಸಮಾಜ ಬಾಂಧವರೊಡನೆ, ಸ್ನೇಹಿತರೊಡನೆ, ಬಂಧುಬಳಗ ಗಳೊಂದಿಗೆ ಸಂಪರ್ಕ ಇಟ್ಟುಕೊಂಡು, ಹೆಣಗಾಡಲೇಬೇಕಲ್ಲವೇ? ಈ ಹೆಣಗಾಟದಲ್ಲಿ ಸಕಲ ಕಷ್ಟಕಾರ್ಪಣ್ಯ ಎದುರಿಸಲೇ ಬೇಕಲ್ಲವೇ? ತನ್ನ ಈ ಹುಟ್ಟರಿವಿನ ಗುಣಗಳಿಂದ ಸಂಸಾರ, ಸಂಸ್ಥೆ, ಸಂಘಟನೆ, ಸಮಾಜ ಕಟ್ಟಿ, ಅದರಿಂದ ತನ್ನ ಉದ್ಧಾರ ಆಗುವ ಆಸೆ ಇಟ್ಟುಕೊಂಡು, ಪುನಃ ಪುನಃ ಹೆಣಗುತ್ತಾನಲ್ಲವೇ?

"ಈ ಡಿಪ್ರೆಶನ್‌ನಿಂದ ನರಳುವ ಬದಲು ಮತ್ತೊಂದು ಮದುವೆ ಮಾಡಿ ಕೊಳ್ಳಬಹುದು!" ಕಪೂರ್, ನನ್ನ ಮನದಲ್ಲಿ ನಡೆಯುತ್ತಿದ್ದ ಹೊಯ್ದಾಟಕ್ಕೆ ಅಡ್ಡಿ ಬಂದು ಹೇಳಿದ.

"ಯಾರ ಮದುವೆ?"

"ನನ್ನ ತಂದೆಯ ಮದುವೆ!" ಕ್ಷೀಣವಾಗಿ ನಗುತ್ತಾ ಹೇಳಿದ ಕಪೂರ್.

ತನ್ನ ತಂದೆಯ ಮರುಮದುವೆಗೆ ಸಲಹೆ ನೀಡುತ್ತಿದ್ದ ಮಗನಾದ ಕಪೂರ್!

"ಮದುವೆಯಾದರೆ ಡಿಪ್ರೆಶನ್ ಕಡಿಮೆ ಅಥವಾ ವಾಸಿಯಾಗುತ್ತದೆಯಾ?"

"ಮದುವೆಯಾದರೆ, ಸಾಯುವುದಂತೂ ಇಲ್ಲ! ಸಂಸಾರ ತಾಪತ್ರಯಕ್ಕೆ ಸಿಕ್ಕಿಹಾಕಿಕೊಂಡರೆ, ಸಾಯುವುದಕ್ಕೆ ಸಮಯ, ಮನಸ್ಸು ಹೇಗೆ ಬರುತ್ತದೆ?"

"ಸಂಸಾರ ತಾಪತ್ರಯದಿಂದ ನರಳಿ, ಹೆಂಡತಿ ಮಗನ ಸಾವಿನಿಂದ ಪರಿತಪಿಸಿ, ಮತ್ತೊಮ್ಮೆ ಸಂಸಾರ ಸುಳಿವಿನಲ್ಲಿ ಸಿಕ್ಕಿಸಿ ಹಾಕಲು ನೀವು ಏಕೆ ಪ್ರಯತ್ನ ಪಡು ತ್ತಿದ್ದೀರಾ?"

"ನೋಡಿ ಸಾಬ್! ಮನುಷ್ಯನಿಗೆ ಹೆಣ್ಣಿನ ಸಂಗಡ, ಸ್ನೇಹ, ವಯಸ್ಸಾದ ಮೇಲೆ ಹೆಚ್ಚಿನ ಅವಶ್ಯಕತೆ ಇದೆ. ಯುವಕರಿಗೆ ಹೆಣ್ಣಿನ ಸ್ನೇಹಕ್ಕಿಂತ ಕಾಮದ ಅವಶ್ಯಕತೆ ಜಾಸ್ತಿ. ಸಂಗ, ಸ್ನೇಹ ಪ್ರಮುಖವಲ್ಲ!"

ಕಪೂರ್‌ನ ಮುಖವನ್ನು ದಿಟ್ಟಿಸಿ ನೋಡಿದೆ. ಆಲೋಚನೆ ಮಾಡತೊಡಗಿದೆ. ಪ್ರೇಮ-ಕಾಮ ಸಮಸಮವಾಗಿ ಕಾಡುತ್ತದೆಯಲ್ಲವೇ ಯುವ-ಯುವತಿ ಯರನ್ನು? ಯಾವುದು ಹೆಚ್ಚು, ಯಾವುದು ಕಡಿಮೆ? ಎಂದು ನಿರ್ಧರಿಸುವುದಕ್ಕೆ, ಪರಮಾರ್ಶೆಗೆ ಬೇರೆಯವರಿಗೆ ಸಾಧ್ಯವೇ? ಪ್ರತಿಯೊಬ್ಬ ವ್ಯಕ್ತಿಯ ವೈಯುಕ್ತಿಕ ಅನುಭವಕ್ಕೆ ಬಿಟ್ಟ ವಿಷಯವಲ್ಲವೇ ಇದು?

"ಯುವಕನಾದ ನಿಮಗೆ, ತಮಿಳುಕುಮಾರಿಯ ಸ್ನೇಹ, ಕಾಮದ ಸಂಕೇತವೇ ಅಥವಾ ಪ್ರೇಮದ ಪ್ರದರ್ಶನವೇ?" ಅವನ ಹೇಳಿಕೆಯನ್ನು ಅವನಿಗೆ ತಿರುಗಿಸಿದೆ.

"ನಾನು ಆ ಸ್ಥಿತಿಯನ್ನು ದಾಟಿ ಬಹು ದೂರ ಸಾಗಿದ್ದೇನೆ ಎಂದು ತಿಳಿದಿದ್ದೇನೆ. ಹೆಣ್ಣಿನ ಸಂಗ ಬೇಕಿದ್ದರೆ, ದಿಲ್ಲೀಯಲ್ಲಿ ಸಾಕಷ್ಟು ಅವಕಾಶಗಳಿವೆ. ಆದರೆ, ಕಮಲಳ ಸ್ನೇಹ ಉಂಟಾದ ಮೇಲೆ, ಆ ಸ್ನೇಹದಲ್ಲಿ ಪ್ರೇಮಕ್ಕೆ ಜಾಸ್ತಿ ಜಾಗ ಕೊಟ್ಟಿದ್ದೇನೆ ಎಂದು ಕೊಂಡಿದ್ದೇನೆ."

"ಯಾಕೆ ಈ ಅನುಮಾನ?'ಜಾಗ ಕೊಟ್ಟಿದ್ದೇನೆ ಎಂದು ಕೊಂಡಿದ್ದೇನೆ' ಅಂದರೆ ನಿಮ್ಮ ಅನಿಸಿಕೆಗೆ ಪುಷ್ಟಿ ಇಲ್ಲವೇ?"

"ಈ ಪ್ರೇಮ, ಪ್ರೀತಿ, ಕಾಮ, ಕರ್ಮ ಎಲ್ಲವೂ ಪ್ರತಿಯೊಬ್ಬ ವ್ಯಕ್ತಿಯ ವೈಯುಕ್ತಿಕ, ಸ್ವಾತಂತ್ರ ವಿಚಾರಗಳು. ಈ ವಿಷಯದಲ್ಲಿ ಎಲ್ಲರಿಗೂ ಅನ್ವಯಿಸ ಲ್ಪಡುವ ತತ್ವ ವಿಚಾರಗಳು ಇದ್ದರೆ, ಅದು ಸಾಧುವಾದುದಲ್ಲ. ಗಂಡ-ಹೆಂಡತಿಯನ್ನು ಗೊಂಬೆಯ ತರಹ ಮನೆಯಲ್ಲಿಟ್ಟು ಮಕ್ಕಳಾಟಿಕೆಯ ಹಾಗೆ ಅವಳನ್ನು ಆಡಿಸಲೂ ಬಹುದು; ಅವಳನ್ನು ದೇವತೆಯ ಹಾಗೆ ಪೂಜಿಸಲು ಬಹುದು; ಅವಳನ್ನು ತನ್ನ ಮಕ್ಕಳ ತಾಯಿ ಎಂದು ಗೌರವಿಸಲೂ ಬಹುದು; ಅವಳನ್ನು ಭೋಗ ವಸ್ತುವಾಗಿ ಹಿಂಸಿಸಲೂ ಬಹುದು; ಅವಳನ್ನು ಹೊರಪ್ರಪಂಚಕ್ಕೆ ನೌಕರಿಗೆ ಸೇರಿಸಿ, ಹಣ ಸಂಪಾದಿಸಲಿಕ್ಕೂ ಬಿಡಬಹುದು;ಅವಳನ್ನು ಅವಳ ಇಷ್ಟದ ಪ್ರಕಾರ ಸ್ವತಂತ್ರವಾಗಿರಲು ಬಿಡಬಹುದು; ಅವಳನ್ನು ತನ್ನ ಬಾಳಸಂಗಾತಿಯನ್ನಾಗಿ ಮಾಡಿಕೊಂಡು, ಅವಳೊಂದಿಗೆ ಎಲ್ಲಾ ರೀತಿಯಲ್ಲೂ ಸಂಪೂರ್ಣ ಸಹಕಾರ ನೀಡಲೂಬಹುದು....."

"ಅವಳನ್ನು ನೀವು ಯಾವ ರೀತಿಯಲ್ಲಿ ನೋಡಿಕೊಳ್ಳುವಿರಿ, ಅದು ಹೇಳಿ?"

ನನ್ನ ಒತ್ತಾಯದ ಧ್ವನಿಗೆ, ಕಪೂರ್ ಒಂದು ಕ್ಷಣ ಸುಮ್ಮನಾಗಿ, ನುಡಿದ.

"ನಿಮ್ಮ ಪ್ರಶ್ನೆಗೆ ಸರಿ ಉತ್ತರ ನನ್ನ ಬಳಿ ಇಲ್ಲವಲ್ಲ!" ನಗಾಡಿದ ಕಪೂರ್.

"ಏಕೆ?"

"ನೋಡಿ ಸಾಬ್!ನಾನು ಅವಳನ್ನು ಹೇಗೆ ನೋಡಿಕೊಳ್ಳುತ್ತೇನೆ ಎನ್ನುವುದು

ಈಗ ಹೇಳಲಿಕ್ಕೆ ಸಾಧ್ಯವಿಲ್ಲ. ಆದರೆ ನನ್ನ ಮನಸ್ಸು ಹೇಳುತ್ತದೆ: ಅವಳನ್ನು ಚೆನ್ನಾಗಿ ನೋಡಿಕೊಳ್ಳುತ್ತೇನೆ ಎಂದು!"

"ಈಗಲೇ ಹಾಗೆ ಹೇಳಲು ಹೇಗೆ ಸಾಧ್ಯ?"

ಅವನ ಮಾತನ್ನು ಮತ್ತೆ ಅವನಿಗೆ ತಿರುಗಿಸಿದೆ.

"ಸಾಧ್ಯ ಹೇಗೆಂದರೆ, ಅವಳಿಂದ ನಾನು ಏನೂ ಅಪೇಕ್ಷಿಸುವುದಿಲ್ಲ."

"ಅಂದರೆ?"

"ಅಂದರೆ, ಸಂಬಂಧ, ಸ್ನೇಹ, ಸಂಗ, ಚೆನ್ನಾಗಿರಬೇಕಾದರೆ, ಅವಳಿಂದ ಏನೂ ಅಪೇಕ್ಷಿಸಬಾರದು."

"ಪ್ರೀತಿ-ಪ್ರೇಮ, ಸಂಗ?"

"ಪ್ರೀತಿ, ಪ್ರೇಮ ನಾನು ನೀಡುತ್ತೇನಲ್ಲ. ಸಂಗ ನಾನು ನೀಡುತ್ತೇನಲ್ಲಾ. ಎಲ್ಲಾ ನಾನು ನೀಡುವಾಗ, ಅವಳಿಂದ ನಾನು ಮತ್ತೇನು ಅಪೇಕ್ಷಿಸುವುದು?"

"ನೀವು ನೀಡಿದ ಹಾಗೆ, ಅವಳು ನಿಮಗೆ ಪ್ರೀತಿ ಪ್ರೇಮ, ಸ್ನೇಹ ನೀಡ ಬೇಕಲ್ಲವೇ?"

"ಅವಳು ನೀಡಿದರೆ ಸಂತೋಷ, ನೀಡದಿದ್ದರೆ, ದುಃಖವಿಲ್ಲ."

"ಒಂದು ವಿಷಯ! ಪ್ರೇಮ, ಸ್ನೇಹಗಳಿಗೆ ಎರಡು ಹಸ್ತಗಳ ಅಗತ್ಯವಿದೆ ಯಲ್ಲವೇ? ಎರಡೂ ಹಸ್ತ ಸೇರಿದರೆ ಚಪ್ಪಾಳೆ! ಅಲ್ಲವೇ?"

"ಹೌದು! ನೀವು ಹೇಳಿದ್ದು ಸರಿ. ಆದರೆ ಪ್ರೇಮ, ಪ್ರೀತಿ, ಡಿಮಾಂಡ್ ಮಾಡಲಿಕ್ಕೆ ಆಗುತ್ತದೆಯೊ?ನಾನು ಪ್ರೀತಿ ಮಾಡುತ್ತೇನೆ; ಸ್ನೇಹದ ಹಸ್ತ ನೀಡುತ್ತೇನೆ; ಒಳ್ಳೇ ಜೊತೆಗಾರರಾಗಿ ಜೀವನ ನಡೆಸೋಣ ಎನ್ನುತ್ತೇನೆ; ಅಷ್ಟೇ! ಅವಳಿಗೆ ಜಬರದಸ್ತ್ ಮಾಡಲಿಕ್ಕೆ ಆಗುತ್ತದೆಯೊ?"

ಜಬರ್‌ದಸ್ತ್ ಮಾಡುವುದಾದರೆ ಪ್ರೀತಿ,ಪ್ರೇಮಗಳಿಗೆ ಜಾಗ ಎಲ್ಲಿ?

"ಈಗಿನ ಕಾಲದಲ್ಲಿ, ಪ್ರೀತಿ, ಪ್ರೇಮಗಳ ಮಾತು ಹೆಚ್ಚು ಕೇಳಿಬಂದರೂ, ಗಂಡು ಹೆಣ್ಣು ಪರಸ್ಪರ ಆಕರ್ಷಿತರಾದರೂ, ಆಕರ್ಷಣೆಗಿಂತ ಸ್ನೇಹ, ಒಡನಾಟದ ಅವಶ್ಯಕತೆ ಹೆಚ್ಚು ಅಂತ ತೋರುತ್ತದೆ. ಅಲ್ಲವೆ?"

"ಒಪ್ಪುತ್ತೇನೆ. ಆದ್ದರಿಂದಲೇ, ನನ್ನ ತಂದೆಗೆ ಇನ್ನೊಂದು ಮದುವೆಯ ಅವಶ್ಯಕತೆ ಇದೆ ಎಂದು ಹೇಳಿದ್ದು. ಅವರಿಗೆ ಈ ವಯಸ್ಸಿನಲ್ಲಿ ಹೆಣ್ಣಿನ ಅವಶ್ಯಕತೆ ಯಲ್ಲ, ಹೆಂಡತಿಯ ಒಡನಾಟದ ಅವಶ್ಯಕತೆ ಇದೆ."

ಕಪೂರ್‌ನ ಉದ್ವೇಗ ಕಂಡು ವ್ಯಾಕುಲಗೊಂಡೆ. ಇವನಿಗೆ ಯಾಕೆ ತಂದೆಯ ಮೇಲೆ ಇಷ್ಟು ಕಾಳಜಿ?ತಂದೆಯನ್ನು ಬಹಳವಾಗಿ ಪ್ರೀತಿಸುತ್ತಿದ್ದಾನೆಯೋ?

"ನೀವು ಮದುವೆ ಮಾಡಿಕೊಳ್ಳುವುದನ್ನು ಬಿಟ್ಟು ನಿಮ್ಮ ತಂದೆಯ ಮದುವೆ ಮಾಡಹೊರಟಿದ್ದೀರಲ್ಲಾ?" ಕುಚೋದ್ಯದ ಧ್ವನಿಯಲ್ಲಿ ಹೇಳಿದೆ.

"ಮೊದಲು ಹಿರಿಯರದ್ದು, ಆಮೇಲೆ ಕಿರಿಯರದ್ದು!"

ನಗುತ್ತಾ ಹೇಳಿದ ಕಪೂರ್! ಇಬ್ಬರಿಗೂ ಈ ಮೊದಲೇ ಮದುವೆಯಾಗಿ ಬಿಟ್ಟಿತ್ತಲ್ಲವೇ? ಒಬ್ಬನ ಹೆಂಡತಿ ಸತ್ತಿದ್ದರೆ, ಇನ್ನೊಬ್ಬಳು ಓಡಿ ಹೋಗಿದ್ದಳು!

"ಈಗೀಗ ನೀವು ಬಹಳ ಯೋಚಿಸುತ್ತಾ ಕುಳಿತು ಬಿಡುತ್ತೀರಾ ಸಾಬ್! ಏನಾಗಿದೆ ನಿಮಗೆ?" ವರ್ಮಾ ಕೇಳಿದ. ನಾನು ವಾಸ್ತವ ಪ್ರಪಂಚಕ್ಕೆ ಇಳಿದು ಬಂದೆ.

ಪದಗಳು, ಮೂರ್ತಿಗಳು, ಭಾವನೆಗಳು, ನನ್ನ ಮನಸ್ಸಿನ ಪರದೆಯಲ್ಲಿ, ಮಿಂಚಿ ಮಾಯವಾಗುವುದನ್ನು ನೆನೆದಾಗ, ಒಮ್ಮೊಮ್ಮೆ ಬೆರಗುಳ್ಳುವಂತಾ ಗುತ್ತಿತ್ತು. ಇದು ಏಕೆ ಹೀಗೆ ಆಗುತ್ತಿದೆ? ಕಪೂರ್ ಮತ್ತು ಸರದಾರ್‌ಜೀಯ ಜೀವನದ ಕಥೆಯ ಬಗೆ ನಾನು ಯಾಕೆ ಇಷ್ಟು ತಲೆ ಕೆಡಿಸಿ, ಸಂಕಟ ಪಡಬೇಕು? ಇದರಲ್ಲಿ ನನಗೇನು ಲಾಭ? ಇದರಿಂದ ನನ್ನ ಮನಸ್ಸಿಗೆ ಮತ್ತಷ್ಟು ಆತಂಕ ಜಾಸ್ತಿಯಾಗು ತ್ತದೆಯಲ್ಲವೇ? ನನ್ನ ಕೆಲಸದ ಬಗ್ಗೆ ಹೆಚ್ಚುಗಮನವೀಯುವುದು ಸೂಕ್ತವಲ್ಲವೇ?

"ನನ್ನ ಸ್ನೇಹಿತನೊಬ್ಬನಿದ್ದಾನೆ. ಆತ ಆತಂಕವಾದಿ. ಅವನ ಬಗ್ಗೆ ಯೋಚಿಸುತ್ತಾ ಇದ್ದೆ."

"ಆತಂಕವಾದಿ? ಅವನು ಸರದಾರ್‌ಜೀನಾ?"

"ಹೌದು!" ಎಂದೆ.

"ಅವರ ಬಗ್ಗೆ ಹುಶಾರಾಗಿರುವುದು ಒಳ್ಳೆಯದು ಸಾಬ್." ಎಚ್ಚರಿಸಿದ ವರ್ಮಾ.

'ಗುಮ್ಮ ಬರುತ್ತದೆ' ಎಂದು ಎಚ್ಚರಿಸುವ ಹಾಗೆ ನನ್ನನ್ನು ಎಚ್ಚರಿಸಿದ್ದಾನೆಯೆ, ಈ ವರ್ಮಾ?ಅಥವಾ ನಮ್ಮ ಹುಟ್ಟುಗುಣದಲ್ಲಿ ಒಂದಾದ ಪುಕ್ಕಲುತನಕ್ಕೆ ತನಿ ಎರೆಯಿತ್ತಿದ್ದಾನೆಯೊ? ಈ ಸರದಾರ್‌ಜೀ ಆತಂಕವಾದಿಯಾದರೆ ನನಗೇನು ಮಾಡ ಬಲ್ಲ? ಹಾಗೆ ಏನಾದರೂ ಮಾಡಬಯಸಿದರೆ, ಅವನಿಗೇನು ಲಾಭ? ನನಗೆ ಅವನಿಂದ ಆತಂಕವಾಗತೊಡಗಿದೆ ಎಂದು ಅವನಿಗೆ ತಿಳಿದರೆ, ಅವನ ಕೆಲಸ ಮತ್ತೂ ಸುಲಭ ವಲ್ಲವೇ? ಪುಕ್ಕಲರಿಗೆ ಹೆದರಿಸುವುದು, ಅತಂಕ ಒಡ್ಡುವುದು ಕುರಿ, ಕೋಳಿ ಕತ್ತು ಮುರಿದಷ್ಟೂ, ಸುಲಭವಲ್ಲವೇ?

"ಅವನು ಅಮೃತಸರದಲ್ಲಿದ್ದಾನಂತೆ. ಅವನನ್ನು ನೋಡದೇ ತುಂಬಾ ದಿನಗಳಾ ಯಿತು. ಬದುಕಿದ್ದಾನೋ, ಸತ್ತಿದ್ದಾನೋ ಎಂಬ ವಿಷಯ ತಿಳಿಯದು."

ನನ್ನ ಮಾತಿಗೆ ಉತ್ತರವಾಗಿ, "ಅಮೃತಸರಕ್ಕೆ ಹೋಗಿ ಏಕೆ ವಿಚಾರಿಸ

ಬಾರದು?" ವರ್ಮಾ ನಗುತ್ತಾ ಹಗುರವಾಗಿ ಹೇಳಿದ ಮಾತು ನಾನು ಹಗುರವಾಗಿ ತೆಗೆದುಕೊಳ್ಳಲಿಲ್ಲ. ಹೌದು!ಯಾಕೆ ಅಮೃತಸರಕ್ಕೆ ಹೋಗಬಾರದು?

"ಸಾಬ್! ಅಮೃತಸರಕ್ಕೆ ಹೋಗಿ ಸರದಾರ್‌ಜೀನ ನೋಡುವ ಬದಲು, ಜಾಟ್ ಜವಾನನ್ನು ನೋಡಿ ಬರೋಣ"

"ಏಕೆ? ಏನಾಗಿದೆ ಅವನಿಗೆ? ಒಂದು ವಾರದಿಂದ ಕೆಲಸಕ್ಕೆ ಬರುತ್ತಾ ಇಲ್ಲ ಅವನು."

"ಅವನಿಗೆ ಮೈಯಲ್ಲಿ ಹುಶಾರಿಲ್ಲ. ಆಸ್ಪತ್ರೆಗೆ ದಾಖಲು ಮಾಡಿದ್ದಾರೆ. ಬನ್ನಿ ಹೋಗೋಣ." ನನ್ನನ್ನು ಎಬ್ಬಿಸಿ, ಲೋಕ ನಾಯಕ ರಾಮ್‌ಮನೋಹರ ಲೋಹಿಯಾ ಆಸ್ಪತ್ರೆಗೆ ಕರೆದೊಯ್ದ.

ಜನರಲ್ ವಾರ್ಡ್‌ನಲ್ಲಿ ಮಲಗಿಸಿದ್ದ ಅವನನ್ನು ನೋಡಿ, ಹೌಹಾರಿದೆ. ಮಾಂಸಕರಗಿ ಎಲಬು ಗೂಡು ಆಗಿತ್ತು. ಅವನ ದೇಹ. ಕಟ್ಟುಮಸ್ತಾಗಿದ್ದ ಜಾಟ್ ಕುಗ್ಗಿ ಕರಗಿ ಹೋಗಿದ್ದ.

ನನ್ನನ್ನು ನೋಡಿ ನಗಲಾರದೆ, ಮುಖದಲ್ಲಿ ನಗುವಿನ ಗೆರೆಗಳನ್ನು ಮೂಡಿಸಲಿಕ್ಕೆ ಪ್ರಯತ್ನ ಪಟ್ಟು, ಸೋತು ಸೂರು ನೋಡತೊಡಗಿದ.

ಅಕ್ಕಪಕ್ಕದಲ್ಲಿ ಅವನ ನೆಂಟರು ಇಷ್ಟರೂ ಯಾರೂ ಕಾಣಲಿಲ್ಲ. ಅವನ ಹೆಂಡತಿಯಾದರೂ ಇರಬೇಕಲ್ಲ.

"ಏನು ಕಾಯಿಲೆ ಇವನಿಗೆ?"ವರ್ಮಾನನ್ನು ಕೇಳಿದೆ.

"ಗೊತ್ತಿಲ್ಲ ಸಾಬ್. ಡಾಕ್ಟರ್ ಸಾಬ್‌ರನ್ನು ಕೇಳಬೇಕು"

ತಂದಿದ್ದ ಹಣ್ಣುಗಳನ್ನು ಜಾಟ್‌ನ ಪಕ್ಕದಲ್ಲಿದ್ದ ಟ್ರೇನಲ್ಲಿಟ್ಟು ಹೊರಗೆ ಬಂದೆವು. ಅರ್ಧ ಗಂಟೆಕಾದ ಮೇಲೆ, ಒಬ್ಬ ನರ್ಸ್ ಜೊತೆಗೆ ಡಾಕ್ಟರ್ ವಾರ್ಡ್ ಒಳಗೆ ಹೋದೊಡನೆ, ವರ್ಮಾ ಅವರನ್ನು ಹಿಂಬಾಲಿಸಿದ. ಹತ್ತೇ ನಿಮಿಷಗಳಲ್ಲಿ ವರ್ಮಾ ವಾಪಸ್ಸಾದ.

"ಏನು ವಿಷಯ?"

"ಟಿ.ಬಿ. ಎಂದು ಹೇಳುತ್ತಾರೆ ಡಾಕ್ಟರ್. ನಾಳೆ ಅವನನ್ನು ಮೆಹರೋಲಿ ಯಲ್ಲಿರುವ ಟಿ.ಬಿ. ಸ್ಯಾನಿಟೋರಿಯಮ್‌ಗೆ ಸೇರಿಸುತ್ತಾರಂತೆ. ಕುಡಿದು ಕುಡಿದು, ದೇಹದ ಎಲ್ಲಾ ಭಾಗಗಳೂ ಜಕಂ ಆಗಿ ರಿಪೇರಿಯಾಗುವುದು ಕಷ್ಟವಂತೆ. ಈ ಕಾಯಿಲೆ ವಾಸಿಯಾಗಬೇಕಾದರೆ ತುಂಬಾ ಸಮಯ ತಗಲುತ್ತದೆ. ಹಣ ಖರ್ಚಾಗುತ್ತದೆ. ಈ ಜಾಟ್ ಎಲ್ಲಿಂದ ತರುತ್ತಾನೆ ಅಷ್ಟು ಹಣ? ಸಮಯ ಸಿಗುತ್ತದೆ, ಆದರೆ ಹಣ?"

"ನಾವೆಲ್ಲರೂ ಸೇರಿ ಹಣ ಸಹಾಯ ಮಾಡಿದರೆ ಹೇಗೆ?"

ಹೊರಗೆ ಬಂದು, ರಸ್ತೆಯಲ್ಲಿ ಹೆಜ್ಜೆ ಇಡುತ್ತಾ, ಕೇಳಿದೆ.

"ಹಣ ಸೇರಿಸಿಕೊಟ್ಟರೂ, ಇವನ ಕಾಯಿಲೆ ವಾಸಿ ಆಗೋದು ಕಷ್ಟ ಸಾಬ್. ಬನ್ನಿ ಹೋಗೋಣ."

ಇವನ ಉತ್ತರ ಒಗಟಿನ ಉತ್ತರವಾಗಿತ್ತು. ಒಗಟು ಮನಸ್ಸಿನಲ್ಲಿ ಹುಳುವಿನ ತರಹ ಕೊರೆಯುತ್ತದೆ. ಹುಳುವಿನ ಕೈಯಲ್ಲಿ ಕೊರೆಸಿಕೊಳ್ಳುವುದರ ಬದಲು, ವರ್ಮಾನ ಕೈಲಿ ಕೊರೆಸಿಕೊಂಡು, ಜಾಟ್‌ನ ಒಗಟಿನ ಗುಟ್ಟನ್ನು ಬಿಡಿಸಿಕೊಳ್ಳುವುದು ಮೇಲಲ್ಲವೇ?

"ಒಗಟು ಬಿಡಿಸಿ ಹೇಳಿದರೆ, ರಸ್ತೆ ಸವಿಸಬಹುದು ಅಲ್ಲವೆ?"

"ಜೀವನವೇ ಒಂದು ಒಗಟು ಸಾಬ್.... ಜಾಟ್ ಜವಾನ ಬ್ಯಾಂಕ್‌ನಲ್ಲಿ ಕ್ಲರ್ಕ ಅಂತ ಸುಳ್ಳು ಹೇಳಿ, ಒಬ್ಬ ಗ್ರಾಜುಯೇಟ್ ಹುಡುಗಿಯನ್ನು ಮದುವೆಯಾದ. ವರದಕ್ಷಿಣೆ ಪಡೆದ. ಮದುವೆಯಾದ ಮೇಲೆ ಗುಟ್ಟು ಹೊರಬಿತ್ತು. ಗಂಡ-ಹೆಂಡರಲ್ಲಿ ಒಡಕು ಉಂಟಾಯಿತು. ಮಗು ಆಯಿತು. ಮಗುವನ್ನುಅವಳ ತಂದೆ ತಾಯಿ ಕರೆದು ಕೊಂಡು ಹೋದರು ಸಾಕಲಿಕ್ಕೆ"

"ಯಾಕೆ? ಇವಳಿಗೆ ಕಷ್ಟವಾಯಿತೆ ಸಾಕಲಿಕ್ಕೆ?"

"ಕುಡುಕ ತಂದೆ ತರಹ ಮಗು ಕೂಡ ಹುಟ್ಟುವಾಗಲೆ ಕುಡಿತ ಕಲಿತು ಬಿಟ್ಟರೆ ಎಂಬ ಭಯ ಅವರಿಗೆ"

"ಮತ್ತೆ ಮಕ್ಕಳಾಗಲಿಲ್ಲವೇ?"

"ಆಗಲಿಲ್ಲ. ಇವ ಕುಡಿಯೋದು ಬಿಡಲಿಲ್ಲ.ಅವಳು ಇವನನ್ನು ಪ್ರೀತಿಸಲಿಲ್ಲ. ತಾನು ಮಾಡಿದ್ದು ತಪ್ಪು. ಹೆಂಡತಿಗೆ ಮೋಸ ಮಾಡಿದೆ ಎಂದು ಹಲಬುತ್ತಾನೆ. ಆದರೆ ಏನು ಮಾಡುವುದು?ಹೆಂಡತಿ ಇವನ ತಪ್ಪು ಕ್ಷಮಿಸಲೇ ಇಲ್ಲ. ಅವಳ ಮರ್ಯಾದೆಗೆ, ಅವಳ ಆತ್ಮಕ್ಕೆ ಪೆಟ್ಟು ಬಿದ್ದಾಗಿದೆ. ಒದ್ದಾಡುತ್ತಾ ಇದ್ದಾಳೆ. ಏನೇನು ಆಸೆ ಆಕಾಂಕ್ಷೆ ಇಟ್ಟಿಕೊಂಡಿದ್ದಳು, ಪಾಪ! ಜೀವನ ಬೇಸರ ಅವಳಿಗೆ."

"ಕುಡಿದು ತನ್ನ ತಪ್ಪನ್ನು ಮರೆಯಲು ಯತ್ನಿಸಿದರೆ ಏನು ಸುಖ?"

"ಏನು ಸುಖ ಅಲ್ಲ ಸಾಬ್. ಯಾರ ಸುಖಕ್ಕೆ ಎಂದು ಕೇಳಿ. ತನ್ನ ಹೆಂಡತಿಯ ಸುಖಕ್ಕೆ ಅಥವಾ ತನ್ನ ಸುಖಕ್ಕೆ ಕುಡಿಯುತ್ತಿಲ್ಲ ಅವನು. ತನ್ನ ದೇಹ, ಜೀವನವನ್ನೇ ಹಾಳು ಮಾಡಿಕೊಳ್ಳುವುದಕ್ಕೆ ಕುಡಿಯುತ್ತಿದ್ದಾನೆ."

ನಾನು ಮೌನಿಯಾದೆ. ಮಾತು ಮುಂದುವರೆಸಲಿಲ್ಲ. ಪಕ್ಕದಲ್ಲೇ ಸಾಗುತ್ತಿದ್ದ ಆಟೋವನ್ನು ಕರೆದು, ಕುಳಿತು, ಶಾಖೆಗೆ ವಾಪಸ್ಸಾದೆವು.

ಮಾರನೆಯ ದಿನ, ಬ್ಯಾಂಕ್ ಸಿಬ್ಬಂದಿಯಿಂದ ಚಂದಾ ಎತ್ತಿ, ಜಾಟ್ ಜವಾನನ ಹೆಂಡತಿಗೆ ಹಣ ಕಳುಹಿಸಿದೆ.

# 17

"ನಿಮ್ಮ ಕಪೂರ್ ಎಲ್ಲಿ ಹೋದ ಸಾಬ್?" ವರ್ಮಾ ಕೇಳಿದ ಪ್ರಶ್ನೆಗೆ, ಉತ್ತರ ನನ್ನಲ್ಲಿರಲಿಲ್ಲ.

ಹೊಸ ದಿಲ್ಲೀ ರೈಲು ನಿಲ್ದಾಣದಲ್ಲಿ ಬೆಳಿಗ್ಗೆ ಎಂಟು ಗಂಟೆಯಿಂದ ಕಾಯುತ್ತಾ ಕುಳಿತು ನಾನು, ಸಮಯ ಪ್ರಜ್ಞೆ ನಮ್ಮ ಜನಕ್ಕೆ ಯಾವಾಗ ಉಂಟಾಗುತ್ತದೆ ಎಂದು ಪ್ರಶ್ನೆ ಹಾಕಿಕೊಂಡು, 'ಶಾನ್-ಇ-ಪಂಜಾಬ್'ರೈಲಿನ ಡಬ್ಬಿಗಳು ಜನರಿಂದ ತುಂಬಿ, ಇನ್ನು ಐದೇ ನಿಮಿಷದಲ್ಲಿ ಅಮೃತಸರಕ್ಕೆ ಹೊರಡಲು ತಯಾರಿಗಿದ್ದುದನ್ನು ಕಂಡು, ನನ್ನ ಮನಸ್ಸು ಹದಗೆಡುತ್ತಾ ಹೋಯಿತು. ಅಮೃತಸರಕ್ಕೆ ಪ್ರಯಾಣ ಬೆಳಸಲಿಕ್ಕೆ ನನ್ನ ಜೊತೆಗೆ, ಅಕೌಂಟೆಂಟ್ ವರ್ಮಾನನ್ನು ಕರೆದಿದ್ದೆ. ಮೊದಲು ನಿರಾಕರಿಸಿದರೂ ನನ್ನ ಬಲವಂತಕ್ಕೆ ಬರಲು ಒಪ್ಪಿದ್ದ. ವರ್ಮಾನನ್ನು ಬಲವಂತ ಮಾಡಿದ ಕಾರಣ, ಅವನು ಅಮೃತಸರದ ಹೆಣ್ಣನ್ನು ಮದುವೆಯಾಗಿದ್ದರಿಂದ, ಆ ಊರಿನ ಪರಿಚಯ ಅವನಿಗೆ ಸಾಕಷ್ಟು ಇದ್ದು, ನನಗೆ ಊರು ತೋರಿಸುವಷ್ಟು ಆಸೆ, ನಂಬಿಕೆ ಹೊತ್ತಿದ್ದೆ. ಕಪೂರ್, ಅಮೃತಸರ ನೋಡಿದ್ದರೂ, ಆ ಊರಿನ ಪರಿಚಯವಿರಲಿಲ್ಲ. ಆದರೆ, ಊರು ನೋಡುವುದರ ಜೊತೆಗೆ, ಸರದಾರಜೀ ಅಕಸ್ಮಾತ್ ಸಿಕ್ಕರೆ, ಅವನ ಇತ್ತೀಚಿನ ಸಾಹಸ ಕಥೆ ತಿಳಿದುಕೊಳ್ಳುವ ಬಯಕೆಯನ್ನು ಅವನು ಹೊತ್ತಿದ್ದ.

'ಈ ಕಪೂರ್ ಎಲ್ಲಿ ಹೋದನಪ್ಪಾ' ಎಂದು ಅವನನ್ನು ಮನಸ್ಸಿನಲ್ಲೇ ಹಳಿದು, ಇನ್ನೇನು ಹೊರಡಲು ಸಜ್ಜಾಗಿ ನಿಂತಿದ್ದ ರೈಲನ್ನು ಕಂಡು, ಮನದಲ್ಲೇ ಕರುಬಿದೆ. ಆತಂಕವಾದಿಗಳ, ಭಯೋತ್ಪಾದಕರ ಹಾವಳಿ, ಪಂಜಾಬಿನಲ್ಲಿ ಪರಿಸ್ಥಿತಿ ಹದಗೆಟ್ಟಿರುವ ವಿಷಯ ಅರಿತಿದ್ದರೂ, ರೈಲು, ಪ್ರಯಾಣಿಕರಿಂದ ತುಂಬಿ ತುಳುಕಾಡುತ್ತಿದ್ದದನ್ನು ನೋಡಿದರೆ, ನಾನು ಕೇಳಿದ, ಓದಿದ, ನೋಡಿದ ಭಯೋತ್ಪಾದಕರ ಹಿಂಸಾಚಾರವೆಲ್ಲಾ ಸುಳ್ಳಿನ ಕಂತೆ ಇರಬಹುದೇನೋ ಎಂಬ ಸಂಶಯ ಮನಸ್ಸಿನಲ್ಲಿ ಹಾದುಹೋಯಿತು. ಈ ರೈಲು ತುಂಬಾ ಜನರು ಎಲ್ಲಿ ಪ್ರಯಾಣ ಬೆಳೆಸುತ್ತಿದ್ದಾರೆ? ಅಮೃತಸರಕ್ಕೆ ಹೋಗುವಂತಿದ್ದರೆ, ಅವರಿಗೆ ಬುದ್ಧಿ ಇಲ್ಲವೇ? ಹೆದರಿಕೆ ಇಲ್ಲವೇ? ಆ ಊರಿನಲ್ಲಿ ಯಾಕೆ? ಇಡೀ ಪಂಜಾಬ್ ಆತಂಕದಿಂದ ದಹದಹಿಸಿ ಉರಿಯುತ್ತಿದೆಯಲ್ಲವೇ?

"ಈ ದಟ್ಟ ಜನಸಂದಣಿ ನೋಡಿದರೆ, ಪಂಜಾಬ್‌ನಲ್ಲಿ ಶಾಂತಿ ನೆಲಸಿದ್ದಾಳೆ ಎಂದು ತೋರುತ್ತದೆ ಅಲ್ಲವೇ?"

ನನ್ನ ಪ್ರಶ್ನೆಗೆ ಉತ್ತರವಾಗಿ,

"ಶಾಂತಿ? ಪಂಜಾಬಿನಲ್ಲಿ?" ವರ್ಮಾ ನಗತೊಡಗಿದ.

"ಏನು ನಗುತ್ತಾ ಇದ್ದೀರಾ? ಬನ್ನಿ! ಬನ್ನಿ! ಟ್ರೈನ್ ಹೊರಡುವ ಸಮಯವಾಗುತ್ತಾ ಇದೆ."

ನನ್ನ ಕೈ ಹಿಡಿದು ಎಳೆದುಕೊಂಡು ಹೊರಟಿದ್ದ ಕಪೂರ್! ಯಾವ ಮಾಯೆಯಲ್ಲಿ ಬಂದನೋ ಎಂದು ಯೋಚಿಸುತ್ತಾ ಓಡಿದೆ ಅವನ ಹಿಂದೆ.

"ಯಾಕೆ ಸಾಬ್ ಓಡುತ್ತೀರಾ? ಡಬ್ಬಿ ಹತ್ತುವುದು ಬಿಟ್ಟು?" ಕೂಗಿದ ವರ್ಮಾ.

"ಡಬ್ಬಿ ಹತ್ತಲಿಕ್ಕೆ ಓಡುತ್ತಿರುವುದು!"

ಕಪೂರ್ ಓಡುತ್ತಲೇ ನುಡಿದ. ಮೂವರು ಓಡಿದ ರೀತಿ ನೋಡಿದರೆ, ಓಡಿ, ತಪ್ಪಿಸಿಕೊಳ್ಳುತ್ತಿದ್ದ ರೈಲನ್ನು ಹಿಡಿಯಲು ನಾವು ಓಡುತ್ತಿರುವ ಹಾಗೆ ಕಾಣಿಸುತ್ತಿತ್ತು.

"ಟ್ರೈನ್ ಇನ್ನು ನಿಂತಿದೆ. ಹೊರಟಿಲ್ಲ. ನೀವು ಯಾಕೆ ಹೀಗೆ ಓಡುತ್ತಿದ್ದೀರಾ?"

ವರ್ಮಾ ಕೋಪದಿಂದ ಕೂಗಿದ. ಕಪೂರ್ ಉತ್ತರ ಕೊಡದೆ, ಹಿಡಿದ ನನ್ನ ಕೈ ಬಿಡದೇ ಓಡಿದ. ಕೊನೇ ಡಬ್ಬಿ ಬಂದೊಡನೆ, ನಿಂತು ಒಂದು ಕ್ಷಣ ಸುಧಾರಿಸಿಕೊಂಡು, ಡಬ್ಬಿ ಬಾಗಿಲ ಬಳಿ ನಿಂತು, ನನ್ನನ್ನು ಒಳಗೆ ನೂಕಿದ. ನೂಕಬೇಕಾದ ಅವಶ್ಯಕತೆ, ಬಾಗಿಲ ಬಳಿ ಕಿಕ್ಕಿರಿದು ನಿಂತಿದ್ದ ಪ್ರಯಾಣಿಕರ ಗುಂಪು! ಗುಂಪು ಬಿಡಿಸಿಕೊಂಡು, ಕಷ್ಟಪಟ್ಟು ಒಳಗೆ ಕಾಲಿಟ್ಟೆ. ನನ್ನ ಹಿಂದೆ ವರ್ಮಾನೂ ಬಹಳ ಕಷ್ಟಪಟ್ಟು ನುಗ್ಗಿದ. ಜನರ ಸಹಸ್ರನಾಮಾವಳಿಗೆ ನಾವು ಯಾರೂ ಬೆಲೆ ಕೊಡುವ ಸ್ಥಿತಿಯಲ್ಲಿರಲಿಲ್ಲ.

ನಮ್ಮ ಕಿಟ್‌ಬ್ಯಾಗ್‌ನ್ನು ತನ್ನ ಕೈಯಲ್ಲಿ ಹಿಡಿದು, ಕಪೂರ್, ಪಂಜಾಬೀಯಲ್ಲಿ ಬೈಯುತ್ತಾ, ಜಗಳ ಕಾಯುತ್ತಾ ನಮ್ಮನ್ನು ಹಿಂಬಾಲಿಸಿದ. ಹಾಗೂ ಹೀಗೂ ತಡವರಿಸುತ್ತಾ, ಯಾರ ಯಾರೋ ಕಾಲು ತುಳಿಯುತ್ತಾ, ಕೈ ಹಿಡಿದು ಎಳೆಯುತ್ತಾ ಒಂದು ಕಡೆ ನಿಂತವು.

"ಟಿಕೇಟ್ ಮುಂಗಡ ಕಾದಿರಿಸುತ್ತೇನೆ ಎಂದು ಹೇಳಿ, ಈ ಡಬ್ಬಿಯಲ್ಲಿ ತುರುಕಿಸಿಬಿಟ್ಟೆರಲ್ಲಾ ನಮ್ಮನ್ನು!"

ವರ್ಮಾನಿಗೆ ಭಯಂಕರ ಕೋಪ ಬಂದಿತ್ತು.

ನನಗೂ ಕೋಪ ಉಂಟಾಗಿತ್ತು. ಕಪೂರ್ ಈ ರೀತಿ ಮೋಸ ಮಾಡಬಾರದಾಗಿತ್ತು. ಸುಖವಾಗಿ, ಆರಾಮಾಗಿ ಕುಳಿತು ಪ್ರಯಾಣ ಮಾಡಬಯಸಿದ ನನಗೆ ನಾಲ್ಕು ಗಂಟೆಗಳ ಕಾಲ ನಿಂತು ಪ್ರಯಾಣ ಮಾಡಬೇಕಾಗಿ ಬಂದ ದುರ್ದಶೆಗೆ ನನ್ನ ಹಣೇ ಬರಹವನ್ನು ಹಳಿಯತೊಡಗಿದೆ.

"ಒಂದು ವಾರದ ಮುಂಚೆಯೇ ಮುಂಗಡ ಟಿಕೆಟ್ ಮುಗಿದುಹೋಗಿತ್ತು.

ನಿಮಗೆ ಹೇಳಿಯಾಗಿತ್ತಲ್ಲ ಪ್ರಯಾಣ ಈ ದಿನ ಮಾಡೋಣವೆಂದು. ಈಗ ಏನಾಯಿತು? ನಿಮಗೆ ಜನತಾ ಡಬ್ಬೀಲಿ ಪ್ರಯಾಣ ಮಾಡುವ ಅನುಭವ ಸಿಕ್ಕಿತಲ್ಲ! ಈ ಅನುಭವ ಎಲ್ಲರಿಗೂ ಸಿಗುವುದು ಕಷ್ಟ!"

ನಗತೊಡಗಿದ ಕಪೂರ್. ಅವನ ನಗುಮುಖ ನೋಡಿದೊಡನೆ, ನನ್ನ ಕೋಪ ಭರ್‌ನೆ ಇಳಿಯಿತು. ಈ ನಗುವಿಗೆ ಎಷ್ಟು ಶಕ್ತಿ ಇದೆ! 'ನಗು ಸಹಜ ಧರ್ಮ' ಎನ್ನುತ್ತಾರೆ. ನಗುವಿನ ಹೊನಲಿನಲ್ಲಿ ಆತ್ಮವಿಶ್ವಾಸ, ಭರವಸೆ, ಆಸೆಗಳು ಹರಿದು ಅದರಲ್ಲಿ ಮಿಂದವರಿಗೆ ಅಮೃತಧಾರೆಯ ಸಿಹಿ ದೊರೆಯುತ್ತದೆಯಲ್ಲವೇ? ಆದರೆ, ಎದುರಿಗೆ ಚಂದ ಮಾತನಾಡಿ, ನಗುನಗುತ್ತಾ, ಬೆನ್ನಿಗೆ ಬಾಕು ಹಾಕುವವರಿಗೆ ಏನು ಹೇಳಬೇಕು? ನಮ್ಮ ಬ್ಯಾಂಕ್‌ನ ರಾಜಕುಮಾರನ ಉವಾಚ 'ಬೆನ್ನಿಗೆ ಬಾಕು ಹಾಕ ಬೇಕ್ರಿ' ನನ್ನ ನೆನಪಿಗೆ ಬಂದಾಗ, ನನ್ನ ನಗು ಮಾಯವಾಯಿತು. ರಾಜಕುಮಾರನ ದೇಶಾವರಿ ನಗು, ದರಿದ್ರ ನಗು, ಅವನು ಕುಡಿದು ಮತ್ತನಾಗಿ, ಬಾಯಿಂದ ಬರುವ ನಾತದ ದುರ್ಗಂಧ ನೆನೆಸಿಕೊಂಡರೆ ವಾಕರಿಕೆ ಬರುವಂತಾಯಿತು. ಇದ್ದಕ್ಕಿದ್ದ ಹಾಗೆ, ಹೇಳದೆ ಕೇಳದೆ ತಾನು ಹೊರಡುತ್ತಿದ್ದೇನೆ ಎಂದು ಕೂಗಿ ಹೇಳದೆ, ರೈಲು ಚಲಿಸಲಿಕ್ಕೆ ಶುರುಮಾಡಿತು. ಕಿಟಕಿಯ ಅಲ್ಪಸ್ವಲ್ಪ ಕಿಂಡಿಗಳ ಸಂದುಗಳಿಂದ ಗಾಳಿ ನುಗ್ಗಿ, ಸ್ವಲ್ಪ ಉಸಿರಾಡುವ ಹಾಗಾಯಿತು. ಕತ್ತನ್ನು ತಿರುಗಿಸಿ, ಅತ್ತ ಇತ್ತ ನೆರೆದಿರುವ ಪ್ರಯಾಣಿಕರ ಮುಖಗಳನ್ನು ಅವಲೋಕಿಸತೊಡಗಿದೆ. ಕಿಂಚಿತ್ತೂ ಜಾಗ ಬಿಡದೆ ಆಕ್ರಮಿಸಿಕೊಂಡ ಜನರನ್ನು ನೋಡಿದರೆ, ಯಾರಿಗಾದರೂ ಅರಿವಾಗತೊಡಗಬೇಕು ನಮ್ಮ ದೇಶದ ತುಂಬಿ ತುಳುಕಾಡುತ್ತಿರುವ ಜನಸಾಂದ್ರತೆಯನ್ನು ! ಆತಂಕವಾದಿ, ಭಯೋತ್ಪಾದಕರ ಬೀಡಾದ ಪಂಜಾಬ್‌ನ ಈ ಪ್ರಸಿದ್ಧ ರೈಲಿನಲ್ಲಿ ಪ್ರಯಾಣಿಸುವ ಈ ಜನರಿಗೆ ಭಯ ವಿಲ್ಲವೇ? ಆತಂಕವಿಲ್ಲವೇ? ದಿನವಿಡೀ ಬಸ್, ಕಾರು, ಲಾರಿ, ಟ್ರೈನ್‌ಗಳಲ್ಲಿ ಕಸದ ತೊಟ್ಟಿಗೆ ಎಸೆಯುವ ರೀತಿಯಲ್ಲಿ ಬಾಂಬ್ ಎಸೆದು, ಆತುರಾತುರದಲ್ಲಿ ಆತಂಕದ ಗಾಳಿ ಎಬ್ಬಿಸಿ, ಗಾಬರಿ, ಭಯಗಳ ದುಳ್ಳುರಿ ಜನರ ಹೃದಯದಲ್ಲಿ ಹುಟ್ಟಿಸಿ ಜನರನ್ನು ಅಧೀರರನ್ನಾಗಿ ಮಾಡಿ, ಅವರ ಜೀವನಕ್ರಮವನ್ನು ಬದಲಿಸಲಿಕ್ಕೆ ಪ್ರಯತ್ನ ಪಡೆದಿದೆ ಎಂಬುದಕ್ಕೆ ವಿರುದ್ಧವಾಗಿದೆಯಲ್ಲವೇ ಈ ತುಂಬಿದ ಬಸುರಿಯಂತೆ, ತನ್ನ ಒಡಲಲ್ಲಿ, ಮನುಕುಲದ ಹಿಂಡನ್ನೇ ಇರಿಸಿಕೊಂಡು, ಆತಂಕಾಗ್ನಿಕುಂಡಕ್ಕೆ ಹೆಸರಾದ ಅಮೃತಸರ ವೆಂಬ ಪಟ್ಟಣಕ್ಕೆ ಧಾವಿಸುತ್ತಿರುವ ಈ ಬಂಡಿ?

ಲಕ್ಷ್ಮೀಪತಿಯಂತೆ ಆಸೀನನಾಗಿ, ಸಾಮಾನು ಇಡುವ ಸ್ಥಳದಲ್ಲಿ ಕಾಲು ಚಾಚಿ ಮಲಗಿ, ಕೆಳಗೆ ತನ್ನ ಬಟ್ಟಲು ಕಣ್ಣುಗಳನ್ನು ಹಾಯಿಸುತ್ತಾ ಒಬ್ಬ ಗಡ್ಡಧಾರಿ ಕಪೂರ್ ನನ್ನು ಕೇಳಿದ ಪಂಜಾಬಿಯಲ್ಲಿ.

"ಎಲ್ಲಿಗೆ ಪ್ರಯಾಣ?"

"ಅಮೃತ್‌ಸರ್" ಉತ್ತರಿಸಿದ ಕಪೂರ್, ಕೇಳಿದ "ನೀನೆಲ್ಲಿಗೆ?"

"ಅಲ್ಲಿಗೇನೆ!"

ಮುಂದೆ ಅವರಿಬ್ಬರ ಮಾತುಕತೆ ಶುರುವಾಯಿತು. ಪ್ರಪಂಚದಲ್ಲಿನ ಎಲ್ಲಾ ಸಮಸ್ಯೆಗಳ ಬಗ್ಗೆ. ಆಲೈಸುತ್ತಿದ್ದ ನನಗೆ ಅವರು ಪಂಜಾಬಿನ ಆತಂಕವಾದಿಗಳೊಡ್ಡಿದ ಸಮಸ್ಯೆ, ಭಯೋತ್ಪಾದಕರಿಂದ ಜರುಗುತ್ತಿರುವ ನಿರಂತರ ಸಾವುನೋವುಗಳ ಬಗ್ಗೆ ಚಕಾರ ಎತ್ತದೇ ಇರುವುದನ್ನು ಕಂಡು ಅಚ್ಚರಿಯಾಯಿತು.

ಕಿಟಕಿಯೊಳಗಿನಿಂದ ಇಣಕಿ ಹೊರನೋಟ ಕಂಡು, ಪಂಜಾಬಿನ ಪ್ರಸಿದ್ಧ ಬಯಲು ಸೀಮೆಯ ಕಡೆ ನನ್ನ ನೋಟ ಹರಿಸಿ, ಅದರ ಹಚ್ಚಹಸಿರು ನೆಲ, ಜಲ, ಕಂಡು ಮನ ತಣಿಸಿಕೊಳ್ಳೋಣವೆಂದು ಬಗೆದರೆ, ಎಳ್ಳಷ್ಟೂ ಜಾಗ ಕಾಣಿಸದ ಹಾಗೆ, ಆಕ್ರಮಿಸಿದ್ದರು ಪಂಜಾಬೀ ಪ್ರಯಾಣಿಕರು! ಅವರವರ ಪ್ರಪಂಚದಲ್ಲಿ ಮುಳುಗಿ ಗಟ್ಟಿಯಾಗಿ ಒದರುತ್ತಾ, ಗೊಣಗುತ್ತಾ, ಕಿರುಚುತ್ತಾ, ಹಾಡುತ್ತಾ, ಅಳುತ್ತಾ, ನಗುತ್ತಾ ಪರಿಹಾಸ ಮಾಡುತ್ತಾ, ಚರ್ಚಿಸುತ್ತಾ ಇರುವ ಈ ಜನಸಮೂಹವನ್ನು ನೋಡುತ್ತಾ ನನ್ನನ್ನು ನಾನೇ ಮರೆತೆ. ಪ್ರಯಾಣದ ಅವಧಿ ನಾಲ್ಕು ಗಂಟೆ ಕಳೆದುಹೋಗಿದ್ದು ಅರಿವಾಗಲೇ ಇಲ್ಲ. ಲೂಧೀಯಾನಾ, ಜಲಂಧರ ಹಾದು ಹೋಗಿದ್ದು ಅರಿವಾಗಲೇ ಇಲ್ಲ. ಅಮೃತಸರ ಬಂದಿತೆಂದು ಕಪೂರ್ ಹೇಳಿದಾಗ, ಲಗುಬಗೆಯಿಂದ ನನ್ನ ಯೋಚನೆಗಳಿಂದ ಹೊರಬಂದು, ಪ್ರಯಾಣಿಕರ ನೂಕುನುಗ್ಗಲಿನಲ್ಲಿ ತೇಲುತ್ತಾ ಕೆಲವ ವೇಳೆ ನಡೆಯುತ್ತಾ ಬಂಡಿಯಿಂದ ಹೊರಬಂದು, ಜನಪ್ರವಾಹದೊಂದಿಗೆ ಸೇರಿ ಸ್ಟೇಷನ್‌ನ ಹೊರಗೆ ಬಂದೆ. ನನ್ನ ಜೊತೆಗಾರರು ನನ್ನ ಜೊತೆ ಮಾತನಾಡದೆ ಹೊರ ಬಂದಿದ್ದರು. ಆಟೋ ಹಿಡಿದು, ಮೂವರು ಒಂದು ಹೋಟೆಲ್‌ಗೆ ಬಂದು ಸೇರಿ, ಕೋಣೆಯೊಂದನ್ನು ಬಾಡಿಗೆಗೆ ಹಿಡಿದು, ಸ್ವಲ್ಪ ಹೊತ್ತು ಸುಧಾರಿಸಿಕೊಂಡು, ಕೆಳಗೆ ಇಳಿದು ಬಂದು, ಊಟ ಮುಗಿಸಿ, ಸ್ವರ್ಣ ಮಂದಿರದ ಕಡೆ ಹೊರಟೆವು. ಎಲ್ಲೆಲ್ಲೂ ಪೊಲೀಸರು, ಮಿಲಿಟರಿ ಸೈನಿಕರ ಓಡಾಡುವ ದೃಶ್ಯ ಕಂಡು, ಒಂದು ಹೊಸ ಪ್ರಪಂಚಕ್ಕೆ ಬಂದ ಅನುಭವ ಆಗಿತ್ತು. ಮೂವರೂ ಮಾತನಾಡದೆ ಮುಂದುವರೆದೆವು. ನನಗೆ ಸೀಖರ ಪುಣ್ಯ ಸ್ಥಳ ಸ್ವರ್ಣಮಂದಿರ ನೋಡುವ ಆಕಾಂಕ್ಷೆ ಪೂರೈಸುವ ಹೊತ್ತು ಹತ್ತಿರ ಬಂದಿತ್ತು. ಸ್ವರ್ಣಮಂದಿರಕ್ಕೆ ಹತ್ತಿರ ಹತ್ತಿರ ಬಂದ ಹಾಗೆ, ಒಂದು ರೀತಿಯ ಭಯ, ಆತಂಕ ನನ್ನ ಮನಸ್ಸನ್ನು ಆವರಿಸಿಕೊಂಡಿತು. ಯಾವ ಹೊತ್ತಿನಲ್ಲಿ, ಯಾವ ಕ್ಷಣದಲ್ಲಿ, ಎಲ್ಲಿ ಬಾಂಬ್, ಗುಂಡು ಹಾರಾಡಿ ನನ್ನ ಮೈ ಹೊಕ್ಕುತ್ತದೋ ಎಂದು ಆತಂಕ ಉಂಟಾಯಿತು. ನಾನು ಅಮೃತಸರಕ್ಕೆ ಈ ಸಮಯದಲ್ಲಿ ಬಂದಿದ್ದು ಸರಿಯೆ?

ಮನಸ್ಸು ಅನಿಶ್ಚಯ, ಸುಳಿಯಲ್ಲಿ ಸಿಕ್ಕಿ ಕಂಪಿಸಿತು. ಆದರೂ, ಬಹುದಿನದ ಆಸೆ ಪೂರೈಸಲಿಕ್ಕೆ ಸಮರ್ಥನಾದೆನಲ್ಲ ಎಂಬ ಖುಷಿಯೂ ಆಗತೊಡಗಿತು. ಇಂಗ್ಲಿಷ್‌ರು ಪಂಜಾಬನ್ನು ಆಕ್ರಮಿಸಿ, ಈ ವೀರ ನಾಡನ್ನು ಶಾಂತಿಯುತ, ಶಿಸ್ತಿನ, ವಿದ್ಯಾವಂತ, ಆರೋಗ್ಯಕರ ನಾಡನ್ನಾಗಿ ಪರಿವರ್ತಿಸಿದ್ದು ನಿಜವಲ್ಲವೇ? ಆರೋಗ್ಯ, ಕೃಷಿ, ಜಲ ಸಂಪತ್ತು, ಕಾನೂನು ವ್ಯವಸ್ಥೆಗಳನ್ನು ಬಹು ಸಮರ್ಪಕವಾಗಿ ನಿರ್ವಹಿಸಿ, ಜನ ಜೀವನದ ಮಟ್ಟವನ್ನು ಬಹುಮಟ್ಟಿಗೆ ಸುಧಾರಿಸಿದ್ದಾರಲ್ಲವೇ? ಕೆಚ್ಚುಧೈರ್ಯಗಳ ಗುಣಗಳ ಜೊತೆಗೆ, ಕಷ್ಟಕಾರ್ಪಣ್ಯಗಳನ್ನು ಆನಂದದಿಂದ ಎದುರಿಸುವ ಶಕ್ತಿ ಇವರಿಗೆ ಹುಟ್ಟುಗುಣಗಳಾಗಿ ಬಂದಿರುವುದರಿಂದ, ಸುಧಾರಣೆ ಸುಗಮವಾಗಿ ಸಾಗಿತಲ್ಲವೇ? ಎಲ್ಲಾ ಕ್ಷೇತ್ರಗಳಲ್ಲೂ ಸಾಕಷ್ಟು ಸಾಧನೆ ಸಾಧಿಸಿದ್ದರೂ, ಬ್ರಿಟಿಷರ ದೂರದೃಷ್ಟಿ, ಅತಿಬುದ್ಧಿವಂತಿಕೆ, ವ್ಯವಹಾರ ಕುಶಲತೆ, ಎಷ್ಟೇ ಇದ್ದರೂ, ಸಿಖ್‌ರ ಸ್ವಾಭಾವಿಕ ಗುಣಗಳಾದ, ಸ್ವಪ್ರತಿಷ್ಠೆ, ಸ್ವಾಭಿಮಾನ, ಸ್ವತಂತ್ರಪ್ರಿಯತೆ, ಜನಪ್ರಿಯತೆ ಅವರನ್ನು ಯಾವಾಗಲೂ ತುದಿಗಾಲಿನಲ್ಲಿ ನಿಲ್ಲುವಂತೆ ಮಾಡಿತು. ಜಲಿಯನ್‌ವಾಲಾಬಾಗ್‌ನ ಹತ್ಯಾಕಾಂಡ, ದೇಶದ ಸ್ವಾತಂತ್ರ್ಯದ ಸಂಗ್ರಾಮಕ್ಕೆ ಸಿಖ್‌ರು ತಮ್ಮ ನೆತ್ತರಿನಿಂದ ನಾಂದಿ ಹಾಡಿ ಇತರ ಭಾರತೀಯರಿಗೆ ಮಾದರಿಯಾಗಿದ್ದರಲ್ಲವೇ? ಈ ಹತ್ಯಾಕಾಂಡದಿಂದ ರೊಚ್ಚಿಗೆದ್ದ ಭಾರತೀಯರ ರಕ್ತ ಕುದ್ದು, ತಮ್ಮ ನಾಡಿಗೆ ಪರಕೀಯರಿಂದ ಸ್ವಾತಂತ್ರ್ಯ ಪಡೆಯುವ ಉತ್ಕಟ ಅಭಿಲಾಷೆ ಉಂಟಾಗಿದ್ದು ಸುಳ್ಳೇ?

"ತಲೆ ತಗ್ಗಿಸಿಕೊಂಡು ಯಾಕೆ ನಡೆಯುತ್ತಿದ್ದೀರಾ! ತಲೆ ಎತ್ತಿ ನಡೀರಿ!"

ನನ್ನ ಹೆಗಲಿಗೆ ಡಿಕ್ಕಿ ಹೊಡೆದ ಒಬ್ಬ ಆಜಾನುಬಾಹು ಸಿಖ್. ನನ್ನನ್ನು ತಿನ್ನುವಂತೆ ನೋಡಿ, ಬಡಬಡಿಸಿದ. ಇವನು ನನ್ನನ್ನು ತಿಂದು ಮುಕ್ಕೇಬಿಡುತ್ತಾನೆಂದು ಹೆದರಿ, ದಾಪುಕಾಲು ಹಾಕಿ, ಮುಂದೆ ಓಡಿದೆ.

"ಹೆದರಿದಿರಾ ಅವನನ್ನು ನೋಡಿ" ಎಂದ ಕಪೂರ್.

ನಾನು ಮಾತನಾಡಲಿಲ್ಲ. ಆದರೆ ತಲೆ ಮಾತ್ರ ಎತ್ತಿ ನಡೆಯತೊಡಗಿದೆ. ಆ ಸಿಖ್ ಹೇಳಿದ ಹಾಗೆ ತಲೆ ಎತ್ತಿ ನಡೆಯದೇಹೋದರೆ, ಹೊಡೆಸಿಕೊಳ್ಳುವುದು ಖಂಡಿತ ಎನ್ನಿಸಿತು.

"ಎಲ್ಲಿ ನೋಡಿದರೂ ಪೊಲೀಸರು, ಸೈನಿಕರು ನನಗೇನೋ ಅನುಮಾನ. ಗಲಾಟೆ ಆಗಿರಬೇಕು ಅಥವಾ ಗಲಾಟೆ ಆಗುವ ಸಂಭವ ಇದೆ."

ವರ್ಮಾ ಮೆಲು ಧ್ವನಿಯಲ್ಲಿ ಹೇಳಿದ.

"ಭಿಂದ್ರಾನ್‌ವಾಲೇ ಬಡಬಡಿಸುತ್ತಲೇ ಇರುವಾಗ, ಗಲಾಟೆಯಾಗದೇ ಇರುವುದು ಸಾಧ್ಯವೇ ಇಲ್ಲ!" ಕಪೂರ್ ನುಡಿದ.

"ಅದೇ ನೋಡಿ ಸ್ವರ್ಣಮಂದಿರ" ವರ್ಮಾ ಪಿಸುಗುಟ್ಟಿದ.

ದೂರದಲ್ಲಿ ಕಂಡ ಸ್ವರ್ಣಗೋಪುರ ಹೊಂದಿದ್ದ ಸ್ವರ್ಣಮಂದಿರ ಸುಂದರವಾಗಿ ಕಂಡಿತು.

"ಇದನ್ನು ಕಟ್ಟಿದವನು ಯಾರು?"

"ಗುರು ಅರ್ಜುನ ದೇವ್. ಈ ಗುರು ಮೂರು ಕಾರಣಗಳಿಗೆ ಪ್ರಸಿದ್ಧಿ ಪಡೆದಿದ್ದಾರೆ. ಸ್ವರ್ಣಮಂದಿರ ಕಟ್ಟಿಸಿದ್ದು ಈತನೆ. ಸಿಖ್ ಗುರುಗಳ ದೇವರನಾಮಗಳು, ಸೂಫೀ ಸಂತರ ಹಾಡುಗಳು, ಹಿಂದೂ ಸಂತರ ದೇವರನಾಮಗಳನ್ನು ಆರಿಸಿ, ಸಂಗ್ರಹ ಮಾಡಿ, ಅವನ್ನು ತಮ್ಮ ಶಿಷ್ಯರಿಗೆ ಕೊಡುಗೆಯಾಗಿ ನೀಡಿ ದಿನವಿಡೀ ಅವನ್ನು ಹಾಡಿ ದೇವರನ್ನು ಪ್ರಾರ್ಥಿಸಬೇಕೆಂದು ಹೇಳಿದನಲ್ಲದೆ, ಆ ಸಂಗ್ರಹವನ್ನು 'ಗುರು ಗ್ರಂಥ' ಎಂದು ಕರೆದು, ಈ ಮಂದಿರದಲ್ಲಿಟ್ಟು ಪೂಜೆ ಮಾಡಲಾರಂಭಿಸುತ್ತಾನೆ. ಮೂರನೆಯದು ಈ ಗುರು ತನ್ನ ಪಂಥಕ್ಕೆ ತನ್ನ ಪ್ರಾಣವನ್ನು ಬಲಿದಾನ ಮಾಡಿದ್ದು."

ಮಂದಿರ ಕಟ್ಟಿಸಿ, ಅದನ್ನು 'ಹರಿಮಂದಿರ' ಎಂದು ಕರೆದ. ಅದರಲ್ಲಿ ಎಲ್ಲಾ ಧರ್ಮಗಳ ದೇವರನಾಮಗಳನ್ನು ಕ್ರೋಢೀಕರಿಸಿದ ಗ್ರಂಥವನ್ನು ಇಟ್ಟು, ಪೂಜೆ ಮಾಡುವ ಪರಿಕ್ರಮ ಮತ್ತು ತನ್ನ ಧರ್ಮಕ್ಕೆ ಪ್ರಾಣತ್ಯಾಗ ಮಾಡಿದ ಗುರು ಅರ್ಜುನ ದೇವ್, ದಿಟವಾಗಲೂ ಒಬ್ಬ ಮಹಾನ್, ಪುಣ್ಯಪುರುಷನೇ ಸರಿ! ಅಕ್ಬರ್ ಬಾದ್ ಶಹನ ಕಾಲದಲ್ಲಿ ಹುಟ್ಟಿದ ಈ ಪುಣ್ಯಪುರುಷ ಬಾದಶಹನ ಉದಾರ ನೀತಿ ಗಳಿಂದಾಗಿ ತನ್ನ ನೂತನ ಧರ್ಮಪ್ರಚಾರಕಾರ್ಯ ಸುಲಭವಾಗಿ ಮಾಡುವವ ನಂತಾದರೂ ಹಿಂದೂ ತಾಯಿಯನ್ನು ಹೊಂದಿದ್ದು ಉದಾರ ತತ್ವ ಹೊಂದಿದ್ದ ತಂದೆಯನ್ನು ಪಡೆದಿದ್ದರೂ ಮಗ ಜಹಂಗೀರ್, ಕಟ್ಟಾ ಸಂಪ್ರದಾಯಸ್ಥರ ಹಿಡಿತಕ್ಕೆ ಸಿಕ್ಕಿ ಗುರುವಿನ ಹತ್ಯೆಯನ್ನು ಮಾಡಿದ್ದು ಎಂತಹ ದುರಂತ!

ಸರೋವರದ ಮಧ್ಯದಲ್ಲಿ ನಿಂತಿರುವ ಸ್ವರ್ಣಮಂದಿರಕ್ಕೆ ನಡೆದುಹೋಗಲು ಕಾಲು ಹಾದಿಯನ್ನು ಮಾಡಿದ್ದಾರೆ. ಅದರ ಮೇಲೆ ನಡೆದು ಹೋದಾಗ, ಸ್ವರ್ಣ ಮಂದಿರದ ಬಳಿಗೆ ಹೋಗಲು ಯಾವ ಬಾಗಿಲನ್ನು ಉಪಯೋಗಿಸುವುದು ಎಂದು ಯೋಚಿಸುತ್ತಿರುವಾಗ, ಕಪೂರ್ ನುಡಿದ:

"ಈ ಮಂದಿರಕ್ಕೆ ನಾಲ್ಕು ದಿಕ್ಕುಗಳಲ್ಲೂ ಬಾಗಿಲನ್ನು ಇಟ್ಟಿದ್ದಾರೆ. ಬೇರೆ ಯಾವ ಗುಡಿಗಳಿಗೂ ಈ ತರಹದ ವಿನ್ಯಾಸ ಇಲ್ಲ ಎನ್ನುತ್ತಾರೆ."

ಎಲ್ಲಾ ಗುಡಿ, ಮಂದಿರ, ಚರ್ಚ್ ಅಥವಾ ಮಸೀದಿಗಳಿಗೆ ಒಂದು ಅಥವ ಎರಡು ದ್ವಾರಗಳಿದ್ದರೆ, ಈ ಮಂದಿರಕ್ಕೆ ನಾಲ್ಕು ದ್ವಾರಗಳು! ಯಾಕೆ ಹೀಗೆ?

"ದೇವರು ಎಲ್ಲಾ ದಿಕ್ಕಿನಲ್ಲಿದ್ದಾನೆ. ನಾವು ಯಾವ ದಿಕ್ಕಿನಿಂದ ಬೇಕಾದರೂ ದೇವಮಂದಿರಕ್ಕೆ ಹೋಗಬಹುದು ಎಂದು ಈ ರೀತಿ ನಿರ್ಮಿಸಿದ್ದಾರೆ."

"ಒಳಗೆ ಯಾವ ದೇವ ಮೂರ್ತಿಯೂ ಇಲ್ಲದಿದ್ದ ಮೇಲೆ ಯಾವ ದಿಕ್ಕಿನಲ್ಲಿ ಒಳಗೆ ಹೋಗಿ ಪೂಜೆ ಮಾಡಿದರೆ ಏನು ಉಪಯೋಗ?" ವರ್ಮಾ ನಗುತ್ತಾ ನುಡಿದ.

"ಗುರುಗ್ರಂಥ ಇದೆಯಲ್ಲ! ಅದನ್ನು ಸಿಖ್‌ರು ಪೂಜೆ ಮಾಡುತ್ತಾರೆ. ಗುರು ಅರ್ಜುನ್ ದೇವ್ ಗ್ರಂಥವನ್ನು ಇರಿಸಿ ಪೂಜೆ ಮಾಡಲಿಕ್ಕೆ ಹೇಳಿದರು. ಅದನ್ನು ಇಂದಿನವರೆಗೂ ನಡೆಸಿಕೊಂಡು ಬರುತ್ತಿದ್ದಾರೆ ಸಿಖ್‌ರು" ಕಪೂರ್ ಹೇಳಿದ.

ವರ್ಷದಲ್ಲಿ ಒಂದೇ ದಿನ, ಸರಸ್ವತೀ ಪೂಜೆಯ ದಿನದಂದು ಪುಸ್ತಕಗಳನ್ನು ಇರಿಸಿ ಪೂಜೆ ಮಾಡುವ ಪರಿಪಾಠ ಇರಿಸಿಕೊಂಡು, ಬಾಕಿದಿನಗಳಲ್ಲಿ, ಪೂಜೆ ಮಾಡು ವುದಿರಲಿ, ಪುಸ್ತಕಗಳನ್ನು ಓದುವ ಹವ್ಯಾಸವನ್ನೇ ಬೆಳೆಸಿಕೊಳ್ಳದಿದ್ದ ನಮ್ಮ ಜನರಿಗೂ ಸಿಖ್‌ರ ಈ ಪವಿತ್ರ, ಪುಣ್ಯ ಪರಿಪಾಠಕ್ಕೂ ಎಷ್ಟು ವ್ಯತ್ಯಾಸವಿದೆ!

ಅಲ್ಲಿ ನೆರೆದಿದ್ದ ಸಿಖ್ ಬಾಂಧವರು ಗುರುಗ್ರಂಥದ ಮುಂದೆ ಪ್ರಾರ್ಥಿಸುವುದನ್ನು ನೋಡಿದೆ.

'ಎಲ್ಲಿ ನಿನ್ನ ತಂದೆ ತಾಯಿ, ಗೆಳೆಯ, ಸಹೋದರ ಸಹಾಯ ಮಾಡುವು ದಿಲ್ಲವೋ, ಅಲ್ಲಿ ದೇವರು ಮಾಡುತ್ತಾನೆ. ಎಲ್ಲಿ ಯಮದೂತ ನಿನ್ನನ್ನು ಹಿಂಸಿಸು ತ್ತಾನೋ ಅಲ್ಲಿ ದೇವರನಾಮ ಒಂದೇ ನಿನ್ನ ಬಳಿ ಇರುವುದು. ಯಾವಾಗ ನಿನ್ನನ್ನು ಪರಿಹರಿಸಲಾಗದಂತಹ ಕಷ್ಟಗಳು ಕಾಡುತ್ತವೋ, ಆಗ ದೇವರನ್ನು ಒಂದು ಕ್ಷಣ ನೆನೆ. ಯಾವ ಕರ್ಮಾಚರಣೆಗಳೂ ನಿನ್ನನ್ನು ಕಾಪಾಡಲಾರವು. ದೇವರನಾಮ ಒಂದೇ ಕೋಟಿ ಪಾಪವನ್ನು ತೊಳೆಯುತ್ತದೆ. ಓ ದೇವತಾ ಪುರುಷನೇ! ಅವನ ಮೇಲೆ ಧ್ಯಾನಿಸು ನಾನಕ ಹೇಳುವನು, ಇದರಿಂದಲೇ ನಿನಗೆ ಶಾಂತಿ ದೊರಕುವುದು.'

ಗುರು ಅರ್ಜುನ್ ದೇವರ ಈ ಪ್ರಾರ್ಥನೆಯನ್ನು ಕಪೂರ್ ಗುಣಗುಣಿಸಿದ. ಅವನ ಮುಖದಲ್ಲಿ ಶಾಂತಿ ಹರಡಿತ್ತು. ಮನಸ್ಸಿನ ತಳಮಳವನ್ನು ನಿವೇದಿಸಿಕೊಳ್ಳು ತ್ತಿದ್ದಾನೇಯೊ? ನಮಗಿಂತಲೂ ಶಕ್ತಿಯುತವಾದ ಒಂದು ಶಕ್ತಿ ಇದೆ. ಈ ಶಕ್ತಿಗೆ ಪಂಚ ಭೂತ (ಆಕಾಶ, ನೀರು, ಅಗ್ನಿ, ಭೂಮಿ, ವಾಯು) ಎಂದು ಹೆಸರಿಟ್ಟಿದ್ದಾರ ಲ್ಲವೇ? ಈ ಶಕ್ತಿಗಳ ಮುಂದೆ ತಾನು ತೃಣಮಾತ್ರ ಎಂದು ಹೇಳಿಕೊಳ್ಳುತ್ತಿದ್ದಾನೆಯೇ?

"ಸಾಬ್! ನಿಮ್ಮ ಕರವಸ್ತ್ರ ಕೆಳಗೆ ಬಿದ್ದಿದೆ."

ವರ್ಮಾ ಎಚ್ಚರಿಸಿದ ನನಗೆ. ತಲೆಗೆ ಕಟ್ಟಿದ ಕರವಸ್ತ್ರ, ಗಾಳಿಗೆ ಹಾರಿ ಕೆಳಗೆ ಬಿದ್ದಿತ್ತು. ಬಗ್ಗಿ ಕರವಸ್ತ್ರವನ್ನು ಕೈಗೆ ತೆಗೆದುಕೊಂಡು, ತಲೆಗೆ ಕಟ್ಟಿದೆ. ತಲೆಗೆ ಪೇಟ ಇರದಿದ್ದರೆ, ಕರವಸ್ತ್ರ ಏಕೆ ಕಟ್ಟಿಕೊಳ್ಳಬೇಕೆಂಬ ಈ ಶಾಸ್ತ್ರ? ಕ್ರೈಸ್ತರು, ಮುಸ್ಲಿಮರು,

ಯಹೂದಿಗಳು ತಮ್ಮ ತಲೆಗೆ ಸಣ್ಣ ಟೋಪ್ಪಿಯನ್ನು ಹಾಕಿಕೊಂಡು, ದೇವರನ್ನು ಆರಾಧಿಸುತ್ತಾರೆ. ಕಾರಣವಾದರೂ ಏನು? ಹಿಂದೂಗಳು ಏಕೆ ತಲೆಗೆ ಟೋಪ್ಪಿ ಹಾಕುವುದಿಲ್ಲ.

ನನ್ನ ಈ ಪ್ರಶ್ನೆಯನ್ನು ವರ್ಮಾನಿಗೆ ಹಾಕಿದೆ. ಅವನು ನನ್ನ ಮುಖವನ್ನು ನೋಡಿ ಬಹಳ ಗಂಭೀರದಿಂದ ಹೇಳಿದ.

"ತಲೆ ಇದ್ದುದರಿಂದ ಟೋಪಿ ಹಾಕಿಕೊಳ್ಳುತ್ತಾರೆ. ತಲೆ ಇಲ್ಲದಿದ್ದರೆ ಟೋಪಿ ಹಾಕಿಕೊಳ್ಳುತ್ತಿದ್ದರೆ?"

ನನ್ನ ಪ್ರಶ್ನೆಗೆ ಉತ್ತರವಾಗಿ ತಲೆಹರಟೆ ಉತ್ತರ ನೀಡಿದ್ದ ವರ್ಮನ ಜೊತೆ ಜಗಳ ಕಾಯುವ ಮನಸ್ಸಾದರೂ ಈ ಪವಿತ್ರ ಸ್ಥಳದಲ್ಲಿ ಜಗಳ ಕಾಯುವುದು ಸಾಧುವಾದುದಲ್ಲ ಎಂದೆಣಿಸಿ, ಮಂದಿರದಿಂದ ಹೊರಗೆ ಹೆಜ್ಜೆ ಹಾಕಿದೆ. ಕಪೂರ್, ವರ್ಮಾ, ಇಬ್ಬರೂ ಹಿಂಬಾಲಿಸಿದ್ದರು. ಮೌನವಾಗಿ, ಮಂದಿರದಿಂದ ಹೊರಗೆ ಬಂದು, ರಸ್ತೆ ಸೇರಿದೆವು. ಇಕ್ಕಟ್ಟಾದ ಈ ರಸ್ತೆಯಲ್ಲಿ ಎಲ್ಲಿ ನೋಡಿದರೂ ಅಂಗಡಿಗಳ ಸಾಲೇಸಾಲು. ತರಹತರಹ ಸಾಮಾನುಗಳನ್ನು ಮಾರುವ ಅಂಗಡಿಗಳು ಆತಂಕ ವಾದಿಗಳ ದಯೆಯಿಂದ ಯಾತ್ರಿಕರು ಕಡಿಮೆ ಸಂಖ್ಯೆಯಲ್ಲಿದ್ದ ಕಾರಣ, ಅಂಗಡಿ ಮಾಲೀಕರು ದೊಡ್ಡದಾಗಿ ಬಾಯಿ ತೆಗೆದು, ಆಕಳಿಸುತ್ತಾ ಗಿರಾಕಿಗಳಿಗಾಗಿ ಎದುರು ನೋಡುತ್ತಾ ಕುಳಿತಿದ್ದರು.

"ನಿಮಗೆ ಬೇಸರವಾಯಿತಾ ಸಾಬ್!"

ವರ್ಮಾ ಪೆಚ್ಚು ಮುಖ ಮಾಡಿ ಕೇಳಿದ.

"ನೀವೇನು ಅಕ್ಬರ್ ಆಸ್ಥಾನದಲ್ಲಿನ ಬೀರಬಲ್‌ನ ತರಹ ಬಹಳ ಬುದ್ಧಿವಂತ, ನಗೆಗಾರ ಎಂದು ಎಣಿಸಿದ್ದೀರಾ?"

ಮುಖ ಉದ್ದ ಮಾಡಿ ಕೇಳಿದೆ.

"ಸಾಬ್! ಬೀರಬಲ್ ಬುದ್ಧಿವಂತ, ನಗೆಗಾರ ಎಂದು ವರ್ಣಿಸಿದ್ದೀರಲ್ಲಾ! ಅವನು ನಗೆಗಾರನೂ ಅಲ್ಲ, ಬುದ್ಧಿವಂತನೂ ಅಲ್ಲ, ಅವನೊಬ್ಬ ಸಾಮಾನ್ಯ ಮಂತ್ರಿ ಮತ್ತು ಕುತಂತ್ರಿ!"

ಬೀರಬಲ್ ಒಬ್ಬ ಕುತಂತ್ರಿ! ಕಪೂರ್‌ನಿಗೆ ತಲೆ ಕೆಟ್ಟಿದೆಯೆ?

"ನೀವು ಏನು ಹೇಳುತ್ತಿದ್ದೀರಿ?" ಕೆರಳಿ ಕೇಳಿದೆ.

"ಅವನೊಬ್ಬ ಕುತಂತ್ರಿ ಮಂತ್ರಿಯಾಗಿದ್ದ. ಗುರು ಅರ್ಜುನ್ ದೇವ್‌ರಿಗೆ ತೊಂದರೆ ಕೊಟ್ಟವನೇ ಅವನು. ಅಕ್ಬರನ ಕಿವಿಯಲ್ಲಿ ವಿಷದ ಗಾಳಿ ತುಂಬಿದವನೇ ಅವನು. ಸಿಖ್‌ರು ಅಧರ್ಮಿಯರು, ಹಿಂದೂ-ಮುಸ್ಲಿಮ್‌ರ ಬಗ್ಗೆ ಅಪಪ್ರಚಾರ

ಮಾಡುತ್ತಿದ್ದಾನೆಂದು ಸುಳ್ಳು ಸುದ್ದಿ ಹರಡಿ, ಗುರುವಿಗೆ ಉಪದ್ರ ನೀಡಿದವನೇ ಅವನು. ಕೊನೆಗೆ, ದೇವರು ಅವನಿಗೆ ಸೂಕ್ತ ರೀತಿಯ ಶಿಕ್ಷೆ ನೀಡಿದನು. ಆಫ್ಘನರ ವಿರುದ್ಧ ಯುದ್ಧ ಜರುಗಿದಾಗ, ಇವನನ್ನು ಕೊಂದರು ಅವರು!"

ಬೀರಬಲ್ ಮಂತ್ರಿಯಾಗಿದ್ದನೆಂದು ಚರಿತ್ರೆಯಲ್ಲಿ ಓದಿದ್ದ ನಾನು ಅವನು ಆಫ್ಘನ್‌ರ ವಿರುದ್ಧ ಹೋರಾಡಿ ಸತ್ತ ಸಂಗತಿ ಅರಿತಿರಲಿಲ್ಲ. ಹಾಗಾದರೆ, ಅವನೊಬ್ಬ ವೀರನೂ ಹೌದು. ಅವನ ಬುದ್ಧಿವಂತಿಕೆಗೆ, ಚಾತುರ್ಯಕ್ಕೆ ಹಲವಾರು ದಂತಕತೆಗಳಿದ್ದರೂ, ಅವನ ಪೌರುಷದ ಕಥೆ ಮಾತ್ರ ತಿಳಿದಿರುವುದು ಇಲ್ಲವೇ ಎನ್ನಿಸಿತು.

"ಗುರು ಅರ್ಜುನ್ ದೇವರು ಸತ್ತಿದ್ದು, ಬೀರಬಲ್‌ನಿಂದಲ್ಲ. ಗುರುಗಳ ಸ್ವಂತ ಸಹೋದರನಿಂದ. ಅವನು ಅಕ್ಬರ್‌ನ ಮಗ ಜಹಂಗೀರ್‌ನ ಕಿವಿಯಲ್ಲಿ ವಿಷದ ಗಾಳಿ ಊದಿ, ಅವನ ಮನಸ್ಸು ಕೆಡಿಸಿ, ಗುರುಗಳ ಹತ್ಯೆ ಮಾಡಿಸುತ್ತಾನೆ!"

ವರ್ಮಾ ತನಗೆ ತಿಳಿದ ಚರಿತ್ರೆಯ ಪಾಠವನ್ನು ನಮಗೆ ಒಪ್ಪಿಸಿದ.

"ತೂ ಚುಪ್! ತೂ ಚುಪ್!" ಎಂದು ಇಬ್ಬರು ಈ ವಿಷಯದ ಬಗ್ಗೆ ಕಾದಾಡಲಿಕ್ಕೆ ಶುರುಮಾಡಿದಾಗ, ನನಗೆ ಬೇರೆ ದಾರಿ ಕಾಣದೆ ಹೇಳಿದೆ,

"ಮಂದಿರದಲ್ಲಿ ಪ್ರಾರ್ಥನೆ ಮಾಡಿ, ಹೊರಗೆ ಹೀಗೆ ಜಗಳವಾಡಿದರೆ, ಏನು ಉಪಯೋಗ? ಬೀರಬಲ್‌ನೋ, ಬಲಬೀರನೋ ಗುರು ಹುತಾತ್ಮರಾಗಿದ್ದು ಸತ್ಯ. ಅವರು ತ್ಯಾಗ ಮಾಡಿದ್ದು ದಿಟ. ಸ್ವಲ್ಪ ನಿಮ್ಮ ಜಂಜಾಟ ತ್ಯಾಗ ಮಾಡಿದರೆ, ಎಲ್ಲರಿಗೂ ಶ್ರೇಯಸ್ಸು."

ಇಬ್ಬರೂ ಒಮ್ಮೆಲೆ ನಗತೊಡಗಿದರು ನನ್ನ ಮಾತು ಕೇಳಿ. ನಗುವಿರೇತಕೆ? ನನ್ನ ಮಾತಿನಲ್ಲಿ ಹಾಸ್ಯದ ತುಣುಕು ಇದ್ದ ಹಾಗೆ ಕಾಣಲಿಲ್ಲವಲ್ಲ!

"ಸಾಬ್! ನಾವು ಜಗಳವನ್ನಾಡುತ್ತಿರಲಿಲ್ಲ! ಚರ್ಚೆ ಮಾಡುತ್ತಿದ್ದೆವು. ಧ್ವನಿ ಏರಿಸಿ ಪಂಜಾಬಿಯಲ್ಲಿ ಮಾತನಾಡಿದರೆ, ಜಗಳದ ತರಹ ತೋರಿರಬೇಕು ನಿಮಗೆ! ಅಲ್ಲವೇ?"

ಮತ್ತೆ ನಗಲಿಕ್ಕೆ ಶುರು ಮಾಡಿದರು ಅವರಿಬ್ಬರು.

ಪಂಜಾಬಿ ಭಾಷೆ ಚೆನ್ನಾ ಎಂದು ಹೇಳುತ್ತಾರೆ ಜನ. ಧ್ವನಿ ಏರಿಸಿ ಮಾತನಾಡಿದರೆ ಯಾವ ಭಾಷೆಯಾದರೇನು ಜಗಳ ಜಗಳವೇ!

ಅಷ್ಟರಲ್ಲಿ ನಾವು ಇಳಿದುಕೊಂಡ ಹೋಟೆಲ್‌ನ ಸಮೀಪ ಬಂದಿದ್ದೆವು. ಮೌನವಾಗಿ, ನಡೆದು ಹೋಟೆಲ್ ರೂಮ್ ಸೇರಿ, 'ಉಸ್ಸಪ್ಪಾ' ಎಂದು ಹಾಸಿಗೆಯ ಮೇಲೆ ಉರುಳಿದೆವು. ಸುತ್ತಿ, ನಡೆದು, ಮಾತನಾಡಿದ್ದರಿಂದ ಆಯಾಸವಾಗಿದ್ದರ ಪ್ರಯುಕ್ತ ನಿದ್ರೆ ಆವರಿಸಿತು.

ಕೂಗಾಟ, ಬೂಟ್ಸುಕಾಲಿನ ಶಬ್ದ, ಧಡಧಡ ಓಡುವ ಶಬ್ದಗಳು ನನ್ನನ್ನು ನಿದ್ರೆಯಿಂದ ಎಚ್ಚರಗೊಳಿಸಿದವು. ಕೈ ಗಡಿಯಾರದಲ್ಲಿ ಗಂಟೆ ಆರು ತೋರಿಸುತ್ತಿತ್ತು.

ಪಕ್ಕದಲ್ಲಿ ಮಲಗಿದ್ದ ಇಬ್ಬರು ಗೆಳೆಯರನ್ನು ಎಬ್ಬಿಸಿದೆ. ಕಪೂರ್ ಎಚ್ಚರಗೊಂಡರೂ, ಮೇಲಕ್ಕೇಳದೆ, ಮಲಗಿದ್ದ ಹಾಗೆ ಕೇಳಿದ:

"ಬೆಳಗಾಯಿತಾ ಸಾಬ್?"

"ಬೆಳಗಾಯಿತು. ಈಗ ಬೆಳಿಗ್ಗೆ ಏಳು ಗಂಟೆ. ಎದ್ದೇಳಪ್ಪಾ, ಏಳು!"

ವರ್ಮಾ ಎದ್ದು ಹಾಸಿಗೆಯ ಮೇಲೆ ಕುಳಿತು ಕಪೂರ್‌ನ ಕೈ ಹಿಡಿದು ಎಬ್ಬಿಸಲು ಯತ್ನಿಸಿದ.

ಕೋಣೆಯ ಬಾಗಿಲ ಬಳಿ ಮತ್ತೆ ಗಲಾಟೆ ಶುರುವಾಯಿತು. ಬಾಗಿಲು ತೆರೆದು ವಿಚಾರಿಸಲು ಮಂಚದಿಂದ ಎದ್ದೆ.

"ಬೇಡ ಸಾಬ್! ಬೇಡ! ಸುಮ್ಮನೆ ಇರಿ. ಹೊರಗಡೆ ಗಲಾಟೆ ಆಗುತ್ತಾ ಇದೆ. ನಾವು ಅದರಲ್ಲಿ ಸಿಕ್ಕಿ ಹಾಕಿಕೊಳ್ಳುವುದು ಬೇಡ."

ವರ್ಮಾನ ಎಚ್ಚರಿಕೆಯ ಮಾತಿಗೆ ನನ್ನ ಮನಸ್ಸು ಹೊಯ್ದಾಡಿತು. ಗಲಾಟೆ ಏನು ಎಂದು ವಿಚಾರಿಸುವಷ್ಟು ಧೈರ್ಯವಿಲ್ಲವೇ ನಮಗೆ? ಗಲಾಟೆಯಲ್ಲಿ ಸಿಕ್ಕಿಹಾಕಿಕೊಳ್ಳುವ ಭಯವಿದ್ದರೆ, ಇಲ್ಲಿಯವರೆಗೆ ಬಂದದ್ದಾದರೂ ಏಕೆ?

"ಬಾಗಿಲು ತೆಗೀರಿ ಸಾಬ್! ಹೆದರಬೇಡಿ". ಕಪೂರ್ ಮಲಗಿದ್ದಂತೆಯೇ ನುಡಿದ. ಧೈರ್ಯಮಾಡಿ ಬಾಗಿಲು ತೆರೆದೆ. ಧಡೂತಿ ಆಕಾರದ, ಗಡ್ಡಧಾರಿ, ಖಾಕೀಧಾರಿ ಸಿಖ್ ಪೊಲೀಸರು ನಿಂತಿದ್ದರು. ಮೂವರ ಕೈಗಳಲ್ಲೂ ಗನ್‌ಗಳು ಇದ್ದವು.

ನನ್ನ ಮುಖವನ್ನೇ ಹರಿದು ತಿನ್ನುವಂತೆ ನೋಡಿದರು ಮೂವರು. ನನ್ನ ಎದೆ ನಗಾರಿಯಂತೆ ಬಾರಿಸತೊಡಗಿತು.

"ಏನು ಬೇಕು ನಿಮಗೆ?"

ಕೇಳಿದವ ಕಪೂರ್. ಯಾವಾಗಲೋ ಎದ್ದು ನನ್ನ ಪಕ್ಕದಲ್ಲಿ ಬಂದು ನಿಂತಿದ್ದ ಅವ.

ಗಡ್ಡಧಾರಿ ಪೊಲೀಸರು ಉತ್ತರ ನೀಡಲಿಲ್ಲ.

"ನಿಮಗೇ ಕೇಳುತ್ತಿರುವುದು. ಇಲ್ಲಿಗೆ ಯಾಕೆ ಬಂದಿದ್ದೀರಿ?"

ಕಪೂರ್ ಮತ್ತೆ ಕೇಳಿದ.

"ಪಹರೆ ಮಾಡುತ್ತಿದ್ದೇನೆ!" ಉತ್ತರಿಸಿದ ಒಬ್ಬ.

"ಗಲ್ಲಿ ರಸ್ತೆಗಳಲ್ಲಿ ಪಹರೆ ಮಾಡುವುದು ಬಿಟ್ಟು, ಹೋಟೆಲ್‌ಗಳಲ್ಲಿ ಪಹರೆ ಮಾಡುವುದಾ?"

ನಸುನಗುತ್ತಾ ಕೇಳಿದ ಕಪೂರ್.

ಉತ್ತರ ನೀಡದೆ, ಪಡಸಾಲೆಗುಂಟ ಧಡ್ ಧಡ್ ಎಂದು ತಮ್ಮ ದಪ್ಪ ಬೂಟ್ಸ್ ಕಾಲಿನಿಂದ ಶಬ್ದ ಮಾಡುತ್ತಾ ಹೊರಟು ಹೋದರು ಮೂವರು ಸಿಖ್ ಸಿಪಾಯಿಗಳು.

"ಬನ್ನಿ ಸಾಬ್ ಒಳಗೆ!"

ನನ್ನ ಎದೆಯ ನಗಾರಿ ಬಡಿದುಕೊಳ್ಳುತ್ತಲೇ ಇತ್ತು. ಈ ಪಂಜಾಬೀ ಎದೆ ಗುಂಡಿಗೆ ಎಷ್ಟು ಗಟ್ಟಿ ಎಂದು ಮನದಲ್ಲೇ ಕಪೂರ್‌ನಿಗೆ ಅಭಿನಂದಿಸಿದೆ.

"ನಿಮಗೆ ಹೆದರಿಕೆಯಾಗಲಿಲ್ಲವೇ?"

ಕೇಳಿದೆ ಅವನನ್ನು.

"ಯಾಕೆ? ಅವರೇನು ಮಾಡುವವರಿದ್ದರು ನಮಗೆ."

"ಏನು ಮಾಡುವವರೆ? ಈ ಪ್ರಕ್ಷುಬ್ಧ ಸ್ಥಿತಿಯಲ್ಲಿ ಅವರು ಏನನ್ನೂ ಮಾಡ ಬಲ್ಲರು. ಆತಂಕವಾದಿಗಳೆಂದು ನಮ್ಮನ್ನು ಹಿಡಿದು ಹಿಂಸಿಸಲೂ ಬಹುದು. ಇಂತಹ ಸಮಯದಲ್ಲಿ ಏನೂ ಅರಿಯದ ನಮ್ಮಂತಹವರು ಸಿಕ್ಕಿ ಹಾಕಿಕೊಂಡು ನರಳುವುದು ಗೊತ್ತೇ ನಿಮಗೆ?"

ವರ್ಮಾ ಭಯಗೊಂಡಿದ್ದು ಅರ್ಥವಾಗಿತ್ತು. ಪೊಲೀಸರನ್ನು ನೋಡಿದರೆ ಏಕಿಷ್ಟು ಭಯಭೀತಿ ನಮಗೆ? ಅವರನ್ನು ಎದುರಿಸುವಷ್ಟು ಧೈರ್ಯವಿಲ್ಲವೇ ನಮಗೆ? ತಪ್ಪು ಮಾಡದೆ, ಕೆಡಕು ಮಾಡದೆ, ಅಡ್ಡಿತೊಡಕು ಮಾಡದೆ, ತೊಂದರೆ, ತ್ರಾಸು ಕೊಡದೆ, ನ್ಯಾಯ ಮಾರ್ಗದಲ್ಲಿ ನಡೆಯುವವರಿಗೆ, ಪೊಲೀಸರು ಯಾಕೆ ತ್ರಾಸು ಕೊಡಬೇಕು?

"ಅವರು ಇಲ್ಲಿಗೆ ಯಾಕೆ ಬಂದಿದ್ದರು?"

"ಆತಂಕವಾದಿಗಳನ್ನು ಹುಡುಕಿಕೊಂಡು ಬಂದಿರಬೇಕು."

"ನಮ್ಮ ರೂಮಿನ ಬಳಿ ಯಾಕೆ ಬರಬೇಕು?"

ಸಂಶಯವಾಗಿತ್ತು ನನಗೆ.

"ನೋಡಿ ಸಾಬ್! ಯಾತ್ರಿಕರು ಊರು ನೋಡಲಿಕ್ಕೆ ಅಂತ ಬಂದವರು, ಹೋಟೆಲ್ ರೂಮಿನಲ್ಲಿ ಸಾಯಂಕಾಲದ ಹೊತ್ತು ನಿದ್ರೆ ಮಾಡುವುದಿಲ್ಲ. ತಿರುಗಾಡ ಲಿಕ್ಕೆ ಹೊರಗೆ ಹೋಗುತ್ತಾರೆ."

ಅಂದರೆ, ಪೊಲೀಸರಿಗೆ ಅನುಮಾನ ಬಂದಿರಬೇಕು, ನಮ್ಮ ನಡವಳಿಕೆಯಿಂದ. ಆದರೆ, ಅವರಿಗೆ ಹೇಗೆ ಅರಿವಾಗಿತ್ತು ನಾವು ರೂಮಿನಲ್ಲಿ ಮಲಗಿದ್ದ ವಿಷಯ?

"ಅಮೃತಸರದ ಪ್ರತಿ ಹೋಟೆಲ್‌ನಲ್ಲಿ ಪೊಲೀಸರ ಗುಪ್ತಾಚಾರರ ಹಿಂಡೇ ಅಡಗಿದೆ ಸಾಬ್! ಅವರಿಗೆ ಎಲ್ಲರ ಸುಳಿವೂ ಸುಲಭವಾಗಿ ಸಿಗುತ್ತದೆ."

ಕಪೂರ್ ನನ್ನ ಶಂಕೆಯನ್ನು ಬಗೆಹರಿಸಿದ. ಇನ್ನು ಈ ಊರಿನಲ್ಲಿ ಈ ಆತಂಕಗಳ ಗೊಂಡಾರಣ್ಯದಲ್ಲಿ ನೋವು, ಹಿಂಸೆ, ಸತತವಾಗಿ ತಾಂಡವವಾಡುತ್ತಿರುವ ಈ ಪ್ರದೇಶದಲ್ಲಿ, ಗೊಂದಲ, ನರಹತ್ಯೆ, ಕೊಲೆಗಳ ಬೀಡಾದ ಈ ನೆಲದಲ್ಲಿ ಅಪಾಯ, ಆಪತ್ತು, ವಿಪತ್ತು, ಗಂಡಾಂತರಗಳ ಈ ಯುದ್ಧಭೂಮಿಯಲ್ಲಿ, ನಾನು ಅತಿಕ್ರಮಣ ಮಾಡುವುದು ಹುಚ್ಚುತನದ ಪರಮಾವಧಿ ಎಂದು ಬಗೆದು, ದಿಲ್ಲೀಗೆ ವಾಪಸ್ಸು ಹೊರಡುವ ಬಯಕೆಯನ್ನು ಬಹಿರಂಗ ಪಡಿಸಿದೆ.

"ನಾಳೆ ಜಲಿಯನ್‌ವಾಲಾಬಾಗ್ ನೋಡಿ ಹೋಗೋಣ ಸಾಬ್! ಇಷ್ಟು ದೂರ ಬಂದವರು, ಅದನ್ನು ನೋಡದೇ ಹೋಗುವುದು ಸರಿಯಲ್ಲ!".

ಕಪೂರ್‌ನ ಒತ್ತಾಯಕ್ಕೆ ಮಣಿಯಬೇಕಾಯಿತು.

"ಹೆದರಿಕೆ ಆಯಿತಾ ಸಾಬ್!"

"ಹೆದರಿಕೆ? ಇಲ್ಲ ಆದರೆ ಇಂಗ್ಲಿಷ್‌ನಲ್ಲಿ ಒಂದು ಗಾದೆ ಇದೆಯಲ್ಲ. 'ಡಿಸ್‌ಕ್ರಿಷನ್ ಈಸ್ ಬೆಟರ್ ಪಾರ್ಟ್ ಆಫ್ ವೇಲರ್' ಎಂದು, ತಲೆ ಗಟ್ಟಿ ಇದೆ ಎಂದು ಬಂಡೆಗೆ ಹೊಡೆದು ನೋಡುವುದೇ?"

"ಸರ್ದಾರ್ಜೀಯನ್ನು ಹುಡುಕಲಿಕ್ಕೆ ಹೋಗುವುದಿಲ್ಲವೇ?"

ವರ್ಮಾ ಹುಸಿ ನಗುತ್ತಾ ಕೇಳಿದ. ಅವನ ಪ್ರಶ್ನೆಯಲ್ಲಿ ಕುಚೋದ್ಯವಿತ್ತು.

"ಅವನನ್ನು ಹುಡುಕಿಯೇ ಪೊಲೀಸರು ಇಲ್ಲಿಗೆ ಬಂದಿರಬೇಕು."

ವರ್ಮಾ ವಮುಂದುವರೆಸಿದ ತನ್ನ ಮಾತನ್ನು ನಮ್ಮ ಪ್ರತಿಕ್ರಿಯೆಗಾಗಿ ಕಾಯದೆ.

"ಸರ್ದಾರ್ಜೀಗೆ ಹೆಂಡತಿ ಮಕ್ಕಳು ಇಲ್ಲವೇ?"

ಅವನ ಪ್ರಶ್ನೆಗೆ ಕಪೂರ್ ಉತ್ತರವಿತ್ತ.

"ಇಲ್ಲ, ಆದರೆ ತಂದೆತಾಯಿ ಇದ್ದಾರೆ. ಅವರು ಜಲಂಧರ್‌ನಲ್ಲಿದ್ದಾರೆ. ಇವನೊಬ್ಬನೇ ದಿಲ್ಲಿಯಲ್ಲಿದ್ದಾನೆ."

"ಮದುವೆಯಾಗಿದ್ದರೆ, ಆತಂಕವಾದಿಯಾಗುತ್ತಿರಲಿಲ್ಲ ಅಲ್ಲವೇ?"

"ಆತಂಕವಾದಕ್ಕೂ ಮದುವೆಗೂ ಯಾವ ಸಂಬಂಧವೂ ಇಲ್ಲ. ಗುರಿ ಸಾಧಿಸುವವರೆಗೂ ಮದುವೆಯಾಗುವುದಿಲ್ಲ ಎಂದು ಪಣ ತೊಟ್ಟಿದ್ದಾನೆ."

"ಅವನು ಮದುವೆಯಾಗದಿದ್ದರೂ ಪರವಾಗಿಲ್ಲ. ಈಗ ನಾವು ಚಾಯ್ ಕುಡಿದು ಬರೋಣ!"

ವರ್ಮಾ ಕುಳಿತಲ್ಲಿಂದ ಎದ್ದು ಬಾಗಿಲ ಕಡೆ ಹೆಜ್ಜೆ ಹಾಕಿದ. ನಾವು ಅವನನ್ನು ಮಾತಿಲ್ಲದೆ ಹಿಂಬಾಲಿಸಿದೆವು.

ಹೋಟೆಲ್‌ನ ಪಡಸಾಲಿನಲ್ಲಿ ಕಾಲಿಟ್ಟ ಕೂಡಲೆ ಗೋಚರವಾಗಿದ್ದು,

ಪೊಲೀಸ್‌ರ ಮುಖಗಳು! ಎಲ್ಲರೂ ನಮ್ಮ ಮುಖಗಳನ್ನು ದುರುಗುಟ್ಟಿ ನೋಡು ವವರೆ. ನಮ್ಮನ್ನು ಬಂಧಿಸಿ ಎಳೆದೊಯ್ಯಬಹುದೆಂಬ ಭೀತಿ ನನಗೆ ಆವರಿಸಿತು. ಸರಸರನೆ ಬೀದಿಗಿಳಿದು, ತ್ವರೆಯಿಂದ ನಡೆಯತೊಡಗಿದೆವು. ರಸ್ತೆ ಅಗಲವಾಗಿದ್ದರೂ, ಫುಟ್‌ಪಾತ್ ಇರಲಿಲ್ಲ. ಆಗಲೇ ಕತ್ತಲಾವರಿಸಿದ್ದರಿಂದ ಬೀದಿ ದೀಪ ಉರಿಯುವ ಜೊತೆಗೆ, ಅಂಗಡಿ, ಮನೆಗಳ ದೀಪಗಳು, ರಸ್ತೆಯಲ್ಲಿ ಓಡಾಡುವ ವಾಹನಗಳ ದೀಪಗಳು ಉರಿಯತೊಡಗಿದ್ದವು. ಆತಂಕವಾದಿಗಳ, ಭಯೋತ್ಪಾದಕರ ಭಯ ದಿಂದಲೋ ಜನರ ಓಡಾಟ ಅಷ್ಟಾಗಿ ಕಾಣಬರಲಿಲ್ಲ. ರಸ್ತೆ ಬದಿಯ ಢಾಬಾ ಕಂಡ ಕೂಡಲೇ, ಅದರ ಬಳಿ ಹೋಗಿ, ಚಾ ನೀಡಿರೆಂದು ಹೇಳಿ, ಅಲ್ಲೇ ಇದ್ದ ಒಂದು ಮರದ ಬೆಂಚಿನ ಮೇಲೆ ಕುಳಿತೆವು. ಢಾಭಾದ ಒಡೆಯ ಸೀಖನಾಗಿದ್ದ. ಅವನು ನಮ್ಮನ್ನು ನೋಡಿದ ರೀತಿ ಒಂದು ಬಗೆಯದಾಗಿತ್ತು ಅಥವಾ ನಾನು ಭ್ರಮಿಸುತ್ತಿದ್ದ ನೇನೋ!

"ರೈಲಿನಲ್ಲಿದ್ದ ಪ್ರಯಾಣಿಕರ ನೂಕುನುಗ್ಗುಲು ನೋಡಿದರೆ, ಈ ಊರಿನ ತುಂಬ ಜನರ ಓಡಾಟ, ನೂಕು, ಗೊಂದಲ ಜಾಸ್ತಿ ಇರಬಹುದು ಎಂದು ನೆನೆದಿದ್ದೆ."

ನನ್ನ ಮಾತಿಗೆ ಢಾಭಾದ ಮಾಲೀಕ ನನ್ನ ಮುಖವನ್ನೇ ಥಕ್ಕನೇ ನೋಡಿ, ಮುಖವನ್ನು ಪಕ್ಕಕ್ಕೆ ತಿರುಗಿಸಿದ.

"ರೈಲಿನಲ್ಲಿದ್ದ ಪ್ರಯಾಣಿಕರೆಲ್ಲಾ ಊರು ನೋಡಲಿಕ್ಕೆ ಬಂದಿರಲಿಲ್ಲ ಸಾಬ್! ಅವರು ಆರಾಮಾಗಿ ತಮ್ಮ ತಮ್ಮ ಮನೆಯಲ್ಲಿದ್ದಾರೆ."

ವರ್ಮಾ ನಿಜವನ್ನೇ ನುಡಿದಿದ್ದ. ನನ್ನ ತಲೆ ಯಾಕೆ ಹೀಗೆ ಓಡುತ್ತಾ ಇದೆ. ಆತಂಕವಾದಿಗಳ ಭೀತಿಗೆ ನನ್ನ ತಲೆ ಕೆಲಸ ಮಾಡುತ್ತಿಲ್ಲವೇ?

"ಆರಾಮಾಗಿ ಇದ್ದಾರೆ ಎಂದು ಹೇಗೆ ಹೇಳುವಿರಿ?" ಕಪೂರ್ ಕೇಳಿದ.

ಅವನ ಪ್ರಶ್ನೆಯಲ್ಲಿ ಎಷ್ಟು ಗೂಢಾರ್ಥವಿದೆ!

ಈ ಆತಂಕವಾದಿಗಳ ಊರಿನಲ್ಲಿ ಆರಾಮಾಗಿ ಇರಲು ಸಾಧ್ಯವೆ? ಭಯದ ವಾತಾವರಣ ಸೃಷ್ಟಿಸಿ, ಜನರ ಮನಸ್ಸಿನಲ್ಲಿ.ಕೋಲಾಹಲ ಎಬ್ಬಿಸಿ, ಜನರ ಜೀವನ ಅಸ್ತವ್ಯಸ್ತಗೊಳಿಸಿದ ಈ ಆತಂಕವಾದಿಗಳ ಗುರಿ ಸಾಧಿಸಲಿಕ್ಕೆ ಸಾಧ್ಯವಾಗುವುದೇ? ಈ ನಗರವನ್ನು 'ಪುಣ್ಯನಗರ'- ಕ್ರೈಸ್ತರ ರೋಮ್ ನಗರದ ಹಾಗೆ (ಹೋಲೀಸಿಟಿ) ಘೋಷಿಸಬೇಕೆಂಬ ಸೀಖರ ಬೇಡಿಕೆಯನ್ನು, ಸರಕಾರ ಯಾಕೆ ದಯಪಾಲಿಸಬಾರದು? ಆಗಲಾದರೂ, ಈ ಹಿಂಸೆ, ಭಯ, ದುಗುಡ, ಕಡಿಮೆಯಾಗಬಹುದಲ್ಲವೇ?

"ಈ ನಗರವನ್ನು ಕಟ್ಟಿ, ಅದರಲ್ಲಿ ಮಂದಿರ ಕಟ್ಟಿ, ದೇವರನ್ನು ಪೂಜಿಸಿ, ಅದರಿಂದ ಶಾಂತಿ, ಸಂತಸ ಪಡೆಯಿರಿ ಎಂದು ಉಪದೇಶಿಸಿದ ಮೇಲೆ ಜನರು

ಉಪದೇಶಿಸಿದಂತೆ ನಡೆದುಕೊಂಡರೂ, ಅವರಿಗೆ ಯಾಕೆ ಈ ಸಂಕಷ್ಟ? ಈ ಪರಿತಾಪ? ಈ ಆತಂಕ? ಈ ಹಿಂಸೆ? ಕಾರಣ ಏನು? ಕೆಲವರು ಅಷ್ಟು ನಿರ್ದಯಿಯಾಗಿದ್ದಾರೆಯೇ? ಅಥವಾ ನಾನಕ್ ಹೇಳಿದ ಹಾಗೆ, 'ಯಾರು ದೇವರನ್ನು ಮರೆತು ಕಳೆದುಕೊಳ್ಳುತ್ತಾನೋ, ತನ್ನನ್ನೇ ಕಳೆದುಕೊಳ್ಳುತ್ತಾನೆ;' 'ಯಾರು ತನ್ನನ್ನು ತಾನೇ ಜಯಿಸುತ್ತಾನೋ, ಪ್ರಪಂಚವನ್ನೇ ಜಯಿಸುತ್ತಾನೆ;' ಅಥವಾ 'ಪ್ರೇಮಿಯ ಭಯದಿಂದ ಬಿಡುಗಡೆ ಹೊಂದದೇ ಇದ್ದರೆ, ಇರುವ ಈ ಪ್ರೇಮ ಯಾವ ತರಹದ ಪ್ರೇಮ?'

"ನೀವು ಎಲ್ಲಿಂದ ಬಂದಿರುವಿರಿ?"

ದಾಭಾದ ಮಾಲೀಕ ಕೇಳಿದ.

"ದಿಲ್ಲೀ!" ಎಂದೆ.

ನನ್ನ ಮುಖವನ್ನು ಪ್ರಶ್ನಾರ್ಥಕವಾಗಿ ನೋಡಿ, ಆ ಸಿಖ್ ಹೇಳಿದ,

"ನೀವು ದಿಲ್ಲೀವಾಲರ ಹಾಗೆ ಕಾಣುವುದಿಲ್ಲ!"

"ಇನ್ನು ಹೇಗೆ ಕಾಣುತ್ತೇನೆ?"

"ಮದ್ರಾಸೀ!"

"ಮದ್ರಾಸೀ ಅಲ್ಲ! ಕರ್ನಾಟಕ" ಎಂದೆ.

"ಇರಬಹುದು."

"ಬೆಂಗಳೂರು ನಗರದ ಬಗ್ಗೆ ಏನಾದರೂ ಕೇಳಿದ್ದೀರಾ?"

"ಕೇಳಿದ್ದೇನೆ- ಒಳ್ಳೇ ನಗರ ಅದು. ನನ್ನ ತಮ್ಮ ಟ್ರಕ್ ಡ್ರೈವರ್. ಅವನು ಅಲ್ಲಿಗೆ ಹೋಗುತ್ತಾ ಇರುತ್ತಾನೆ. ವಾಪಸ್ಸು ಬರುವಾಗ, ತೆಂಗಿನಕಾಯಿ ಲೋಡ್ ಹಾಕಿಕೊಂಡು ಬರುತ್ತಾನೆ."

"ಬನ್ನಿ ಸಾಬ್ ಹೋಗೋಣ" ಎಂದು ವರ್ಮಾ ನನ್ನನ್ನು ಕರೆದು, ಹೋಟೆಲ್‌ನ ಕಡೆ ಹೆಜ್ಜೆ ಹಾಕಿದ.

"ನೀವು ಹೋಟೆಲ್‌ಗೆ ಹೋಗಿರಿ. ನಾನು ಇಲ್ಲೇ ನನ್ನ ಸ್ನೇಹಿತನ ಮನೆಗೆ ಹೋಗಿ ಬರುತ್ತೇನೆ."

ಕಪೂರ್ ನಮ್ಮ ಜೊತೆಗೆ ಬರದೆ, ರಸ್ತೆಯ ವಿರುದ್ಧ ದಿಕ್ಕಿಗೆ ನಡೆದು ಕಣ್ಮರೆಯಾದ. ನಮ್ಮ ಪ್ರತಿಕ್ರಿಯೆ, ಅಪ್ಪಣೆ, ಒಪ್ಪಿಗೆ, ಯಾವ ಕಡೆಗೆ ಎಂದು ಏನೂ ಹೇಳದೆ ಎಲ್ಲಿಗೆ ಹೋದನಪ್ಪಾ ಇವ ಎಂದು ಆಲೋಚಿಸುತ್ತಾ ನಾನು ನಡೆದೆ.

"ಸರ್ದಾರ್ಜೀಯನ್ನು ಹುಡುಕಿ ಹೋಗಿರಬಹುದೇ?"

ನನ್ನ ಪ್ರಶ್ನೆಗೆ ವರ್ಮಾ, "ಅವನ ಪತಾ ಇವನಿಗೆ ತಿಳಿದಿದ್ದರೆ, ಅವನಲ್ಲಿಗೆ ಹೋಗಲಿಕ್ಕೂ ಸಾಕು."

ಈ ಬಿಗಾಡಿಯಿಸಿದ ಪರಿಸ್ಥಿತಿಯಲ್ಲಿ ಇವನು ಯಾಕಾದರೂ, ನಮ್ಮನ್ನು ಬಿಟ್ಟು ಒಬ್ಬನೇ ತಿರುಗಾಡಲಿಕ್ಕೆ, ಹೋಗಬೇಕು ಎಂದು ಅವನನ್ನು ಹಳಿಯುತ್ತಾ ಮುಂದೆ ಸಾಗಿದೆ. ಹೋಟೆಲ್ ಬಂದೊಡನೆ, ರೂಮಿನೊಳಗೆ ಹೊಕ್ಕು, ಹಾಸಿಗೆಯ ಮೇಲೆ ಉರುಳಿದೆ. ನನ್ನ ಹಿಂದೆ ಬಂದ ವರ್ಮಾ, ಅಲ್ಲೇ ಬದಿಯಲ್ಲಿದ್ದ ಕುರ್ಚಿಯ ಮೇಲೆ ಕುಳಿತ. ಗಂಟೆ ಎಂಟಾಗಿತ್ತು. ಇಷ್ಟು ಬೇಗ ಮಲಗಿದರೆ ನಿದ್ರೆ ಬರುವ ಸ್ಥಿತಿಯಲ್ಲಿರಲಿಲ್ಲ.

ಕಪೂರ್ ಎಲ್ಲಿಗೆ ಹೋದ?

ಪ್ರಶ್ನೆ ಕಾಡತೊಡಗಿತು.

ಅವನನ್ನು ಈ ರಾತ್ರಿಯಲ್ಲಿ ಅನ್ವೇಷಿಸಿಕೊಂಡು, ವಿಚಾರಿಸಿಕೊಂಡು, ಆತಂಕಗೊಂಡ ಮನಸ್ಸಿನಲ್ಲಿ ಎಲ್ಲಿ ಹೋಗುವುದು?

ಪೇಪರನ್ನು ಕೈನಲ್ಲಿ ಹಿಡಿದು ದುರಹಂಕಾರದ ನಿರ್ಲಿಪ್ತತೆಯಿಂದ, ಕಪೂರ್‌ನ ಬಗ್ಗೆ ತಲೆಕೆಡಿಸಿಕೊಳ್ಳದೇ, ಓದುತ್ತಿದ್ದ, ವರ್ಮನನ್ನು ಕಂಡು ಮುಜುಗರವಾಯಿತು. ಪರಮಪವಿತ್ರ ಶಾಂತಿಯ ಪಾಠ ಓದುತ್ತಿರುವವನ ಹಾಗೆ ಕಂಡ ಈ ವರ್ಮನನ್ನು ನೋಡಿ, ಮೊದಲೇ ಕದಡಿದ ನನ್ನ ಮನಸ್ಸು ಕಲ್ಲಿನಂತೆ ಕಠೋರವಾಯಿತು. ನನ್ನ ಪೇಚಾಟ, ತ್ರಾಸು, ಅಸಂತೋಷ, ಆತಂಕಗಳಿಗೆ ಇವನು ತನ್ನ ಬೆಂಬಲ ಸೂಚಿಸದೇ, ತದೇಕಚಿತ್ತತೆಯಿಂದ ಪೇಪರ್ ಓದುವುದರಲ್ಲಿ ತಲ್ಲೀನನಾಗಿದ್ದಾನಲ್ಲಾ! ಮನಸ್ಸಿನಾಳದಿಂದ ನಿರಾಶೆಯ ನಿಟ್ಟುಸಿರು ನನಗೆ ಅರಿವಾಗದಂತೆ ಹೊರಹೊಮ್ಮಿತು.

ಬೆಚ್ಚಿಬಿದ್ದಂತೆ ಮುಖ ಮಾಡಿ, ವರ್ಮಾ ನನ್ನ ಮುಖ ನೋಡಿದ. ಪೇಪರನ್ನು ಮೇಜಿನ ಮೇಲೆ ಇರಿಸಿ, ಕೇಳಿದ,

"ಏನಾಯಿತು ಸಾಬ್! ಬೇಸರವಾಯಿತಾ?".

ಅಬ್ಬಾ! ಅಂತೂ, ನನ್ನ ಒಂಟಿತನಕ್ಕೆ, ನನ್ನ ಅಸಂತೋಷದಿಂದ ಹೊಯ್ದಾಡುತ್ತಿದ್ದ ಮನಸ್ಸಿಗೆ ಸಾಂತ್ವನ ನೀಡಿದ, ತನ್ನ ಮಾತುಗಳಿಂದ ಈ ವರ್ಮಾ!

"ಕಪೂರ್ ಎಲ್ಲಿ ಹೋದ ಎಂದು ಯೋಚಿಸುತ್ತಿದ್ದೆ."

"ಅವನು ಎಲ್ಲಿಗೆ ಬೇಕಾದರೂ ಹೋಗಲಿ? ನೀವು ಏಕೆ ತಲೆ ಕೆಡಿಸಿಕೊಳ್ಳಬೇಕು? ಮಲಗಿ ನಿದ್ರೆ ಮಾಡಿರಿ."

ವರ್ಮಾ ಕುರ್ಚಿಯಿಂದ ಎದ್ದು, ದೀಪ ಆರಿಸಿ, ಹಾಸಿಗೆಯ ಮೇಲೆ ಉರುಳಿದ. ಸ್ವಲ್ಪ ಹೊತ್ತಿನಲ್ಲೇ ಅವನ ಗೊರಕೆ ಶಬ್ಧ ರೂಮಿನಲ್ಲಿ ಪ್ರವಹಿಸಲಿಕ್ಕೆ ಶುರುಮಾಡಿತು.

ನನ್ನ ತಲೆಯಲ್ಲಿ ಮತ್ತೆ ಕಪೂರ್ ಮತ್ತು ಸರ್ದಾರ್ಜೀಯ ಬಗ್ಗೆ ಯೋಚನೆಗಳ ದುಂಬಿ ಗುಂಯ್‌ಗುಟ್ಟತೊಡಗಿದವು.

ಈ ಕಪೂರ್ ತಟಸ್ಥನಾಗಿರುವುದರ ಬದಲು, ತನ್ನ ಪಾಡಿಗೆ ತಾನು ತನ್ನ ಕಾರ್ಯಮಾಡಿಕೊಂಡಿರುವ ಬದಲು ಸರ್ದಾರ್ಜೀಯನ್ನು ಹುಡುಕಲು ಹೋಗಿದ್ದು ಯಾಕೆ? ಅಥವಾ ಈ ಮೊದಲೇ ಸರ್ದಾರ್ಜೀಯ ಪತ್ತೆ ಅವನಿಗೆ ತಿಳಿದಿತ್ತೇ? ಅವನನ್ನು ನೋಡಲೆಂದೇ ನನ್ನನ್ನು ಜೊತೆಗೆ ಕರೆದುಕೊಂಡು ಬಂದನೇ? ನನ್ನನ್ನು ಅವನಲ್ಲಿಗೆ ಕರೆದುಕೊಂಡು ಯಾಕೆ ಹೋಗಲಿಲ್ಲ? ಈ ಜಂಜಾಟದಲ್ಲಿ ನನ್ನನ್ನು ಸಿಕ್ಕಿಸಿಹಾಕ ಬಾರದೆಂಬ ಸಹೃದಯಿತನ ತೋರಿದ್ದಾನೆಯೆ?

ಈ ಪ್ರಶ್ನೆಗಳಿಗೆ ಉತ್ತರ ದೊರಕಿಸಿಕೊಳ್ಳುವುದರಲ್ಲಿ ನನ್ನ ಮನಸ್ಸು ಹೆಣಗಾಡಿ, ಹತಾಶತನದಿಂದ ನರಳಿತು. ಮನಸ್ಸು ಕರಗಿ, ಬೆಂಡಾಗಿ, ಸೋತು ಸೊರಗಿತು.

ಸರ್ದಾರ್ಜೀ, ಸಾಮಾನ್ಯ ಜನರ ಹಾಗೆ ಜೀವನ ಪಥದಲ್ಲಿ ಸಾಗದೆ, ದ್ವೇಷ ಮತ್ತು ಹಿಂಸಾಮಾರ್ಗಗಳನ್ನು ಹಿಡಿದು ಹೋದ ಬಗ್ಗೆ ಚಿಂತಾಕ್ರಾಂತನಾದೆ. ಚಿಂತೆಯಲ್ಲಿ ಮುಳುಗಿದ ನಾನು ಗಡಿಯಾರದ ಅಲಾರಂ ಗಂಟೆಯ ಕರ್ಕಶ ನಾದ ಕಿವಿಗೆ ಅಪ್ಪಳಿಸಿ, ನನ್ನ ಎದೆಯ ಗುಂಡಿಗೆಗೆ ಹೊಡೆದೆಬ್ಬಿಸಿ, ಅದು ಒಮ್ಮೆಲೆ ಓಡುವಂತ ಮಾಡಿ, ನನ್ನನ್ನು ಯಾವಾಗಲೋ ಆವರಿಸಿದ್ದ ನಿದ್ರೆಯನ್ನು ಹೊಡೆದೋಡಿಸಿತು. ಕೈ ಗಡಿಯಾರ ಬೆಳಗಿನ ಜಾವ ಮೂರು ಗಂಟೆ ತೋರಿಸುತ್ತಿತ್ತು. ಜಾವದ ಕೋಳಿಗಳು ಕೂಗಲಿಕ್ಕೆ ಶುರುಮಾಡಿದ್ದವು. ರಸ್ತೆಯಲ್ಲಿ ವಾಹನಗಳ, ಮನುಷ್ಯರ ಓಡಾಟದ ಸದ್ದು ಮಂದ ವಾಗಿ ಕೇಳಿಬರುತ್ತಿತ್ತು. ಪಕ್ಕದ ಹಾಸಿಗೆ ಮೇಲೆ ಮಲಗಿದ್ದ ವರ್ಮಾ ಸುಖನಿದ್ರೆಯಲ್ಲಿ ಮುಳುಗಿದ್ದ.

ಹಾಗಾದರೆ, ಇಡೀ ರಾತ್ರಿ ಕಪೂರ್ ಪತ್ತೆ ಇಲ್ಲದ ಹಾಗೆ ಮಾಯವಾಗಿದ್ದ!

ಎಲ್ಲಿ ಹೋದ ಇವ? ಏನಾಯಿತು ಇವನಿಗೆ? ಆತಂಕವಾದಿಗಳ ಗುಂಡಿಗೆ, ಹಿಂಸೆಗೆ ಈಡಾದನೇ? ಸರ್ದಾರ್ಜೀಯ ಸಂಗತಿ ಇವನಿಗೆ ಯಾಕೆ ಬೇಕು? ಸರ್ದಾರ್ಜೀಯ ಗುರಿ ಸಾಧಿಸಲಿಕ್ಕೆ ಯಾಕಿಷ್ಟು ಕಷ್ಟಪಡಬೇಕು? ಈ ಧರ್ಮ, ಮತ್ತು ಮೋಕ್ಷ, ದೇವರು, ದಿಂಡರು ಇವುಗಳಿಂದ ಜನರಿಗೆ ಹಿತಕ್ಕಿಂತ ಆತಂಕವೇ ಹೆಚ್ಚಾಗಿದೆ ಯಲ್ಲವೇ?ಪ್ರತಿಯೊಬ್ಬ ಸಂತ, ಗುರು, ಮತಪ್ರಚಾರಕ, ಶಾಂತಿಯನ್ನು ಬೋಧಿಸಿ ದರೂ, ಯಾಕೆ ಈ ಧರ್ಮಯುದ್ಧ, ಅವರ ಅನುಯಾಯಿಗಳಲ್ಲಿ? ಇದಕ್ಕೆ ಕಾರಣ ವೇನು? ಮನುಷ್ಯನ ಹುಟ್ಟುಗುಣಗಳಲ್ಲಿ ಒಂದಾದ ಸ್ವಾತಂತ್ರ್ಯತೆಯ ಬಯಕೆ, ಈ ಕ್ಲೇಷಗಳಿಗೆ ಕಾರಣವೇ? ಸ್ವಾತಂತ್ರ್ಯತೆ, ಜೀವನದ ಮುಖ್ಯ ಅಂಗವೇ ಆಗಿದೆ ಎನ್ನು ತ್ತಾರೆ. ಅದೇ ಜೀವನವು ಎನ್ನುತ್ತಾರೆ ಹಲವರು. ಪ್ರತಿ ಮನುಷ್ಯ ತನ್ನ ಇಷ್ಟದ ಪ್ರಕಾರ, ತಾನು ಸರ್ವಸ್ವತಂತ್ರ ಎಂದುಕೊಂಡು ನಡೆದರೆ, ಸಮಾಜದಲ್ಲಿ, ದೇಶದಲ್ಲಿ ಅಥವಾ ಈ ಪ್ರಪಂಚದಲ್ಲಿ, ತನ್ನ ಹಾಗೆ ಬೇರೊಬ್ಬ ಮನುಷ್ಯನೂ ತನ್ನ ಇಷ್ಟದ

ಪ್ರಕಾರ ನಡೆಯುವಂತಾದರೆ, ಪರಸ್ಪರ ಘರ್ಷಣೆ, ತಿಕ್ಕಾಟ, ಬಡಿದಾಟ, ಹೊಡೆದಾಟ ಗಳಿಗೆ ದಾರಿಯಾಗುತ್ತದೆಯಲ್ಲವೇ? ಹಾಗಾದರೆ, ಈ ಹುಟ್ಟುಗುಣದ ಗತಿ ಏನು? ತಾನು ಸ್ವತಂತ್ರ, ಇನ್ನೊಬ್ಬರ ಅಡಿಯಾಳು, ಇನ್ನೊಬ್ಬರ ಅಧೀನ, ಇನ್ನೊಬ್ಬರ ಅನಿಸಿಕೆಗಳಿಗೆ ತಾನು ಬದ್ಧನಲ್ಲ ಎಂಬ ಬುದ್ಧಿ ತನಗೆ ತೋರಿದರೆ, ಅದು ಅವನಿಗೆ ಎಷ್ಟರಮಟ್ಟಿಗೆ, ಸುಖ, ಸಂತೋಷ, ನೆಮ್ಮದಿ, ತಂದುಕೊಡುತ್ತದೆ? ಈ ಸ್ವತಂತ್ರ ಪ್ರಿಯತೆಯಿಂದಾಗುವ ಘರ್ಷಣೆಯನ್ನು ತಡೆಯಬೇಕಾದಲ್ಲಿ, ಒಂದು ರೀತಿಯ ಒಪ್ಪಂದ, ರಾಜೀಯಾಗುವುದು ಸೂಕ್ತ. ಭಿನ್ನಾಭಿಪ್ರಾಯ ಎಂಬುದು ಸ್ವಾತಂತ್ರ್ಯತೆಯ ಮತ್ತೊಂದು ಮುಖವಲ್ಲವೇ? ಈ ಭಿನ್ನಾಭಿಪ್ರಾಯವನ್ನು ಪತ್ತೆ ಹಿಡಿದು, ಅದನ್ನು ಸಮಾಧಾನಕರವಾದ ರೀತಿಯಲ್ಲಿ ಸರಿಪಡಿಸಿಕೊಳ್ಳುವುದೇ ಮನುಷ್ಯನ ಅತ್ಯಂತ ಮುಖ್ಯ ಅವಶ್ಯಕತೆಗಳಲ್ಲಿ ಒಂದು ಎಂದೆನಿಸುತ್ತದೆ. ಹಾಗಾದರೆ, ಮನುಷ್ಯನ ಹುಟ್ಟು ಗುಣವಾದ ಸ್ವಾತಂತ್ರ್ಯತೆಯ ಬಯಕೆ, ಎಲ್ಲಾ ಬಯಕೆಗಳಂತೆ, ಹೆಚ್ಚಾದರೆ, ವಿಷವಾಗ ಬಹುದಲ್ಲವೇ?

ಮನುಷ್ಯ ಸಂಘಜೀವಿ ಎಂದು ಹೇಳುತ್ತಾರೆ. ಹಾಗಾದರೆ, ಮನುಷ್ಯ ಸ್ವಾತಂತ್ರ್ಯ ಒಂಟಿತನದ ಬಯಕೆ ಬಲಿಕೊಡಬೇಕೆ? ಮನುಷ್ಯನ ಹುಟ್ಟುಗುಣಗಳಲ್ಲಿ ತಿರುಗಾಟದ ಸ್ವಾತಂತ್ರ್ಯ ಮತ್ತು ಒಂದೇ ಕಡೆ ಸ್ವಸ್ಥವಾಗಿ ಇರುವ ಬಯಕೆ, ಒಂದಕ್ಕೊಂದು ಪ್ರತಿ ರೋಧವಾಗಿದೆಯಲ್ಲವೇ? ಈ ಪ್ರತಿರೋಧಕ್ಕೆ ಔಷಧ ಸಂಧಾನ! ಹಾಗಾದರೆ, ಜೀವನವೇ ಒಂದು ಸಂಧಾನ, ಸಮಾಧಾನಕರವಾದ ವ್ಯವಸ್ಥೆ ಎಂದು ಹೇಳಬಹುದೆ? ಆದರೆ, ಪ್ರಪಂಚದ ಎಲ್ಲೆಡೆಯಲ್ಲಿ, ಅಸಹನೆ, ಅಸಹಿಷ್ಣುತೆ, ಭಿನ್ನಾಭಿಪ್ರಾಯ, ಒಡಕು, ಅಸಮಾಧಾನ, ಆತಂಕ, ಆಕ್ರೋಷ, ಅನ್ಯಾಯ, ಮನುಷ್ಯನ ಜೀವನಪಥ ದಲ್ಲಿ ಬಿರುಗಾಳಿಯಂತೆ ಬೀಸಿ, ಅವನ ಅಸ್ಥಿತ್ವವನ್ನೇ ನಾಶಮಾಡತೊಡಗಿದೆಯಲ್ಲಾ! ಸಹನೆ, ಸಹಿಷ್ಣುತೆ ಎಂತಹ ಉದಾತ್ತ ಪದಗಳು, ಧ್ಯೇಯಗಳು! ನಮ್ಮ ದೇಶದಲ್ಲಿ ಈ ದಿಸೆಯಲ್ಲಿ ಎಲ್ಲಾ ಧರ್ಮಗಳು, ಸಂತರು, ಗುರುಗಳು, ಬಹಳಷ್ಟು ಹೇಳಿ, ಹಾಡಿ, ಹೊಗಳಿದ್ದಾರಲ್ಲವೇ? ಇಷ್ಟೆಲ್ಲಾ ಹಾಡಿ, ಪ್ರವಚನ ನಡೆಸಿ, ಬೋಧಿಸಿದ್ದರೂ, ಜನರು ಯಾಕೆ ಒಬ್ಬರಿಗೊಬ್ಬರು ಧರ್ಮದ ಬಗ್ಗೆ ಕಲಹ, ಘರ್ಷಣೆ, ಹೊಡೆದಾಟ, ಯುದ್ಧ ಜರುಗಿಸುತ್ತಿದ್ದಾರೆ?

ನಮ್ಮ ಸರ್ದಾರ್ಜೀ, ತನ್ನ ಧರ್ಮಕ್ಕೆ ಯಾಕೆ ಈ ರೀತಿಯ ಕಷ್ಟ, ಹಿಂಸೆಗಳಿಗೆ ತನ್ನನ್ನು ಕಟ್ಟಿಹಾಕಿಕೊಂಡಿದ್ದಾನೆ?

ಮನುಷ್ಯನಿಗೆ ಧರ್ಮದ ಅವಶ್ಯಕತೆ, ಅವನನ್ನು ಹುಚ್ಚನನ್ನಾಗಿ ಮಾಡಿಸುತ್ತ ದೆಯೆ? ಮಾರ್ಕ್ಸ್ ಹೇಳಿದ ಹಾಗೆ 'ಧರ್ಮ' ಅಫೀಮಿದ್ದ ಹಾಗೆ. ಅದಕ್ಕೆ ಗಂಟು

ಬಿದ್ದರೆ ಹುಚ್ಚರಾಗುತ್ತಾರೆ, ಪ್ರೇಮಿಗಳಾಗುತ್ತಾರೆ, ಹೋರಾಟಗಾರರಾಗುತ್ತಾರೆ, ಹಿಂಸಾಚಾರ ಎಸಗುತ್ತಾರೆ, ಪ್ರಾಣತ್ಯಾಗವನ್ನು ಮಾಡುತ್ತಾರೆ. 'ಧರ್ಮ':ಮನುಷ್ಯನಿಗೆ, ನೀರು, ಆಹಾರಗಳಷ್ಟೇ ಅವಶ್ಯಕವೆಂಬ ಇನ್ನು ಕೆಲವರ ಅಂಬೋಣ. ಅವನ ಆಸೆಗಳು ಮಿತಿಮೀರಿದಾಗ, ಅದೇ ವಿಷವಾಗಿ ಪರಿಣಮಿಸುತ್ತದೆ ಎಂದು ಹೇಳುತ್ತಾರೆ. ಅಂದರೆ 'ಧರ್ಮ' ಮನುಷ್ಯನ ಬುದ್ಧಿಗೆ ಆಹಾರವಾದಾಗ, ಅದು ಮಿತಿಮೀರಿದಾಗ, ಅದೇ ವಿಷವಾಗಿ, ಅವನ ಅವನತಿಗೆ ನಾಂದಿಯಾಗುತ್ತದೆ ಎಂದೂ ಹೇಳುತ್ತಾರೆ. ಅವನ ಅವನತಿಯ ಜೊತೆಗೆ, ಅವನ ಸಂಗಡಿಗರು, ಅನುಯಾಯಿಗಳು, ಸ್ನೇಹಿತರು, ಬಂಧುಗಳು ಈ ಅವನತಿಯ ಪ್ರವಾಹದಲ್ಲಿ ಸಿಕ್ಕಿ ನಾಶಗೊಳ್ಳುತ್ತಾರೆ! ಇದಕ್ಕೆ ಪರಿಹಾರವಿಲ್ಲವೇ? ಇದೆ ಎಂದು ಹೇಳುತ್ತಾರೆ ಕೆಲವು ವಿದ್ವಾಂಸರು.

'ದೇವರು' ಎಂಬ ಅಂಶದ ಬಗ್ಗೆ ಪ್ರತಿಯೊಬ್ಬನ ಮನದಲ್ಲಿ ಪ್ರತ್ಯೇಕವಾದ ಭಾವನೆ ಇದೆ. ಆದ್ದರಿಂದ 'ಧರ್ಮ' ಎಂಬುದು, ಕೇವಲ ಮನುಷ್ಯ ಮತ್ತು ದೇವರ ಸಂಬಂಧಕ್ಕೆ ಸೇರಿದ ವಿಷಯ; ಇದರಲ್ಲಿ ಮೂರನೆಯವರಿಗೆ ಯಾವ ವಿಧವಾದ ಸಂಬಂಧ, ಬಾಂಧವ್ಯ ಇರುವುದಿಲ್ಲ. ಧರ್ಮವೆಂದರೆ, ದೇವ ಮತ್ತು ಮಾನವನೊಡನೆ ಇರುವ ನಿರ್ಮಲ, ನಿಗೂಢ, ಪವಿತ್ರ ಸಂಬಂಧ. ಹೇಗೆ ಪ್ರೇಮಿಗಳ ಅಥವಾ ಗಂಡ ಹೆಂಡತಿಯನ್ನು ಪ್ರೇಮಿಸಲಿಕ್ಕಾಗಿ, ಮಧ್ಯವರ್ತಿ ಅಥವಾ ಪೂಜಾರಿಯ ಅವಶ್ಯಕತೆ ಇರುವುದಿಲ್ಲವೋ, ಹಾಗೆ, ದೇವರ-ಮಾನವನ ನಡುವೆ ಪೂಜಾರಿಯ ಅವಶ್ಯಕತೆ ಇರುವುದಿಲ್ಲ.

ಹಾಗಾದರೆ, ಈಗ ನಾವು ಆಚರಿಸುತ್ತಿರುವ ಯಾವುದೇ ಧರ್ಮಾಚರಣೆಗಳಲ್ಲಿ, ಮನುಷ್ಯ ತನ್ನ ಸ್ವಂತಿಕೆಯಿಂದ, ತನ್ನ ಏಕಾಂತದೃಷ್ಟಿಯಿಂದ, ತನ್ನ ದೇವರನ್ನು ನಂಬಿ, ತನ್ನ ಇಷ್ಟದ ಪ್ರಕಾರ ಸಾಕ್ಷಾತ್ಕಾರ ಹೊಂದಿಕೊಳ್ಳುವುದಕ್ಕೋ, ಅಥವಾ ತನ್ನ ಆತ್ಮತೃಪ್ತಿ ಪಡೆದುಕೊಳ್ಳುವುದಕ್ಕೋ, ತನ್ನ ಧಾರ್ಮಿಕ, ಆಧ್ಯಾತ್ಮಿಕ ಆಸೆ ಆಕಾಂಕ್ಷೆಗಳನ್ನು ಸಾಧಿಸುವುದಕ್ಕೋ, ನಿರತನಾದರೆ, ವ್ಯವಸ್ಥಿತ ಧರ್ಮದ ಸಂಸ್ಥೆಗಳ ಅವಶ್ಯಕತೆ ಯಾದರೂ ಏಕೆ ಬೇಕು! ಅಥವಾ ಅಂತಹ ಸಂಸ್ಥೆಗಳ ಅವಶ್ಯಕತೆ ಅವನಿಗೆ ಬೇಕಾದರೂ, ಅದು ಕೇವಲ ಅವನ ಧಾರ್ಮಿಕ, ಆಧ್ಯಾತ್ಮಿಕ ತೃಪ್ತಿಗಾಗಿ ಪೂರಕವಾಗಿ ಕೆಲಸಮಾಡಬೇಕಾಗುತ್ತದೆಯಲ್ಲವೇ? ಆದರೆ, ಜನ ಸಾಮಾನ್ಯರು, ಅಂತಹ ಧಾರ್ಮಿಕ ಸಂಸ್ಥೆಗಳು, ಅನುಯಾಯಿಗಳು, ತಮ್ಮ ಆಧ್ಯಾತ್ಮಿಕ ಹಸಿವನ್ನು ಹಿಂಗಿಸಿಕೊಳ್ಳದೇ, ಸಂಸ್ಥೆಯ ಉದ್ಧಾರ ಮಾಡಹೊರಟಿದ್ದರಿಂದಲೇ, ಈ ಘರ್ಷಣೆ, ತಿಕ್ಕಾಟಗಳಿಗೆ ಎಡೆಕೊಟ್ಟಿರುವುದಲ್ಲವೇ? ಸಂಸ್ಥೆಗಳೇ ದೇವರಾದರೆ, ಪೂಜಾರಿ ಪುರೋಹಿತರೇ ದೇವರಾದರೆ, ದೇವಸ್ಥಾನ, ಗುಡಿ, ಗೋಪುರಗಳೇ ದೇವರಾದರೆ, ದೈವದ ಅವಶ್ಯಕತೆ

ಯಾಕೆ? ಘನತತ್ವ, ವಿಚಾರ, ಮೀಮಾಂಸೆ ಮರೆತು, ಸಂಘ ಸಂಸ್ಥೆ, ಗುಡಿ, ದೇವಸ್ಥಾನಗಳನ್ನು ಹಿಡಿದು ಅವುಗಳ ಉದ್ಧಾರ, ಜೀರ್ಣೋದ್ಧಾರ, ಸ್ಥಾಪನೆ ಮುಂತಾದವುಗಳ ಬಗ್ಗೆ ಚರ್ಚೆ, ಹಣ, ಸಮಯ ಸಕಲವನ್ನೂ ಖರ್ಚುಮಾಡುವುದರಿಂದಲೇ, ಸಂದೇಹ, ಕಲಹ, ಕ್ಲೇಷ, ಮನಸ್ತಾಪ ಉಂಟಾಗಿದೆಯಲ್ಲವೇ? ಸಾಮೂಹಿಕ ಉಪಾಸನೆಗಿಂತ ವೈಯಕ್ತಿಕವಾಗಿ, ಒಬ್ಬೊಂಟಿಗನಾಗಿ, ದೇವರನ್ನು ನಂಬಿ, ಪೂಜಿಸುವುದು ಸಮಂಜಸವಲ್ಲವೇ? ತನ್ನ ಪಾಡಿಗೆ ತಾನು, ತನ್ನ ದೇವರನ್ನು ಸದ್ದುಗದ್ದಲವಿಲ್ಲದೆ, ಮೌನವಾಗಿ, ಸಾವಕಾಶವಾಗಿ, ವಿಚಾರ ವಿಮರ್ಶೆ ಮಾಡಿ, ಆಲೋಚನಾತ್ಮಕ, ಚಿಂತನಶೀಲನಾಗಿ, ಧ್ಯಾನಪರನಾಗಿರುವುದು ಮೇಲಲ್ಲವೇ?

"ಢಬ್!ಢಬ್!" ಬಾಗಿಲು ಬಡಿದ ಶಬ್ದ ಕೇಳಿ, ಧಡೀರ್ ಎಂದು ಮೇಲಕ್ಕೆದ್ದೆ. ನನ್ನ ಕನಸುಗಳಿಗೆ, ಯೋಚನೆಗಳಿಗೆ ಆ ಶಬ್ದ ಕಡಿವಾಣ ಹಾಕಿ ಎಳೆದಿತ್ತು. ಕಪೂರ್‌ನೇ ಬಂದು ಬಾಗಿಲು ತಟ್ಟುತ್ತಿರಬೇಕೆಂದು ಬಗೆದು, ಲಗುಬಗನೇ ಎದ್ದು ಹೋಗಿ, ಬಾಗಿಲು ತೆರೆದೆ.

"ಚಾ ಬೇಕಾ ಸಾಬ್?"

ಹೋಟೆಲ್ ರೂಮ್ ಹುಡುಗ ನಿಂತಿದ್ದ ಕೈಯಲ್ಲಿ ಚಾ ಕಪ್ಪುಗಳಿದ್ದ ತಟ್ಟೆ ಹಿಡಿದಿದ್ದ.

ನಿರಾಶೆಗೊಂಡರೂ, ಚಾ ಕುಡಿಯಬೇಕೆನಿಸಿತು. ಎರಡು ಕಪ್ ಚಾ ತೆಗೆದುಕೊಂಡು, ಒಳಗೆ ಬಂದು, ವರ್ಮನನ್ನು ಕೂಗಿ ಎಬ್ಬಿಸಿದೆ. ಆಗಲೇ ಗಂಟೆ ಆರಾಗಿ, ಬೆಳಕಾಗಿತ್ತು. ನಿದ್ರೆಯಿಲ್ಲದ ನನ್ನ ಕಣ್ಣುಗಳು, ತಲೆ ಸಿಡಿಯುತ್ತಿದ್ದವು. ಮೈ ಮನಸ್ಸು ಬಳಲಿ ನೋಯುತ್ತಿತ್ತು.

"ಕಪೂರ್ ಎಲ್ಲಿ ಸಾಬ್?"

"ಇನ್ನು ಬರಲಿಲ್ಲ!"

"ಎಲ್ಲಿ ಸತ್ತನೋ ಬೇವಕೂಫ್!"

ಬೇಸರ, ಸಿಟ್ಟು ಮನೆಮಾಡಿತ್ತು ಅವನ ಮಾತಿನಲ್ಲಿ. ನನಗೂ ಬೇಸರವಾಗಿತ್ತು. ನಮ್ಮನ್ನು ತೊರೆದು, ಒಬ್ಬನೇ ಎಲ್ಲಿ ತಿರುಗಲಿಕ್ಕೆ ಹೋದ ಈತ? ಅದೂ ಈ ಆತಂಕ, ಭಯೋತ್ಪಾದಕರ ನಡುವೆ.

ಚಾ ಕುಡಿದು ಕಪ್ ಹುಡುಗನ ಕೈಲಿ ಕೊಟ್ಟು, ಅವನಿಗೆ ದುಡ್ಡು ಕೊಟ್ಟು ಕಳುಹಿಸಿದ ಮೇಲೆ, ಮುಂದಿನ ಕಾರ್ಯಕ್ರಮಕ್ಕೆ ಯೋಜನೆ ಹಾಕತೊಡಗಿದೆ.

"ವರ್ಮಾಜೀ! ಈಗ ಮುಂದೆ ಏನು ಮಾಡೋಣ?"

"ಮಾಡೋದು ಏನು? ಕಪೂರ್‌ನನ್ನ ಹುಡುಕಬೇಕು. ಅಷ್ಟೇ!"

"ಹೇಗೆ ಹುಡುಕುವುದು ಅವನನ್ನು ಈ ದೊಡ್ಡ ಊರಿನಲ್ಲಿ?"

"ನಾನು ಹುಡುಕಿಕೊಂಡು ಬರುತ್ತೇನೆ. ನೀವು ಆರಾಮಾಗಿ ರೂಮಿನಲ್ಲಿರಿ."

ರೂಮಿನಲ್ಲಿರಿ ಎಂದು ಆರಾಮಾಗಿ ಹಗುರವಾಗಿ ನನಗೆ ನೀಡಿದ ಇವನ ಆಶ್ವಾಸನೆ ಹಗುರವಾಗೇ ತೆಗೆದುಕೊಳ್ಳಬೇಕೆ? ಬೇಡವೇ? ನನ್ನನ್ನು ರೂಮಿನಲ್ಲಿ ಒಂಟಿಯಾಗಿ ಬಿಟ್ಟು ಇವನೂ ಕಣ್ಮರೆಯಾಗಿ ಬಿಟ್ಟರೆ, ನನ್ನ ಗತಿ ಹರಿದ್ವಾರದ ಗಂಗಮ್ಮನ ಪಾಡೇ ಸರಿ!

"ಕಪೂರ್‌ನ ಹಿಂದೆ ನೀವೂ ಕಣ್ಮರೆಯಾದರೆ, ನಿಮ್ಮನ್ನು ಹುಡುಕಿಕೊಂಡು ನಾನೆಲ್ಲಿಗೆ ಹೋಗಲಿ?"

ನನ್ನ ಅಳು ಮುಖ, ಹತಾಶ ಧ್ವನಿ, ಕಂಪಿಸುವ ತುಟಿಗಳು, ಅವನಿಗೆ ಅಚ್ಚರಿ ತಂದಿರಬೇಕು.

"ನಿಮಗೆ ಹೆದರಿಕೆಯಾ ಸಾಬ್? ನಾನು ಕಪೂರ್ ತರಹ ತಪ್ಪಿಸಿಕೊಳ್ಳುವವನಲ್ಲ. ಅವನನ್ನು ಹುಡುಕಿಕೊಂಡು ಹೋಗುವವನಲ್ಲ. ನನ್ನ ಬಂಧು ಪೊಲೀಸ್ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದಾನೆ. ಇಲ್ಲೇ ಅಮೃತಸರದಲ್ಲಿದ್ದಾನೆ. ಅವನನ್ನು ನೋಡಿ, ವಿಷಯ ತಿಳಿದುಕೊಂಡು ಬರುತ್ತೇನೆ. ನೀವು ಮತ್ತೆ ಹೊರಗೆ ಎಲ್ಲೂ ಹೋಗಬೇಡಿ. ಜಾಗ್ರತೆ!"

ಸ್ನಾನ ಮುಗಿಸಿ, ಬಟ್ಟೆ ಧರಿಸಿ ವರ್ಮಾ ಕಪೂರ್‌ನನ್ನು ಅರಿಸಿಕೊಂಡು, ಹೊರಟುಹೋದ. ಹಾಸಿಗೆಯ ಮೇಲೆ ನಾನು ಉರುಳಿದೆ. ಅಮೃತಸರ ನೋಡಲಿಕ್ಕೆ ಬಂದವನಿಗೆ ಈ ವಿಷಪೂರಿತ ಘಟನೆಗಳ ಸರಮಾಲೆ ಕೊರಳಿಗೆ ಬಿತ್ತಲ್ಲಾ ಎಂದು ಯೋಚನೆಗೀಡಾದೆ. ಹಾಸಿಗೆಯ ಮೇಲೆ ಹೊರಳಾಡುವುದಕ್ಕಿಂತ ಎದ್ದು ಮುಖ ತೊಳೆದು, ಸ್ನಾನ ಮಾಡಿ, ನಾಷ್ಟಾ ಮುಗಿಸಿ, ಹೊರಗೆ ಅಡ್ಡಾಡಿ ಬರೋಣವೆನ್ನಿಸಿತು. ಹೊರಗೆ ಕಾಲಿಡಬೇಡಿ ಎಂದು ತಾಕೀತು ಮಾಡಿ, ರೂಮಿನಲ್ಲಿ ನನ್ನನ್ನು ಕೂಡಿ ಹಾಕಿ ಹೋಗಿದ್ದಾನಲ್ಲಾ ಈ ವರ್ಮಾ! ಹೊರಗೆ ಹೋಗಬೇಡಿ ಎಂದು ಕೈಗೆ ಬೇಡಿ ಹಾಕಿಲ್ಲ ಸದ್ಯ! ಆದರೆ ವರ್ಮಾ ಕ್ರಿಯಸ್ಥ. ಕೈಗೆ ಹಿಡಿದ ಕೆಲಸ ಪೂರ್ಣಗೊಳಿಸದೇ ಸುಮ್ಮನೆ ಕೂಡುವವನಲ್ಲ. ಕಪೂರ್‌ನನ್ನು, ಅವನು ಪಾತಾಳದಲ್ಲೇ ಇರಲಿ, ಹುಡುಕಿ, ಹೆಡೆ ಮುರಿಕಟ್ಟಿ ಎಳೆದುಕೊಂಡು, ನನ್ನ ಕಾಲ ಬಳಿ ಬೀಳಿಸುವುದು ಖಂಡಿತ! ಅವನ ಮೇಲಿನ ಭರವಸೆ, ಅವನು ಮುತುವರ್ಜಿಯಿಂದ ಮಾಡುವ ಕೆಲಸ, ನಿಷ್ಠೆಯಿಂದ ನಡೆಸುವ ಕಾರ್ಯದ ಮೇಲೆ ಅವಲಂಬಿಸಿತ್ತು. ಬೆರಗುಗೊಳಿಸುವಂತಹ ಅವನ ಕಾರ್ಯಕುಶಲತೆ ಬಗ್ಗೆ ಹೆಮ್ಮೆಯೂ ಉಂಟಾಗಿತ್ತು. ಅವನ ಮೇಲೆ ಇಷ್ಟು ಮೆಚ್ಚುಗೆಯ ಅಭಿಪ್ರಾಯ

ಇರುವಾಗ, ನನ್ನ ನಿದ್ರೆಗೆ ಯಾಕೆ ಮೋಸ ಮಾಡಬೇಕು? ರಾತ್ರಿಯೆಲ್ಲಾ ನಿದ್ರೆಗೆಟ್ಟಿದ್ದರ ಫಲವೇನೋ ಎಂಬಂತೆ, ನಿದ್ರೆ ನನ್ನನ್ನು ಆವರಿಸಿತು.

ಬಾಂಬ್ ಸ್ಫೋಟ, ಗುಂಡಿನ ಸುರಿಮಳೆ, ಜನ ನರಳುವ, ಗೋಳಾಡುವ, ಕಿರಿಚಾಡುವ ಶಬ್ದಗಳ ಜೊತೆಗೆ ನನ್ನ ಹೆಸರನ್ನು ಹಿಡಿದು ಕರೆಯುವ ಶಬ್ಧ ನನ್ನನ್ನು ನಿದ್ರಾಳದಿಂದ ಮೇಲಕ್ಕೆತ್ತಿತು. ಸಂಪೂರ್ಣ ಎಚ್ಚರಗೊಂಡಾಗ, ರೂಮಿನ ಬಾಗಿಲು ಜೋರಾಗಿ ಬಡಿಯುವ ಶಬ್ಧ ಮತ್ತು ವರ್ಮನ ಗಡಸು ಧ್ವನಿ ಕೇಳಿಸಿತು. ಕೈ ಗಡಿಯಾರ ಹನ್ನೆರಡು ಗಂಟೆ ತೋರಿಸುತ್ತಿತ್ತು. ಹಾಗಾದರೆ, ಸುಮಾರು ನಾಲ್ಕು-ಐದು ಗಂಟೆಗಳ ಕಾಲ ನಿದ್ರೆಮಾಡಿದ್ದೇನೆ. ನಿದ್ರೆ ಕೆಡಿಸಿದ ವರ್ಮನಿಗೆ ಹಿಡಿ ಶಾಪ ಹಾಕಿದೆ. ಆದರೆ, ಮರುಕ್ಷಣವೇ, ಕಪೂರ್‌ನ ನೆನಪಾಗಿ, ವರ್ಮನ ಸಂಗಡ ಅವನು ಬಂದಿರಬೇಕೆಂದು ಬಗೆದು, ಬೇಗನೆ ಹಾಸಿಗೆಯಿಂದ ಎದ್ದು ಬಾಗಿಲು ತೆರೆದೆ. ವರ್ಮಾನೊಬ್ಬನೇ ನಿಂತಿದ್ದ.

"ತುಂಬಾ ನಿದ್ರೆನಾ ಸಾಬ್" ಎಂದು ಹೇಳುತ್ತಾ ವರ್ಮಾ ಒಳಗೆ ಬಂದು ಹಾಸಿಗೆಯ ಮೇಲೆ ಕುಳಿತ. ಬಾಗಿಲು ಅಗಳಿ ಹಾಕಿ ಕೇಳಿದೆ.

"ಕಪೂರ್ ಎಲ್ಲಿ? ಸಿಕ್ಕಿದನೆ?"

ಕಾತುರದಿಂದ ಕೇಳಿದ ಪ್ರಶ್ನೆಗೆ ವರ್ಮಾ ಸಾವಕಾಶದಿಂದ ಉತ್ತರ ನೀಡಿದ.

"ಅವನನ್ನು ಪೊಲೀಸರು ಹಿಡಿದುಕೊಂಡು ಹೋಗಿದ್ದಾರೆ!"

# 16

"ಇದೇ ನೋಡಿ ನಿಮ್ಮ ಫ್ಯಾಕ್ಟರೀ ಮೇಷಿನರಿಗಳು! ನೋಡಿಕೊಂಡು ಹೋಗ್ರಿ!"

ದಿಲ್ಲೀ ಸಮೀಪದಲ್ಲಿರುವ ನಾಂಗ್ಲಾಯಿ ಪೊಲೀಸ್ ಸ್ಟೇಷನ್‌ನ ಪೊಲೀಸ್ ಪೇದೆಯೊಬ್ಬ ನನಗೆ, ಸ್ಟೇಷನ್‌ನ ಹೊರ ಆವರಣದಲ್ಲಿ ಬಿಸಾಡಿದ್ದ ಕೆಲವು ಮೆಷಿನ್‌ಗಳನ್ನು ತೋರಿಸಿ, ಉದಾಸೀನದಿಂದ ನುಡಿದಿದ್ದ.

ಹಿಂದಿನ ಮೇನೇಜರ್, ಸಾಲ ನೀಡಿದ ಇಬ್ಬರು ಪಾಲುದಾರರಲ್ಲಿ ಒಡಕು ಉಂಟಾದಾಗ, ಅವರಲ್ಲಿ ಒಬ್ಬ ಫ್ಯಾಕ್ಟರಿ ಮೆಷಿನರಿಗಳನ್ನು ಮಾರಲೆತ್ನಿಸಿದಾಗ, ಮತ್ತೊಬ್ಬ ಪೊಲೀಸ್‌ಗೆ ದೂರು ನೀಡಿದ ಪ್ರಯುಕ್ತ ಪೊಲೀಸರು, ಮೆಷಿನರಿಗಳನ್ನು ಮುಟ್ಟುಗೋಲು ಹಾಕಿ, ಮಾಲನ್ನು ಕದ್ದ ಆಪಾದನೆ ಮೇರೆಗೆ ಆ ಪಾಲುದಾರನ ಮೇಲೆ ಖಟ್ಲೆ ಜರುಗಿಸಿದ್ದರು. ಫ್ಯಾಕ್ಟರಿ ಸಾಮಾನುಗಳ ಸ್ಥಿತಿಯ ಬಗ್ಗೆ ಪರಿಶೀಲಿಸಿ, ತಮಗೆ ಒಂದು ವರದಿ ಒಪ್ಪಿಸಬೇಕೆಂದು ನಮ್ಮ ಕೇಂದ್ರ ಕಛೇರಿಯ ರಾಜಕುಮಾರ ತಿಳಿಸಿದ್ದ.

ಉರಿಬಿಸಿಲು, ಆಂಧೀ, ಚಳಿಗಾಳಿಗಳಿಗೆ ಮೆಷನರಿಗಳೆಲ್ಲಾ ರಣರಂಗದಲ್ಲಿ ಗುಂಡು, ಬಾಂಬಿನ ಧಾಳಿಗೆ ಸಿಕ್ಕ ವಿವಿಧ ಯುದ್ಧ ಸಾಮಾಗ್ರಿಗಳು ಚೂರು ಚೂರಾಗಿ ಅನಾಥವಾಗಿ ಬಿದ್ದಿರುವ ತರಹದ ನೋಟ ಕಣ್ಣಿಗೆ ಬಿತ್ತು. ಲಕ್ಷಾಂತರ ರೂಪಾಯಿಗಳ ಬೆಲೆ ಬಾಳುವ ಸಾಮಾನುಗಳು ಇಂದು ಚೂರು ಪಾರಾದ ಲೋಹದ ಗುಜರಿ ವಸ್ತುಗಳಾಗಿ, ನಿರುಪಯೋಗಿ ಬೆಲೆಬಾಳದ ಸಾಮಾನುಗಳಾಗಿ ಮಾರ್ಪಟ್ಟಿದ್ದವು.

"ಸ್ವಲ್ಪ ಈ ಸಾಮಾನುಗಳನ್ನು ಸರಿಯಾಗಿ ಒಂದು ಕಡೆ ಜೋಡಿಸಿ, ಹಾಳಾಗದಂತೆ ನೋಡಿಕೊಳ್ಳಬಹುದಾಗಿತ್ತಲ್ಲವೇ?"

ಹೆದರುತ್ತಾ, ಅಳುಕುತ್ತಾ ಆ ಪ್ಯಾದೆಯನ್ನು ಕೇಳಿದೆ.

"ಸರಿಯಾಗಿ ನೋಡಿಕೊಳ್ಳಲಿಕ್ಕೆ ಅವೇನು ವಿ.ಐ.ಪಿ. ಕೈದಿಗಳೇ?"

ವಿ.ಐ.ಪಿ. ಕೈದಿಗಳನ್ನೇ ಚೆನ್ನಾಗಿ ನೋಡಿಕೊಳ್ಳಲಾಗದ ಈ ಪೊಲೀಸರು ಫ್ಯಾಕ್ಟರಿ ಮೆಷಿನ್‌ಗಳನ್ನು ಸರಿಯಾಗಿ ಇಟ್ಟುಕೊಳ್ಳುವರೇ?

"ಬನ್ನಿ ಸಾಬ್ ಹೋಗೋಣ! ನಮ್ಮ ಕೆಲಸ ಆಯಿತಲ್ಲ."

ಹೊರಡಲು ಅವಸರಮಾಡಿದ ವರ್ಮಾ. ನಮಗೆ ಇನ್ನೇನು ಕೆಲಸ ಇಲ್ಲಿ? ಪೊಲೀಸರ ಹತ್ತಿರ, ಸುಂಕದವನ ಹತ್ತಿರ ದುಃಖ ಹೇಳಿಕೊಂಡರೆ ಏನು ಸುಖ? 'ಹತ್ತಿ ತೂಗವಲ್ಲಿ ನೊಣಕ್ಕೆ ಉಪವಾಸ' ಎಂದ ಹಾಗೆ, ಇಲ್ಲೇ ಇದ್ದರೆ, ಪೊಲೀಸರು

ನಮ್ಮನ್ನು ಒದ್ದು ಒಳಗೆ ಹಾಕಿ ಉಪವಾಸ ಕೆಡವಾರು ಎಂದು ಲಗುಬಗೆಯಿಂದ ಠಾಣೆಯಿಂದ ಹೊರಬಂದೆವು.

"ಸಾಬ್! ಇಲ್ಲೇ ಹತ್ತಿರದಲ್ಲೇ ಒಂದು ಹೋಟೆಲ್ ಇದೆ. ಮಸಾಲೆದೋಸೆ ಸಿಗುತ್ತದೆ. ತಿನ್ನೋಣವೇ?"

ವರ್ಮಾನಿಗೆ ಇದ್ದಕ್ಕಿದ್ದ ಹಾಗೆ ಮಸಾಲೆದೋಸೆಯ ಮೇಲೆ ಏಕೆ ಇಷ್ಟು ಆಸೆ ಉಂಟಾಯಿತು? ದಿಲ್ಲೀಯಲ್ಲಿ ಮಸಾಲೆದೋಸೆ ತಿಂದು ಹೊಟ್ಟೆ ಕೆಡಿಸಿಕೊಂಡು, ನರಳಿದರೆ, ನೋಡಿಕೊಳ್ಳಲು ಹೆಂಡತಿ ಹತ್ತಿರವಿಲ್ಲ. ಇವನಿಗಾದರೋ, ಹೆಂಡತಿ ಮಕ್ಕಳು ಹತ್ತಿರವಿರುವಾಗ ಭಯವಿಲ್ಲ. ನನಗೋ ಹೆಂಡತಿ ಹತ್ತಿರವಿಲ್ಲದಿದ್ದರೂ, ಹಣ ಕೈ ಯಲ್ಲಿದೆಯಲ್ಲ! 'ಕೈಯಲ್ಲಿದ್ದರೆ ಅರ್ಥ, ಹತ್ತಿರ ಇದ್ದರೆ ಹೆಂಡತಿ' ಗಾದೆ ನೆನ ಪಾಯಿತು.

"ಪೊಲೀಸ್ ಠಾಣೆಯಿಂದ ಹೊರಬಂದಕೂಡಲೆ ಮಸಾಲೆದೋಸೆ ನೆನಪು ಹೇಗಾಯಿತು ನಿಮಗೆ?"

"ಆ ಪೊಲೀಸ್ ಪ್ಯಾದೇ ಮುಖ ನೋಡಿದಿರಾ ಸಾಬ್? ಹೇಗೆ ಕೆಂಪಗೆ, ಉಬ್ಬಿ ಕೊಂಡಿತ್ತು!"

ಪೊಲೀಸ್ ಪ್ಯಾದೇ ಮುಖ ದೋಸೆತರಹವಿತ್ತೆ? ಅಥವಾ ಇಡ್ಲಿ ತರಹವಿತ್ತೆ? ಅವನ ಎರಡೂ ಕೆನ್ನೆಗಳು ಬಲೂನ್‌ವಿನ ಹಾಗೆ ಊದಿಕೊಂಡಿದ್ದು ನನ್ನ ಗಮನಕ್ಕೆ ಬಂದಿದ್ದು ದಿಟ. ಆದರೆ, ಮಸಾಲೆ ದೋಸೆಗೆ ಅವನ ಮುಖವನ್ನು ಹೋಲಿಸಿದ್ದು ವಿಚಿತ್ರವೆನಿಸಿತು.

ವರ್ಮಾ ತಿಳಿಸಿದ ಹಾಗೆ, ಹತ್ತಿರದಲ್ಲೇ ಒಂದು ಸಣ್ಣ ರೆಸ್ಟೋರೆಂಟ್ ಇತ್ತು. ಒಳಗೆ ಹೋಗಿ ಕುಳಿತು ಮಸಾಲೆದೋಸೆಗೆ ಆರ್ಡರ್ ಕೊಟ್ಟು ಹರಟಲು ಶುರು ಮಾಡಿದೆವು.

"ಈ ಪಾಲುಗಾರಿಕೆ ಬಹಳ ಕಷ್ಟ. ಪಾಲುಗಾರರು ಒಮ್ಮತದಿಂದ ಇರಲು ಸಾಧ್ಯವೇ ಇಲ್ಲ. ಇಂತಹ ವ್ಯಾಪಾರಕ್ಕೆ ಸಾಲಕೊಟ್ಟರೆ, ಇವರು ದಿವಾಳಿಯಾಗುವು ದೊಂದಿಗೆ ಬ್ಯಾಂಕ್ ಕೂಡ ದಿವಾಳಿಯಾಗುತ್ತದೆ." ವರ್ಮಾ ಪ್ರಾರಂಭಿಸಿದ.

"ಪಾಲುಗಾರರು ವ್ಯಾಪಾರ ಮಾಡುವುದನ್ನು ಬಿಟ್ಟು ಹಣ ಮಾಡುವ ದುರಾಸೆ ಹೊಂದಿದಾಗಲೇ ಶುರುಮಾಡಿದ ದಂಧೆ ನಾಶದ ದಾರಿ ಹಿಡಿಯುತ್ತದೆ."

"ಹಣ ಮಾಡುವ ಆಸೆ ಯಾರಿಗಿರುವುದಿಲ್ಲ? ಆ ಆಸೆಯಿಂದಲೇ ದಂಧೆ ಶುರುಮಾಡುತ್ತಾರೆ. ಅವರಲ್ಲಿ ಒಮ್ಮತವಿಲ್ಲದೇ, ಒಡಕು ಹುಟ್ಟುತ್ತಲೇ, ವ್ಯಾಪಾರ ವೆಂಬ ನೌಕೆ ಮುಳುಗುತ್ತದೆ! ಏನನ್ನುತ್ತೀರಿ?"

"ನಿಜ! ಆಸೆ ಬೇಕು. ಆದರೆ ದುರಾಸೆ ಇರಬಾರದು. ವ್ಯಾಪಾರಕ್ಕೆ ಶುರು ಹಚ್ಚಿದವರು, ಅದನ್ನು ಒಂದು ವೃತ್ತಿ ಎಂದು ಮನಗೊಂಡು ಕೆಲಸ ಮಾಡಿದರೆ, ಹಣ ತಾನಾಗಿಯೇ ಬರುತ್ತದೆ. ವೃತ್ತಿ ಮರೆತು, ಹಣ ಮಾಡುವುದೇ ವೃತ್ತಿಯಾದರೇ, ಅದು ವಿನಾಶದ ದಾರಿಗೆ ತೆಗೆದುಕೊಂಡು ಹೋಗುತ್ತದೆ."

"ಹಾಗಾದರೆ, ಹಣ ಮಾಡುವುದು ತಪ್ಪೇ? ಹಣಕ್ಕೆ ಬೆಲೆಯೇ ಇಲ್ಲವೇ?"

ಮೂಲಭೂತ ಪ್ರಶ್ನೆ ಹಾಕಿದ ವರ್ಮಾ.

ಅಷ್ಟರಲ್ಲಿ ಮಸಾಲೆದೋಸೆಯ ತಟ್ಟೆಗಳನ್ನು ನಮ್ಮ ಮುಂದೆ ಇಟ್ಟು ಹೋದ ಮಾಣಿ.

ಹಣದ ಉಪಯೋಗದ ಬಗ್ಗೆ ಚರ್ಚೆ ನಿಲ್ಲಿಸಿ, ದೋಸೆಯ ಹೊಟ್ಟೆಗೆ ಕೈ ಹಾಕಿ, ಅದನ್ನು ಸೀಳಿ, ಒಂದು ತುಂಡನ್ನು ತೆಗೆದು, ಸಾಂಬಾರ್‌ನಲ್ಲಿ ಅದನ್ನು ಅದ್ದಿ, ವರ್ಮಾ ಬಾಯಿಗೆ ಹಾಕುವುದರಲ್ಲಿ ಮಗ್ನನಾದ.

ಹಣ ಬೇಕೇ ಬೇಕು ಮನುಷ್ಯನಿಗೆ. ಅದರ ಉಪಯೋಗ, ಉತ್ಪತ್ತಿ ಎಷ್ಟೇ ಸಮಸ್ಯಾಕರವಾಗಿದ್ದರೂ, ಅದು ಮನುಷ್ಯನ ಜೀವನಕ್ಕೆ ಅವನ ಮೈಯಲ್ಲಿರುವ ರಕ್ತದಷ್ಟೇ ಮಹತ್ವ ಇದೆ ಎನ್ನುತ್ತಾರೆ. ಮನುಕುಲದ ಒಂದು ಅದ್ಭುತ ಸಾಧನೆಯಾದ ಈ ಹಣ ಒಬ್ಬೊರಿನ್ನೊಬ್ಬರೊಳಗೆ ಬಂಧಿಸುವ ಕೊಂಡಿ, ಸಂಕೋಲೆ; ಸ್ವಾತಂತ್ರ್ಯಗೊಳಿಸುವ ಅಲ್ಲಾವುದ್ದೀನ್‌ನ ಅದ್ಭುತ ದೀಪ ಕೂಡ ಹೌದು! ಹಣ, ಮನುಷ್ಯನನ್ನು ಪ್ರೇರೇಪಿಸುವಂತೆ, ಪ್ರಚೋದಿಸುವಂತೆ, ಒಲಿಸಿ, ಒಪ್ಪಿಸುವಂತೆ ಆಸೆ, ಆಕರ್ಷಿಸುವಂತೆ, ಪ್ರತಿಷ್ಠೆ, ಬಲಿಷ್ಠ ಕಾರ್ಯಗಳನ್ನು ಎಸಗುವಂತೆ, ಬೇರೆ ಯಾವ ವಸ್ತುಗಿದೆ? ಹಣದಿಂದ ಸಿಗುವ ಸ್ವತಂತ್ರದ ಪ್ರಚಂಡ ಅನುಭವ ಯಾರಿಗೆ ತಾನೇ ಆಗುವುದಿಲ್ಲ? ಹಣ ಪಡೆಯಲು ಕಷ್ಟ ಪಡುವ ಜನ, ಅಂತಿಮವಾಗಿ ಸೋಮಾರಿಯ ಪಟ್ಟವೇರಲು ಹಾತೊರೆಯುತ್ತಾರಲ್ಲವೇ? ಅದೂ ಅಲ್ಲದೆ, ನೌಕರೀ ಜೀವನದಿಂದ ಬಚಾವ್ ಆಗುವ ಏಕೈಕ ಸಾಧನವೆನ್ನುತ್ತಾರಲ್ಲವೇ? ಆದರೆ, ಈ ಹಣವನ್ನು ಪಡೆಯುವುದಾದರೂ ಹೇಗೆ? ಅರ್ಥಶಾಸ್ತ್ರಜ್ಞರ ಪ್ರಕಾರ, ಮನುಷ್ಯನ ಶ್ರಮದಿಂದಲೇ, ಉತ್ಪಾದನೆ ಸಾಧ್ಯ ಮತ್ತು ಉತ್ಪಾದನೆಯಿಂದಲೇ ಐಶ್ವರ್ಯಸಾಧನೆ. ಹಣ ಒಂದು ನಿಮಿತ್ತ; ಹಣದ ಕೆಲಸ ಒಬ್ಬ ಮಧ್ಯವರ್ತಿಯ ಕಾರ್ಯದ ಹಾಗೆ. ಅಂದಮೇಲೆ, ಜನರು ಏಕೆ ಹಣ ಸಂಪಾದನೆ ಮಾಡಲಿಕ್ಕೆ ಇಷ್ಟು ಉತ್ಸುಕತೆ ಹೊಂದಿದ್ದಾರೆ? ವೃತ್ತಿ ವೃದ್ಧಿಸುವುದು, ಏಳಿಗೆ, ಅಭಿವೃದ್ಧಿ, ನೆಮ್ಮದಿ ಸಾಧಿಸುವುದನ್ನು ಬದಿಗೊತ್ತಿ, ಹಣ ಸಂಪಾದನೆಯೇ ಮುಖ್ಯ ಉದ್ದೇಶವಾಗಿದೆಯಲ್ಲಾ! ಹಣ, ಐಶ್ವರ್ಯದ ಸೂಚಕವಾದರೂ, ಅದು ನೆಮ್ಮದಿ ನೀಡುತ್ತದೆಯೆ? ಅದರಿಂದ ಒಳಿತಿಗಿಂತ ಕೆಡಕೇ ಹೆಚ್ಚಲ್ಲವೇ?

"ದೋಸೆ ಚೆನ್ನಾಗಿದೆ. ತಿನ್ನಿರಿ ಸಾಬ್!"

ವರ್ಮಾ ನನ್ನನ್ನು ಎಚ್ಚರಿಸಿದ. ದೋಸೆಗೆ ಕೈ ಹಾಕಿ ಅದನ್ನು ತುಂಡು ಮಾಡಿ ಬಾಯಿಗೆ ಹಾಕಿಕೊಂಡು ತಿನ್ನಲು ಉಪಕ್ರಮಿಸಿದೆ. ವರ್ಮಾ ಹೇಳಿದ ಹಾಗೆ ದೋಸೆ ರುಚಿಯಾಗಿತ್ತು.

"ಹಣ ಇಲ್ಲದೇ ಹೋಗಿದ್ದರೆ, ದೋಸೆ ದೊರೆಯುತ್ತಿತ್ತೆ?"

ವರ್ಮಾ ತುಂಟ ನಗು ತುಟಿಯಲ್ಲಿಟ್ಟು, ಮೆಲ್ಲನೆ ನುಡಿದ.

"ಹಣ ಬೇಕೇ ಬೇಕು. ಆದರೆ ಹಣಕ್ಕೋಸ್ಕರ ಪ್ರತಿಯೊಬ್ಬರೂ ಪ್ರಯಾಸ ಪಡುವುದಿಲ್ಲ. ಸರ್ದಾರ್ಜೀ ಹಣದ ಬೆನ್ನು ಹತ್ತದೇ ಆದರ್ಶದ ಗುರಿಯ ಬೆನ್ನು ಹತ್ತಿದ್ದಾನಲ್ಲವೇ?"

ದೋಸೆ ಚೂರನ್ನು ಬಾಯಿಯೊಳಗೆ ತುರುಕಿ, ಅದನ್ನು ಚೆನ್ನಾಗಿ ಅಗಿಯುತ್ತಾ, ಬೆರಳಿಗೆ ಅಂಟಿದ್ದ ತುಪ್ಪ, ಆಲೂಗೆಡ್ಡೆ ಪಲ್ಯದ ತುಣುಕನ್ನು ಬಾಯಿಗೆ ಹಾಕಿ, ಬೆರಳು ಚೀಪುತ್ತಾ ಉತ್ತರಿಸಿದ ವರ್ಮಾ.

"ಸಾಬ್! ಸರ್ದಾರ್ಜೀಯ ಆದರ್ಶ ಗುರಿ, ಹಣದ ಬೆಂಬಲವಿಲ್ಲದೆ ಸಾಧಿಸುತ್ತಾ ಇದ್ದಾನೆ ಎಂದು ನೀವು ಭಾವಿಸುತ್ತಿದ್ದೀರಾ?"

ಸರ್ದಾರ್ಜೀಯ ನೆನಪು ಮಾಡಿದ ವರ್ಮಾನ ಉದ್ದೇಶ ಏನಿರಬಹುದು? ಆ ದಿನ, ಅಮೃತಸರದಲ್ಲಿ ನಡೆದ ಘಟನೆ ಬಗ್ಗೆ ಯೋಚಿಸಲಾರಂಭಿಸಿದೆ. ಪೊಲೀಸರು ಕಪೂರ್‌ನನ್ನು ಬಂಧಿಸಿದ ವಿಷಯ ತಿಳಿದನಂತರ, ಗಾಬರಿಯಾದರೂ, ವರ್ಮಾ ಬಲವಂತದಿಂದ ನನ್ನನ್ನು ವಾಪಸ್ಸು ದಿಲ್ಲೀಗೆ ಕರೆದುಕೊಂಡು ಬಂದಿದ್ದ. ಕಪೂರ್‌ನನ್ನು ಪೊಲೀಸರ ವಶದಲ್ಲೇ ಬಿಟ್ಟು, ನಾವಿಬ್ಬರೇ ಬಂದಿದ್ದು, ನನಗೆ ದುಃಖದ ಜೊತೆಗೆ ನಾಚಿಕೆ ಕೂಡ ಆಗಿತ್ತು. ಒಬ್ಬ ಸ್ನೇಹಿತನನ್ನು, ತೊಂದರೆಯ ಕಂದರದಲ್ಲಿ ಬಿದ್ದಾಗ, ಅವನ ಸಹಾಯಕ್ಕೆ ಹೋಗದೆ, ಹೇಡಿಗಳಂತೆ ಓಡಿ ಬಂದಿದ್ದು, ನನ್ನ ಮನಸ್ಸಿನಲ್ಲಿ ತುಮುಲದ ಬಿರುಗಾಳಿ ಎದ್ದು, ಮನಶ್ಶಾಂತಿ ಕೆಡಿಸಿತ್ತು.

"ನಾವು ಇಲ್ಲೇ ಇದ್ದರೆ, ನಮ್ಮನ್ನು ಹಿಡಿದು ಒಳಗೆ ಹಾಕುತ್ತಾರೆ ಪೊಲೀಸರು. ನಡೀರಿ ಹೋಗೋಣ ದಿಲ್ಲೀಗೆ!"

ವರ್ಮಾ ನನ್ನನ್ನು ಬಲವಂತ ಪಡಿಸಿದ್ದ.

"ಕಪೂರ್‌ನನ್ನು ಬಿಟ್ಟು, ಹೇಗೆ ಹೋಗುವುದು?"

"ಕಪೂರ್‌ನ ಸಂಗಡ ನಾವು ಬಂದಿರುವುದು ಪೊಲೀಸರಿಗೆ ಗೊತ್ತಾಗಿದೆ. ಯಾವಾಗ ಬೇಕಾದರೂ ನಮ್ಮನ್ನು ಹಿಡಿಯಬಹುದು."

ಕಪೂರ್ ಆ ರಾತ್ರಿ ನಮ್ಮನ್ನು ಬಿಟ್ಟು ಎಲ್ಲಿ ಹೋಗಿದ್ದ?

ಸರ್ದಾರ್ಜೀಯನ್ನು ನೋಡಲು ಹೋಗಿದ್ದನಂತೆ. ಸರ್ದಾರ್ಜೀಯ ಪತ್ತಾ ಅವನಿಗೆ ಮೊದಲಿನಿಂದಲೂ ಅರಿವಿತ್ತು. ಆದರೆ, ನಮ್ಮ ಹಿಂದೆ ಮುಂದೆ ಅನುಮಾನ ದಿಂದ ಸುಳಿದಾಡುತ್ತಿದ್ದ, ಪೊಲೀಸರ ಕಣ್ಣು ತಪ್ಪಿಸಿ, ಸರ್ದಾರ್ಜೀಯನ್ನು ಕಾಣಲು ಪ್ರಯತ್ನಸಿದ. ಕಪೂರ್ ಸಫಲಗೊಂಡಿರಲಿಲ್ಲ. ಸರ್ದಾರ್ಜೀಯನ್ನು ಭೇಟಿ ಮಾಡಿದ ಕೆಲವೇ ಕ್ಷಣಗಳಲ್ಲಿ, ಪೊಲೀಸರು ಇಬ್ಬರನ್ನು ಹಿಡಿದು ಒಳಗೆ ಹಾಕಿದ್ದರು. ಬಹಳ ದಿನಗಳಿಂದ ಸರ್ದಾರ್ಜೀಯನ್ನು ಹಿಡಿಯಲು ಶತಪ್ರಯತ್ನ ಪಡುತ್ತಿದ್ದ ಪೊಲೀಸರಿಗೆ, ಕಪೂರ್‌ನ ಅಚಾತುರ್ಯದಿಂದ, ಸರ್ದಾರ್ಜೀಯ ಬಂಧನವಾಯಿತು. ಕಪೂರ್, ತನ್ನ ಪಾಡಿಗೆ ತಾನು ಇದ್ದು, ಬಂದ ಕೆಲಸ ಮಾಡಿಕೊಂಡು, ನೋಡುವ ನೋಟ ನೋಡಿ, ನಮ್ಮ ಜೊತೆಯಲ್ಲಿ ದಿಲ್ಲೀಗೆ ವಾಪಸ್ಸಾಗಿದ್ದರೆ, ಈ ವಿಷಮ ಸ್ಥಿತಿಯಲ್ಲಿ ಸಿಕ್ಕಿ ಪೇಚಾಟ ಪಡಬೇಕಾಗಿರಲಿಲ್ಲ. ಅವನ ಸಂಕಟ ಸ್ಥಿತಿ ನಮಗೂ ಮುಜುಗರ, ಧರ್ಮಸಂಕಟವಾಗಿತ್ತು. ಅಮೃತಸರದ ಸ್ವರ್ಣಮಂದಿರ ನೋಡಬೇಕೆಂಬ ನನ್ನ ಹಂಬಲಕ್ಕೆ ಬೆಂಬಲ ನೀಡಿದ್ದರ ಫಲ ಪೊಲೀಸರ ಆತಿಥ್ಯ ದೊರಕುವಂತಾಯಿ ತಲ್ಲಾ ಎಂಬ ವ್ಯಥೆ ನನಗೆ ಉಂಟಾಯಿತು.

ಆದರೆ, ಸರ್ದಾರ್ಜೀಯನ್ನು ನೋಡಬೇಕೆಂಬ ಬಯಕೆ ಯಾಕೆ ಇಟ್ಟಿಕೊಂಡಿದ್ದ ಕಪೂರ್? ಈ ಪ್ರಶ್ನೆಗೆ ಅವನೇ ಉತ್ತರ ಹೇಳಬೇಕಷ್ಟೆ. ಉತ್ತರ ದೊರಕಬೇಕಾದರೆ, ಅವನ ಬಿಡುಗಡೆ ಆಗಬೇಕಷ್ಟೆ. ಅವನ ಬಿಡುಗಡೆ ಆಗಬೇಕಾದರೆ, ಪಂಜಾಬಿನಲ್ಲಿ ಜರುಗುತ್ತಿರುವ ಹಿಂಸಾವತಾರದ ಆಟ ಕೊನೆಗೊಳ್ಳಬೇಕಷ್ಟೆ.

"ಕಪೂರ್‌ನ ವಿಷಯದಲ್ಲಿ ಏನಾದರೂ ಬೆಳವಣಿಗೆ ಆಗಿದೆಯೆ?"

ಪ್ರತಿದಿನ ವರ್ಮನನ್ನು ಕೇಳುವ ಪ್ರಶ್ನೆ ಇದು. ಅವನು "ಪ್ರಯತ್ನಿಸುತ್ತಾ ಇದ್ದೇನೆ. ಬಿಡುಗಡೆ ಕಷ್ಟ" ಎಂದು ನೀಡುವ ಉತ್ತರ ದಿನವಿಡೀ ಅವನಿಂದ ಕೇಳು ತ್ತಿದ್ದೆ. ಕೇಳಿ, ಬೇಸರದ, ನಿರಾಶೆಯ, ಹತಾಶೆಯ ನಿಟ್ಟುಸಿರುಬಿಡುತ್ತಿದ್ದೆ.

"ಸರಕಾರ ನಿರಪರಾಧಿಗಳನ್ನು ಸೆರೆಯಿಂದ ಬಿಡುವ ಬಗ್ಗೆ ಆಲೋಚನೆ ನಡೆಸುತ್ತಿದ್ದಾರಂತೆ."

ವರ್ಮಾ ಉತ್ತರಿಸಿದ. ದಿನವಹೀ ನೀಡುವ ಉತ್ತರವಾಗಿರಲಿಲ್ಲ ಇದು. ನನ್ನ ಮೈ ಪುಳಕಿತವಾಯಿತು.

"ಹಾಗಾದರೆ ಕಪೂರ್‌ನ ಬಿಡುಗಡೆಯಾಗಬಹುದು."

ನನ್ನ ಆತುರತೆಯನ್ನು ನೋಡಿ, ವರ್ಮ ಹಗುರವಾಗಿ ನಕ್ಕ.

"ಆತುರ ಬೇಡ. ಅವನ ಬಿಡುಗಡೆ ಆದರೆ, ಅದೊಂದು ಪವಾಡವೇ ಸರಿ!" ಎಂದು ಹೇಳಿ, ದೋಸೆ ತುಂಡನ್ನು ಬಾಯಿಗೆ ಹಾಕಿ, ಚಾ ತರಲಿಕ್ಕೆ ಮಾಣಿಗೆ ಹೇಳಿದ.

"ಪವಾಡ? ಏನು ಹೇಳುತ್ತಾ ಇದ್ದೀರಿ?"

"ಸಾಬ್! ಒಬ್ಬ ಆತಂಕವಾದಿಯ ಸಂಗಡ, ಗುಟ್ಟಾಗಿ ಸೇರುವುದಿರಲಿ, ಮಾತನಾಡಿದರೆ ಸಾಕು, ಪೊಲೀಸರಿಗೆ ಸಂಶಯ ಉಂಟಾಗುವ ಕಾಲ ಇದು. ಅಂತಹುದರಲ್ಲಿ ಕಪೂರ್, ಸರ್ದಾರ್ಜೀಯನ್ನು ಹುಡುಕಿಕೊಂಡು, ಅವನು ಅವಿತಿದ್ದ ಸ್ಥಳಕ್ಕೆ ಹೋಗಿ, ಅವನನ್ನು ಭೇಟಿ ಮಾಡಿದರೆ, ಪೊಲೀಸರು ಸುಮ್ಮನೆ ಬಿಟ್ಟಾರೆಯೆ?"

ಒಂದು ವೇಳೆ ಕಪೂರ್‌ನ ಸಂಗಡ ನಾನು ಹೋಗಿದ್ದರೆ? ಪರಿಣಾಮ ನೆನೆದರೆ ಭಯದಿಂದ ನಡುಗುವ ಹಾಗೆ ಆಯಿತು. ವರ್ಮಾನ ಬಂಧು ನಮ್ಮ ಸಹಾಯಕ್ಕೆ ಬರದಿದ್ದ ಪಕ್ಷದಲ್ಲಿ, ನಮ್ಮ ಗತಿಯೂ ಕಪೂರ್‌ನ ಗತಿಯಾಗುವುದರಲ್ಲಿ ಸಂಶಯವೇ ಇರಲಿಲ್ಲ! ಈ ಕಲುಷಿತ ಗಂಡಾಂತರದ, ಅಸಾಧಾರಣ ಕಾದಾಟದಲ್ಲಿ, ನಿರುಪದ್ರವಿ, ಯಾವ ದುರುದ್ದೇಶವಿಲ್ಲದ, ಅಪಕಾರಿಯಲ್ಲದವರಿಗೆ, ಕ್ರೂರವಾದ ವಿಧಿ ತನ್ನ ಕೈ ಚಳಕದಿಂದ ಹಿಂಸೆ ನೀಡುವುದು ಸರ್ವೇಸಾಮಾನ್ಯ. ವಿಧಿಯ ಚಿತ್ತಚಾಪಲ್ಯಕ್ಕೆ ನಾನು ಸಿಕ್ಕಿ ಹೀನಾವಸ್ಥೆಗೆ ಬೀಳಲಿಲ್ಲವೆಂಬುದೇ ಒಂದು ಸಂತೋಷದ ಸುದ್ದಿಯಾಗಿತ್ತು.

"ಚಾ ಕುಡೀರಿ. ತಣ್ಣಗಾಗುತ್ತಾ ಬಂದಿದೆ."

ವರ್ಮಾ ಎಚ್ಚರಿಸಿದ. ಅರ್ಧ ತಿಂದ ದೋಸೆಯನ್ನು ತಟ್ಟೆಯಲ್ಲೇ ಬಿಟ್ಟು, ಕಪ್ಪು ಹಿಡಿದು, ಚಾ ಹೀರತೊಡಗಿದೆ.

"ಯೋಚನೆ ಮಾಡಬೇಡಿ ಸಾಬ್! ನಾನು ನನ್ನ ಬಂಧುವಿನ ಜೊತೆ ಸಂಪರ್ಕ ಇರಿಸಿಕೊಂಡಿದ್ದೇನೆ. ಕಪೂರ್‌ನ ಬಿಡುಗಡೆಗೆ ಸರ್ವಪ್ರಯತ್ನ ಮಾಡುತ್ತಾ ಇದ್ದೇನೆ."

ವರ್ಮಾನ ಆಶ್ವಾಸನೆ ಕೇಳಿ, ಆಶ್ಚರ್ಯದ ಜೊತೆಗೆ ಹರ್ಷವೂ ಆಯಿತು. ವರ್ಮ ಆಶ್ವಾಸನೆ ನೀಡಿದಮೇಲೆ ನೆಮ್ಮದಿ ಪಡೆಯುವುದು ನನ್ನ ಹಕ್ಕು ಎಂದೇ ನನ್ನ ತೀರ್ಮಾನ! ಎಷ್ಟಾದರೂ ಅವ ಕ್ರಿಯಸ್ಥನಲ್ಲವೇ?

"ನಾನು ಬೇಕಾದರೆ, ಅಮೃತಸರಕ್ಕೆ ಇನ್ನೊಮ್ಮೆ ಹೋಗಿ, ಪ್ರಯತ್ನಿಸುತ್ತೇನೆ. ಆದರೆ, ಅದರ ಅವಶ್ಯಕತೆ ನನಗೇ ಕಾಣುತ್ತಿಲ್ಲ" ಎಂದ ವರ್ಮಾ.

"ಬೇಡ! ಬೇಡ! ನೀವು ಅಮೃತಸರಕ್ಕೆ ಮಾತ್ರ ಹೋಗಬೇಡಿ. ಒಮ್ಮೆ ಹೋಗಿದ್ದೇ ಸಾಕು!"

ಗಾಬರಿಯಿಂದ ನುಡಿದ ನನ್ನ ಮಾತುಗಳನ್ನು ಕೇಳಿ, ನಸುನಕ್ಕ ವರ್ಮಾ.

"ಬನ್ನಿ ಹೋಗೋಣ" ಎಂದು ಹೇಳಿ ಹೊರಕ್ಕೆ ನಡೆದ ವರ್ಮಾ. ಮಸಾಲೆ ದೋಸೆ ತಿಂದ ಹಣ ಪಾವತಿ ಮಾಡಿ, ನಾನು ಅವನನ್ನು ಹಿಂಬಾಲಿಸಿದೆ.

ಶಾಖೆಗೆ ಬಂದಾಗ, ಆಶ್ಚರ್ಯ ಕಾದಿತ್ತು. ತಮಿಳುಕುಮಾರಿ ಕಮಲಾ, ನನಗಾಗಿ ಕಾಯುತ್ತಾ ಕುಳಿತಿದ್ದಳು.

"ಆಶ್ಚರ್ಯ, ಪರಮಾಶ್ಚರ್ಯ!" ಸಂತಸದಿಂದ ಕೂಗಿದೆ.

ತಮಿಳುಕುಮಾರಿ ತೆಳ್ಳಗಾಗಿದ್ದಳು. ಎಣ್ಣೆಗಪ್ಪಿನ ಬಣ್ಣ ಕಪ್ಪು ಬಣ್ಣಕ್ಕೆ ತಿರುಗಿತ್ತು. ಮದ್ರಾಸ್‌ನಲ್ಲಿ ಕಳೆದ ಮೂರು ತಿಂಗಳ ಕಾಲದ ಪರಿಣಾಮ ಅವಳ ಮೈಮೇಲೆ ಬಿದ್ದಿದ್ದು ಎದ್ದು ಕಾಣುತ್ತಿತ್ತು. ಮದ್ರಾಸಿನ ಬಿಸಿಲಿನ ಬೇಗೆಗೆ ಕಪ್ಪಾಗದಿರುವವರು ಕಪ್ಪು ಬಣ್ಣದವರು ಮಾತ್ರವೇ ಎಂದು ತೋರುತ್ತದೆ!

"ದಿಲ್ಲೀಯಲ್ಲಿ ರಜೆ ಕಳೆಯಲು ಬಂದರೆ?"

"ಇಲ್ಲ! ಇಲ್ಲೇ ಜೀವನ ಕಳೆಯಲು ಬಂದೆ."

ಅವಳ ಧ್ವನಿಯಲ್ಲಿ ವಿಷಾದದ ಛಾಯೆ ಇಣುಕಿತ್ತು. ಅವಳ ಕಣ್ಣಿನಲ್ಲಿ ಮೊದಲಿನ ಹೊಳಪು ಕುಂದಿತ್ತು. ಮದರಾಸಿನ ಹವೆ ಕಣ್ಣಿನ ಹೊಳಪಿಗೆ ಮೆರಗು ನೀಡುವ ಬದಲು ಮಂದವಾಗಿಸಿ, ಕ್ಷೀಣಿಸಿತ್ತು.

"ಒಳ್ಳೇಯದೇ ಆಯಿತಲ್ಲ. ಕಪೂರ್‌ನನ್ನು ಮದುವೆಯಾಗಿ ಆರಾಮಾಗಿ ಇರಬಹುದು."

"ಮದುವೆಯ ಮಾತು ಎತ್ತಬೇಡಿ. ಆ ವಿಷಯ ಮಾತನಾಡಲಿಕ್ಕೆ ಇಲ್ಲಿಗೆ ಬರಲಿಲ್ಲ."

ತುಸುಕೋಪದಿಂದಲೇ ನುಡಿದಿದ್ದಳು ತಮಿಳುಕುಮಾರಿ ಕಮಲಾ.

"ಕಪೂರ್‌ನ ಗತಿ?"

"ಹೇಳಿದೆನಲ್ಲ! ಮದುವೆ ವಿಷಯ ಬೇಡ ಅಂದ ಮೇಲೆ ಅವನ ಬಗ್ಗೆ ಯಾಕೆ ಮಾತು?"

ಇವಳಿಗೆ ಏನಾಗಿದೆ? ಯಾಕೆ ಈ ನಿರುತ್ಸಾಹ? ಮದುವೆ ಬೇಡದಿದ್ದರೂ ಕಪೂರ್ ಬೇಡವಾದನೇ?

"ಕಪೂರ್‌ನನ್ನು ಪೊಲೀಸರು ಹಿಡಿದಿರುವ ವಿಷಯ ತಿಳಿದಿದೆಯೆ?"

"ತಿಳಿದಿದೆ"

"ಅವನ ಮೇಲೆ ಬೇಸರವೇ?"

"ಇಲ್ಲ."

"ಹಾಗಾದರೆ, ತೊಂದರೆ ಏನು?"

"ನಿಮ್ಮಿಂದ ಸಹಾಯಬೇಕು."

"ಏನು?"

"ಬೇರೆ ಶಾಖೆಗೆ ವರ್ಗ ಮಾಡಿಸಬೇಕು."

"ಮದ್ರಾಸ್‌ನಿಂದ ದಿಲ್ಲೀಗೆ?"

"ಮದ್ರಾಸ್‌ಗೆ ವರ್ಗ ಆಗಿರಲಿಲ್ಲ. ರಜೆ ಮೇಲೆ ಇದ್ದೆ. ದಿಲ್ಲೀ ಮಾಲವೀಯ ನಗರ್ ಶಾಖೆಯಿಂದ ಬೇರೆ ಶಾಖೆಗೆ ವರ್ಗ ಮಾಡಿಸಬೇಕು."

ಹಾಗಾದರೆ ಇವಳು ಮದ್ರಾಸ್‌ಗೆ ವರ್ಗ ತೆಗೆದುಕೊಂಡು ಹೋಗಿರಲಿಲ್ಲ! ಕಾರಣ?

"ವರ್ಗ ಏಕೆ ಬೇಕು?"

"ಕಾರಣ ಕೇಳಬೇಡಿ ಈಗ. ಇನ್ನೊಮ್ಮೆ ಹೇಳುತ್ತೇನೆ."

ವರ್ಗ ಬೇಕು, ಕಾರಣ ಕೇಳಬೇಡಿ! ಇವಳ ವರ್ಗಾವಣೆಗೆ ನನ್ನ ಶಿಫಾರಸ್ಸು ಬೇಕು! ನನ್ನ ಶಿಫಾರಸ್ಸಿಗೆ ಅಷ್ಟು ಬೆಲೆ ಇದೆಯೆ? ನನ್ನ ಶಾಖೆಯಿಂದ ಎಲ್ಲರನ್ನೂ ವರ್ಗ ಮಾಡಿ ಎಂದು ಎಷ್ಟು ಶಿಫಾರಸ್ಸು, ಬೇಡಿಕೆ ಪ್ರಯತ್ನ ಮಾಡಿದರೂ, ಸೊಪ್ಪು ಹಾಕದ ಕೇಂದ್ರ ಕಛೇರಿಯ ಮೊಘಲರು, ಇವಳ ವರ್ಗಕ್ಕೆ ನನ್ನ ಶಿಫಾರಸ್ಸಿಗೆ ಬೆಲೆ ಕೊಟ್ಟಾರೆಯೆ?

"ಕಾರಣ ನೀಡದೆ ವರ್ಗಾವಣೆ ಸಿಗುವುದಿರಲಿ, ರಜೆ ಕೂಡ ಸಿಗುವುದಿಲ್ಲ ಈ ಬ್ಯಾಂಕ್‌ನಲ್ಲಿ! ಗೊತ್ತಿದೆ ಏನು?"

ಅವಳು ಉತ್ತರ ನೀಡಲಿಲ್ಲ. ತಲೆ ಬಾಗಿ ಕುಳಿತಳು. ಅರಳು ಹುರಿದಂತೆ ಪಟಪಟನೆ ವಟವಟಗುಡುತ್ತಿದ್ದ ಈ ಕುಮಾರಿ, ಮೋರೆ ಕೆಳಗೆ ಹಾಕಿ ಮೌನವ್ರತ ಪಾಲಿಸುವುದನ್ನು ನೋಡಿ, ನನಗೆ ಕನಿಕರದ ಜೊತೆಗೆ ಆಶ್ಚರ್ಯ ಆಯಿತು. ಏನಾಗಿದೆ ಇವಳಿಗೆ? ಏನು ಆತಂಕ ಒಡ್ಡಿದೆ ಇವಳಿಗೆ?

ಚಾ ತರಿಸಿದೆ. ಅವಳಿಗೆ ಒಂದು ಕಪ್ ನೀಡಿದೆ.

"ಕುಡಿಯಿರಿ" ಎಂದು ಹೇಳಿದೆ.

ಅವಳು ಮಾತನಾಡದೆ, ಕಪ್ ಕೈಯಲ್ಲಿ ಹಿಡಿದುಕೊಂಡು ಚಾ ಕುಡಿಯ ತೊಡಗಿದಳು.

ಅವಳ ಮುಖವನ್ನೇ ಅವಲೋಕಿಸತೊಡಗಿದೆ. ಉಲ್ಲಾಸ, ಸಹಜಪ್ರವೃತ್ತಿ, ಹೃದಯತುಂಬಿದ ಆತ್ಮೀಯತೆ, ಉದಾರತೆ ಇವುಗಳನ್ನೆಲ್ಲಾ ತನ್ನ ಮುಖದಲ್ಲಿ ಜಮಾ ಆಗಿದ್ದ ಕುರುಹುಗಳನ್ನು ಹೊತ್ತಿರುತ್ತಿದ್ದ ಇವಳ ಮುಖ ಇಂದು ಕಪ್ಪಗಿನ ಕಾರ್ಮೋಡದ ಮಧ್ಯ ಸಿಕ್ಕಿ ಪೇಚಾಡುತ್ತಿರುವ ಹಾಗೆ ತೋರಿತು. ಎಲ್ಲಾ ದಿಲ್ಲೀವಾಲಿಗಳ ತರಹ, ಸಲ್ವಾರ್ ಕಮೀಜ್ ಧರಿಸಿದ್ದಳು. ಕಂದು ಬಣ್ಣದ ಸಾಧಾರಣ ಬೆಲೆಯ ಈ ಕಮೀಜ್ ಅವಳ ಕಂದು ಬಣ್ಣದ ಚರ್ಮಕ್ಕೆ ಹೊಂದುಕೊಂಡಿತ್ತು.

ಚಾ ಕುಡಿದು ಲೋಟ ಮೇಜಿನ ಮೇಲೆ ಇಟ್ಟಳು. ಲೋಟ ಸಾಸರ್ ಮೇಲೆ ಕೂತಾಗ ಪಟಪಟನೆ ಶಬ್ಧ ಮಾಡಿತು. ನಡುಗುವ ಕೈಗೆ ಗಂಟೆ ಕೊಟ್ಟರೆ, ಶಬ್ಧ

ಆಗದೆ ಇರುತ್ತದೆಯೆ? ಇವಳ ಮನಸ್ಸಿನಲ್ಲಿ ಜರಗುತ್ತಿರುವ ತಳಮಳ, ತುಮುಲಗಳ ಬಿರುಗಾಳಿ ಮಾತುಗಳ ಶಬ್ದಗಳ ರೂಪದಲ್ಲಿ ಹೊರಬರಲೇ ಬೇಕಲ್ಲವೇ? ಕಪೂರ್, ಆತಂಕವಾದಿಗಳ ನೆರಳಿನಲ್ಲಿ ಹಾದುಹೋಗಿದ್ದರ ಪ್ರಯುಕ್ತ ಪೊಲೀಸರ ಕೈಲಿ ಸಿಕ್ಕಿದ್ದರಿಂದ, ಇವಳಿಗೆ ಬೇಸರ, ನಾಚಿಕೆ, ಕೋಪ, ಆತಂಕ ಉಂಟಾಗಿದೆಯೆ? ತನ್ನ ಪ್ರೇಮಿಯೊಬ್ಬ ಪೊಲೀಸರ ಆತಿಥ್ಯ ಪಡೆದರೆ, ಆಗುವ ಅಗಾಧ ಹತಾಶೆ, ತನ್ನ ಆಸೆ, ಆಕಾಂಕ್ಷೆ, ಇಚ್ಛೆಗಳಿಗೆ ಆತಂಕ, ಅಡ್ಡಿಯಾಗಿ ಕಕ್ಕಾಬಿಕ್ಕಿಯಾಗಿ ಅಸ್ಥಿರ ಮನಸ್ಸನ್ನು ಹೊಂದಿ, ಹೇಳಿಕೊಳ್ಳಲಾರದ ಸ್ಥಿತಿಯಲ್ಲಿದ್ದಾಳೆಯೊ?

"ಈ ಗಂಡಸರ ಜಾತಿಯನ್ನೇ ನಂಬಬಾರದು!"

ಕುಮಾರಿ ಕಮಲಳ ಬಾಯಿಯಿಂದ ಹೊರಟ ಈ ಮಾತುಗಳು ನನಗೆ ಆಶ್ಚರ್ಯವನ್ನೇನೂ ಉಂಟು ಮಾಡಲಿಲ್ಲ. ಎಲ್ಲಾ ಹೆಂಗಸರು, ಗಂಡಸರ ಬಗ್ಗೆ ಯಾವಾಗಲಾದರೊಮ್ಮೆ ತಮ್ಮ ಜೀವನದಲ್ಲಿ ಈ ಹೇಳಿಕೆಯನ್ನು ನೀಡುವುದು ಸರ್ವೇಸಾಮಾನ್ಯವಷ್ಟೆ. ಅದೇ ರೀತಿ, ಗಂಡಸರು, ಹೆಂಗಸರನ್ನು ನಂಬುವುದು ಅಥವಾ ಅರಿಯುವುದು, ಮೀನಿನ ಹೆಜ್ಜೆಯನ್ನು ಅರಿಯುವಷ್ಟೇ ಕಷ್ಟ ಎಂಬ ಹೇಳಿಕೆಯನ್ನು ನೀಡಿ ತಮ್ಮ ಮನಸ್ಸು ಸಂತೋಷ ಪಡೆದುಕೊಳ್ಳುವುದು ಇದ್ದೇ ಇದೆ. ಕಪೂರ್‌ನ ಬಗ್ಗೆ ಅಸಹನೆ, ಅಸಂತೋಷ, ಅನುಮಾನ, ಕುಮಾರಿ ಕಮಲಳ ಮನಸ್ಸಿನ ಮೇಲೆ ಉಂಟಾಗಿದ್ದರಲ್ಲಿ ಯಾವ ಆಶ್ಚರ್ಯ?

"ಮದ್ರಾಸ್‌ಗೆ ಹೋಗಿದ್ದೇ ತಪ್ಪಾಗಿಬಿಟ್ಟಿತು."

ಕಪೂರ್‌ನ ಊಹೆ ಸರಿಯಾಗಿಯೇ ಇತ್ತು. ದಿಲ್ಲೀಯಲ್ಲಿ ಹುಟ್ಟಿ, ಬೆಳೆದು, ದೊಡ್ಡವಳಾಗಿ ಇಲ್ಲಿಯ ಭಾಷೆ, ಸಂಸ್ಕೃತಿ, ನಡೆನುಡಿಗಳಿಗೆ ಬೆಸೆದು ಇಲ್ಲಿಯ ಜನರೊಂದಿಗೆ ಒಂದಾಗಿ, ದಿಲ್ಲೀವಾಲಳಾಗಿ ಮೆರೆದ ಈ ತಮಿಳುಕುಮಾರಿ, ಮದ್ರಾಸಿನಿಂದ ದಿಲ್ಲೀಗೆ ಹಿಂದಿರುಗಿ ಬಂದಿದ್ದರಲ್ಲಿ ಯಾವ ವಿಶೇಷವಿದೆ?

"ದಿಲ್ಲೀಯಲ್ಲಿ ಸುಖವಾಗಿದ್ದೆ. ಇಲ್ಲಿ ಯಾವ, ಯಾರ ಕಾಟವೂ ಇರಲಿಲ್ಲ."

ತಂದೆತಾಯಿಯರ ಜೊತೆಯಲ್ಲಿ, ಹುಟ್ಟಿದೂರಿನಲ್ಲಿ ನೆಚ್ಚಿನ ಸ್ನೇಹಿತರೊಡಗೂಡಿ, ಮೆಚ್ಚಿನ ನೆಂಟರೊಡನೆ ಇದ್ದಾಗ ಸುಖವಲ್ಲದೆ ಇನ್ನೇನು ಸಿಗದಿರಲು ಸಾಧ್ಯ?

ಕಂಪಿಸುವ ಕುಗ್ಗಿದ ಧ್ವನಿಯಲ್ಲಿ, ಒಂದೊಂದೇ ವಾಕ್ಯ, ತನ್ನ ಹೃದಯದಾಳದಿಂದ ಹೊರ ಸೂಸುತ್ತಿರುವ ಈ ತಮಿಳುಕುಮಾರಿಯನ್ನು ಕಂಡು ಮರುಗಿದೆ. ಸುಖವನ್ನು ಅರಸಿ ಮದ್ರಾಸಿಗೆ ಹೋದ ಈ ಕನ್ಯೆ ದುಃಖ ಪಡೆದು ಹಿಂದಿರುಗಿದ್ದು ಬೇಸರ ತರುವಂತಹದೇ ಆಗಿತ್ತು. ಎಲ್ಲರಿಗೂ ಸುಖ ಬೇಕೇ ಬೇಕು. ಸುಖವನ್ನರಿಸಿ ಏನೆಲ್ಲಾ ಮಾಡುತ್ತಾರೆ ಜನರು! ಆದರೆ ಈ ಸುಖ ಎಂದರೇನು? ಇದೊಂದು ಮಾನಸಿಕ

ಅವಸ್ಥೆ ಎಂದು ತಿಳಿದವರು ಹೇಳುತ್ತಾರೆ. ಮನಸ್ಸಿಗೆ ಹರ್ಷ, ಉಲ್ಲಾಸ, ಅನುಕೂಲವಾದರೆ ಸುಖ ಎಂದು ಹೇಳುತ್ತಾರೆ. ಮನಸ್ಸಿಗೆ ಪ್ರತಿಕೂಲವಾದರೆ ದುಃಖ ಎನ್ನುತ್ತಾರೆ. ಸುಖ ಪಡೆಯುವುದಕ್ಕೆ ಸಾಧನೆಗಳಾದ ಐಶ್ವರ್ಯ, ಅಧಿಕಾರ, ಮಡದಿ, ಮಕ್ಕಳು, ಮೊಮ್ಮಕ್ಕಳು, ಸ್ನೇಹಿತರು, ಬಂಧುಗಳು ಇತ್ಯಾದಿ ಸ್ಥಿರವೇ? ಸ್ಥಿರವಲ್ಲದಿದ್ದರೆ, ಈ ಸಾಧನೆಗಳಿಂದ ಸುಖ ದೊರೆಯುತ್ತದೆಯೆಂದು ಯಾಕಿಷ್ಟು ಪರದಾಟ, ಗೊಂದಲ, ಸಂಕಟ, ಕಳವಳ?

"ತಂದೆ-ತಾಯಿ, ನಿಮ್ಮ ಜೊತೆ ವಾಪಸ್ಸು ಬಂದರೆ?"

"ತಂದೆ ಬರಲಿಲ್ಲ. ತಾಯಿ ಮಾತ್ರ ಬಂದರು." ಅದೇ ಕುಗ್ಗಿದ ಧ್ವನಿಯಲ್ಲಿ ಉತ್ತರಿಸಿದಳು ಕುಮಾರಿ.

"ತಂದೆಯನ್ನು ಬಿಟ್ಟು ಬಂದಿದ್ದು ಏಕೆ? ಮದ್ರಾಸ್ ಹುಟ್ಟಿದೂರಾದ್ದರಿಂದ ಬಿಟ್ಟು ಬರಲು ಕಷ್ಟವಾಗಿರಬೇಕು. ಅಲ್ಲವೇ?"

ಒಂದು ಕ್ಷಣ ನನ್ನ ಮುಖವನ್ನೇ ನೋಡಿದಳು ಆಕೆ. ಸಂಕೋಚ, ನಾಚಿಕೆ, ಅನುಮಾನಗಳು ಅಡಗಿತ್ತು ಅವಳ ದೃಷ್ಟಿಯಲ್ಲಿ. ಉತ್ತರಿಸಲಿಕ್ಕೆ ತಡವರಿಸುತ್ತಿರುವ ಅವಳನ್ನು ನೋಡಿ, ಕೇಳಿದ ಪ್ರಶ್ನೆ ಸಮಂಜಸವಾಗಿದೆಯೋ ಇಲ್ಲವೋ ಎನಿಸಿತು.

"ಗಂಡಸರನ್ನು ನಂಬಲೇ ಬಾರದು. ಐ ಹೇಟ್ ದೆಮ್?"

ಕುಗ್ಗಿದ ಧ್ವನಿ ಏರಿತ್ತು! ಇಡೀ ಗಂಡಸು ಜಾತಿಯನ್ನೇ ಸುಟ್ಟು ಭಸ್ಮ ಮಾಡಿ, ಆಪೋಶನ ತೆಗೆದುಕೊಳ್ಳುವವಳಂತೆ ಕಂಡಳು ಕುಮಾರಿ.

"ಬೇರೆ ಶಾಖೆಗೆ ವರ್ಗ ಬೇಕೆಂದು ನನ್ನನ್ನು ಕೇಳಲು ಇಷ್ಟು ದೂರ ಬಂದಿದ್ದೇಕೆ?"

ನಸುನಗುತ್ತಲೇ ಕೇಳಿದೆ.

ಕುಮಾರಿ ಮುಖವನ್ನು ಕೆಳಗೆ ಹಾಕಿದಳು.

"ವಿಷಯ ತಿಳಿಸಿ. ಸುತ್ತು ಬಳಸಿ ಮಾತನಾಡಿದರೆ, ಯಾರಿಗೂ, ಯಾವ ಪ್ರಯೋಜನವೂ ಆಗುವುದಿಲ್ಲ."

ನೇರ ಮಾತಿನಿಂದ ಅವಳ ಮೇಲೆ ಪರಿಣಾಮ ಉಂಟಾಗಲಿ ಎಂಬ ಆಸೆ ಉಂಟಾಗಿತ್ತು ನನಗೆ.

"ನನ್ನ ತಂದೆ ನಮಗೆ ಮೋಸ ಮಾಡಿಬಿಟ್ಟರು."

ಮೋಸ? ಇಷ್ಟು ವಯಸ್ಸಾದ ಮೇಲೆ, ಮಕ್ಕಳಿಗೆ ಮೋಸ ಮಾಡಬೇಕೆಂಬ ಬಯಕೆ?

"ಹಣ, ಮನೆ ಆಸ್ತಿ ಬಗ್ಗೆ ಮನಸ್ತಾಪ ಆಗಿ, ನಿಮಗೆ ಮೋಸ ಮಾಡಿದರೆ?"

"ಅವರ ಹಣ ಆಸ್ತಿ ಯಾರಿಗೆ ಬೇಕು? ನಾವು ದುಡಿದು, ಗಳಿಸಿರುವುದೇ ಸಾಕಷ್ಟಿದೆ. ಯಾರಿಗೆ ಬೇಕು ಅವರ ಹಣ?"

ಜಿಗುಪ್ಸೆ, ಅಸಹ್ಯ ಹೇಸಿಗೆ ಅವಳ ಮುಖದಲ್ಲಿ ಎದ್ದು ಕಾಣುತ್ತಿತ್ತು.

"ಮತ್ತೇನು ಮೋಸ ಮಾಡಿದರು?"

ತಂದೆ, ಮಗಳಿಗೆ ಎಂತಹ ಮೋಸ ಮಾಡಲಿಕ್ಕೆ ಸಾಧ್ಯ? ಚೆನ್ನಾಗಿ ಸಾಕಿ, ಬೆಳೆಸಿ, ಓದಿಸಿ, ನೌಕರಿ ಕೊಡಿಸಿ, ತಂದೆಯ ಕರ್ತವ್ಯ ಮಾಡಿ ಮುಗಿಸಿದ ತಂದೆ, ಸ್ವಂತ ಮಗಳಿಗೆ ಮೋಸ ಮಾಡಿದ ಎಂದರೆ ನಂಬಲಿಕ್ಕೆ ಸಾಧ್ಯವಿಲ್ಲದ ಸಂಗತಿಯಾಗಿತ್ತು. ಮದುವೆಯೊಂದು ಮಾಡಿರಲಿಲ್ಲ. ಆದರೆ, ಮಗಳು ಕಪೂರ್‌ನನ್ನು ಸಂಗಾತಿಯಾಗಿ ಮಾಡಿಕೊಳ್ಳುವ ಹಂಬಲ ತೊರೆದು, ಮದುವೆ ಬೇಡ ಎಂದು ನಿರಾಕರಿಸಿ, ತಂದೆಯ ಸಂಗಡ ಮದರಾಸಿಗೆ ಹೋದರೆ, ಅವನದೇನು ತಪ್ಪು? ಅವನೇನು ಮೋಸ ಮಾಡಿದ?

"ತಂದೆ ಮತ್ತೊಂದು ಮದುವೆ ಮಾಡಿಕೊಂಡ!"

ತಬ್ಬಿಬ್ಬಾದೆ. ನಾನು ದೊಡ್ಡದಾಗಿ ಕಣ್ಣು ಬಾಯಿ ಬಿಚ್ಚಿ ಹರಡಿದ್ದನ್ನು ನೋಡಿ, ಅವಳಿಗೆ ಆಶ್ಚರ್ಯವೇನೂ ಆದಂತೆ ಕಾಣಲಿಲ್ಲ.

ಮಗಳ ಮದುವೆಗೆ ಉತ್ಸುಕತೆ ತೋರದೆ, ತಾನೇ ಮುಂದಾಗಿ ಲಗ್ನವಾದ ಈ ತಂದೆ ಮಗಳಿಗೆ ಮೋಸ ಮಾಡಿದ್ದು ಯಾಕೆ? ವಿದ್ಯಾವಂತ, ಬುದ್ಧಿವಂತ, ಯೋಗ್ಯ, ಇಂಜಿನಿಯರ್. ದೊಡ್ಡ ಹುದ್ದೆಯಲ್ಲಿದ್ದವ, ಸುಸಂಸ್ಕೃತ ವ್ಯಕ್ತಿ, ಸಮಾಜದಲ್ಲಿ ಪ್ರತಿಷ್ಠೆ, ಘನತೆ ಹೊಂದಿದ್ದ ವ್ಯಕ್ತಿ, ಎಲ್ಲಕ್ಕೂ ಮಿಗಿಲಾಗಿ, ವಯಸ್ಸಾದ ಪಿಂಚಣಿ ಹೊಂದಿದ ವ್ಯಕ್ತಿ, ಇನ್ನು ಬದುಕಿ ಆರೋಗ್ಯವಂತಳಾಗಿ ಉಳಿದಿದ್ದು, ೩೫ ವರ್ಷಗಳ ದೀರ್ಘಕಾಲ ಸಂಸಾರ ಸಾಗಿಸಿದ್ದ ಹೆಂಡತಿ ಹೊಂದಿರುವ ಈ ತಂದೆ, ಮರುಮದುವೆ ಯಾಕೆ ಆದ? ಈ ಇಳಿವಯಸ್ಸಿನ ಮುದುಕನನ್ನು ಮದುವೆಯಾದ ಮಹಿಳೆ ಯಾರು? ಅವಳ ಧೈರ್ಯವಾದರೂ ಎಷ್ಟಿದೆ!

"ಯಾರು ಈ ಮಹಿಳೆ ನಿಮ್ಮ ತಂದೆಯನ್ನು ಮದುವೆಯಾದದ್ದು?"

"ಚಿಕ್ಕವಯಸ್ಸಿನಲ್ಲೇ ಅವರಿಬ್ಬರಿಗೆ ಸ್ನೇಹವಿತ್ತಂತೆ. ಅವಳ ವಿಷಯ ಕೇಳಲು, ತಿಳಿಯಲು, ಹೇಳಲು ಇಷ್ಟಪಡುವುದಿಲ್ಲ... ಏನಾದರೂ ಗಂಡಸರು ಎಂತಹ ಮೋಸಗಾರರು?"

ಗಂಡಸರು ಮೋಸಗಾರರು! ಮಂತ್ರ ಪಠಿಸುತ್ತಾ ಇದ್ದಳು ಈ ತಮಿಳುಕುಮಾರಿ!

"ಆ ಮಹಿಳೆ ಮದುವೆಗೆ ಒಪ್ಪಿಕೊಳ್ಳದಿದ್ದರೆ, ನಿಮ್ಮ ತಂದೆ ಮೋಸಗಾರರಾಗುತ್ತಿರಲಿಲ್ಲ! ಅಲ್ಲವೇ?"

ಕೆಟ್ಟದಾಗಿ ನೋಡಿದಳು ಕುಮಾರಿ ನನ್ನನ್ನು.

"ಅವಳು ಮದುವೆಗೆ ಒಪ್ಪುವ ಪ್ರಶ್ನೆಯೇ ಇಲ್ಲ. ತಂದೆ, ನನ್ನ ತಾಯಿಗೆ ನನಗೆ, ಮೋಸ ಮಾಡಿದ ಹಾಗೆ, ಅವಳಿಗೂ ಮಾಡಿದರು ಅಷ್ಟೇ!"

"ಅವಳನ್ನು ಮದುವೆಯಾಗಿ ಅವಳಿಗೇ ಮೋಸ ಮಾಡಿದರೆ?"

"ಹೌದು!"

ಇದೆಂತಹ ತರ್ಕ? ಆ ಮಹಿಳೆಯ ಒಪ್ಪಿಗೆ ಇಲ್ಲದೆ, ಸಹಕಾರವಿಲ್ಲದೆ ಮರು ಮದುವೆಯಾಗಲು ಸಾಧ್ಯವೇ? ಯಾವುದೇ ಕಾರಣವಾದರೂ, ಗಂಡ-ಹೆಂಡತಿಯರ ಸುಖಿ ಜೀವನದ ಮಧ್ಯ ಪ್ರವೇಶಿಸಿ, ಅವರನ್ನು ಅಗಲಿಸಿ, ತನ್ನ ಸುಖವನ್ನೋ, ದುಃಖವನ್ನೋ ಸ್ವಾರ್ಥಸಾಧನೆಯನ್ನೋ ಸಾಧಿಸಿಕೊಂಡ ಆ ಮಹಿಳೆಯ ಪಾತ್ರ ವೇನು? ತಮಿಳುಕುಮಾರಿಯ ತಂದೆಯ ಮೋಸದಾಟದಲ್ಲಿ, ಆ ಮಹಿಳೆ ತನ್ನ ಪಾತ್ರ ವಹಿಸಿದ್ದು ಸುಳ್ಳೇ?

"ಆಗಿದ್ದಾಯಿತು. ಈಗ ನೀವು ಕಪೂರ್‌ನನ್ನು ಮದುವೆಯಾಗಿ ಹಾಯಾಗಿರ ಬಹುದಲ್ಲವೇ?"

"ಸ್ವಂತ ತಂದೆ ನನಗೆ ಹೀಗೆ ಮೋಸ ಮಾಡಿದ ಮೇಲೆ, ಕಪೂರ್‌ನನ್ನು ಹೇಗೆ ನಂಬಲಿ?"

ವಿಶಾಲಹೃದಯ ಹೊಂದಿದ್ದ ಈ ಕುಮಾರಿ ತನ್ನ ತಂದೆಯ ಮೋಸದಾಟ ನೋಡಿ, ಒಮ್ಮೆಲೆ ನಿರ್ದಯಿ, ಶೂನ್ಯಹೃದಯಿಯಾಗಿಬಿಟ್ಟಳೆ? ಹೊಟ್ಟೆಯಲ್ಲಿರ ಬೇಕಾದ ಕ್ರೋಧ, ಆವೇಶ, ಆತಂಕ, ನನ್ನ ಮುಂದೆ ಚೆಲ್ಲಿದ್ದೇಕೆ? ಆದರೆ, ಸ್ವಾರ್ಥತೆ ಯನ್ನು ಬದಿಗೊತ್ತಿ, ಕಪೂರ್‌ನ ಮೇಲಿದ್ದ ಪ್ರೇಮವನ್ನು ಹತ್ತಿಕ್ಕಿ, ತಂದೆ-ತಾಯಿಗಳ ಮೇಲಿನ ಭಯ-ಭಕ್ತಿ, ಆದರ, ಪ್ರೀತಿಗಳಿಗೆ ಮಹತ್ವ ನೀಡಿದ್ದರ ಫಲ—ಭ್ರಾಂತಿ ಗೊಳಿಸುವ ನಿರಾಶೆ, ಆಶಾಭಂಗ! ಈ ಬದುಕು ಎಷ್ಟು ವಿಚಿತ್ರ! ಸುಖವನ್ನರಿಸಿಕೊಂಡು ಹೋದರೆ, ಆ ಪ್ರಯಾಣದಲ್ಲಿ ಎದುರುಗೊಳ್ಳುವ, ಘಟನೆಗಳ, ಸನ್ನಿವೇಶಗಳ ವಿಚಿತ್ರ ಆಟಗಳನ್ನು ನೋಡುವುದೊಂದೇ ಅಲ್ಲದೆ ಅನುಭವಿಸಲೂಬೇಕಾಗುತ್ತದಲ್ಲವೇ? ನೆನೆಸಿದಂತೆ, ನಮಗೆ ಬೇಕಾದಂತೆ ನಡೆಯುವುದು ಎಲ್ಲಿ ಸಾಧ್ಯ? ಕುಮಾರಿ ಕಮಲಳ ಪರಿಸ್ಥಿತಿ ಶೋಚನೀಯವೇ ಸರಿ! ಅವಳೇ ಹೇಳಿದಂತೆ, ದಿಲ್ಲೀಯಲ್ಲೇ ಇದ್ದು, ಪ್ರೀತಿಸುತ್ತಿದ್ದ ಕಪೂರ್‌ನನ್ನು ಮದುವೆಯಾಗಿ, ಸುಖವಾಗಿ ಸಂಸಾರ ಮಾಡಿಕೊಂಡಿ ದ್ದಿರ ಬಹುದಾಗಿತ್ತಲ್ಲವೇ? ಒಂದು ವೇಳೆ ಕಪೂರ್‌ನನ್ನು ಮದುವೆಯಾಗಿದ್ದರೂ, ಈಕೆ ಸುಖವಾಗಿರುತ್ತಿದ್ದಳೆ? ಇಂದಿನ ಪರಿಸ್ಥಿತಿಯಲ್ಲಿ? ಕಪೂರ್ ಪೋಲೀಸ್‌ನವರ ಕೈ ಸೆರೆಯಾಗಿರುವ ಹೊತ್ತಿನಲ್ಲಿ, ಈಕೆಯ ಮನಸ್ಥಿತಿ ಹೇಗಿರಬಹುದಾಗಿತ್ತು?

"ಕಪೂರ್‌ನ ಸುದ್ದಿ ತಿಳಿದಿದೆಯೆ?"

"ತ್ರಿಳಿದಿದೆ."

ಆರ್ಥಿಕ ವೈಫಲ್ಯದಿಂದ, ಹಣಕಾಸಿನ ಅಡಚಣೆಗಳಿಂದ, ಅನಾರೋಗ್ಯ, ಬೇನೆಗಳಿಂದ, ಪ್ರಕೃತಿ ವಿಕೋಪಗಳಿಂದ, ಮನಸ್ಸಿಗೆ ದುಃಖ, ಬೇಸರ, ಒಳಗುದಿಯಾಗುವುದು ಸಹಜ. ತಮ್ಮ ತಪ್ಪಿಲ್ಲದೆ, ತಮ್ಮ ನಿಸ್ವಾರ್ಥತೆಯಿಂದ ಮತ್ತೊಬ್ಬರ ಸುಖವನ್ನು ಬಯಸಿ, ಸಫಲರಾಗದಿದ್ದರೆ, ಅದರಿಂದ ನೋವು ಉಂಟಾದರೆ ಯಾರು ಹೊಣೆ?

ತಮಿಳುಕುಮಾರಿಯ ಮನಸ್ಸಿಗೆ ಆದ ಈ ಆಘಾತ ಹೇಗೆ ತಡೆದುಕೊಳ್ಳುವಳಂತವಳಾಗಬೇಕು? ಅವಳ ನೆಮ್ಮದಿ ಕೆಟ್ಟು ಹೋಗಿದ್ದು ದಿಟ. ಕೆಟ್ಟ ನೆಮ್ಮದಿ ಸರಿಯಾಗುವುದು ಹೇಗೆ? ಕಷ್ಟ, ಪ್ರತಿಕೂಲ, ಎಡರುತೊಡರುಗಳನ್ನು ಎದುರಿಸುವ ಧೈರ್ಯ ಬೇಕಲ್ಲವೇ ಈಕೆಗೆ? ಕಷ್ಟಗಳು ಬರುವುದು ಹೋಗುವುದಕ್ಕಲ್ಲವೇ? ಸುಖ ಬರುವುದು ಹಾಗೇ ಅಲ್ಲವೇ? ಹೋಗುವುದಕ್ಕಲ್ಲವೇ? ಈ ವಿವೇಕವನ್ನು ಅರಿತು ಅದರಂತೆ ನಡೆಯುವುದು ಕಷ್ಟವೇ? ನುಡಿಯುವುದು, ಭಾಷಣ ಬಿಗಿಯುವುದು, ಪ್ರವಚನ ಸಾರುವುದು, ವೇದಾಂತ ಪ್ರಚಾರ ಮಾಡುವುದು ಎಷ್ಟು ಸುಲಭ! ನುಡಿದಂತೆ ನಡೆಯುವುದು ಎಷ್ಟು ಕಷ್ಟ! ಈ ಚಿತ್ರವಿಚಿತ್ರ ಪ್ರಪಂಚ ಒಂದು ವಿಶಾಲ ಅನಿಯೋಜಿತ, ಅನಿರ್ದಿಷ್ಟ, ಅನುಚಿತ, ಅಪಘಾತಗಳ ಗೋಲವೆಂದು ಹೇಳುತ್ತಾರೆ ಬಲ್ಲವರು. ಈ ಗೋಲದಲ್ಲಿ ಸಿಕ್ಕಿಹಾಕಿಕೊಂಡು ತಮ್ಮ ಹುಟ್ಟುಗುಣಗಳಾದ ಆಸೆ, ಆಕಾಂಕ್ಷೆ, ಕಾಮಕ್ರೋಧ, ಸ್ಪರ್ಧಾ ಮನೋಭಾವಗಳಿಂದ ಕೆಲವರು ಗೆಲ್ಲುತ್ತಾರೆ, ಕೆಲವರು ಸೋಲುತ್ತಾರೆ. ಕುಮಾರಿ ಕಮಲ ಈ ಸ್ಪರ್ಧೆಯಲ್ಲಿ ಸೋತಳೇ?

"ಕಪೂರ್‌ನನ್ನು ನೋಡಬೇಕೆನಿಸುವುದಿಲ್ಲವೇ?"

ಕುಮಾರಿ ಕಮಲ ಉತ್ತರ ನೀಡದೆ, ಕುಳಿತಲ್ಲಿಂದ ಎದ್ದು, "ಬರುತ್ತೇನೆ, ನಮಸ್ಕಾರ" ಎಂದು ಹೇಳಿ ಹೊರಗೆ ಹೋದಳು. ಅವಳನ್ನು ತಡೆದು ನಿಲ್ಲಲಿಕ್ಕೆ ಹೇಳಲಿಲ್ಲ ನಾನು. ಅವಳ ನಡತೆಯ ಬಗ್ಗೆ ಯೋಚಿಸತೊಡಗಿದೆ. ನನ್ನ ಯೋಚನೆಗಳಿಗೆ ಅಡ್ಡಿ ಬಂದ ಅಕೌಂಟೆಂಟ್ ವರ್ಮಾ.

"ಬಹಳ ಹೊತ್ತು ಮಾತನಾಡುತ್ತಿದ್ದರಲ್ಲ ಸಾಬ್! ಯಾರು ಆಕೆ?"

ಅವನಿಗೆ ವಿವರಿಸಿದೆ.

"ಅವಳಿಗೆ ಹುಚ್ಚು! ತಂದೆಯಿಂದ ಮೋಸಹೋದಳೆಂಬ ಭ್ರಮೆ ಅವಳಿಗೆ! ತಂದೆಯಾದಾಕ್ಷಣ, ಅವನಿಗೆ ಸ್ವತಂತ್ರವಾಗಿ ಯೋಚಿಸಿ, ತನ್ನ ಇಷ್ಟದಂತೆ ನಡೆಯಲಿಕ್ಕೆ ಸಾಧ್ಯವಿಲ್ಲವೇ? ಎಷ್ಟು ಜನ ಹೆಂಗಸರು, ಗಂಡನನ್ನು, ಮಕ್ಕಳನ್ನು ಬಿಟ್ಟು ಓಡಿ ಹೋಗಿಲ್ಲ? ಹಾಗಾದರೆ, ಎಲ್ಲಾ ಹೆಂಗಸರೂ ಮೋಸಗಾರರೇ?"

"ಏನೇ ಆದರೂ, ಮಾನವ ಒಬ್ಬ ಸ್ಪರ್ಧಾತ್ಮಕ ಪ್ರಾಣಿ" ಎಂದು ಹೇಳಿದ

ವಿದ್ವಾಂಸರ ಹೇಳಿಕೆ ನಿಜವೆನ್ನಿಸಿತು. ನೈತಿಕ ಹಾಗೂ ಬೌದ್ಧಿಕ ಶಿಕ್ಷಣದ ದೆಸೆಯಿಂದ ಮಾನವನ ಸ್ಪರ್ಧಾತ್ಮಕ ದೃಷ್ಟಿಯಲ್ಲಿ ಮಾರ್ಪಾಡಾದರೂ, ಸುಸಂಸ್ಕೃತನಾದರೂ, ಭಾವನಾತ್ಮಕ ಜೀವನ ಹೋರಾಟಗಳಿಂದ ಹಿಗ್ಗು, ಮದ, ಆನಂದ ಮತ್ತು ಅವಮಾನ ಗಳಿಂದ ಹೆಮ್ಮೆ ಅವಮರ್ಯಾದೆಗಳಿಂದ ತಪ್ಪಿಸಿಕೊಳ್ಳಲಾರ ಎಂದೂ ಹೇಳುತ್ತಾರೆ. ಪ್ರಪಂಚದ ಎಲ್ಲಾ ಧರ್ಮಗಳು ಮಾನವನ ಈ ಗುಣಗಳನ್ನು ಎತ್ತಿ ತೋರಿಸಿ, ಆದಷ್ಟು ದೇವರು, ಭಗವಂತ ಪರಮಾತ್ಮನೆಂಬ ಶಕ್ತಿಯ ಕಡೆ ಅವನ ದೃಷ್ಟಿ ಹೊರಳಿಸಿ, ಅವನ ಹುಟ್ಟುಗುಣಗಳನ್ನು ಸುಧಾರಿಸಲೆತ್ನಿಸಿರುತ್ತಾರಲ್ಲವೇ?

ಕುಮಾರಿ ಕಮಲಳಿಗೆ ಧಾರ್ಮಿಕ ಶಿಕ್ಷಣದ ಅವಶ್ಯಕತೆ ಇದೆಯೆ?

"ಒಂದು ಹೆಂಗಸು ಗಂಡಸರೆಲ್ಲಾ ಮೋಸಗಾರರು ಎಂದು ತೀರ್ಮಾನಿಸಿ, ಮದುವೆಯಾಗದಿದ್ದರೆ, ಯಾರಿಗೂ ನಷ್ಟವಿಲ್ಲ ಸಾಬ್! ಅದರಲ್ಲೂ ನಮ್ಮ ದೇಶ ಕ್ಕಂತೂ ನಷ್ಟವೇ ಇಲ್ಲ!"

ವರ್ಮಾನ ತೀರ್ಮಾನ ಕೇಳಿ ನಕ್ಕೆ.

"ನಗಬೇಡಿ ಸಾಬ್! ನಾನು ಬಹಳ ಗಂಭೀರವಾಗಿ ಹೇಳುತ್ತಾ ಇದ್ದೇನೆ. ಕೊನೇ ಪಕ್ಷ ಶೇಕಡ ೩೦ ರಷ್ಟು ಹೆಂಗಸರು ಈ ತೀರ್ಮಾನ ಮಾಡಿದರೆ, ದೇಶದ ಹಲವಾರು ಸಮಸ್ಯೆಗಳನ್ನು ಪರಿಹರಿಸಬಹುದು."

"ಉದಾಹರಣೆಗೆ ಯಾವ ಸಮಸ್ಯೆ ಬಗೆಹರಿಸಬಹುದು?"

"ದೇಶದ ಜನಸಂಖ್ಯೆಯನ್ನು ನಿಯಂತ್ರಿಸಬಹುದು. ಮತ್ತೊಂದು ಮುಖ್ಯವಾದ ಪರಿಹಾರ ಎಂದರೆ, ಕಪೂರ್‌ನನ್ನು ಈಕೆಯಿಂದ ಬಚಾವ್ ಮಾಡಬಹುದು!"

# 17

"ಸಾಬ್! ಸಾಗೂ ಮತ್ತು ಅವನ ಹೆಂಡತಿ ಆತ್ಮಹತ್ಯೆ ಮಾಡಿಕೊಂಡರಂತೆ!"

ಶಾಖೆಯ ಬಾಗಿಲ ಬಳಿ ಬರುತ್ತಿದ್ದಂತೆಯೇ, ವರ್ಮಾ ಸುದ್ದಿ ಬಿತ್ತರಿಸಿದ್ದ. ಯಾವ ಉದ್ವೇಗವೂ ಇರಲಿಲ್ಲ ಅವನ ಧ್ವನಿಯಲ್ಲಿ.

"ಯಾಕಂತೆ ?" ಬಾಗಿಲಲ್ಲೆ ನಿಂತ ನಾನು ಕೇಳಿದೆ.

"ಕಾರಣ ಗೊತ್ತಿಲ್ಲ. ಸೋನೇಪತ್‌ನಿಂದ ಬಂದ ಹುಡುಗರು ಹೇಳಿದರು."

ಬಾಗಿಲು ದಾಟಿ, ಮೆಟ್ಟಲೇರಿ, ನನ್ನ ಕೋಣೆಗೆ ಬಂದು ಕುರ್ಚಿಯಲ್ಲಿ ಕುಳಿತೆ. ಅವನ ಹಿಂದೆ ನೌಕರರ ಮುಖಂಡ ಸಾಹನೀ ಬಂದ. ಅವನ ಹಿಂದೆ ಕೆಲವು ಚೇಲಾಗಳು ಬಂದರು.

"ಬಹಳ ಅನ್ಯಾಯ ಸಾಬ್ !"

ಸಾಹನೀ ಹೇಳಿದ. ಅವನ ಮುಖ ಪೆಚ್ಚಾಗಿತ್ತು.

"ಕಾರಣ ಏನು ?" ಕೇಳಿದೆ.

"ಕಾರಣ ಏನಾದರೇನು ?ಈಗ ಸೋನೇಪತ್‌ಗೆ ಹೋಗಬೇಕು ಸಾಬ್ "

"ಹೋಗಿ ಬನ್ನಿ ನನ್ನದೇನು ಅಭ್ಯಂತರವಿಲ್ಲ."

"ನೀವು ಬನ್ನಿ !" ಆಹ್ವಾನಿಸಿದ ಸಾಹನೀ.

ಯೋಚಿಸತೊಡಗಿದೆ. ಸಾಗೂವಿನ ಹೆಣ ನೋಡಿ ಬರಲಿಕ್ಕೆ ಸೋನೇಪತ್‌ಗೆ ಪ್ರಯಾಣ ಬೆಳಸಬೇಕೆ ? ಬೇಡವೇ ? ಮನಸ್ಸು ಹೊಯ್ದಾಡಿತು.

"ಅವನು ನಿಜವಾಗಿ ಸತ್ತಿದ್ದಾನೆಯೇ ?"

ವರ್ಮಾ ಕೇಳಿದ, ಸಾಹನೀಯನ್ನು.ಅವನ ತುಟಿಯಲ್ಲಿ ನಗುವಿನ ಮಿಂಚು ಹಾದು ಮಾಯವಾಯಿತು.

"ನಿನಗೆ ಅನುಮಾನವೇ ?"

ರೇಗಿದ ಸಹಾನೀ !

"ಸಾಯುವವನಲ್ಲ ಅವನು. ಅದರಲ್ಲೂ ಆತ್ಮಹತ್ಯೆ ಎಂದರೆ ಅನುಮಾನವೇ?"

"ಹಾಗಾದರೆ ಅವನ ಕೊಲೆಯಾಗಿದೆ ಎಂದು ನಿನ್ನ ಎಣಿಕೆಯೆ ?"

ವರ್ಮಾ ಅವನಿಗೆ ಉತ್ತರ ನೀಡದೇ ನನ್ನ ಉದ್ದೇಶಿಸಿ ಹೇಳಿದ.

"ಸಾಬ್! ನಾನು ಸೋನೇಪತ್‌ಗೆ ಹೋಗಿ ನೋಡಿ ಬರುತ್ತೇನೆ. ಸದ್ಯಕ್ಕೆ ನೀವು ಬರಬೇಕಾಗಿಲ್ಲ. ವಿಷಯ ತಿಳಿದು ನಿಮಗೆ ಫೋನ್ ಮಾಡುತ್ತೇನೆ."

ಎಲ್ಲರೂ ಹೊರ ಹೊರಟರು. ನೆಮ್ಮದಿಯ ಉಸಿರು ಬಿಟ್ಟೆ. ಬೆಳ್ಳಂಬೆಳಿಗ್ಗೆ ಕೆಟ್ಟ ಸುದ್ದಿ ಕೇಳಿ, ಮನಸ್ಸು ಹುಳಿಯಾಗಿತ್ತು.

ಭಾನುವಾರವನ್ನು ಏಕೆ ಆರಿಸಿಕೊಂಡ ಸಾಯಲಿಕ್ಕೆ ? ಸಾಯಲಿಕ್ಕೆ ಏನಾಗಿತ್ತು ಅವನಿಗೆ ? ಹೆಂಡತಿಯನ್ನು ಸಾಯಿಸಿ ತಾನು ಏಕೆ ಸಾಯಬೇಕಿತ್ತು ? ಹಣ ಕಾಸಿನ ತೊಂದರೆಯಲ್ಲಿ ಸಿಕ್ಕಿ ಒದ್ದಾಡುತ್ತಿದ್ದ ವಿಷಯ ಎಲ್ಲರಿಗೂ ತಿಳಿದಿದ್ದದೇ ಆಗಿತ್ತು. ಆದರೆ ಸಾಯುವಷ್ಟು ತೊಂದರೆಯಲ್ಲಿದ್ದನೇ ?.

ಚಿರಂಜೀವಿಯಾಗಬೇಕು, ಬದುಕಬೇಕು ಎಂಬ ಹೆಬ್ಬಯಕೆಯೇ ಎಲ್ಲಾ ಕೆಡಕಿಗೆ ಕಾರಣ ಎನ್ನುತ್ತಾರೆ. ಅದೇ ರೀತಿ ಬದುಕಬೇಕೆಂಬ ಹೆಬ್ಬಯಕೆಯೇ ಮನುಷ್ಯನ ಉನ್ನತಿ, ಏಳಿಗೆಗೂ ಕಾರಣವೆನ್ನುತ್ತಾರೆ ! ಹೇಗೆ ಬದುಕಬೇಕು ? ಹೇಗೆ ಜೀವಿಸಬೇಕು? ಯಾವ ರೀತಿ ಬದುಕಬೇಕು ? ಈ ಪ್ರಶ್ನೆಗಳಿಗೆ ಉತ್ತರಿಸುವುದು ಎಷ್ಟು ಕಷ್ಟ !

ಹಣ ಸಂಪಾದನೆಯಿಂದ ಜೀವನ ಸಾಗಿಸುವುದು ಸುಖ ಎಂದು ಬಗೆದರೆ, ಎಷ್ಟು ಹಣ ಸಂಪಾದಿಸಬೇಕು ? ಆಹಾರ ಮನುಷ್ಯನಿಗೆ ಅವಶ್ಯ ಜೀವಿಸಲಿಕ್ಕೆ. ಎಷ್ಟು ಆಹಾರಬೇಕು? ಆಹಾರದಿಂದ ದೇಹಕ್ಕೆ ಒಳಿತು ಆಗಬಹುದು. ಕೆಡಕೂ ಆಗಬಹುದು. ಅದೇ ರೀತಿ ಹಣದಿಂದ ಕೆಡಕೂ ಆಗಬಹುದು. ಒಳಿತೂ ಆಗಬಹುದು ಎಂದು ಹೇಳುತ್ತಾರೆ ಅರಿತವರು. ಸಾಗೂವಿನಂತವರು ಬದುಕುವ ಹೆಬ್ಬಯಕೆ ಹೊತ್ತಿದ್ದೂ ಸಾಯುವ ಆಸೆ ಯಾಕೆ ಮಾಡುತ್ತಾರೆ ? ಹಲವಾರು ಚಟಗಳು, ಆಸೆಗಳು, ಹವ್ಯಾಸಗಳ ಹೊರೆಯನ್ನು ಹೊತ್ತವರಿಗೆ ಅವು ಭಾರವಾಗಿ, ಅವರನ್ನೇ ನುಂಗಿ ಹಾಕುವ ಭಯದಿಂದಾಗಿ, ತಾವಾಗಿಯೋ ತಮ್ಮ ಪ್ರಾಣತ್ಯಾಗ ಮಾಡುತ್ತಾರೆಯೊ ?

ಆತ್ಮಹತ್ಯೆ ಮಾಡಿಕೊಳ್ಳುವುದು ಹೇಡಿತನವೆನ್ನುತ್ತಾರೆ. ಹಾಗಾದರೆ, ಈ ಆತ್ಮಹತ್ಯೆಯ ಚಟವಿರುವ ಜನ, ಪ್ರಜಾಪೀಡಕರನ್ನು ಕೊಂದು ಆತ್ಮಹತ್ಯೆ ಮಾಡಿಕೊಂಡರೆ, ಹುತಾತ್ಮರೆನಿಸಿಕೊಳ್ಳುವ ಸಾಧ್ಯತೆ ಇಲ್ಲವೆ? ದೇಶದ ಪ್ರತಿ ಕ್ಷೇತ್ರದಲ್ಲಿ ತುಂಬಿಕೊಂಡಿರುವ ಪ್ರಜಾಪೀಡಕರನ್ನು ಹಿಂಸಿಸಿ, ಅವರ ಮನಸ್ಸು ಮತ್ತು ದೇಹಗಳಿಗೆ ಜಖಂ ಮಾಡಿ ತಾವು ಆತ್ಮಹತ್ಯೆ ಮಾಡಿಕೊಂಡು ಪುಣ್ಯಕಟ್ಟಿಕೊಳ್ಳಬಹುದಲ್ಲವೆ? ಕುಡಿತದ ಚಟ ಯಾಕೆ ಮನುಷ್ಯನನ್ನು ಭಾದಿಸುತ್ತದೆ? ಚಟದಿಂದ ಬಿಡುಗಡೆಯೆ ಇಲ್ಲವೇ ? ಆದರೆ ಜೂಜಿನ ಮೋಜು, ತಂಬಾಕಿನ ಚುಂಬಕ ಯಾರನ್ನು ಆಕರ್ಷಿಸಿಲ್ಲ? ಅನಾದಿ ಕಾಲದಿಂದಲೂ ಈ ಚಟಗಳಿಗೆ ಬಲಿಯಾದ ಮಾನವರಿಗೆ ರಕ್ಷಣೆ ಎಲ್ಲಿ? ಪುನಃ ಮಿತವಾದದ ಮೊರೆ ಹೊಕ್ಕಿದರೆ ರಕ್ಷಣೆ ಸಿಗುವ ಸಾಧ್ಯತೆ ಇದೆಯಲ್ಲವೇ? ಪ್ರಪಂಚದ ನಾನಾ ಸುಖ ದುಃಖಗಳಿಗೆ ಮಧ್ಯಮ ಮಾರ್ಗ, ಮಿತಮಾರ್ಗವೇ

ಸಂಜೀವಿನಿ ಎನ್ನಬಹುದೇ ? ಕುಡಿತದಲ್ಲೂ, ಮಿತವಾದರೆ, ಹಿತವಷ್ಟೇ ? ಮಿತಿಮೀರಿದರೆ ಕೇಡು ತಪ್ಪಿದ್ದಲ್ಲವಷ್ಟೆ !

"ಸಾಬ್ ! ಸಂತಾಪ ಸೂಚಕ ಸಭೆ ಕರೆದು, ಒಂದು ನಿಮಿಷದ ಮೌನ ಆಚರಿಸಬೇಕು" ಉಬ್ಬು ಹಲ್ಲು ಲಾಲ್, ಬಳಿಗೆ ಬಂದು ನಿವೇದಿಸಿ ನನ್ನ ಯೋಚನಾಲಹರೀಗೆ ಅಡ್ಡಕಟ್ಟೆ ಕಟ್ಟಿದ.

"ಯಾರಿಗೆ?" ಎಂದೆ.

"ಯಾರಿಗೆ ಅಂದರೆ ? ಸಾಗು ಸತ್ತಿದ್ದಕ್ಕೆ"

ಅವನಿಗೆ ಆಶ್ಚರ್ಯವಾಗಿರಬೇಕು ನಾನು ಸಾಗು ಸತ್ತಿರುವ ವಿಷಯ ಇಷ್ಟು ಬೇಗ ಮರೆತಿದ್ದಕ್ಕೆ. "ಯಾರಿಗೆ ಸಂತಾಪ ಸೂಚಿಸುವುದು?" ಸಾಗು ಸತ್ತರೆ ಇವನಿಗೆ ಯಾಕೆ ಇಷ್ಟು ಸಂತಾಪ ? ಬದುಕಿದ್ದಾಗ, ಸಾಗುವನ್ನು ಎಲ್ಲರೂ ತೆಗಳುವವರೆ, ಬೈಯ್ಯುವವರೆ, ಜರೆಯುವವರೆ! ಸತ್ತಮೇಲೆ ಸಂತಾಪ ಸಭೆ ಸೇರಿಸಿ ಕಣ್ಣೀರು ಸುರಿಸಿ, ತಮ್ಮ ಕಣ್ಣುಗಳನ್ನು ಸ್ವಚ್ಛಗೊಳಿಸುವವರೆ!

"ಸೋನೇಪತ್‌ಗೆ ಹೋಗಿರುವವರು ವಾಪಸ್ಸು ಬರಲಿ. ಸಾಯಂಕಾಲ ಸಭೆ ಸೇರೋಣ" ಎಂದೆ.

"ಅವರು ಬರುವ ತನಕ ನಾವು ಯಾಕೆ ಕಾಯಬೇಕು? ನಮಗೆ ಮನೆಗೆ ಹೋಗಬೇಡವೇ ? ಈಗಲೇ ಮಾಡಿಬಿಡೋಣ !"

ಉಬ್ಬು ಹಲ್ಲಿನ ಲಾಲ್, ತನ್ನ ಹಲ್ಲನ್ನು ಇನ್ನು ಉದ್ದ ಮಾಡಿ ಹೇಳಿದ.

ಉಬ್ಬು ಹಲ್ಲುಗಳು ನನ್ನನ್ನು ಕೆಕ್ಕರಿಸಿ ನೋಡುತ್ತಿದ್ದವು. ನಿರಾಕರಿಸುವ ಹಾಗೇ ಇರಲಿಲ್ಲ.

ಸಭೆ ಸೇರಿದವು. ಒಬ್ಬೊಬ್ಬರಾಗಿ, ಸಾಗುವಿನ ಗುಣಗಾನ ಮಾಡತೊಡಗಿದರು. ಮನುಷ್ಯನಲ್ಲಿರಬೇಕಾದ ಎಲ್ಲಾ ಒಳ್ಳೆಯ ಗುಣಗಳನ್ನು ಸೇರಿಸಿ, ಪೋಣಿಸಿ, ರಸವತ್ತಾದ ಹಾಡು ಕಟ್ಟಿ, ಹಾಡಿದರು ಸಭಿಕರು. ಸಾಗುವಿನಲ್ಲಿ ಇಷ್ಟು ಒಳ್ಳೆಯ ಗುಣಗಳಿದ್ದೂ, ವಿನಾ ಕಾರಣ ಅವನ ಮೇಲೆ ಇಲ್ಲದ ಸಲ್ಲದ ಅಪವಾದ ಹೊರಿಸಿ, ಅವನ ಅನುಪಮ ಗುಣಗಳ ಕೊಲೆ ಮಾಡಿದ ಸಭಿಕರು ಇಂದು ಅವನ ಉದಾತ್ತ ಗುಣಗಳ ಬಗ್ಗೆ ಹಾಡಿ ಹೊಗಳಿ ಮಾತನಾಡುತ್ತಿದ್ದನ್ನು ಕಂಡು ಕನಿಕರವಾಯಿತು. ಸಾಗು, ಸತ್ತು ಪುಣ್ಯ ಪಡೆದ ಪುಣ್ಯಪುರುಷ ಎಂದು ಹರ್ಷಗೊಂಡೆ.

"ಸಾಬ್ ! ತಾವು ಮಾತನಾಡಬೇಕು "

ಕೇಳಿಕೊಂಡ ಉಬ್ಬು ಹಲ್ಲು ಲಾಲ್. ಅವನನ್ನು ಅನುಮೋದಿಸಿ ಸಹಾನಿ ಹೇಳಿದ "ಮಾತಾಡಿ ಸಾಬ್!"

" ನೀವೆಲ್ಲಾ ಮಾತಾನಾಡಿದ ಮೇಲೆ ನಾನು ಸಾಗುವಿನ ಬಗ್ಗೆ ಮಾತನಾಡುವುದೇ ನಿದೆ " ಎಂದೆ.

"ಏನಾದರೂ ಮಾತನಾಡಿ ಸಾಬ್ !" ಎಲ್ಲರೂ ಒಕ್ಕರಳಿನಿಂದ ಬೇಡಿದರು.

ಅವರ ಒತ್ತಾಸೆಯ ಮೇರೆಗೆ ಮಾತನಾಡಲು ಶುರುಮಾಡಿದೆ.

"ಸಾಗುವಿನ ಮರಣ ನನಗೆ ಅತ್ಯಂತ ದುಃಖ ತಂದಿದೆ. ಬೇಸರವೂ ಆಗಿದೆ. ಅವನು ಸಾಯಬಾರದಾಗಿತ್ತು. ಅವನ ಸಾವಿನಿಂದ ನಮಗೆಲ್ಲರಿಗೂ ತುಂಬಲಾರದ ನಷ್ಟ ಉಂಟಾಗಿದೆ."

ಮಾತು ನಿಲ್ಲಿಸಿ, ಉಬ್ಬುಹಲ್ಲಿನ ಲಾಲ್‌ನ ಮುಖ ನೋಡಿದೆ. ಅವನ ಕಣ್ಣಿನಲ್ಲಿ ನೀರಿನ ಹನಿ ಉದ್ಭವವಾಗುವ ಬದಲು ಬೆಂಕಿಯ ಕಿಡಿ ಉದರ ತೊಡಗಿತ್ತು.

"ನಿಮಗೆಲ್ಲರಿಗೂ ತಿಳಿದಂತೆ, ಸಾಗೂವಿನ ಮರಣ ನಮ್ಮೆಲ್ಲರಿಗೂ ಭಾರಿ ನಷ್ಟ ಉಂಟಾಗಿದೆ. ಯಾಕೆಂದರೆ ಅವನು ನಮ್ಮಿಂದ ಸಾಲವಾಗಿ ತೆಗೆದುಕೊಂಡ ಹಣ ವಾಪಸ್ಸು ಕೊಡಲೇ ಇಲ್ಲ. ಅವನ ಸಾವಿನಿಂದ ನಮಗೆ ಅಪಾರ ನಷ್ಟವಾಗಿದೆ"

ಸಭಿಕರಲ್ಲರೂ ದಂಗಾಗಿ ಕುಳಿತರು. ಎಲ್ಲರ ಮುಖದಲ್ಲಿ ಗಾಬರಿ, ಆಶ್ಚರ್ಯ ಮತ್ತು ಆತಂಕ !

ಉಬ್ಬುಹಲ್ಲು ಲಾಲ್ ನನ್ನ ಮಾತುಗಳಿಗೆ ಇತಿಶ್ರೀ ಹಾಡಿದ್ದ.

ಉಬ್ಬುಹಲ್ಲಿನ ಲಾಲ್, ಮಲ್‌ಹೋತ್ರಾ ಕೊಟ್ಟ ಏಟಿನಿಂದ ತತ್ತರಿಸಿ ಹೋಗಿದ್ದರ ಜೊತೆಗೆ ಈ ಪಟಿಂಗ ಸಾಗೂವಿನ ಆತ್ಮಹತ್ಯೆದಿಂದ ತಾನೇ ಸಾಯು ವಂತವನಾಗಿದ್ದ. ಬದುಕಿದ್ದಾಗ, ಬಂಧು ಬಳಗ ಎಲ್ಲರಿಗೂ ತೊಂದರೆ ನೀಡಿ, ಸತ್ತ ಮೇಲೂ ಅವರನ್ನು ಕಾಡುತ್ತಿರುವ ಸಾಗೂವಿನ ಆತ್ಮಕ್ಕೆ ಶಾಂತಿ ಕೋರುವುದು ಅತ್ಯಾವಶ್ಯಕ ಎಂದು ಬಗೆದು, ಪುಟ್ಟ ಭಾಷಣ ಮಾಡಲು ಉಪಕ್ರಮಿಸಿದೆ.

"ಸಾಗೂ ಬದುಕಿದ್ದಾಗ ತನ್ನ ಹೆಸರನ್ನು ಸಾಕಷ್ಟು ಕೆಡಿಸಿಕೊಂಡಿದ್ದರೂ, ಸತ್ತ ಮೇಲೆ ಅವನನ್ನು ಹಳಿಯುವುದರಲ್ಲಿ ಯಾವ ಲಾಭವೂ ಇಲ್ಲ. ನಾವೆಲ್ಲಾ ಅವನ ಆತ್ಮಕ್ಕೆ ಶಾಂತಿ ಕೋರೋಣ. ಸಂತಾಪ ಸೂಚಕವಾಗಿ ಒಂದು ನಿಮಿಷ ಮೌನ ಆಚರಿಸೋಣ"

ಎಲ್ಲರೂ ಎದ್ದು ನಿಂತು ಮೌನ ಆಚರಿಸತೊಡಗಿದೆವು. ನಾನು ಕಣ್ಣು ಮುಚ್ಚಿ ನಿಂತೆ. ಹತ್ತು ಸೆಕೆಂಡ್ ಆಗಿದ್ದಿರಬಹುದು.

"ನೀವೆಲ್ಲಾ ಯಾಕೆ ಹೀಗೆ ನಿಂತಿದ್ದೀರಾ ?"

ಕಣ್ಣು ಬಿಟ್ಟು ತೆರೆದು ನೋಡಿದರೆ, ಅಕೌಂಟೆಂಟ್ ವರ್ಮಾ ನನ್ನ ಮುಂದೆ ಪ್ರತ್ಯಕ್ಷನಾಗಿದ್ದ. ಇಷ್ಟು ಬೇಗ ಸೋನೇಪತ್‌ಗೆ ಹೋಗಿ ವಾಪಸ್ಸಾಗಿದ್ದು ಹೇಗೆ ?

"ನೀವೆಲ್ಲಾ ಕೆಲಸ ಮಾಡದೆ ಮೌನವಾಗಿ ನಿಂತು ಏನು ಮಾಡುತ್ತಿದ್ದೀರಿ ?" ವರ್ಮಾ ಪುನಃ ಕೇಳಿದ.

"ಸಂತಾಪ ಸೂಚಕ ಸಭೆ ಏರ್ಪಡಿಸಿ ಮೌನ ಆಚರಿಸುತ್ತಿದ್ದೇವೆ" ಹಲ್ಲುಬ್ಬ ಉತ್ತರಿಸಿದ.

"ಯಾರಿಗಾಗಿ ಸಂತಾಪ ಸೂಚಕ ಸಭೆ ಇದು ?"

"ಯಾಕೆ ಹೀಗೆ ಕೇಳುತ್ತಿದ್ದೀರಾ ? ಗೊತ್ತಿಲ್ಲವೇ ನಿಮಗೆ.? ಸಾಗೂ ಸತ್ತಿದ್ದಕ್ಕೆ ಈ ಸಭೆ ಏರ್ಪಡಿಸಿದ್ದೇವೆ."

"ಇಷ್ಟು ಬೇಗೆ ಏಕೆ ಏರ್ಪಡಿಸಿದಿರಿ ? ಅವನು ಸತ್ತಮೇಲೆ ತಾನೆ ಸಂತಾಪ ಸೂಚಿಸುವುದು ?" ಗಾಬರಿಯಾಗುವ ಸರದಿ ಸನ್ನದಾಗಿತ್ತು.

"ಏನು ಹೇಳುತ್ತಿದ್ದಿರಾ ನೀವು ?"

ಸಭಿಕರೆಲ್ಲಾ ಒಟ್ಟಾಗಿ ಕೇಳಿದರು. ಮೌನ ಸಭೆ, ಶೋಕ ಸಭೆ ಗೊಂದಲ ಸಭೆಯಾಗಿ ಪರಿವರ್ತನೆಗೊಂಡಿತ್ತು.

"ಸಾಗೂ ಸತ್ತಿಲ್ಲ. ಆಸ್ಪತ್ರೆಯಲ್ಲಿದ್ದಾನೆ. ಅವನ ಹೆಂಡತಿ ಮಾತ್ರ ಸತ್ತು ಹೋದಳು."

"ಹಾಂ !" ಸಭಿಕರ ಕೊರಳಿನಿಂದ ಗಾಬರಿ, ಸಂತಸ, ಸಂಭ್ರಮ, ಆಶ್ಚರ್ಯಗಳ ಮಿಲನದ ನಿನಾದ ಹೊರಡಿತು.

ಸಾಗು ಸತ್ತಿಲ್ಲದಿರುವಾಗಲೇ ಅವನ ಮರಣದ ಬಗ್ಗೆ ಸಂತಾಪ ಸೂಚಿಸಿದ ಅಧರ್ಮದ ಕಾರ್ಯ ಕೈಗೊಂಡಿದ್ದಕ್ಕೆ ನಮಗೆಲ್ಲಾ ನಾಚಿಕೆಯಾಗಬೇಕಷ್ಟೆ. ಸಭಿಕರ ಮುಖವನ್ನು ಅವಲೋಕಿಸಿದೆ. ಯಾರ ಮುಖದಲ್ಲೂ ನಾಚಿಕೆ, ಹೇಸಿಗೆಯ ಲಕ್ಷಣ ಕಂಡು ಬರಲಿಲ್ಲ.

ಸಾಗು ಏಕೆ ಸಾಯಲಿಲ್ಲ ಎಂಬ ಭ್ರಮೆ ಆವರಿಸಿದ್ದರ ಬೇಕು !

"ವಿಷ ಹೆಂಡತಿಗೆ ನೀಡಿ, ಅವಳು ಸತ್ತ ನಂತರ, ತಾನು ತೆಗೆದುಕೊಂಡ. ಅವನು ಸಾಯುವ ಮೊದಲೇ ವಿಷಯ ತಿಳಿದ ಅವನ ನೆರೆಹೊರೆಯರು, ಇಬ್ಬರನ್ನು ಆಸ್ಪತ್ರೆಗೆ ಸೇರಿಸಿದ್ದರಂತೆ. ಹೆಂಡತಿ ಸತ್ತು ಹೋದಳು. ಆದರೆ ಸಾಗು ಬದುಕಿಬಿಟ್ಟ". ಸಂತಾಪಸಭೆ ಚದುರಿತು. ಎಲ್ಲರೂ ತಮ್ಮ ತಮ್ಮ ಕುರ್ಚಿಯಲ್ಲಿ ಕುಳಿತು ಕೆಲಸಕ್ಕೆ ಕೈ ಹಚ್ಚಿದರು. ನನ್ನ ಕೊಠಡಿಗೆ ಹೋಗಿ, ಕುರ್ಚಿಯಲ್ಲಿ ಕುಳಿತೊಡನೆ ಹಿಂದೆ ಬಂದ ವರ್ಮಾ, ಬಹಳ ನಿಧಾನವಾಗಿ, ಮೆಲ್ಲನೆ ನನಗೆ ಮಾತ್ರ ಕೇಳಿಸುವಂತೆ ನುಡಿದ.

"ಹೆಂಡತಿ ಕೊಲೆ ಮಾಡಿ, ತಾನು ಆತ್ಮಹತ್ಯೆ ಮಾಡಿಕೊಂಡಂತೆ ತೋರಿಸಿ ಕೊಂಡು, ಬದುಕಿಬಿಟ್ಟ ಸಾಗು !"

ಸಾಗು ಪಟಿಂಗ, ಲಫಂಗ, ಎಂದು ತಿಳಿದ ವಿಷಯವೇ ಆಗಿತ್ತು. ಆದರೆ ಕೊಲೆ ಮಾಡುವಷ್ಟು ನಿರ್ದಯೀ ಅಂದರೆ ನಂಬಲಸಾಧ್ಯವಾಗಿತ್ತು. ಮನುಷ್ಯ ಏಕೆ ಇಷ್ಟು ಕ್ರೂರಿ ಆಗುತ್ತಾನೆ? ಹೆಂಡತಿಯ ನಡತೆ ಬಗ್ಗೆ ಶಂಕಿಸಿ ಕೊಲೆ ಮಾಡುವುದು ಸಾಮಾನ್ಯ ಸಂಗತಿಯಾಗಿದ್ದರೆ, ಬೇರೆ ಕ್ಷುಲ್ಲಕ ಕಾರಣಗಳಿಗೆ ಅವಳ ಕೊಲೆ ಮಾಡುವುದು ಎಷ್ಟು ಕ್ರೂರತನ!

"ಪೊಲೀಸ್ ಕೇಸ್ ಆಗಿರಬಹುದಲ್ಲವೇ ?"

"ಪೊಲೀಸ್‌ರು ಕೇಸ್ ಬುಕ್ ಮಾಡಿದ್ದಾರೆ. ಆದರೆ ಇಂತಹ ಕೇಸ್‌ಗಳು ಇತ್ಯರ್ಥವಾಗಿ ಎಷ್ಟು ಜನರಿಗೆ ಶಿಕ್ಷೆಯಾಗಿದೆ ?"

ವರ್ಮಾನ ಮಾತುಗಳು ನೇರವಾಗಿದ್ದವು.

"ಆತ್ಮಹತ್ಯೆಗೆ ಕಾರಣವೇನು?"

"ಇವನಿಗೆ ಅವಳ ಹಣ ಬೇಕು ಅವಳಿಗೆ ಇವನ ಹೆಣ ಬೇಕು?"

"ಅಷ್ಟು ಬೇಜಾರಾಗಿತ್ತೆ ಅವಳಿಗೆ?"

"ಬೇಸರ? ರೊಚ್ಚು! ಅವನನ್ನು ಕೊಲ್ಲುವಷ್ಟು ರೊಚ್ಚು! ಆದರೆ ಕೊಲ್ಲುವಷ್ಟು ಕ್ರೂರಿಯಾಗಿರಲಿಲ್ಲ ಅವಳು "

"ಡೈವೋರ್ಸ್ ತೆಗೆದುಕೊಳ್ಳಲಿಲ್ಲವೇಕೆ ?"

"ಡೈವೋರ್ಸ್ ತೆಗೆದುಕೊಳ್ಳಿ ಎಂದು ಸೂಚಿಸುವವರ ಮೇಲೆ ಕೆಂಡಕಾರುತ್ತಿದ್ದರು, ಇಬ್ಬರೂ! 'ನಮ್ಮಿಬ್ಬರನ್ನು ಅಗಲಿಸಲಿಕ್ಕೆ ಪ್ರಯತ್ನ ಮಾಡುತ್ತಿದ್ದಿರಾ?' ಎಂದು ಕೂಗಾಡುತ್ತಿದ್ದರು ಇಬ್ಬರು."

ವಿಚಿತ್ರವಾದ ನಡತೆಯಲ್ಲ ಇವರದು? ಒಟ್ಟಿಗೆ ಇರಲ್ಲೊಬ್ಬರು, ಬೇರೆಯಾಗಲು ಒಪ್ಪಲೊಲ್ಲರು. ಯಾವ ತರಹದ ಜನ ಇವರು ?

"'ಗಂಡನಿಗೆ ಬುದ್ಧಿ ಹೇಳಿ, ಅವನ ಚರ್ಯೆ, ಬುದ್ಧಿ ತಿದ್ದುವಂತೆ ಮಾಡದೆ, ನನ್ನಿಂದ ಬೇರ್ಪಡಿಸುವಂತೆ ಹೇಳುತ್ತೀರಲ್ಲಾ' ಎಂದು ಡೈವೋರ್ಸ್ ಮಾಡಿಕೊಳ್ಳಿರಿ ಎಂದು ಹೇಳುವವರಿಗೆಲ್ಲಾ ಬೈದು ಕಳುಹಿಸುತ್ತಿದ್ದಳು ಅವನ ಹೆಂಡತಿ !"

ವರ್ಮಾ ಮಾತನಾಡುತ್ತಲೇ ಇದ್ದ. "ಯಾರ ಮಾತು ಕೇಳದಿದ್ದರೂ, ಮಗನ ಮಾತು ಕೇಳಿ, ಸಂಬಂಧ ಒಡೆಯಲು ಸಮ್ಮತಿಸಲಿಲ್ಲ ಎಂದು ತೋರುತ್ತೆ."

ಸಾಗೂವಿಗೆ ಒಬ್ಬ ಹತ್ತು ವರುಷದ ಮಗನಿರುವ ವಿಷಯ ತಿಳಿದಿದ್ದರಿಂದ, ಸಂಭಾಷಣೆ ಅವನ ಕಡೆ ಎಳೆದೆ.

"ಮಗನ ಬಗ್ಗೆ ಕಾಳಜಿ ಇದ್ದಿದ್ದರೆ, ಇಬ್ಬರಲ್ಲಿ ವೈಮನಸ್ಸು ಇರುತ್ತಿರಲಿಲ್ಲ."

ವರ್ಮಾ ಮನಶಾಸ್ತ್ರಜ್ಞನ ತರಹ ಮಾತನಾಡಿದ್ದ.

ದಂಪತಿಗಳಲ್ಲಿ ಸ್ವಾರ್ಥತೆ ಕಡಿಮೆಯಾಗಿ ತಮ್ಮ ಮಕ್ಕಳ ಬೆಳವಣಿಗೆ ಏಳಿಗೆ ಬಗ್ಗೆ ಚಿಂತಿಸುವಂತಾದರೆ, ಅವರ ವೈವಾಹಿಕ ಜೀವನವೂ ಸುಗಮವಾಗಬಹು ದಲ್ಲವೇ? ಅಂದರೆ, ಸ್ವಾರ್ಥವನ್ನು ತ್ಯಾಗ ಮಾಡಿ, ತಮ್ಮ ಭಾವನೆಗಳನ್ನು ಆಸೆ, ಆಕಾಂಕ್ಷೆಗಳನ್ನು ಹಿಡಿತದಲ್ಲಿಟ್ಟುಕೊಂಡು, ಮಕ್ಕಳ ಬಗ್ಗೆ ಚಿಂತಿಸಿ, ಅವರ ಬೇಕು ಬೇಡ, ಅವರ ವಿದ್ಯಾಭ್ಯಾಸ, ಅವರ ಆಟಪಾಠ, ಅವರ ಆಸೆ, ಆಕಾಂಕ್ಷೆಗಳಿಗೆ ತಮ್ಮ ತನು, ಮನ, ಧನ ಸಮಯ ಮೀಸಲಾಗಿಟ್ಟರೆ, ವಿವಾಹ ಸಂಬಂಧದಲ್ಲಿ ಬಿರುಕು ಕಾಣಿಸದೆ, ಅವರ ವೈವಾಹಿಕ ಜೀವನ ನೌಕೆಯಲ್ಲಿ ಒಡಕು ಕಾಣಿಸದೆ ನಿರಂತರ ಬಿರುಗಾಳಿಯಲ್ಲಿಯೂ ಕ್ಷೇಮದಿಂದ ದಡ ಸೇರಬಹುದೇನೋ! ಮಕ್ಕಳು ದಂಪತಿಗಳ ಪರಸ್ಪರ ಸಂಬಂಧಗಳನ್ನು ಬಲಗೊಳಿಸುವ ಕೊಂಡಿಗಳು ಎನ್ನುತ್ತಾರೆ. ಆದರೆ ಮಕ್ಕಳನ್ನು ಕೊಂಡಿಗಳು ಎಂದುಕೊಳ್ಳದೆ, ತಮ್ಮ ಸುಖಕ್ಕೆ ಅಡ್ಡಿಯಾದ ಚಂಡಿ-ಚಾಮುಂಡಿಗಳು ಎಂದುಕೊಂಡರೆ ಯಾರ ತಪ್ಪು ?

ಆದರೆ ನೀಚ, ಅಯೋಗ್ಯ, ಲಫಂಗನಾದ ಈ ಸಾಗೂ ಸ್ವಾರ್ಥ ತ್ಯಾಗ ಮಾಡಿ, ಸಾಮಾನ್ಯ ಮನುಷ್ಯನಾಗು ಎಂದು ಬುದ್ಧಿ ಹೇಳಿದರೆ ಅವನು ಕೇಳಿಯಾನೆಯೇ? 'ನೀಚನ ಸಂಗ ಮಾಡಿ ಅಭಿಮಾನ ಭಂಗ' ಮಾಡಿಕೊಳ್ಳಬೇಕೆ ಹಿತೈಷಿಗಳು? ಹಾಗಾದರೆ, ನೀಚತನಕ್ಕೆ ಮದ್ದು ಇಲ್ಲವೇ ?

"ಇವನ ನೀಚತನಕ್ಕೆ ಮದ್ದೇ ಇರಲಿಲ್ಲ; ಅಲ್ಲವೇ ?"

ನನ್ನ ಪ್ರಶ್ನೆಗೆ ವರ್ಮ ಒಂದು ಕ್ಷಣ ಸುಮ್ಮನಾಗಿ, ಏನೋ ಯೋಚಿಸುವವನಂತೆ ನಿಂತ. ಹಣೆಯಲ್ಲಿ ಗೆರೆ ಕಾಣಿಸಿಕೊಂಡಿತು.

"ಮದ್ದು ಕಂಡು ಹಿಡಿದಿದ್ದಳು. ಅವನ ಕೊಲೆಯೇ ತನ್ನ ಎಲ್ಲಾ ಕಷ್ಟಗಳಿಗೆ ಮತ್ತು ಅವನ ನೀಚತನಕ್ಕೆ ಪರಿಹಾರ ಎಂದು."

ನಾನು ಅವಾಕ್ಕಾದೆ ! ಅವಳು ಗಂಡನ ಕೊಲೆ ಮಾಡಲು ಇಚ್ಛೆ ಮಾಡಿದ್ದಳೆ!

"ತಾನು ಕೊಲೆಗಾರನಾಗಬಾರದೆಂದು ಅರಿತು ಅವನ ಕೊಲೆಗೈದು, ತಾನು ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಯೋಜಿಸಿದಳು. ಆದರೆ, ಆಗಿದ್ದೇ ಬೇರೆ ! ಅವಳು ಕೊಲೆ ಆಗಿ, ಅವನು ಬದುಕಿದ."

ನೀಚತನ ಬರುವುದು ಹುಟ್ಟಿನಿಂದಲೇ ? ಅಥವ ಪರಿಸರದಿಂದಲೇ ? ಅಥವಾ ತಿನ್ನುವ ಆಹಾರದಿಂದಲೇ!? ಅಥವಾ ತಾನು ಮಾಡಿದ ಕರ್ಮಗಳಿಂದಲೇ ?

ನೀಚತನದಂತೆ, ಮೇಧಾವಿತನ, ಅತಿಚುರುಕುತನ, ದಡ್ಡತನ, ಹುಟ್ಟಿನಿಂದಲೇ ಪಡೆಯಬಹುದೇ? "ಯಾಕೆ ಇಷ್ಟು ನೀಚನಾದ ಈ ಸಾಗೂ ?"

"ಅವನು ನೀಚನಾಗದಿದ್ದರೆ, ನೀಚತನದ ಅನುಭವ ಹೇಗೆ ಆಗುತ್ತಿತ್ತು ?"

ಮರುಪ್ರಶ್ನೆ ಹಾಕಿದ ವರ್ಮ

"ಕಳ್ಳರು, ದರೋಡೆಗಾರರು, ಮೋಸಗಾರರು, ಇಲ್ಲದಿದ್ದರೆ, ಪೊಲೀಸರೇ ಇರುತ್ತಿರಲಿಲ್ಲ. ಅವರ ಅವಶ್ಯಕತೆಯೇ ಇರುತ್ತಿರಲಿಲ್ಲ ! ಅಲ್ಲವೇ ಸಾಬ್ !"

ಇದು ಎಲ್ಲರಿಗೂ ತಿಳಿದ ಸಂಗತಿ. ಉತ್ತರ ನೀಡುವ ಅವಶ್ಯಕತೆ ಕಾಣಲಿಲ್ಲ.

" ಅವನು ನೀಚನಾಗಿದ್ದರಿಂದ, ಅವಳಿಗೆ ಹಿಂಸೆ, ಆತಂಕ ನೀಡುತ್ತಿದ್ದ. ಪುಟ್ಟಿನಿಂದ ನೀಚನಾದನೋ, ನೀಚನಾಗಿ ಹುಟ್ಟಿದನೋ ಯಾರೂ ಬಲ್ಲರು? ಒಟ್ಟಿನಲ್ಲಿ 'ನೀಚ' ಎಂದು ಸಾಬೀತು ಪಡಿಸಿ ಬಿಟ್ಟಿದ್ದಾನೆ ತನ್ನ ಗುಣಗಳಿಂದ !"

"ನೀಚನಾದರೂ ಪರವಾಗಿರಲಿಲ್ಲ, ಕುಡಿತ ಬೇರೆ ಕಲಿತು ಬಿಟ್ಟನಲ್ಲ !"

ನನ್ನ ಪೇಚಾಟವನ್ನು ಕಂಡು ನಕ್ಕ ವರ್ಮಾ.

"ನೀಚರಿಗೆ ತಮ್ಮ ತಲೆಯಲ್ಲಿ ಹತ್ತಿ ಉರಿಯುತ್ತಿರುವ ದಳ್ಳುರಿಯ ಬೇಗೆ ಇನ್ನು ಚೆನ್ನಾಗಿ ಉರಿಯಲಿಕ್ಕೆ ಸೀಮೇ ಎಣ್ಣೆ ಬದಲು ಸರಾಯಿಯ ಉಪಯೋಗ ಪಡೆದುಕೊಳ್ಳುತ್ತಾರೆ."

ಸೀಮೇಎಣ್ಣೆಯ ಮಾತು ಬಂದಾಗ, ಸಾಗೂ ಸಾಯಲಿಕ್ಕೆ ಯಾವ ಕ್ರಮ ಕೈ ಗೊಂಡಿದ್ದ ಎನ್ನುವ ಬಗೆ ಸಂಶಯ ಮೂಡಿಬಂದಿತ್ತು.

"ಸೀಮೇ ಎಣ್ಣೆ ಸುರಿದುಕೊಂಡು ಸಾಯಲಿಕ್ಕೆ ಪ್ರಯತ್ನಿಸಿದನೇ?"

"ಆಗಲೇ ಹೇಳಿದನಲ್ಲಾ! ವಿಷದ ಪ್ರಯೋಗ ನಡೆಸಿ, ತಾನು ಬಚಾವ್ ಆಗಿ ಬಿಟ್ಟ!"

"ಸೀಮೇಎಣ್ಣೆ ಪ್ರಯೋಗ ಮಾಡಲಿಲ್ಲವೇಕೆ ?"

"ಸಾಗೂ ಮೂರ್ಖನಲ್ಲ ಸಾಬ್! ನೀಚರು ಎಂದಿಗೂ ಮೂರ್ಖರಾಗಿರುವುದಿಲ್ಲ. ದುರ್ಮರಣ ಅವನಿಗೂ ಮತ್ತು ಅವನ ಹೆಂಡತಿಗೂ ಬೇಕಿರಲಿಲ್ಲ. ನರಳಿ ಸಾಯುವ ಹಠಾತ್ತಾದ ಪ್ರವೃತ್ತಿ ಅವನದಲ್ಲ. ಹಿಂದು ಮುಂದೆ ನೋಡದೆ, ಅವಸರ ದಿಂದ, ಆವೇಗದಿಂದ ಕೆಲಸ ಮಾಡುವ ಮನುಷ್ಯ ಅವನಲ್ಲ. ಚೆನ್ನಾಗಿ ಅವಲೋಕಿಸಿ, ಆಲೋಚಿಸಿ, ಚಿಂತಿಸಿ, ಲೆಕ್ಕಹಾಕಿ, ಮನದಲ್ಲೇ ಚರ್ಚಿಸಿ ಕಾರ್ಯ ಎಸಗುವ ವ್ಯಕ್ತಿ ಆತ."

"ನಿಮ್ಮ ಪ್ರಕಾರ, ಸಾಗೂ ಚೆನ್ನಾಗಿ ಆಲೋಜಿಸಿ, ಚರ್ಚಿಸಿ, ಆತ್ಮಹತ್ಯೆ ಕೈಗೊಂಡನೆ ?"

"ನನ್ನ ಪ್ರಕಾರ ಸಾಗೂ ಚೆನ್ನಾಗಿ ಆಲೋಚಿಸಿ, ಚರ್ಚಿಸಿ, ಹೆಂಡತಿಯ ಆತ್ಮಹತ್ಯೆಗೆ ಕೈ ಹಾಕಿದನು !"

"ಏನು ಹೇಳುತ್ತಾ ಇದ್ದೀರಾ ?"

"ಯಾಕೆ? ಅರ್ಥವಾಗಲಿಲ್ಲವೇ? ನಿಮಗೆಲ್ಲಾ ಬಿಡಿಸಿ ಹೇಳಬೇಕಾ ? ಸಾಗೂ ತನ್ನ ಹೆಂಡತಿಯ ಆತ್ಮಹತ್ಯೆಯನ್ನು ಬಹಳ ಆಲೋಚಿಸಿ, ಚರ್ಚಿಸಿ ಮಾಡಿದ್ದಾನೆ!"

ಸಾಗೂವಿನ ವಿಚಾರಗಳಿಗೆ ಸಾವೇ ಇರಲಿಲ್ಲ! ಆದರೆ ಅವನ ಹೆಂಡತಿಯ ಸಾವು ಅವನ ನಿರಂತರ ವಿಚಾರಗಳಿಂದ ನಡೆದುಹೋಗಿತ್ತು! ಸೃಷ್ಟಿ ಮತ್ತು ನಾಶ ಎರಡೂ ಶಕ್ತಿಯುತ ವಿಚಾರಗಳಂತೆ. ಸಾಗೂ, ತನ್ನ ಶಕ್ತಿಯುತವಾದ ನಾಶದ ವಿಚಾರ ಯೋಚಿಸಿ, ಹೆಂಡತಿಯ ಕೊಲೆ ಎಸಗಿದ್ದಾನೆ.

ವರ್ಮಾನ ಮಾತು ನಂಬುವುದಾದರೆ, ಪೊಲೀಸರು ಸಾಗುವನ್ನು ಬಿಟ್ಟಾರೆಯೆ? ಭ್ರಷ್ಟಾಚಾರದ ಸಂತೆಯಲ್ಲಿ ನೀಚರಿಗೆ ಸರಕು ಸುಲಭದಲ್ಲಿ ದೊರಕುವುದಿಲ್ಲವೇ?

"ಹಣ ಬಿಸಾಡಿದರೆ, ಯಾರ ಬಾಯನ್ನಾದರೂ ಮುಚ್ಚಿಸಬಹುದು. ಇನ್ನು ಪೊಲೀಸರ ಕೈಬಾಯಿಗಳನ್ನು ಬೆಚ್ಚಗಾಗಿಸಿ ತಪ್ಪಿಸಿಕೊಳ್ಳಲು ನೀಚನಿಗೆ ಯಾವ ಲೆಕ್ಕ?"

ವರ್ಮಾ ಬಹಳ ಹಗುರವಾಗಿ ಹೇಳಿದ.

ಸಾಗೂ, ಹಠಾತ್‌ನೇ, ಆವೇಗದಿಂದ ಆವೇಶದಿಂದ, ಹಿಂದು ಮುಂದೆ ನೋಡದೆ ಕೆಲಸ ಮಾಡುವ ವ್ಯಕ್ತಿ ಅಲ್ಲ ಎಂದು ವರ್ಣಿಸಿದ ವರ್ಮಾ. ಇಂತಹ ಉದಾತ್ತ ಗುಣ ಹೊಂದಿರುವ ವ್ಯಕ್ತಿ ಹೇಗೆ ನೀಚನಾಗುತ್ತಾನೆ ?.

ಉದ್ವೇಗ, ಆವೇಶ, ಆವೇಗ ಈ ಗುಣಗಳು ಕೇವಲ ಕೆಟ್ಟದ್ದನ್ನು ಸೂಚಿಸುತ್ತವೆ. ಈ ಗುಣಗಳನ್ನು ಹೊಂದಿರುವವರು, ಸಾಮಾನ್ಯವಾಗಿ ನೀಚರಾಗಿರುತ್ತಾರೆ. ಕೋಪಿಷ್ಟ ರಾಗಿರುತ್ತಾರೆ, ಕೆಡಕನ್ನುಂಟುಮಾಡುವ ಹವ್ಯಾಸದಲ್ಲಿರುತ್ತಾರೆ. ಈ ಸಾಗೂ ಉದ್ವೇಗ, ಆವೇಗ, ಕೋಪ ಹೊಂದಿದ್ದಾಗಲೀ, ಅಥವಾ ತೋರಿಸಿಕೊಂಡಿದ್ದಾಗಲೀ, ಕಂಡಿಲ್ಲ ಕೇಳಿರಲಿಲ್ಲ! ಅಂದಮೇಲೆ, ಅವನ ಮೇಲೆ ಕೊಲೆಯ ಆಪಾದನೆಯ ಘೋರ ತಪ್ಪನ್ನು ಮಾಡುತ್ತಿದ್ದೇವೆಯೆ? ಅವನ ಹೆಂಡತಿಯನ್ನು ಕೊಲೆ ಮಾಡುವಷ್ಟು ನೀಚನೇ?

ನನ್ನ ತಲೆಯಲ್ಲಿ ನೂರಾರು ಜೇನು ನೊಣಗಳು ತೂರಾಡಿ, ಹಾರಾಡಿದಂತಾ ಯಿತು. ಜೇನುನೊಣಗಳ ಝೇಂಕಾರದಿಂದ ತಪ್ಪಿಸಿಕೊಳ್ಳುವ ಪ್ರಯತ್ನ ನಡೆಸುತ್ತಿರುವಾಗ, ಫೋನ್‌ನ ಝೇಂಕಾರದ ಶಬ್ದ ನನಗೆ ಕೇಳಿಸಲಿಲ್ಲ. ವರ್ಮಾನಿಗೆ ಶಬ್ದ ಕೇಳಿಸಿ ಫೋನ್ ತೆಗೆದುಕೊಂಡು, ಮಾತನಾಡಿ, ನನ್ನನ್ನು ಉದ್ದೇಶಿಸಿ ಹೇಳಿದ.

"ಸಾಬ್! ಡೀ. ಜೀ. ಎಮ್. ಸಾಹೇಬರು ಮಾತನಾಡುತ್ತಿದ್ದಾರೆ. ತೆಗೆದುಕೊಳ್ಳಿ ಫೋನ್ !"

ಲಗುಬಗೆಯಿಂದ ಫೋನ್‌ನ್ನು ನನ್ನ ಕೈಗೆ ತೆಗೆದುಕೊಂಡೆ.

"ಏನ್ರೀ! ನಿಮ್ಮ ಗೋಳು ತಪ್ಪಿದ್ದೇ ಇಲ್ಲ! ಡಿಪಾಸಿಟ್ ಕೊಡದೇ ಇದ್ದರೆ, ಸ್ಯಾಂಕ್ಷನ್ ಮಾಡಿದ್ದ ಲೋನ್ ಕೊಡೋದಿಲ್ಲ ಅಂತ ಹೇಳಿದ್ದರೇನ್ರೀ ?"

ಗುಡುಗಿದ ಫೋನ್‌ನಲ್ಲಿ ದೊಡ್ಡ ಸರದಾರ್

"ಯಾವ ಪಾರ್ಟೀ ಸಾರ್ ?"

"ಸಬ್ರವಾಲ್!ಎಕ್ಸ್‌ಪೋರ್ಟರ್!" ಕೂಗಿದ ಸರದಾರ.

"ಡಿಪಾಸಿಟ್ ಕೊಡಿಸುತ್ತೇನೆ ಎಂದು ಅವನೇ ಹೇಳಿದ್ದ ಸಾರ್. ಸರಕಾರದ ಯಾವುದಾದರೂ ಶಾಖೆಯ ಡಿಪಾಸಿಟ್ ಕೊಡಿಸುತ್ತೇನೆ ಎಂದು ಹೇಳಿದ್ದಕ್ಕೆ ,ಲೋನ್ ಪ್ರಪೋಸಲ್ ಶಿಫಾರಸ್ಸು ಮಾಡಿದ್ದೆ."

"ಫೈನಾನ್ಸ್ ಮಿನಿಸ್ಟ್ರೀಗೆ ದೂರು ಕೊಟ್ಟಿದ್ದಾನೆ ನಿಮ್ಮ ಸಭ್ರವಾಲ್. ಡಿಪಾಸಿಟ್ ಕೊಡದೇ ಹೋದರೆ ಲೋನ್ ಕೊಡೋದಿಲ್ಲ ಎಂದು ನೀವು ಹೇಳಿದರಿ ಎಂದು ಹೇಳಿಕೆ ಇತ್ತಿದ್ದಾನೆ. ಈಗ ನಿಮ್ಮ ಮೇಲೆ ನಾವು ಕ್ರಮ ತೆಗೆದುಕೊಳ್ಳ ಬೇಕಾಗುತ್ತದೆ !

ಹೆದರಿಸಿದ ಸರದಾರ್.

ಬ್ಯಾಂಕ್‌ಗೆ ಡಿಪಾಸಿಟ್ ನೀಡಿ ಎಂದು ಕೇಳಿದರೆ ನನ್ನ ತಪ್ಪೆ ? ಡಿಪಾಸಿಟ್ ಕೊಡಿಸುತ್ತೇನೆ ಎಂದು ಆತ ಆಶ್ವಾಸನೆ ನೀಡಿದರೆ ನನ್ನ ತಪ್ಪೇ? ಡಿಸಾಸಿಟ್ ಕೊಡಿಸದಿದ್ದಾಗ, ಸಾಲ ನೀಡದೇ ಇರುವುದು ನನ್ನ ತಪ್ಪೇ ? ಡಿಪಾಸಿಟ್‌ಗೂ ಸಾಲಕ್ಕೂ ನೆಂಟು ಬೆಳೆಸಬಾರದು ಎಂದು ಕಾನೂನು ಮಾಡಿರುವ ರಿಸರ್ವ್ ಬ್ಯಾಂಕ್ ಡಿಪಾಸಿಟ್‌ನ ಬೆಳೆಯನ್ನು ಹೇಗೆ ಬೆಳೆಸಬೇಕು ಎಂದು ಹೇಳಿಕೊಟ್ಟಿರುತ್ತಾರೆಯೆ ? ಡಿಪಾಸಿಟ್‌ನ ಬೆಳೆ ಹುಲುಸಾಗಿ ಬೆಳೆಯಬೇಕಾದರೆ, ಸಾಲದ ನೀರು ಹಾಯಿಸಲೇ ಬೇಕು. ಎರಡರ ಸಂಬಂಧ ಎಷ್ಟು ನಿಕಟವಾಗಿದೆ !

"ಏಕೆ ಸುಮ್ಮನಾದಿರಿ ? ಮಾತಾಡ್ರೀ !"

ಸರದಾರ್ ಗುಡುಗುತ್ತಲೇ ಇದ್ದ.

"ಮಾತನಾಡಲಿಕ್ಕೆ ಏನಿದೆ ? ಡಿಪಾಸಿಟ್ ತೆಗೆದುಕೊಳ್ಳದೇ, ಲೋನ್ ಬಟವಾಡೆ ಮಾಡು ಎಂದು ಅಪ್ಪಣೆ ಕೊಟ್ಟರೆ, ಮಾಡುತ್ತೇನೆ."

"ತೊಂದರೆಯಲ್ಲಿ ಸಿಕ್ಕಿಹಾಕಿಕೊಂಡಿದ್ದೀರಾ !"

"ತೊಂದರೆ ? ಯಾಕೆ ?"

"ಸರಕಾರದ ಅಧಿಕಾರಿಗಳಿಗೆ ಕೋಪ ಬಂದಿದೆ. ಸಭರ್‌ವಾಲ್‌ಗೆ ಮಿನಿಸ್ಟರ್‌ಗಳ ಸ್ನೇಹ, ಪ್ರಭಾವ ಸಾಕಷ್ಟಿದೆ. ಅವನು ದೂರು ನೀಡಿದ್ದರಿಂದ, ಅವರು ನಿಮ್ಮ ಮೇಲೆ ಕ್ರಮ ತೆಗೆದುಕೊಳ್ಳುವಂತೆ ನಮ್ಮ ಮೇಲೆ ಪ್ರಭಾವ ಹಾಕುತ್ತಿದ್ದಾರೆ."

ಸರದಾರನಿಗೆ ನನ್ನ ಮೇಲೆ ಆತಂಕದ ಬೆಟ್ಟ ಹೊರಸಲಿಕ್ಕೆ ಪ್ರಯತ್ನ ಪಡುತ್ತಿದ್ದ ಸಂಗತಿ ಸ್ಪಷ್ಟವಾಗಿತ್ತು.

ಒಂದೇ ಸಂಸ್ಥೆಯಲ್ಲಿ ನೌಕರಿ ಮಾಡಿಕೊಂಡು, ಸಂಸ್ಥೆಯ ಒಳಿತು, ಏಳಿಗೆಗಾಗಿ ದುಡಿಯುವ ನೌಕರರನ್ನು ಪಾಲಿಸಿ, ಪೋಷಿಸಿ, ರಕ್ಷಿಸಿ ಕಾಪಾಡುವ ಕಾರ್ಯ ಮಾಡುವ ಮೇಲಧಿಕಾರಿಯಾಗದೆ, ಅವರನ್ನು ದಮನ ಮಾಡಿ, ಅವರ ಆಸೆ ಆಕಾಂಕ್ಷೆಗಳನ್ನು ನಿರ್ನಾಮ ಮಾಡಲು ಪಣ ತೊಟ್ಟಿರುವ ಈ ಸರದಾರನಿಗೆ ಹೇಗೆ ಉತ್ತರ ನೀಡುವುದು?

"ಲೋನ್ ಶಿಫಾರಸ್ ಮಾಡುವಾಗಲೇ ಡಿಪಾಸಿಟ್ ತೆಗೆದುಕೊಂಡೇ, ಲೋನ್ ಬಟವಾಡೆ ಮಾಡಲಾಗುವುದು ಎಂದು ಬರೆದಿದ್ದಕ್ಕೆ, ತಾವು ತಮ್ಮ ಸಮ್ಮತಿಯನ್ನು ನೀಡಿದ್ದಿರಲ್ಲ !"

"ಹೌದಾ?"

"ಹೌದು!"

ಫೋನ್ ಕಡಿದ ಶಬ್ದ ಆಯಿತು.

ಡಿಪಾಸಿಟ್‌ನ ಊರುಗೋಲು ಇಲ್ಲದಿದ್ದರೆ, ಲೋನ್ ಶಿಫಾರಸ್ಸಿನ ಕಾಲು ಕೇಂದ್ರ ಕಚೇರಿಯವರೆಗೆ ಹೆಜ್ಜೆ ಇಡಲು ಸಾಧ್ಯವೇ ಇಲ್ಲದಿರುವಾಗ, ಊರುಗೋಲಿನ ಅವಶ್ಯಕತೆ ಏಕೆ ಬೇಕು ನಿಮಗೆ ? ಹಾಗೆ ನಡೆದು ಬರಲಿಕ್ಕೆ ಸಾಧ್ಯವಿಲ್ಲವೇ ? ಎಂಬ ಪ್ರಶ್ನೆಗಳಿಗೆ ಅರ್ಥ ಹುಡುಕುವುದು ಹೇಗೆ ? "ಬ್ಯಾಂಕ್ ಎಂಬ ಕಾರ್ಖಾನೆಯಲ್ಲಿ 'ಡಿಪಾಸಿಟ್' ಎಂಬ ಕಚ್ಚಾ ಪದಾರ್ಥ ಬಳಸದೇ ಹೋದ ಪಕ್ಷದಲ್ಲಿ, ಸಾಲದ ಸೇವೆ ನೀಡಲಿಕ್ಕಾಗದೆ ಸೊರಗಿ, ಬ್ಯಾಂಕ್ ಸೋಲನ್ನಪ್ಪುವುದು ಖಂಡಿತ' ಎಂಬ ಉಪದೇಶವನ್ನು ಎಲ್ಲಾ ತರಹದ ಚರ್ಚಾ ಕೂಟಗಳಲ್ಲಿ ಪ್ರವಚನ ವಿಭಾಗಗಳಲ್ಲಿ, ವರ್ಗೀಯ ಮಂಚಗಳಲ್ಲಿ, ಶಿಕ್ಷಣ ಕ್ಷೇತ್ರಗಳಲ್ಲಿ, ವರಿಷ್ಠ ಅಧಿಕಾರಗಳಿಂದ ಬ್ರೈನ್ ವಾಶಮಾಡಿಸಿಕೊಂಡಿದ್ದ ನನಗೆ, 'ಡಿಪಾಸಿಟ್' ತೆಗೆದುಕೊಂಡು, ಲೋನ್ ನೀಡುವುದೆಂದರೆ, 'ಅಭಾಸ' 'ಅನ್ಯಾಯ' 'ಅಕ್ರಮ' ಎಂದು ಹೆದರಿಸಿ, ನನ್ನ ಮೇಲೆ ಶಿಸ್ತಿನ ಕ್ರಮ ತೆಗೆದುಕೊಳ್ಳುವಂತೆ ಬೆದರಿಸುತ್ತಿದ್ದಾನಲ್ಲಾ ಈ ಡೀ.ಜೀ.ಎಮ್ ಬಾದ್‌ಶಹಾ!

"ನಾಳೆ ಸಾಗೂವಿನ ಹೆಂಡತಿಯ ದಹನ ಕಾರ್ಯ ಇಟ್ಟಿಕೊಂಡಿದ್ದಾರಂತೆ. ಬರುತ್ತೀರಾ ಸಾಬ್ ?"

ವರ್ಮಾ ಕೇಳಿದ.

"ಹೆಂಡತಿಯ ದಹನ ?"

"ದೇಹದ ದಹನ ಅನ್ನಿರಿ – ಸ್ಪಷ್ಟವಾಗಿ ವಿವರಿಸಿ ಹೇಳಬೇಕು ಅನ್ನಿಸಿದರೆ."

"ಹೋಗೋಣ" ಸಮ್ಮತಿಸಿದೆ.

ಮಾರನೇಯದಿನ ಸಾಯಂಕಾಲ, ಸೋನೇಪತ್‌ಗೆ ತೆರಳಿ ಸಾಗೂವಿನ ಮನೆ ಸೇರಿದಾಗ, ಹೆಣದ ಸಂಸ್ಕಾರದ ಕಾರ್ಯ ಮುಗಿದು, ಸ್ಮಶಾನ ಯಾತ್ರೆಗೆ ನಿಂತಿದ್ದರು

ಅವಳ ಆಪ್ತರು, ನೆಂಟರು. ಹೂವಿನ ಗುಚ್ಛವೊಂದನ್ನು ಹೆಣದ ಮೇಲೆ ಇರಿಸಿ, ನಮಸ್ಕರಿಸಿದೆ. ಬದುಕಿದ್ದಾಗ ಆಕೆಯನ್ನು ಕಂಡಿರಲಿಲ್ಲ. ಹೂವು ಹಣ್ಣುಗಳ ಪುರಸ್ಕಾರ ನೀಡಿರಲಿಲ್ಲ; ಆಕೆಯ ಅಸಹಾಯ ಸ್ಥಿತಿಯ ಬಗ್ಗೆ ಚಿಂತಿಸಿ, ಆಕೆಗೆ ಸಾಂತ್ವನ ನೀಡಿರ ಲಿಲ್ಲ. ಸಾಗೂವಿನ ಸಂಗಡ ಇದ್ದ ಆಕೆಯ ಸಂಕಟಮಯ, ಅತ್ಯಂತ ದುಃಖಕರ ಗೆಳೆತನಕ್ಕೆ ಚೈತನ್ಯ ನೀಡಿ ಆಕೆಗೆ ಹರ್ಷ ನೀಡಿರಲಿಲ್ಲ; ಆಕೆಯ ದುರಂತ ಜೀವನದ ಕೊನೆಯ ಅಂಕಕ್ಕೆ ವಿದಾಯ ಹೇಳಿ, ನನ್ನ ವ್ಯಸನವನ್ನು ವ್ಯಕ್ತಪಡಿಸಲು ಈ ಹೂವಿನ ಗುಚ್ಛ ಎಷ್ಟರ ಮಟ್ಟಿಗೆ ಸಹಾಯಕವಾಗುತ್ತದೆಯೋ ಎಂದು ಮನಸ್ಸಿನಲ್ಲೇ ಕೊರಗಿ, ಚಡಪಡಿಸಿದೆ.

"ರಾಮನಾಮ್ ಸತ್ಯ ಹೈ !"

ಹೆಣ ಹೊತ್ತವರು, ಕೂಗುತ್ತಾ ಹೊರಟ ಶಬ್ದ ನನ್ನನ್ನು ಎಚ್ಚರಿಸಿತು.

ಮರಣ, ದಿಟವಾದುದು, ಇದು ಸತ್ಯ, ಮಿಕ್ಕವೆಲ್ಲವೂ ಅಸತ್ಯ ಎನ್ನುವುದರ ಬದಲು "ರಾಮನಾಮ ಸತ್ಯ" ಎನ್ನುವುದರ ಮೂಲಕ, ಜನ ದೇವರ ದಿಟತ್ವಕ್ಕೆ ಒಪ್ಪಿ ನಡೆಯುತ್ತಾರೆಯೇ ? ಅಲ್ಲಿ ನೆರದಿದ್ದ ನೆಂಟರು, ಇಷ್ಟರು ಹುಯ್ಯಲಿಡಲಿಕ್ಕೆ ಮೊದಲು ಮಾಡಿದರು. ಸಾಗುವಿನ ಹೆಂಡತಿಯ ತಾಯಿ ಮತ್ತು ಅವಳ ಸಹೋದರರ ಗೋಳು ಹೃದಯ ಹಿಂಡುವಂತಾಗಿತ್ತು.

"ಈಕೆ ಸತ್ತು ಪುಣ್ಯ ಪಡೆದಳು, ಸಕಲ ಕಷ್ಟಗಳಿಂದ ಪಾರಾದಳು. ಅದರಲ್ಲೂ ಸಾಗೂವಿನ ಪಾಪಿ ಮುಷ್ಟಿಯಿಂದ ಪಾರಾದಳು !"

ವರ್ಮಾ ಪಿಸುಗುಟ್ಟಿದ ನನ್ನ ಕಿವಿಯ ಬಳಿ.

ಸ್ಮಶಾನ ಯಾತ್ರಿಗಳು 'ರಾಮನಮ್ ಸತ್ಯ'ದ ಕೂಗಿನೊಂದಿಗೆ ಮರೆಯಾಗಿ ದ್ದರು. ನಾವು ಅಲ್ಲೇ ನಿಂತೆವು.

"ಮರಣ ನಿಂತಿದೆ ನನ್ನ ಮುಂದೆ
ನನ್ನ ಸಕಲ ಕಷ್ಟಕಾರ್ಪಣ್ಯಗಳನ್ನು ಮಾಡಿದೆ ಹಿಂದೆ
ಹಿಡಿದಿದೆ ತನ್ನ ಕೈಯಲ್ಲಿ ಸುವಾಸನೆಯ ಮಾಲೆ
ಇನಿದನಿಯಲಿ ಹಾಡುತ್ತ, ನಲಿಯುತ್ತಾ ಬಾಲೆ"

ವರ್ಮಾ ಗುಣಗುಣಿಸಿದ ಹಾಡನ್ನು. ಚಕಿತನಾಗಿ ನೋಡಿದೆ ಅವನ ಮುಖವನ್ನು ಗುಣಗುಣಿಸುತ್ತಿದ್ದ ಅವನ ತುಟಿಯಲ್ಲಿ ನಗುವಿರಲಿಲ್ಲ, ಭಾವುಕತೆ ಇರಲಿಲ್ಲ. ಆದರೆ ಮುಖದಲ್ಲಿ ಶಾಂತತೆ ತುಂಬಿ ತುಳುಕಾಡುತ್ತಿತ್ತು.

"ಈ ದಿನ ಬಂದು ನಿಂತಿದೆ ಸಾವು
ಕರೆಯುತ್ತಿದೆ 'ಬನ್ನಿರಿ ನೀವು'

ಸಾಕಾಗಲಿಲ್ಲವೆ ಈ ಬಂಧನ
ಸಾಕಾಗಲಿಲ್ಲವೇ ಈ ರೋಧನ !"

ಗುಣ ಗುಣಿಸುತ್ತಲೇ ಇದ್ದ ವರ್ಮಾ. ಯಾವಾಗ ಕವಿಯಾದ ಈತ ? ದುರಂತದ ಸಮಯದಲ್ಲಿ ಸ್ಫೂರ್ತಿ ಹುಟ್ಟುವುದೇ ಈತನ ಮನಸ್ಸಿನಲ್ಲಿ ? ಸಾವಿನ ಬಗ್ಗೆ ಪದ್ಯ ಕಟ್ಟಿ, ಗುಣಗುಣಿಸುವ ಸಾಮರ್ಥ್ಯ ಹೊಂದಿರಬೇಕಾದರೆ, ಒಬ್ಬ ಸಮರ್ಥ ಕವಿಯೇ ಸರಿ!

'ಮರಣ ಜೀವನವೆಂಬ ಒಂದು ಬಂಧನದಿಂದ ಬಿಡುಗಡೆ ನೀಡುವ ಸಾಧನ' ಎಂದು ಹಾಡುತ್ತೀದ್ದೀರಲ್ಲಾ! ಕೊಲೆಯಂತಹ ಘೋರ ತಪ್ಪು ಮಾಡಿದವರಿಗೆ 'ಮರಣ ದಂಡನೆ' ನೀಡುತ್ತಾರಲ್ಲ ? 'ಮರಣ' ದಂಡನೆ ಹೇಗೆ ಆಗುತ್ತದೆ ?"

ನನ್ನ ಪ್ರಶ್ನೆಗೆ ಉತ್ತರ ನೀಡದೆ, ವರ್ಮಾ

" ಬನ್ನಿ ಸಾಬ್ ! ದಿಲ್ಲೀಗೆ ವಾಪಸ್ಸು ಹೋಗೋಣ" ಎಂದು ಹೇಳಿ ಬಾಡಿಗೆ ಕಾರು ಹತ್ತಿಸಿದ. ದಿಲ್ಲೀ ಮುಖವಾಗಿ ಕಾರು ಹೊರಟಾಗ, ನಾವು ಮಾತನಾಡಲಿಲ್ಲ. ಆಗಲೇ ಕತ್ತಲಾವರಿಸಿತ್ತು. ಕೈಗಡಿಯಾರ ನೋಡಿಕೊಂಡೆ. ಸಾಯಂಕಾಲ ಏಳು ಗಂಟೆ ತೋರಿಸುತ್ತಿತ್ತು. ಮೌನವಾಗಿ ಕುಳಿತು ಯೋಚಿಸತೊಡಗಿದೆ.

ಮರಣ ದಿಟ, ನಿಶ್ಚಿತ, ಖಂಡಿತ. ಆದರೂ ಮನುಷ್ಯನ ಮನಸ್ಸಿಗೆ ಇದು ಯಾಕೆ ಒಪ್ಪಿಗೆಯಾಗುವುದಿಲ್ಲ. ಹುಟ್ಟಿದ ಮೇಲೆ ಸಾವು ನಿಶ್ಚಿತ ಎಂದು ತಿಳಿದ ಮೇಲೂ ಸಂಶಯವೇಕೆ ಮನಸ್ಸಿನಲ್ಲಿ? ಚಿರಂಜೀವಿಯಾಗಬೇಕೆಂಬ ಹಂಬಲವೇಕೆ ?

"ಬಿಳೀ ಹಾಳೆ ಚಂದಿರ,
ಅದೇ ನನ್ನ ಮಂದಿರ
ಹಾಳೆ ತುಂಬ ನೂರಾರು ರಂದರ
ಅದೇ ನನ್ನ ಕಂಕರ ಕಂದರ "

ಹಾಡು ಗುಣಗುಣಿಸುವ ಸರದಿ ನನ್ನದಾಯಿತು.

"ನೀವು ಯಾವಾಗ ಕವಿಗಳಾದಿರಿ ಸಾಬ್ ?"

ನಕ್ಕೆ ನಾನು. ಮನಸ್ಸು, ಕಾರು ಓಡಿದ ಹಾಗೆ ಓಡತೊಡಗಿತು. ಮಾನವನ ಹುಟ್ಟುಗುಣಗಳಲ್ಲಿ ಚಿರಂಜೀವತ್ವ ಹೊಂದುವುದು ತುಂಬ ಮಹತ್ವ ಪಡೆದಿದೆ ಯಲ್ಲವೇ ?

ಪ್ರಾಯಶಃ ಈ ಗುಣ ಹೊಂದಿದ್ದರಿಂದಲೋ, ಈ ಪರಮಾಶ್ಚರ್ಯಕರವಾದ ಹಂಬಲವಿರುವುದರಿಂದಲೋ, ಮರಣದಂಡನೆ ನೀಡಿ ಈ ಪ್ರಬಲ ಹಂಬಲದ ಕತ್ತನ್ನು ಕಿತ್ತು ಬಿಸಾಡುವ ಪ್ರವೃತ್ತಿ ಅದೇ ಮಾನವನ ಮನಸ್ಸಿಗೆ ಬಂದಿರಬೇಕು.

ಕಾರು ಬಿರುಸಾಗಿ ಓಡುತ್ತಿತ್ತು. ಚಾಲಕನಿಗೆ ಮನೆಗೆ ಬೇಗ ಸೇರಿಕೊಳ್ಳುವ ಆಸೆಯಿಂದಲೋ ಏನೋ ಕಾರಿನ ವೇಗ ಏರಿಸಿ, ಬೇರೆ ಎಲ್ಲಾ ವಾಹನಗಳನ್ನು ಬದಿಗೊತ್ತಿ, ಓಡಿಸುತ್ತಿದ್ದ.

'ಕಿರ್' ಎಂದು ಕಿರಿಚಿ, ಕಾರು ನಿಂತಾಗಲೇ ಸಾವಿನ ಬಗ್ಗೆ ಚಿಂತಿಸುತ್ತಿದ್ದ ನನ್ನ ಮನಸ್ಸಿನ ಓಟಕ್ಕೆ ಧಕ್ಕೆ ಬಂದಿತು.

"ಏನಾಯಿತು ? ಏಕೆ ನಿಲ್ಲಿಸಿದೆ ?"

ವರ್ಮಾ ಕೂಗಿದ.

"ಏನೂ ಇಲ್ಲ ಸಾಬ್ ! ಎತ್ತಿನ ಗಾಡಿಯೊಂದು ಆ ಕಡೆಯಿಂದ ಬಂತು. ಒಂದು ಸೀಮೇ ಎಣ್ಣೆ ಬುಡ್ಡಿ ಎತ್ತಿನ ತಲೆಗೆ ಅಂಟಿಸಲಿಕ್ಕೆ ಏನು ರೋಗ ? ಈ ಕತ್ತಲೆಯಲ್ಲಿ ಹೇಗೆ ಕಾಣಿಸಬೇಕು ಈ ಕರೀ ಎತ್ತುಗಳು" ? ಕಾರ್‌ಚಾಲಕ, ಎತ್ತಿನ ಗಾಡಿ ಚಾಲಕನಿಗೆ ಬೈದು, ಅವನ ಜೊತೆ ಕದನಕ್ಕಿಳಿದ.

"ಕಾರ್ ಸ್ಟಾರ್ಟ್ ಮಾಡಿಹೊರಡು. ಜಗಳ ಮಾಡಲಿಕ್ಕೆ ಸಮಯವಿಲ್ಲ."

ವರ್ಮಾ ಅವನಿಗೆ ಆದೇಶ ನೀಡಿದ.

"ದೇವರು ದೊಡ್ಡವನು. ಈ ದಿನ ಒಳ್ಳೆಯ ದಿನ ಆಗಿತ್ತು. ಇಲ್ಲದಿದ್ದರೆ ನಾವು ಇಂದು ಪಡ್ಚಾ."

"ಸತ್ತೇ ಹೋಗುತ್ತಿದ್ದೆವು!"

ಕಾರ್ ಸ್ಟಾರ್ಟ್ ಮಾಡಿ, ಓಡಿಸಿದ ಚಾಲಕ.

'ಈ ದಿನ ಒಳ್ಳೆಯದು !'

ಯಾರಿಗೆ ? ನಮಗೆ ? ಸಾಗುವಿಗೆ ? ಸತ್ತ ಅವನ ಹೆಂಡತಿಗೆ ?

"ಸಾವಿಗ್ಯಾಕೆ ಇಷ್ಟು ಭಯ ?"

ವರ್ಮಾ ಕೇಳಿದ, ಇದ್ದಕ್ಕಿದ್ದ ಹಾಗೆ

"ಸತ್ತೇ ಹೋಗುತ್ತಿದ್ದೆವು" ಎಂದು ಹೇಳಿ, ತನ್ನ ಭಯ ಪ್ರಕಟಿಸಿದ್ದಕ್ಕೆ ನಾಚಿಕೆಯಾಗಿರಬಹುದು ಎಂದು ಎಣಿಸಿದೆ.

"ಭಯಕ್ಕಿಂತ ಜಾಸ್ತಿ ಸಾವಿನ ಬಗ್ಗೆ ಇರುವ ಅಜ್ಞಾನ" ಎಂದೆ.

"ಸಾವಿನ ಬಗ್ಗೆ ಅಜ್ಞಾನ? ಇದರಲ್ಲಿ ಅಜ್ಞಾನ ಏನು ಬಂತು?" ಅಚ್ಚರಿಯಾಗಿತ್ತು ಅವನಿಗೆ.

"ಹೌದು ! ಸಾವಿನ ಭಗ್ಗೆ ಏನು ತಿಳಿದಿದೆ ನಮಗೆ. ಸಾವು ಎಂದರೆ ಏನು? ಏಕೆ ಸಾವು ಬರುತ್ತದೆ. ಸಾವನ್ನು ಹೇಗೆ ಎದುರಿಸಬೇಕು ? ಇದರ ಬಗ್ಗೆ ನಮಗೆ ಎಷ್ಟು ತಿಳಿದಿದೆ ? ಯಾರು, ಎಲ್ಲಿ ತಿಳಿಸುವವರು ?"

"ಸಾವಿನ ಬಗ್ಗೆ ತಿಳಿಯ ಬಯಸುವುದೇನಿದೆ? ಎಲ್ಲರಿಗೂ ಗೊತ್ತಿರುವ ವಿಷಯವಲ್ಲವೆ ಸಾಬ್?"

"ನಿಮಗೆ ಏನು ತಿಳಿದಿದೆ ಹೇಳಿ ? ನೋಡೋಣ?"

ವರ್ಮ ನನ್ನ ಮುಖವನ್ನು ಕತ್ತಲಲ್ಲಿ ಹುಡುಕುತ್ತಾ ನೋಡಿದ.

"ಹುಟ್ಟಿನ ವಿರುದ್ಧ ಸಾವು ಎಂದು ಹೇಳಬಹುದು" ಎಂದ ನಿಧಾನವಾಗಿ.

"ಹುಟ್ಟು ಎಂದರೇನು ?"

"ಸಾವಿನ ವಿರುದ್ಧ ಎನ್ನಬಹುದು !"

"ಸಾವು, ಹುಟ್ಟು ಎಂಬ ಕನ್ನಡಿಯ ಹಿಂಭಾಗಕ್ಕೆ ಮೆತ್ತಿರುವ ಕಪ್ಪು ಪಾದರಸ ಎಂದು ಹೇಳುತ್ತಾರೆ "

ವರ್ಮಾ ನಸು ನಕ್ಕು ಹೇಳಿದ. "ಹುಟ್ಟು ಎಂಬ ಕನ್ನಡಿಯಲ್ಲಿ ನಮ್ಮ ಮುಖ ಕಾಣಬೇಕಾದರೆ, ಸಾವಿನ ಪಾದರಸ ಕನ್ನಡಿಯ ಹಿಂಭಾಗಕ್ಕೆ ಲೇಪಮಾಡಲೇ ಬೇಕಲ್ಲವೇ?"

"ಹೌದು !"ಎಂದೆ.

"ಹುಟ್ಟು ಒಂದು ಕನ್ನಡಿ ಎಂದು ಹೇಳುವಂತಾದರೆ ಹಾಗೆ ಹೇಳಬಹುದು. ಹುಟ್ಟು ಕನ್ನಡಿ ಎಂದು ಹೇಳದೆ ಬೇರೆ ರೀತಿ ಅರ್ಥೈಸಿದರೆ ಪಾದರಸ ಏಕೆ ಬೇಕು ?"

"ಸಾವನ್ನು ಅರ್ಥೈಸಲು ಹೊರಟರೆ ಹುಟ್ಟನ್ನು ಅರ್ಥ ಮಾಡಿಕೊಳ್ಳಬಹುದೇನೋ ! ಅಥವಾ ಜೀವನದ ದೃಷ್ಟಿಯನ್ನು ಅರ್ಥ ಮಾಡಿಕೊಳ್ಳಬೇಕಾದರೆ, ಸಾವನ್ನು ಅರ್ಥೈಸಿ ಕೊಳ್ಳಬೇಕಾಗಬಹುದು. ಅಲ್ಲವೇ ?

"ಹುಟ್ಟು - ಸಾವುಗಳನ್ನು ಅರ್ಥ ಮಾಡಿಕೊಳ್ಳುವ ಜಂಜಾಟದಲ್ಲಿ ಸಿಕ್ಕಿಹಾಕಿಕೊಳ್ಳುವ ಬದಲು, ಹೇಗೆ ನಮ್ಮ ಜೀವನವನ್ನು ಸಾರ್ಥಕವಾಗಿ ನಡೆಸಬಹುದೆಂದು ನಾವು ಚಿಂತಿಸಿದರೆ ಒಳ್ಳೆಯದು ಅಂತ ಕಾಣುತ್ತದೆ!"

ನಾನು ಮೂಕನಾದೆ. ಸಾವಿನಂತೆ ತೆಪ್ಪಗಾದೆ. ಕಾರ್ ಇಂಜಿನ್ ಶಬ್ದವನ್ನು ಆಲಿಸತೊಡಗಿದೆ. ಕಾರು ದಿಲ್ಲೀ ಸಮೀಪಿಸುತ್ತಿರುವುದರಿಂದ, ಕಾರು ಓಡುವ ಗತಿ ಸಾಮಾನ್ಯವಾಗಿತ್ತು. ರಾತ್ರಿ ೯ ಗಂಟೆಯಾಗಿ ಪೂರ್ಣ ಕತ್ತಲಾದರೂ, ದೂರದ ನಗರದ ಬೆಳಕಿನ ಝಾಳ ಸೂರ್ಯಾಸ್ತಮದ ಭ್ರಮೆ ತಂದೊಡ್ಡಿತ್ತು.

"ಸಾವಿನ ಬಗ್ಗೆ ಚಿಂತಿಸ ಹತ್ತಿದರೆ, ಜೀವನ ನೀರಸಗೊಂಡು, ನಿರಾಶಾಭಾವನೆಯಿಂದ ತುಂಬಿ, ಈ ಪ್ರಪಂಚ ಒಂದು ದುಃಖದಾಯಕ ಎಂದು ತೋರಿ, ನಾವು ಹತಾಶೆಗೊಳ್ಳುತ್ತೇವೆ ಅಲ್ಲವೇ ?"

ನಾನು ಮೌನ ಯಾತ್ರೆ ಮುಂದುವರೆಸಿದೆ. "ಸಾವು ಏನು ಎಂದು ತಿಳಿಯಲಿ ಬಿಡಲಿ ಇರುವಷ್ಟು ದಿನ ಸಂತೋಷದಿಂದ ಕಳೆಯಬೇಕು."

ಉಮರ್ ಖಯ್ಯಾಮ್‌ನ ತತ್ವ ಪಾಲಿಸುವ ಈ ಪಂಜಾಬಿ ವರ್ಮಾನಿಗೆ ಸಾವಿನ ಬಗ್ಗೆ ಚರ್ಚೆ ಮಾಡಲಿಕ್ಕೆ ಹೊರಟರೆ ನನ್ನನ್ನೇ ಸಾಯಿಸಿಯಾನು !

"ಮನುಷ್ಯನಿಗೆ ಸಾವು ಖಂಡಿತ ಎಂದು ಮನಸ್ಸಿಗೆ ಬಂದಾಗ ಇರುವಷ್ಟು ದಿನ ತಮಗೆ, ಇತರರಿಗೆ ಒಳ್ಳೆಯದನ್ನು ಮಾಡಿ ಜೀವನವನ್ನು ಸುಖಮಯ ಮಾಡಿಕೊಳ್ಳಬಹುದಲ್ಲವೇ ?"

" 'ಕ್ಯಾ ಪಾಯಾ, ಕ್ಯಾ ಖೋಯಾ' ಎಂದು ಅಂತಿಮದಲ್ಲಿ ಅರಿಯುವುದನ್ನು ಮೊದಲೇ ಅರಿತುಬಿಟ್ಟರೆ, ಸುಖ ಸಿಗುತ್ತದೆ ಎನ್ನುತ್ತೀರಾ ?"

"ಕ್ಯಾ ಪಾಯಾ, ಕ್ಯಾ ಖೋಯಾ, ದಿಲ್ಲೀ ಆಯಾ ! ಮನೆಗೆ ಹೋಗಿ ಉಂಡು, ಮಲಗಿ, ನಿದ್ರೆ ಮಾಡಿ, ನಾಳೆ ಬೆಳಿಗ್ಗೆ ಎದ್ದು, ಬ್ಯಾಂಕಿಗೆ ಬಂದು ನಮ್ಮ ನಮ್ಮ ಕೆಲಸ ಮಾಡೋಣ ಸಾಬ್ !"

ವರ್ಮಾ ಕ್ರಿಯಾಸ್ಥ. ಮನೆ ಸೇರುವವರೆಗೆ, ನಾನು ತೆಪ್ಪಗೆ ಕುಳಿತು, ಯೋಚಿಸತೊಡಗಿದೆ. ಮತ್ತೆ ಮತ್ತೆ ಸಾವಿನ ಬಗ್ಗೆ ಮನಸ್ಸು ಹಾವಿನಂತೆ ಹರಿದಾಡ ತೊಡಗಿತು. 'ಸಾವು ಆಕಸ್ಮಿಕ. ದೇಹ ಕಣ್ಮರೆಯಾದರೆ ಸ್ಮೃತಿ ಕಣ್ಮರೆಯಾಗಬೇಕೆ ? ಹುಟ್ಟು, ಇಲ್ಲಿ ಎಲ್ಲೋ ಕಾದು ಕುಳಿತಿರಬೇಕಲ್ಲವೇ?' ಎಲ್ಲೋ ಓದಿದ್ದ ನೆನಪು. ಹಳೆ ಬಟ್ಟೆ ಬಿಸಾಡಿ, ಹೊಸ ಬಟ್ಟೆ ತೊಟ್ಟುವ ರೀತಿಯೇ ಈ ಹುಟ್ಟು, ಸಾವು ? 'ದೇಹ ಮಣ್ಣಿಗೆ ಸೇರಿ ಆತ್ಮ ದೈವಕ್ಕೆ ತಿರುಗಿದಂತೆ' ಎನ್ನುತ್ತಾರೆ. ನಿಜವೇ? ಸಾವಿನಿಂದಾದ ದುಃಖ ಶಮನ ಮಾಡಲಿಕ್ಕೆ ಉಪದೇಶ ನೀಡುವ ಉಪಾಯವೆ? ಆದರೆ, ಕೃತಿಮದಿಂದ ಸಾಗೂವಿನ ಹೆಂಡತಿಯ ಸಾವಿನಿಂದಾದ ದುಃಖ ಶಮನವಾಗುವು ದಾದರೂ ಹೇಗೆ? ಆತ್ಮಹತ್ಯೆಯಿಂದ ಪ್ರಾಣ ನೀಗಿಕೊಂಡವರ ಬಗ್ಗೆ ಹೇಳುವುದೇನು?

ಮಾರನೆಯ ಬೆಳಿಗ್ಗೆ ಬ್ಯಾಂಕ್‌ಗೆ ಬಂದಾಗ, ಶಾಮಲಾಲ್, ನನ್ನ ಕೋಣೆಯಲ್ಲಿ ನನಗಾಗಿ ಕಾದು ಕುಳಿತಿದ್ದ. ನನ್ನ ಕುರ್ಚಿಯಲ್ಲಿ ಕುಳಿತೊಡನೆ, ಮಾತಿಗೆ ಶುರು ಹಚ್ಚಿದ.

"ಡಿ.ಎಮ್ ಸಾಹೇಬರು ನಿಮ್ಮನ್ನು ಕರೆದುಕೊಂಡು ಬರುವಂತೆ ಹೇಳಿದ್ದಾರೆ."

ಅವನ ಕಪ್ಪು ಮುಖ, ಕೋಪದಿಂದ ಉರಿಯುತ್ತಿತ್ತು. ಪೊಲೀಸ್ ಪ್ಯಾದೆ ತರಹ ಮಾತನಾಡುತ್ತಿದ್ದ ಶಾಮಲಾಲ್. ನನ್ನನ್ನು ಬಂಧಿಸಿ, ಡಿ.ಎಮ್ ಸಾಹೇಬನ ಮುಂದೆ ನಿಲ್ಲಿಸಿ ಛೀಮಾರಿ ಹಾಕಲು ಮನಸ್ಸು ಮಾಡಿ ಕೂತಂತಿತ್ತು.

"ಏನು ಸಮಾಚಾರ ?"

"ಡಿ.ಎಮ್ ಸಾಹೇಬರು ನಿಮ್ಮನ್ನು ಕರೆದುಕೊಂಡು ಬರಲಿಕ್ಕೆ ಹೇಳಿದ್ದೇ ಒಂದು ಮುಖ್ಯ ಸಮಾಚಾರ."

ಇನ್‌ಕಮ್ ಟ್ಯಾಕ್ಸ್ ನೋ- ಡ್ಯೂ ಸರ್ಟಿಫಿಕೇಟ್ ರದ್ದಾಗಿದ್ದಕ್ಕೆ ಕೋಪ ಬಂದು, ನನ್ನ ಮೇಲೆ ದೂರು ನೀಡಿರಬೇಕು. ಆದರೆ ಹೊಟ್ಟೆ ಡೀಎಮ್‌ನ ಬಳಿ ಯಾಕೆ ದೂರು ನೀಡಿದ ಇವ ? ಚೇರ್‌ಮನ್‌ನ ಸಹೋದರ ಕುಡುಕ ಡೀಎಮ್‌ನ ಬಳಿ ದೂರು ಯಾಕೆ ನೀಡಲಿಲ್ಲ? 'ಎದುರಿಗೆ ಚಂದ ಮಾತಾಡಿ ಬೆನ್ನಿಗೆ ಬಾಕು ಹಾಕುವ' ಡಿ.ಎಮ್, ನನ್ನನ್ನು ಯಾಕೆ ಕರೆಸಿ, ಮುಖಕ್ಕೆ ಮಂಗಳಾರತಿ ಮಾಡಲಿಲ್ಲ? ಅಥವಾ ಹೊಟ್ಟೆ ಡೀಎಮ್‌ನ ಬಳಿ ನನ್ನನ್ನ ಕಳುಹಿಸಿ ಅವನ ಕೈಯಲ್ಲಿ ಚಂದ ಮಾತನಾಡಿಸಿ, ತಾನು ಹಿಂದಿನಿಂದ ನನ್ನ ಬೆನ್ನಿಗೆ ಬಾಕು ಹಾಕಲಿಕ್ಕೆ ತಯಾರಾಗಿದ್ದಾನೆಯೆ ?

ಟೆಲಿಫೋನ್ ಕೈಗೆ ತೆಗೆದು, ಹೊಟ್ಟೆ ಡೀ.ಎಮ್‌ಗೆ ಫೋನ್ ಮಾಡಿದೆ. ನನ್ನ ಧ್ವನಿಯ ಗುರುತು ಸಿಕ್ಕಿದೊಡನೆ, ಆತ ಗುಡುಗಿದ. "ತಕ್ಷಣ ಹೊರಟು ಬನ್ರೀ! ನಿಮ್ಮೊಡನೆ ಮಾತನಾಡಬೇಕು."

ಏನೋ ಆತಂಕ ಕಾದಿದೆ ಎಂದು ಮನದಲ್ಲೇ ಆತಂಕ ಪಟ್ಟೆ. ಅಕೌಂಟೆಂಟ್ ವರ್ಮಾವನ್ನು ಕರೆದು, ವಿಷಯ ತಿಳಿಸಿ ಹೊಟ್ಟೆ ಡೀಎಮ್‌ನನ್ನು ನೋಡಲು ಹೊರಟೆ.

"ಶಾಮ್‌ಲಾಲ್‌ರ ಲೋನ್ ಸ್ಯಾಂಕ್ಷನ್ ಆದರೂ, ಎಷ್ಟು ಅಡಚಣೆ ಹಾಕಿದ್ದೀರಲ್ಲರೀ ? ಮೇಲಧಿಕಾರಿಗಳಿಗೆ ಪ್ರಪೋಸಲ್ ಬಗ್ಗೆ ಆಸಕ್ತಿ ಇರುವುದು ತಿಳಿದು ಸಹ ಯಾಕೆ ಹೀಗೆ ಮಾಡುತ್ತೀರಾ ?"

ಕುರ್ಚಿಯಲ್ಲಿ ಕುಳಿತೊಡನೆ, ನನ್ನ ಕತ್ತು ಪಟ್ಟಿ ಹಿಡಿದು ಮಾತನಾಡುವ ರೀತಿಯಲ್ಲಿ ಮಾತನಾಡಿದ ಹೊಟ್ಟೆ ಡೀ.ಎಮ್.

"ಆಸಕ್ತಿ ಇದ್ದರೆ, ಅವರು ಯಾವ ಕಂಡೀಶನ್ ಹಾಕದೆ ಸ್ಯಾಂಕ್ಷನ್ ಮಾಡಬಹುದಾಗಿತ್ತಲ್ಲ ಸಾರ್ !"

"ಹ್ಯಾಗೆ ಮಾಡಲಿಕ್ಕೆ ಆಗುತ್ತದೆ? ಕೆಲವು ಕಂಡೀಶನ್ ಹಾಕಲೇಬೇಕಾಗುತ್ತದೆ. ಅವನ್ನು ಪಾರ್ಟೀ ಪಾಲಿಸಿದ್ದರೂ, ನಿಮ್ಮದೇ ಆದ ಹೊಸ ಕಂಡೀಶನ್ ಹಾಕಿ ಯಾಕ್ರೀ ತೊಂದರೆ ಕೊಡುತ್ತೀರಾ ?"

ನೋ-ಡ್ಯೂ ಸರ್ಟಿಫಿಕೇಟ್ ರದ್ದು ಪಡಿಸಿದ್ದಕ್ಕೆ ಹೊಟ್ಟೆ ಡೀಎಮ್‌ಗೆ ಕೋಪ ಬಂದಿದೆ ಎಂದು ಅರಿವಾಯಿತು.

"ನೋ ಡ್ಯೂ ಸರ್ಟಿಫಿಕೇಟ್ ತರಿಸಿ ಕೊಟ್ಟರೂ, ಅದನ್ನು ರದ್ದು ಪಡಿಸಿ ನನಗೆ ಲೋನ್ ಸಿಗದ ಹಾಗೆ ಮಾಡಿದ್ದಾರೆ ಸಾಬ್ ಈ ಮೇನೇಜರ್ ! ಇವರು ಈ ಶಾಖೆಗೆ ಬಂದಾಗಿನಿಂದ, ತುಂಬಾ ತೊಂದರೆ ಕೊಡುತ್ತಿದ್ದಾರೆ ಸಾಬ್! ಇವರಿಂದ

ನನ್ನ ವ್ಯಾಪಾರವೆಲ್ಲಾ ಹಾಳಾಗಿಹೋಯಿತು. ನಾನು ಕೆಟ್ಟು ಹೋದೆ ಸಾಬ್! ಲಕ್ಷಾಂತರ ರೂಪಾಯಿ ಲುಕ್ಸಾನು ಆಯಿತು. ಎಲ್ಲಾ ಇವರಿಂದಲೇ! ಇವರಿಂದಲೇ!"

ಕಿರಿಚಲಿಕ್ಕೆ ಶುರುಮಾಡಿದ. ಅವನಿಗೂ ಹೊಟ್ಟೆ ಡೀಎಮ್‌ನ ತರಹ, ಕೋಪ ಬಂದಿತ್ತು. ಇಬ್ಬರ ಕೋಪಾಗ್ನಿಯಲ್ಲಿ ನಾನು ಸುಟ್ಟು ಬೂದಿಯಾಗುವುದು ಖಂಡಿತ ಎನ್ನಿಸಿತು. ಹೇಗೆ ಪಾರಾಗುವುದು ?

"ಸಾರ್ ! ಇವನಿಂದ ನಮ್ಮ ಸಿಬ್ಬಂದಿಯ ಹತ್ತು ಜನರಿಗೆ ತೊಂದರೆಯಾಗಿದೆ. ಒಬ್ಬನ ಡಿಸ್‌ಮಿಸ್ ಆಗಿದೆ. ಕೋರ್ಟ್‌ನಲ್ಲಿ ಕೇಸಾಗಿದೆ. ನನಗೂ ಅದೇ ರೀತಿ ಆಗ ಬೇಕೆಂದು ನಿಮ್ಮ ಅಪೇಕ್ಷೆಯೇ ?"

ಅವರ ಕ್ರೋಧಾಗ್ನಿಗೆ ಸ್ವಲ್ಪ ಮಟ್ಟಿಗೆ ತಣ್ಣೀರು ಎರಚಿ, ತಾಪ ಶಾಂತವಾಗುವ ಪ್ರಯತ್ನ ಮಾಡಿದೆ.

"ಹಗಲು ಕಂಡ ಬಾವಿಯಲ್ಲಿ ಇರುಳು ಬೀಳು ಅಂತ ಹೇಳುತ್ತೀರಾ? ಮತ್ತೊಬ್ಬರ ಅನುಭವದಿಂದ ನಾವು ಕಲಿತರೆ, ಅದೇ ಬುದ್ಧಿವಂತಿಕೆ ಎನ್ನುತ್ತಾರೆ! ಮತ್ತೊಬ್ಬರ ಅನುಭವ, ತಪ್ಪು ನೋಡಿ, ಅರಿಯದೇ ಅದೇ ತಪ್ಪು, ನಾವು ಮಾಡಿದರೆ ಅದು ಘೋರ ತಪ್ಪಾಗುತ್ತದೆ "

ಹೊಟ್ಟೆ ಡೀಎಮ್‌ನ ಬಿಳೀ ಮುಖ ಕೆಂಪಾಯಿತು. ಸಿಟ್ಟಿನಿಂದಿಲೋ, ರಕ್ತ ದೊತ್ತಡದಿಂದಲೋ ಅರಿಯದಾದೆ. ಅದಕ್ಕೆ ಅವನ ಹಣೆಯ ಮೇಲೆ ಬೆವರಿನ ಮಣಿ ಗಳು ಮೂಡಿದವು. ಆಲೋಚನಾಕ್ರಾಂತನಾದ.

"ನಾನು ಮಾಡಿದ್ದು ತಪ್ಪು ಎಂದು ನೀವು ತಿಳಿಸಿದರೆ, ಮತ್ತು ಮುಂದೆ ಯಾವ ರೀತಿ ಮಾಡಬೇಕೆಂದು ಹೇಳಿದರೆ, ಅದೇ ರೀತಿ ಮಾಡಲಿಕ್ಕೆ ಸಿದ್ಧ! ದಯವಿಟ್ಟು ನಿಮ್ಮ ಆದೇಶವನ್ನು ಬರೆದು ತಿಳಿಸಿ !" ಹೊರಡಲು ಎದ್ದು ನಿಂತೆ.

"ಕುಳಿತುಕೊಳ್ರೀ" ಎಂದ ಹೊಟ್ಟೆ ಡೀ ಎಮ್.

"ಇಂತಹ ಮೇನೇಜರ್‌ಗಳಿಂದ, ಬ್ಯಾಂಕ್ ಹಾಳಾಗುವುದಲ್ಲದೆ, ನಾವೂ ಹಾಳಾಗಿಬಿಡುತ್ತೇವೆ. ನಮ್ಮ ವ್ಯಾಪಾರ ನಾಶವಾಗಿ, ನಿರ್ನಾಮವಾಗಿ ಬಿಡುತ್ತದೆ."

ಶಾಮಲಾಲ್ ಒದರಲಿಕ್ಕೆ ಶುರುಮಾಡಿದ.

"ನಮ್ಮ ಮೇಲಾಧಿಕಾರಿಗಳಿಗೆ ನಿಮ್ಮ ಮೇಲೆ ಅಸಮಾಧಾನವಾಗಿದೆ. ಅವರ ಮಾತು ಕೇಳಬೇಕಾಗಿತ್ತು ನೀವು. ಕೆಲವು ವೇಳೆ, ನಮಗೆ ಇಷ್ಟವಿಲ್ಲದಿದ್ದರೂ, ಅವರು ಹೇಳಿದ ಮಾತು ಕೇಳಬೇಕಾಗುತ್ತದೆ"

ಕೋಪ ಆರಿ ತಣ್ಣಗಾಗಿದ್ದ ಹಾಗೆ ತೋರಿತು. ನನ್ನ ಅನಿಸಿಕೆಯನ್ನು ಹೇಳಿದ್ದಾಗಿತ್ತು. ಪುನಃ ದೃಢೀಕರಿಸಲು ಯತ್ನಿಸಲಿಲ್ಲ.

"ಬುದ್ಧಿ ಶಕ್ತಿ ಜಾಸ್ತಿ ತೋರಿಸಲಿಕ್ಕೆ ಹೋದರೆ, ಎಲ್ಲರಿಗೂ ತೊಂದರೆ. ಹೇಳಿದ ಕೆಲಸ ಮಾಡಿದರೆ, ಎಲ್ಲರಿಗೂ ಸುಖ. ಈಗ ನೋಡಿ, ನೀವು ಮಾಡಿದ ಕೆಲಸದಿಂದ, ಮೇಲಾಧಿಕಾರಿಗಳಿಗೆ ಅಸಮಾಧಾನ, ಕಸ್ಟಮರ್‌ಗೆ ನಷ್ಟ, ನಿಮಗೆ ತೊಂದರೆ. ಇದರಿಂದ ಯಾರಿಗೆ ಉಪಯೋಗ ?"

ಉಪದೇಶ ನೀಡುತ್ತಾ ಇದ್ದಾನೆಯೋ, ಭಯ ಪಡಿಸುತ್ತಾ ಇದ್ದಾನೆಯೋ ಆತಂಕ ಹುಟ್ಟಿಸುತ್ತಾ ಇದ್ದಾನೆಯೋ ಹೇಳಿಬರುವಂತಿರಲಿಲ್ಲ.

"ಬರುತ್ತೇನೆ ಸಾರ್! ನಮಸ್ಕಾರ" ಎಂದು ಹೇಳಿ, ಅವನ ಉತ್ತರಕ್ಕಾಗಿ ಕಾಯದೆ ಹೊರಗೆ ಬಂದೆ. ಆಟೋ ಹಿಡಿದು, ಬ್ಯಾಂಕ್‌ಗೆ ಬಂದು ನನ್ನ ಕೋಣೆಗೆ ಬಂದರೆ, ಕುಮಾರಿ ಕಮಲ ಕಾದು ಕುಳಿತಿದ್ದಳು.

ಇವಳು ಯಾವ ತರಹದ ಆತಂಕ ತಂದಿದ್ದಾಳೆ ಎಂದು ತಲೆ ತುರಿಸುತ್ತಾ ಕುರ್ಚಿಯಲ್ಲಿ ಕುಳಿತೆ.

"ನಿಮಗೆ ಥ್ಯಾಂಕ್ಸ್ ಹೇಳೋಣ ಅಂತ ಬಂದೆ ಸಾರ್ "

ನಗುತ್ತಾ ಹೇಳಿದಳು ಕುಮಾರಿ.

ಥ್ಯಾಂಕ್ಸ್ ನನಗೆ ? ಯಾತಕ್ಕೆ ? ಆಚ್ಚರಿಯಾಗಿತ್ತು ನನಗೆ.

"ನನಗೆ ವರ್ಗ ಆಯಿತು."

"ಎಲ್ಲಿಗೆ ?"

"ಕನ್ನಾಟ್ ಸರ್ಕ್‌ಸ್ ಬ್ರಾಂಚ್‌ಗೆ"

ಪುಕ್ಕಟೆ ಥ್ಯಾಂಕ್ಸ್ ಸಿಕ್ಕಿದರೆ ಬಿಸಾಡುವುದು ಸಾಧುವಲ್ಲ ಎಂದು ಮನಸ್ಸಿನಲ್ಲೇ ಖುಷಿಪಟ್ಟೆ.

"ನನ್ನಿಂದ ನಿಮಗೆ ವರ್ಗ ಸಿಗಲಿಲ್ಲವಲ್ಲ."

"ನಿಮ್ಮ ಸ್ನೇಹಿತರು ಸ್ಟಾಫ್ ಸೆಕ್ಷನ್‌ಲ್ಲಿದ್ದರಲ್ಲ ಸಾರ್ - ರಾವ್ ಅಂತ. ಅವರು ನಿಮ್ಮ ಹೆಸರು ಕೇಳಿದೊಡನೆ, 'ಆಗಲಿ' ಎಂದು ಸಮ್ಮತಿಸಿದರು. ವರ್ಗ ಮಾಡಿಬಿಟ್ಟರು."

ನನ್ನ ಹೆಸರು ಹೇಳಿ ವರ್ಗ ಗಿಟ್ಟಿಸಬೇಕಾದರೆ, ನನ್ನ ಹೆಸರಿಗೆ ಅಷ್ಟು ಬೆಲೆ ಇದೆಯೇ ? ಅಥವಾ ಈ ರಾವ್, ತನ್ನ ಹೃದಯದಲ್ಲಿ ಹೂಗಿಡ ಬೆಳೆಸಲಿಕ್ಕೆ ಹೊರಟಿದ್ದಾನೆಯೆ ? ಕುಮಾರಿ ಕಮಲಳಂತ ಹಕ್ಕಿ ಹಾರಿ ಬಂದು ಗಿಡದ ಮೇಲೆ ಕೂರಲು ಯತ್ನಿಸುತ್ತಿದೆಯೆ? ಎಲ್ಲರ ಹೃದಯದಲ್ಲೂ ಹೂಗಿಡ ಬೆಳೆಯುವಂತಾದರೆ! ಇದು ಕನಸೇ ಸರಿ ! ಹೊಟ್ಟೆ ಡೀ.ಎಮ್, ವಿಷಪ್ಪ ಡಿ.ಎಮ್, ನೀಚ ಸಾಗೂ, ಇವರ ಹೃದಯಗಳಲ್ಲಿ ಹೂಗಿಡ ಬೆಳೆಯುವುದುಂಟೆ ? ಪಾಪಸ್‌ಕಳ್ಳಿ, ಮುಳ್ಳು ಗಿಡಗಳ

ಸಮೃದ್ಧ ಬೆಳೆ ಬೆಳೆದಿರುವಾಗ, ಹಾಡುವ ಪಕ್ಷಿ, ಸಿಹಿಯನ್ನರಸಿ ಬರುವ ದುಂಬಿಗಳು ಕಾಣುವುದುಂಟೆ ?

"ಕಪೂರ್‌ನ ಸುದ್ದಿ ಗೊತ್ತಾಯಿತೆ ಸಾರ್?"

"ಇಲ್ಲ ! ನಿಮಗೇನಾದರೂ ತಿಳಿಯಿತೆ?"

ಅವಳು ಕೇಳಿದ ರೀತಿ, ಅವಳಿಗೆ ಅವನ ಬಗ್ಗೆ ಸುದ್ದಿ ತಿಳಿದಿರಬಹುದೆಂದು ತಿಳಿದೆ.

"ತಿಳಿಯಲಿಲ್ಲ"

ಅವಳಿಗೆ ಪುನಃ ಕಪೂರ್‌ನಲ್ಲಿ ಆಸಕ್ತಿ ಉಂಟಾಗಿದ್ದು ವರ್ಗ ದೊರೆತನಂತರವೇ? ಇಡೀ ಪುರುಷವರ್ಗವನ್ನು ದ್ವೇಷಿಸಲು ಶುರುಮಾಡಿದ್ದ ಈಕೆ, ತನಗೆ ವರ್ಗ ಸಿಕ್ಕ ನಂತರ ದ್ವೇಷ ಕಡಿಮೆಯಾಯಿತೆ? ಮನುಷ್ಯನ ಮನಸ್ಸು ಎಷ್ಟು ಅಸ್ಥಿರ! ಅದರಲ್ಲೂ ಹೆಣ್ಣು ಮಕ್ಕಳು, ಮನಸ್ಸು ಎಷ್ಟು ಬೇಗ ಬದಲಾಯಿಸುತ್ತಾರೆ ಎನ್ನಿಸಿತು. ಪ್ರಾಯಶಃ ಅವರ ಮನಸ್ಸು ಮೃದುವಾದ್ದರಿಂದ ಬೇಕಾದ ಹಾಗೆ ಬದಲಾಯಿಸಿಕೊಳ್ಳ ಬಹುದೇನೋ !

"ಪುರುಷರ ಮೇಲೆ ದ್ವೇಷ ಕಡಿಮೆಯಾದ ಹಾಗೆ ಕಾಣುತ್ತಿದೆಯಲ್ಲ ?"

ಅವಳನ್ನು ಕೆಣಕುವ ಸಾಹಸ ಮಾಡಿದೆ.

"ದ್ವೇಷನೂ ಇಲ್ಲ, ಪ್ರೀತಿನೂ ಇಲ್ಲ. ಈಗ ನನಗೆ ಇದರ ಬಗ್ಗೆ ಆಸಕ್ತಿಯೇ ಇಲ್ಲ." ಉದಾಸೀನಳಾಗಿ ನುಡಿದಳು ತಮಿಳು ಕುಮಾರಿ.

"ಪ್ರೀತಿ ಇಲ್ಲ, ದ್ವೇಷನೂ ಇಲ್ಲದಿದ್ದರೆ, ಮದುವೆಯಾಗಬಹುದಲ್ಲವೇ ?"

"ಯಾರನ್ನು?"

ಕಣ್ಣುಗಳನ್ನು ದೊಡ್ಡದಾಗಿ ಅರಳಿಸಿ ನುಡಿದಳು.

"ನಿಮಗೆ ಇಷ್ಟ ಬಂದವರನ್ನು !"

"ನನಗೆ ಯಾರೂ ಇಷ್ಟವೇ ಇಲ್ಲವೇ ?"

ಗಹಗಹಿಸಿ ನಕ್ಕಳು ಆಕೆ.

ಹೌದು! ಮದುವೆಯಾದರೂ ಯಾಕೆ ಆಗಬೇಕು ಈಕೆ ? ತನಗೆ, ತನ್ನ ಸಂಸಾರಕ್ಕೆ, ತನ್ನ ಬಂಧು ಬಳಗಕ್ಕೆ, ತನ್ನ ರಾಷ್ಟ್ರಕ್ಕೆ ಲಾಭವಿಲ್ಲದಿದ್ದಲ್ಲಿ, ಮದುವೆಯ ಬಂಧನದಲ್ಲಿ ಸಿಕ್ಕಿಹಾಕಿಕೊಳ್ಳಬೇಕಾದರೂ ಏಕೆ ?

ಮದುವೆಯಾದರೂ ಏಕೆ ಆಗುತ್ತಾರೆ ಜನರು ?

ದೈಹಿಕ, ಮಾನಸಿಕ, ಧಾರ್ಮಿಕ, ಅಥವಾ ಸಾಮಾಜಿಕ ಒತ್ತಡಗಳ ಕಾರಣದಿಂದ ಮದುವೆಯಾಗುತ್ತಾರೆಯೇ? ಅಥವಾ ಸಂತಾನ ವೃದ್ಧಿಯ ಕಾರಣವೇ? ಈ ಕಾರ್ಯ

ಕ್ರಮದಲ್ಲಿ ಜನರನ್ನಾಳುವ ಸರಕಾರ, ಅಥವಾ ಸಮಾಜ ಅಥವಾ ಜನಾಂಗಗಳ ಪಾತ್ರವಾದರೂ ಏನು ?

ಸರಕಾರ, ಸಂತಾನ ವೃದ್ಧಿಯಲ್ಲಿ ಕೈ ಹಾಕಿದರೆ, ಪರಿಣಾಮವೇನಾಗುಬಹುದು? ಒಳ್ಳೇ ತಳಿಯ, ಬುದ್ಧಿವಂತ, ಬಲವಾನ್ ಸಂತಾನದ ಸೃಷ್ಠಿಗೆ ನಿಯಂತ್ರಣ ತರಬಹುದೇ? ಈಗಾಗಲೇ ವಯಸ್ಸಿನ ನಿಯಂತ್ರಣ ತಂದ ಸರಕಾರ, ಆರೋಗ್ಯವಂತ, ಬುದ್ಧಿವಂತ, ಕುಶಲಕಲೆಗಳನ್ನು ಹೊಂದಿದ್ದ ಗಂಡು - ಹೆಣ್ಣುಗಳು ಒಂದಾಗುವಿಕೆಯನ್ನು ಜಾರಿಗೆ ತರಬಹುದಲ್ಲವೇ ? ಈ ನಿಯಂತ್ರಣದಿಂದ, ಮುಂದಿನ ಜನಾಂಗ ಬಲಿಷ್ಠ, ಬುದ್ಧಿವಂತ ಹಾಗೂ ಸತ್‌ಪುರುಷ ಪ್ರಜೆಗಳಾಗಿ ದೇಶದಲ್ಲಿ ಶಾಂತಿ, ಸಂತೃಪ್ತಿ ಉಂಟಾಗಬಹುದಲ್ಲವೆ?

"ನೀವು ಸಕಲಗುಣ ಸಂಪನ್ನೆ. ದೈಹಿಕ ಮತ್ತು ಭೌದ್ಧಿಕವಾಗಿಯಾ ನೀವು ಚೆನ್ನಾಗಿದ್ದೀರಾ. ತಪ್ಪು ತಿಳಿದುಕೊಳ್ಳದಿದ್ದರೆ, ಒಳ್ಳೆಯ ಸಂತಾನ ಪಡೆಯುವ ದೃಷ್ಟಿಯಿಂದಲಾದರೂ ನೀವು ಮದುವೆಯಾಗಬಹುದಲ್ಲವೇ ?

ನಿಧಾನವಾಗಿ, ಆದರೆ ಅಷ್ಟೇ ದೃಢವಾಗಿ ತನ್ನ ತಲೆಯನ್ನು ಕೆಳಗೆ ಹಾಕಿದಳು ತಮಿಳು ಕುಮಾರಿ.

ಅವಳ ಕಪ್ಪು ಕೂದಲಿಂದ ತುಂಬಿದ ನೆತ್ತಿಯನ್ನು ನೋಡುತ್ತಾ ಕುಳಿತೆ ನಾನು. ಅವಳ ಮನಸ್ಸಿನಲ್ಲಿನ ಹೊಯ್ದಾಟ ಹೇಗೆ ಅರಿವಾಗುವುದು ? ನನ್ನ ಉದ್ಧಟತನದ ಪ್ರಶ್ನೆ ಅವಳನ್ನು ಕೆರಳಿಸಿದೆಯೇ? ಕೆರಳಿ, ಕಾಳಿಯ ಅವತಾರ ತಾಳಿ ನನ್ನ ಮೇಲೆ ಹರಿಹಾಯುವಳೇ ? ನನ್ನ ಮನಸ್ಸು ಆತಂಕದ ವಿಷಗಾಳಿಯಲ್ಲಿ ಸಿಕ್ಕಿ ಉಸಿರು ಕಟ್ಟಿ ಹಾಕಿಕೊಂಡಿತು.

"ನಾನು ಹಾಯಾಗಿರುವಾಗ, ಮತ್ತೆ ನನ್ನನ್ನು ಏಕೆ ವಿವಾಹದ ಪ್ರಶ್ನೆ ಎತ್ತಿ ನನ್ನ ಮನಸ್ಸಿಗೆ ಆತಂಕ ಒಡ್ಡುತ್ತೀರಾ?"

ಮುಖವೆತ್ತಿ ತನ್ನ ದೃಷ್ಠಿಯನ್ನು ನನ್ನೆಡೆಗೆ ಹಾಯಿಸಿ ನುಡಿದಳು ಕುಮಾರಿ.

ವಿವಾಹದ ಆತಂಕಕ್ಕೆ ದೂಡುವುದೇ?

ಎಂತಹ ಪ್ರಶ್ನೆ?

ವಿವಾಹ ಒಂದು ಆತಂಕವೇ?

"ಕಪೂರ್‌ನನ್ನು ಪ್ರೀತಿಸಿದ್ದು ನಿಜ. ಆದರೆ ವಿವಾಹ ಬಂಧನಕ್ಕೆ ಸಿಕ್ಕಿ ಅದರ ಜಂಜಾಟಕ್ಕೆ ಸಿಕ್ಕಿ ನರಳುವುದು ಬೇಕಿರಲಿಲ್ಲ."

ಪ್ರೀತಿಸಿದ ಮೇಲೆ ವಿವಾಹವೇಕಾಗಬಾರದು ಇವಳು? ಒಳ್ಳೆಯ, ಸುಸಂಸ್ಕೃತ,

ಬುದ್ಧಿವಂತ ಮಕ್ಕಳನ್ನು ಹಡೆದು, ಸಮಾಜಕ್ಕೆ, ದೇಶಕ್ಕೆ ಸುಶಿಕ್ಷಿತ ನಾಗರೀಕರನ್ನು ನೀಡಿ, ಅವುಗಳ ಉದ್ಧಾರಕ್ಕೆ ಕಾರಣಳಾಗಬಹುದಲ್ಲವೇ?

"ಸ್ವಲ್ಪ ಸ್ವಾರ್ಥತನ, ತ್ಯಾಗಮಾಡಿ ಅಲ್ಪ ಸ್ವಾತಂತ್ರ್ಯ ಕಳೆದುಕೊಂಡು, ವಿವಾಹ ಬಂಧನಕ್ಕೆ ಸಿಲುಕಿ, ಒಳ್ಳೆಯ ಮಕ್ಕಳನ್ನು ಹಡೆಯುವಂತಾದರೆ, ಎಲ್ಲರಿಗೂ ಒಳ್ಳೆಯದಲ್ಲವೇ?"

"ನನ್ನ ವ್ಯಕ್ತಿ ಸ್ವಾತಂತ್ರ್ಯ ಕಳೆದುಕೊಳ್ಳಬೇಕೆಂಬ ಆಸೆ ನಿಮಗೆ ಏಕೆ ಬಂತು?"

"ಆಗಲೇ ಹೇಳಿದೆನಲ್ಲಾ! ಒಳ್ಳೆಯ ಕಾರ್ಯ ಮಾಡಬೇಕಾದರೆ, ಸ್ವಾತಂತ್ರ್ಯ ಕಳೆದುಕೊಳ್ಳಬೇಕಾಗುತ್ತದೆ. ಸ್ವಲ್ಪ ಬೆಲೆ ತೆರಲೇಬೇಕಾಗುತ್ತದೆ ಅಲ್ಲವೇ?"

"ನೀವು ಹೇಳುವುದು ಅರ್ಥವಾಗುತ್ತಾ ಇಲ್ಲ. ನಾನು ಒಬ್ಬಳು ಮದುವೆಯಾಗದಿದ್ದರೆ, ದೇಶದಲ್ಲಿ ಒಳ್ಳೇ ಬುದ್ಧಿವಂತ ಮಕ್ಕಳು ಹುಟ್ಟುವುದೇ ಇಲ್ಲವೇ? ವಿಚಿತ್ರವಾಗಿದೆ ನಿಮ್ಮ ವಾದ!"

ಅವಳ ಮುಖದಲ್ಲಿ ನಸುನಗೆ ಕಾಣಿಸಿಕೊಂಡಿತು.

"ಒಳ್ಳೆಯ ಮನೆತನ, ಸುಸಂಸ್ಕೃತ ನಡೆತೆ, ಸುಶಿಕ್ಷಿತರನ್ನೇ ಆರಿಸುವುದಿಲ್ಲವೇ ತಂದೆತಾಯಿಯರು ತಮ್ಮ ಮಕ್ಕಳ ವಿವಾಹ ಕಾರ್ಯದಲ್ಲಿ?"

ಕುಮಾರಿ ಕಮಲಳ ಪ್ರಶ್ನೆ ವಿಚಾರ ಮಾಡುವಂತಾಯಿತು.

ನಮ್ಮ ಸಂಸ್ಕೃತಿಯಲ್ಲಿ, ಸಂಪ್ರದಾಯಗಳಲ್ಲಿ, ಪರಿಪಾಠಗಳಲ್ಲಿ, ಮಕ್ಕಳ ಮದುವೆ ವಿಷಯದಲ್ಲಿ, ತಂದೆತಾಯಿಯರ ಪಾತ್ರ ಬಹಳ ದೊಡ್ಡದು ಮತ್ತು ಗಂಭೀರವಾದದ್ದೇ! ಇದರಲ್ಲಿ ಅತಿಶಯೋಕ್ತಿಯೇನೂ ಇಲ್ಲ. ಮನೆತನ, ನಡತೆ, ಬುದ್ಧಿವಂತ, ಸುಶಿಕ್ಷತೆ ಎಲ್ಲವನ್ನೂ ನೋಡಿ, ಕೇಳಿ, ಅಳೆದು, ಸುರಿದು, ತೂಕ ಮಾಡಿ, ಲಗ್ನ ಮಾಡುವ ಪರಿಪಾಠ ಇಟ್ಟುಕೊಂಡರೂ, ಹುಟ್ಟುವ ಮಕ್ಕಳು ವಿಲಕ್ಷಣ, ಅವಿವೇಕಿ, ಪುಕ್ಕಲು. ಮಕ್ಕಳಾಗಿ ಹುಟ್ಟುತ್ತಾರೆ? ಅಥವಾ ನಿಜವಾಗಿಯೂ ವೈಜ್ಞಾನಿಕವಾಗಿ ವಿವಾಹ ಸಂಬಂಧ ಏರ್ಪಾಡಾಗುತ್ತಿದೆಯೆ? ರಕ್ತ ಪರೀಕ್ಷೆ ಮಾಡಿ, ಮುಂದೆ ಹುಟ್ಟುವ ಮಕ್ಕಳು ಯಾವ ರೀತಿಯ ದೋಷವಿಲ್ಲದ, ರೋಗಬಾಧೆಯಿಲ್ಲದ ಅಪೂರ್ವ ಮಕ್ಕಳಾಗಿ, ಉತ್ತಮ ನಾಗರೀಕರಾಗುವ ರೀತಿಯಲ್ಲಿ ಹುಟ್ಟುವ ಸಂಭವವನ್ನು ಉಂಟುಮಾಡುವ ಸಾಧ್ಯತೆ ಇಲ್ಲವೆ? ಜಾತಕ, ನಕ್ಷತ್ರ, ರಾಶಿ, ಭವಿಷ್ಯ, ರೂಪ, ಕುಲ, ಗೋತ್ರ, ಓದು, ವಯಸ್ಸು, ಹಣ, ಉದ್ಯೋಗ, ಇವೆಲ್ಲಾ ನೋಡುವ ಬದಲು, ರಕ್ತ ಪರೀಕ್ಷೆ ಉತ್ತಮ ಮಾಧ್ಯಮವಾಗಬಹುದಲ್ಲವೇ? ಆದರೆ, ಪ್ರೇಮವಿವಾಹದಲ್ಲಿ ಈ ಉಪಾಯ ಸಾಧುವಾಗುತ್ತದೆಯೆ?

ಕುಮಾರಿ ಕಮಲಳ ಉಪಾಯ, ಈ ಸಂದರ್ಭದಲ್ಲಿ ಉಪಯೋಗಕ್ಕೆ ಬರಬಹು

ದಲ್ಲವೇ? ಪ್ರೀತಿಸಿದರೂ ವಿವಾಹ ಸಂಬಂಧ ಬೇಡವೆನಿಸಿದರೆ, ರಕ್ತ ಪರೀಕ್ಷೆ ಉಚಿತವೆನಿಸುವುದಿಲ್ಲ! ಒಂದು ವೇಳೆ ವಿವಾಹ ಸಂಬಂಧ ಬೇಕೆನಿಸಿದರೆ, ರಕ್ತ ಪರೀಕ್ಷೆ ಮಾಡಿಕೊಂಡು, ಅದರಲ್ಲಿ ದೋಷ, ಕಂಡುಬಂದರೆ, ಮಕ್ಕಳಾಗದ ಹಾಗೆ ನೋಡಿಕೊಂಡರೆ ಸೂಕ್ತವಲ್ಲವೇ?

ಆದರೆ ಇಷ್ಟೆಲ್ಲಾ ಕಾರ್ಯ ಮಾಡಿ ಮುಗಿಸುವ ಸಂಯಮ, ಸ್ಮರಣೆ ಮನುಷ್ಯರಿಗೆ ಇರುತ್ತದೆಯೇ? ಮನುಷ್ಯನ ಕಾರ್ಯಪ್ರವೃತ್ತಿಗೆ ಕಡಿವಾಣವಿದೆಯೇ? ಬಯಕೆಗಳ ಹೊರೆಯನ್ನು ಹುಟ್ಟುತ್ತಲೆ ಹೊತ್ತುಕೊಂಡಿರುವ ಮನುಷ್ಯ ಈ ಹೊರೆಯನ್ನು ಇಳಿಸಿ ಹಾಯಾಗಿ ಉಸಿರಾಡಲು ಸಾಧಿಸುತ್ತಾನೆಯೇ?

"ನಮಸ್ಕಾರ."

ಬಾಗಿಲು ತೆರೆದು ಇಬ್ಬರು ಹೆಂಗಸರು ಒಳಗೆ ಕಾಲಿರಿಸಿ ಒಟ್ಟಿಗೆ ನಮಸ್ಕರಿಸಿದರು. ಇಬ್ಬರಲ್ಲಿ, ಒಬ್ಬಳು ಮಧ್ಯವಯಸ್ಕಳಾಗಿ, ತಲೆ ಕೂದಲು ಅರೆ ನೆರೆತು, ಜಡೆ ಹಾಕದೆ, ಕೂದಲನ್ನು ಹೆಗಲಮೇಲೆ ಹರಡಿಕೊಂಡಿದ್ದಳು. ಎಣ್ಣೆಗೆಂಪು ಬಣ್ಣ, ಉದ್ದ ಕೋಲು ಮುಖ, ಕೊಂಚ ಉಬ್ಬುಹಲ್ಲು, ಕಣ್ಣಿಗೆ ಕನ್ನಡಕ, ಅವಳನ್ನು ರೂಪವತಿಯರ ಸಾಲಿನಲ್ಲಿ ನಿಲ್ಲಿಸುವಂತಿರಲಿಲ್ಲ ಮತ್ತು ಅವಳ ಎಳೇ ವಯಸ್ಸಿನಲ್ಲೂ ಹೇಳಿಕೊಳ್ಳುವಂತಹ ರೂಪ ಹೊಂದಿರುವ ಲಕ್ಷಣವೂ ಕಾಣಬರುವಂತಿರಲಿಲ್ಲ. ಇನ್ನೊಬ್ಬಳು, ಎತ್ತರದ ನಿಲುವನ್ನು ಹೊತ್ತಿದ್ದರೂ, ಬೆಳ್ಳಗೆ ಇದ್ದರೂ, ಸುಮಾರು ಮೂವತ್ತರ ಪ್ರಾಯದವಳ ಹಾಗೆ ತೋರುತ್ತಿದ್ದರೂ, ರೂಪವತಿಯಲ್ಲದಿದ್ದರೂ, ಲಕ್ಷಣವಾಗಿ ಕಾಣುತ್ತಿದ್ದಳು.

"ಕುಳಿತುಕೊಳ್ಳಿರಿ" ಉಪಚರಿಸಿದೆ.

ಇಬ್ಬರೂ ಕುಳಿತುಕೊಂಡರು.

"ಏನು ವಿಶೇಷ? ಏನು ಬೇಕು?"

"ನಿಮ್ಮ ಬ್ಯಾಂಕ್‌ನಲ್ಲಿ ನಮ್ಮ ಯಜಮಾನರು ಸ್ವಲ್ಪ ಹಣ ಇಟ್ಟಿದ್ದರು. ಅದನ್ನು ನಮಗೆ ಕೊಡಿಸುವ ಹಾಗೆ ತಾವು ಏರ್ಪಾಡು ಮಾಡಬೇಕು."

"ನಮ್ಮ ಯಜಮಾನರು?"

"ಹೌದು ನಮ್ಮಿಬ್ಬರನ್ನು ಮದುವೆಯಾಗಿದ್ದರು ನಮ್ಮ ಯಜಮಾನರು!"

"ಅವರೆಲ್ಲಿ ಈಗ?"

ಇಬ್ಬರೂ ಒಬ್ಬರ ಮುಖ ಒಬ್ಬರು ನೋಡಿಕೊಂಡರು. ಬೆಳ್ಳಗಿದ್ದವಳು ಮೆಲ್ಲನೆ ನುಡಿದಳು,

"ಅವರಿಲ್ಲ, ಹೋಗಿಬಿಟ್ಟರು. ಆಕ್ಸಿಡೆಂಟ್ ಆಗಿ ಸತ್ತುಹೋದರು."

"ಅಯ್ಯೋ ಪಾಪ!" ಕನಿಕರಿಸಿದೆ.

ಸ್ವಲ್ಪ ಹೊತ್ತು ಮೌನ ಆವರಿಸಿತು.

"ಇವರಿಗೆ ಒಬ್ಬ ಮಗನಿದ್ದಾನೆ. ನನಗೆ ಮಕ್ಕಳಿಲ್ಲ. ನಾವು ಒಂದೇ ಕಟ್ಟಡದ ಎರಡು ಮನೆಗಳಲ್ಲಿ ಪ್ರತ್ಯೇಕ ವಾಸವಾಗಿದ್ದೇವೆ. ಇಬ್ಬರಿಗೂ ಕೆಲಸವಿದೆ. ಈ ಪಾಸ್ ಬುಕ್‌ನಲ್ಲಿರುವ ಹಣವನ್ನು ನಮಗೆ ಕೊಡಿಸಿ."

ಬೆಳ್ಳಗಿದ್ದವಳು ಹೇಳಿದಳು.

"ಇವಳಿಗೆ ಮಕ್ಕಳಿಲ್ಲ ಮರಿ ಇಲ್ಲ. ಯಜಮಾನರ ಪೆನ್‌ಷನ್ ಕೂಡ ಇವಳಿಗೆ ಸಿಗುವ ಹಾಗೆ ಮಾಡಿದ್ದಾರೆ. ಈ ಹಣ ಕೂಡ ಇವಳಿಗೆ ಕೊಡಬೇಕೇನು?"

ಕಪ್ಪಗಿನವಳು, ದಪ್ಪ ಗಂಟಲಿನಲ್ಲಿ ಉಸಿರಿದಳು.

"ಇವರಿಗೆ ಸರಕಾರೀ ಕೆಲಸವಿದೆ. ಪ್ರೈಮರೀ ಶಾಲೆಯಲ್ಲಿ ಟೀಚರ್ ಆಗಿದ್ದಾರೆ. ನನಗೋ ಒಳ್ಳೇ ಕೆಲಸವಿಲ್ಲ... ಯಜಮಾನರ ಪೆನ್‌ಷನ್ ನನಗೆ ಸಿಗುವುದಾದರೆ, ಇವರಿಗೆ ಏನು ನಷ್ಟ!"

"ಅವರ ಪೆನ್‌ಷನ್ ಹಣಕ್ಕೋಸ್ಕರವಲ್ಲವೇ ನೀನು ಲಗ್ನವಾಗಿದ್ದು?"

ಕೆಣಕಿದಳು ಆಕೆ. ನಾನು ತಮಿಳು ಕುಮಾರಿಯ ಮುಖವನ್ನು ನೋಡಿದೆ. ಅವಳು ನಸುನಗುತ್ತಿದ್ದಳು.

'ಹಣ ಕಂಡರೆ ಹೆಣ ಕಣ್ಣು ಬಿಡುವಾಗ' ಈ ಹೆಣ್ಣು, ಗಂಡನ ಪೆನ್‌ಷನ್‌ಗೆ ಯಾಕೆ ಕಣ್ಣು ಬಿಡಬಾರದು? ಈ ಹಣವನ್ನಾದರೂ ಯಾಕೆ ಸೃಷ್ಟಿಸಿದರು? ಈ ಪ್ರಶ್ನೆಗೆ, ಒಬ್ಬ ಘಾಟಿ ಉತ್ತರಿಸಿದ್ದನಂತೆ! "ಹಣದ ಸೃಷ್ಟಿ ಆದದ್ದು, ನಾವು ತೆಗೆದುಕೊಂಡ ಸಾಲದ ಮೊತ್ತ ಎಷ್ಟು ಎಂದು ಅರಿತುಕೊಳ್ಳುವುದಕ್ಕೋಸ್ಕರ!"

"ಏನು ಕೆಲಸವಿತ್ತು ನಿಮ್ಮ ಯಜಮಾನರಿಗೆ?"

ತಮಿಳುಕುಮಾರಿ ಮಧ್ಯೆ ಬಾಯಿ ಹಾಕಿ ಪ್ರಶ್ನೆ ಕೇಳಿದಳು.

"ಅವರು ಕಾಲೇಜ್ ಲೆಕ್ಚರರ್ ಆಗಿದ್ದರು. ಪೆನ್‌ಷನ್ ಆಗಿತ್ತು."

ಬೆಳ್ಳಗಿನವಳು ಉತ್ತರಿಸಿದಳು.

"ಮೊದಲನೇ ಹೆಂಡತಿ ಬದುಕಿದ್ದಾಗ, ಮತ್ತೊಬ್ಬಳನ್ನು ಮದುವೆಯಾಗಿ ಅವಳಿಗೆ ತನ್ನ ಪೆನ್‌ಷನ್ ಹಣವನ್ನು ನೀಡುವ ಹಕ್ಕು ಇದೆಯೆ? ಇದರ ಬಗ್ಗೆ ಆಲೋಚಿಸಿ, ತೀರ್ಮಾನಕ್ಕೆ ಬರಬೇಕಾಗಿದೆ. ಈಗ ನೀವು ಒಂದು ಕೆಲಸ ಮಾಡಿ. ನಾನು ಒಂದು ಕ್ಲೈಮ್ ಅಪ್ಲಿಕೇಶನ್ ಕೊಡುತ್ತೇನೆ. ಅದನ್ನು ಭರ್ತಿ ಮಾಡಿ ಕೊಡಿ. ಹೆಡ್ ಆಫೀಸ್‌ಗೆ ಕಳುಹಿಸಿ ಅವರ ತೀರ್ಮಾನದಂತೆ ನಾನು ನಡೆದು ಕೊಳ್ಳುತ್ತೇನೆ."

ನನ್ನ ತೀರ್ಮಾನ ಕೇಳಿ ಇಬ್ಬರೂ, ಕುಳಿತಲ್ಲಿಂದ ಎದ್ದು 'ನಮಸ್ಕಾರ' ಹೇಳಿ ಹೊರಕ್ಕೆ ನಡೆದರು.

ಬಿಳಿಯವಳು ಬಾಗಿಲ ಬಳಿ ನಿಂತು ನಿರ್ಗಮಿಸುವ ಮೊದಲು, ನನ್ನ ಕಡೆ ನೋಡಿ, ನುಡಿದಳು,

"ನನಗೆ ಈ ಪಾಸ್ ಬುಕ್‌ನಲ್ಲಿರುವ ಹಣ ಬೇಡ ಸಾಬ್! ಇದನ್ನು ಇವಳಿಗೆ ನೀಡಿರಿ. ನಾನು ಬೇಕಾದರೆ ನನ್ನ ಸಹಿ ಹಾಕುತ್ತೇನೆ."

"ಒಂದು ಪ್ರಶ್ನೆ ನಿಮ್ಮನ್ನು ಕೇಳಲೇ?"

"ಕೇಳಿ?" ಅಂದಳು ಅವಳು.

"ನೀವು ಈತನನ್ನು ಮದುವೆಯಾದದ್ದು ಯಾವಾಗ? ಯಾಕೆ?"

ಒಂದು ಕ್ಷಣ ನನ್ನ ಮುಖವನ್ನು ದುರುಗುಟ್ಟಿ ನೋಡಿ, ನುಡಿದಳು ಆಕೆ:

"ಎರಡು ವರ್ಷಗಳ ಹಿಂದೆ. ಅವರಿಗೆ ಪೆನಶನ್ ಆಗಿತ್ತು. ಮದುವೆ ಯಾಕೆ ಆದೆ ಎಂದರೆ - ನನಗೆ ಮದುವೆ ಆಗಿರಲಿಲ್ಲ ಆಗುವ ಲಕ್ಷಣವೂ ಇರಲಿಲ್ಲ ! ನಮ್ಮ ತಂದೆ ಈ ಕೊರಗಿನಿಂದ ಹಾಸಿಗೆ ಹಿಡಿದಿದ್ದರು. ಕೊನೆಗೆ ಇವರನ್ನು ಬಲವಂತ ದಿಂದ ಒಪ್ಪಿಸಿ ನನ್ನನ್ನು ಇವರಿಗೆ ಲಗ್ನ ಮಾಡಿಕೊಟ್ಟು, ಬಿಟ್ಟರು."

"ಈ ಮದುವೆಗೆ ಮೊದಲನೇ ಹೆಂಡತಿಯ ಒಪ್ಪಿಗೆ ಪಡೆದರೆ ?"

ಉತ್ತರ ಹೇಳಲು ಸ್ವಲ್ಪ ತಡವರಿಸಿದಳು ಆಕೆ. ಮತ್ತೆ ನಿಧಾನವಾಗಿ ಉತ್ತರಿಸಿ ದಳು,

"ಈಕೆಯನ್ನು ಅವರು ಯಾವಾಗಲೋ ಬಿಟ್ಟು, ಬಿಟ್ಟಿದ್ದರು !"

ನಾನು ದಂಗಾಗಿ ಕುಳಿತೆ. ತಕ್ಷಣ ಚೇತರಿಸಿಕೊಂಡು ಕೇಳಿದೆ.

"ಅವರಿಗೆ ಒಬ್ಬ ಮಗ ಇದ್ದಾನಲ್ಲ !"

"ಅದೇ ಸಮಸ್ಯೆ ! ಮಗುವಿನದೇ ಸಮಸ್ಯೆ ! ಈ ಸಮಸ್ಯೆಯಿಂದಲೇ ಅವರು ಅವಳನ್ನು ಬಿಟ್ಟಿದ್ದು! ಎಂದು ಹೇಳಿ ಅವಳು ಸರ್‍ರನೆ ಬಾಗಿಲು ಎಳೆದುಕೊಂಡು ಹೊರಹೋದಳು.

"ಸಾರ್! ಮತ್ತೆ ಯಾವಾಗಲಾದರೂ ಭೇಟಿ ಆಗುತ್ತೇನೆ. ಈಗ ಹೊರಟೆ"

ತಮಿಳು ಕುಮಾರಿ, ಎದ್ದು ನಿಂತು ನನಗೆ ವಿದಾಯ ಹೇಳಿದಾಗಲೇ ನನಗೆ ಎಚ್ಚರವಾಗಿದ್ದು!"

"ಕುಳಿತುಕೊಳ್ಳಿರಿ. ಚಾ ತರಿಸುತ್ತೇನೆ. ಚಾ ಕುಡಿದು ಹೋಗುವಿರಂತೆ. ಈಗ ನಡೆದ ಘಟನೆಯಿಂದ ತಲೆ ಬಿಸಿಯಾಗಿದೆ."

ಸಾವಕಾಶವಾಗಿ ಕುಳಿತ ತಮಿಳು ಕುಮಾರಿ ಮುಗುಳ್ನಗುತ್ತಾ ಹೇಳಿದಳು:

"ಇಂತಹ ಕೇಸ್‌ಗಳು ನಿಮ್ಮ ತಲೆ ಬಿಸಿ ಮಾಡಬೇಕಾದರೆ ಆ ಪುಣ್ಯಾತ್ಮನ ತಲೆ ಎಷ್ಟು ಬಿಸಿಯಾಗಿದ್ದರಬೇಡ !"

"ಆ ತಲೆ ಬಿಸಿಯಿಂದಲೇ ಅಪಘಾತದಲ್ಲಿ ಸತ್ತಿರಬಹುದು ಅಲ್ಲವೇ ?"

"ನೀವು ಹೇಳುವುದು ನಿಜವಿರಬಹುದು. ಮೇರೀ ಕೊರೆಲ್ಲಿ ಹೆಸರು ಕೇಳಿದ್ದೀರಾ?"

"ಹೆಸರಾಂತ ಇಂಗ್ಲಿಷ್ ಕಾದಂಬರಿಕಾರ್ತಿ ಅಲ್ಲವೇ ಅವಳು ?

"ಹೌದು ! ಅವಳು ಮದುವೆಯಾಗಲಿಲ್ಲವಂತೆ. ಯಾಕೆ ಎಂದು ಕೇಳಿದ್ದಕ್ಕೆ ಅವಳು ಹೇಳಿದಳಂತೆ 'ನನಗೆ ಅದರ ಅವಶ್ಯಕತೆ ಇಲ್ಲ! ನನ್ನ ಮನೆಯಲ್ಲಿ ಮೂರು ಪ್ರಾಣಿಗಳನ್ನು ಸಾಕಿದ್ದೇನೆ. ಅವು ಗಂಡನ ಅವಶ್ಯಕತೆಗಳನ್ನು ಪೂರೈಸುತ್ತವೆ. ನಾಯಿಯೊಂದು ಸಾಕಿದ್ದೇನೆ ಅದು ಬೆಳಿಗ್ಗೆ ಎದ್ದು ಬೊಗುಳುತ್ತದೆ. ಗಿಣಿ ಮಧ್ಯಾಹ್ನ ಆದ ಕೂಡಲೆ ಬೈಯುತ್ತದೆ. ಸಾಕಿದ ಬೆಕ್ಕು ರಾತ್ರಿ ಹೊತ್ತು ಮೀರಿ ಮನೆಗೆ ಬರುತ್ತದೆ!"

ನಾನು ನಕ್ಕು, ಜಾಟ್ ಜವಾನನಿಗೆ ಚಾ ತೆಗೆದುಕೊಂಡು ಬರಲು ಕೇಳಿಕೊಂಡು, ಅಕೌಂಟೆಂಟ್ ವರ್ಮನನ್ನು ಕರೆಸಿದೆ. ವರ್ಮಾ ಒಳಗೆ ಬಂದೊಡನೆ, ಅವನಿಗೆ ಆ ಮಹಿಳೆಯರು ನನ್ನ ಬಳಿ ಹೇಳಿದ ಸಮಸ್ಯೆಯನ್ನು ವಿವರಿಸಿದೆ. ಸಮಸ್ಯೆಯ ಪರಿಹಾರದ ವಿಧಾನವನ್ನು ಹೇಳಿದೆ.

"ಆ ಹೆಂಗಸರು ನೋಡಲು ಹೇಗಿದ್ದರು?"

"ವಯಸ್ಸಾದ ಮಹಿಳೆಯರು" ಎಂದೆ.

"ಹಾಗಾದರೆ ಪರಿಹಾರ ಕಷ್ಟ!" ಎಂದ

"ಅವರ ವಯಸ್ಸಿಗೂ, ಪರಿಹಾರಕ್ಕೂ ಏನು ಸಂಬಂಧ ?"

"ವಯಸ್ಸಾಗಿ, ಲಕ್ಷಣವಾಗಿಲ್ಲದಿದ್ದರೆ ಯಾರು ಅವರನ್ನು ಮದುವೆಯಾಗಿ ಪರಿಹಾರ ನೀಡುತ್ತಾರೆ."

"ಅವರು ತಮ್ಮನ್ನು ಮದುವೆಯಾಗಿ ತಮಗೆ ಪರಹಾರ ನೀಡಿ ಎಂದು ಕೇಳಲು ಬರಲಿಲ್ಲ! ಅವರಿಗೆ ತಮ್ಮ ಗಂಡನ ಖಾತೆಯಲ್ಲಿರುವ ಹಣ ನೀಡಿರೆಂದು ಬಂದಿದ್ದರು."

ಕುಮಾರಿ ಕಮಲ ಖಾರವಾಗಿ ನುಡಿದಳು.

"ಒಬ್ಬಳು ಗಂಡನನ್ನು ಪಡೆದು ಅವನ ಪೆನ್‌ಷನ್ ಪಡೆದಳು. ಇನ್ನೊಬ್ಬಳು ಅವನ ಖಾತೆಯಲ್ಲಿನ ಹಣ ಪಡೆದಳು. ಇಬ್ಬರಿಗೂ ಗಂಡ ಬೇಕಿರಲಿಲ್ಲ. ಈಗ ಮತ್ತೊಬ್ಬ ಗಂಡನನ್ನು ಪಡೆದರೆ ಮತ್ತಷ್ಟು ಹಣ !"

"ನಿಮ್ಮ ತಲೆ ನೆಟ್ಟಗಿಲ್ಲ!"

ತಮಿಳು ಕುಮಾರಿ ಸಿಡುಕಿದ್ಥಳು.

"ಏಕೆ ಕೋಪ ? ಹೆಂಗಸರಿಗೆ ಮದುವೆಯ ಅವಶ್ಯಕತೆ ಬಹಳ ಇದೆ. ಗಂಡನ ಅವಶ್ಯಕತೆ ಇಲ್ಲ! ಮದುವೆಯಿಂದ ಮುಖ್ಯವಾಗಿ ಸಮಾಜದಲ್ಲಿ ಭದ್ರತೆ, ಆದ್ಯತೆ, ಮಾನ್ಯತೆ ಸಿಗುತ್ತದೆ. ಏನು ಹೇಳುತ್ತೀರಿ ಸಾಬ್ ?"

"ಸಾರ್ ! ನಾನು ಬರುತ್ತೇನೆ. ಇನ್ನೊಮ್ಮೆ ತಮ್ಮನ್ನು ಬಂದು ಕಾಣುತ್ತೇನೆ" ಎಂದು ಹೇಳಿ ನನ್ನ ಉತ್ತರಕ್ಕೆ ಕಾಯದೆ, ಹೊರಟು ಹೋದಳು ಕುಮಾರಿ ಕಮಲ. ಅವಳಿಗೆ ಕೋಪ ಬಂದಿದ್ದು ಅರಿವಾಗಿತ್ತು.

"ಸಾಬ್! ಬಹು ಶೀಘ್ರವಾಗಿ, ವೇಗವಾಗಿ ಒಂದು ಖಾತೆಯಿಂದ ಇನ್ನೊಂದು ಖಾತೆಗೆ ಹಣ ರವಾನಿಸುವುದಕ್ಕೆ ಬ್ಯಾಂಕ್‌ಗಳು ಸೌಕರ್ಯ ಒದಗಿಸುತ್ತವೆ ಅಂತ ಹೇಳುತ್ತಾರೆ. ಆದರೆ ಅದು ಸುಳ್ಳು ಸಾಬ್."

"ಅದು ಹೇಗೆ?" ಕುಮಾರಿ ಕಮಲಳ ಬಗ್ಗೆ ಮಾತನಾಡದೆ, ಬೇರೆ ವಿಷಯ ತೆಗೆದ ವರ್ಮನ ಮಾತು ಕೇಳಿ ಆಶ್ಚರ್ಯವಾಗಿತ್ತು.

"ಎಲ್ಲೋ ಓದಿದ್ದ ಒಂದು ಜೋಕ್ ನೆನಪಿಗೆ ಬಂತು ಸಾಬ್. ಈಗ ಎಲೆಕ್ಟ್ರಾನಿಕ್ ಬ್ಯಾಂಕಿಂಗ್‌ಗಿಂತ ತುರ್ತಾಗಿ ಹಣ ರವಾನಿಸುವ ಸಾಧನ ಒಂದಿದೆಯಂತೆ. ಅದು ಯಾವುದೆಂದರೆ, ಮದುವೆಯಂತೆ!"

"ಕುಮಾರಿ ಕಮಲಳನ್ನು ಓಡಿಸಬಾರದಾಗಿತ್ತು, ನೀವು" ವರ್ಮನ ಜೋಕ್‌ಗೆ ನಗದೆ ಹೇಳಿದೆ.

"ಅವಳು ಹೋಗಲಿ ಎಂದೇ ನಾನು ಹೀಗೆ ಹೇಳಿದೆ."

"ಅವಳಿದ್ದಿದ್ದರೆ ನಿಮಗೇನು ನಷ್ಟವಾಗುತ್ತಿತ್ತು?" ಬೇಸರದಿಂದ ನುಡಿದೆ.

"ಕಪೂರ್‌ನ ಬಿಡುಗಡೆ ಆಯಿತು !"

"ಆಂ!" ಬಾಯಿ ದೊಡ್ಡದಾಗಿ ತೆರೆದೆ.

"ಹೌದು! ನೆನ್ನೆ ರಾತ್ರಿ ಅವನ ಬಿಡುಗಡೆ ಆಯಿತು. ಬೆಳಿಗ್ಗೆ ಫೋನ್‌ನಲ್ಲಿ ವಿಷಯ ತಿಳಿಸಿದ ನನ್ನ ಸಹೋದರ"

"ಸರದಾರ್‌ಜೀ?"

"ಇನ್ನೂ ಇಲ್ಲ! ಅವನ ಬಿಡುಗಡೆಯೂ ಇಷ್ಟರಲ್ಲಿ ಆಗಬಹುದು."

"ಈ ವಿಷಯ ಕಮಲ ಇರುವಾಗಲೇ ಯಾಕೆ ಹೇಳಲಿಲ್ಲ?" ಆಕ್ಷೇಪಿಸಿದೆ.

"ಅವಳಿಗೆ ತಿಳಿಸಿದರೆ ಅವಳಿಗೇ ನಷ್ಟ ! ಯಾಕೆಂದರೆ, ಅವನ ಸ್ನೇಹಿತರ ಮೇಲೆ ಪೊಲೀಸರ ಹದ್ದಿನ ಕಣ್ಣುಗಳು ಹಾರಾಡುತ್ತಾ ಇವೆ. ಇವಳೇನಾದರೂ ಅವನನ್ನು ಕಾಣಲು ಹವಣಿಸಿದರೆ, ಇವಳ ಜೀವ ಹಿಂಡಿಯಾರು ಪೊಲೀಸರು!"

"ಕಪೂರ್ ಎಲ್ಲಿದ್ದಾನೆ ?"

"ಅವನ ಮನೆಯಲ್ಲಿ. ಈಗ ಅವನನ್ನು ನೋಡಲಿಕ್ಕೆ ಹೋಗಬೇಡಿ. ನಿಮ್ಮನ್ನು ಎಳೆದುಕೊಂಡು ಹೋದಾರು ಪೋಲೀಸರು "

ವರ್ಮನ ಎಚ್ಚರಿಕೆಯ ಮಾತು ಹುಸಿಯಾಗಿರಲಿಲ್ಲ. 'ಆತಂಕವಾದಿ' ಎಂಬ ಪಟ್ಟಿ ಹೊತ್ತ ಪ್ರತಿ ಮನುಷ್ಯನ ಸುತ್ತ ಉಪಗ್ರಹ ಸುತ್ತುವಂತೆ ಪೋಲೀಸರು ಸುತ್ತುತ್ತಿರುವ ವಿಷಯ ನನಗೆ ಅರಿವಾಗಿತ್ತು.

"ಕಪೂರ್‌ನನ್ನು ಭೇಟಿಯಾಗುವುದು ಸಾಧ್ಯವಿಲ್ಲವೆ ?" ದುಗುಡ ತುಂಬಿದ ನನ್ನ ಧ್ವನಿ ಕೇಳಿ ನಕ್ಕ ವರ್ಮಾ.

"ಬಿಸಿ ಆರಲಿ ಸಾಬ್! ತಣ್ಣಗಾದ ಮೇಲೆ ಅವನನ್ನು ಮುಟ್ಟಿ ತಬ್ಬಿಗೊಳ್ಳುವಿರಂತೆ. ಈಗ ಅವನು ಬಿಸಿ ಕೆಂಡ !"

"ಓ.ಡಿ. ಲಿಮಿಟ್ ಮೀರಿ ಹೋಗಿದೆ ಸಾಬ್ ! ಚೆಕ್ ಪಾಸ್ ಮಾಡ್ಬೇಕಾ?"

ಉಬ್ಬು ಹಲ್ಲು ಲಾಲ್, ಒಳಗೆ ಬಂದು ಕೇಳಿದ.

"ಯಾರ ಲಿಮಿಟ್?" ಕೇಳಿದೆ.

"ಜೈನ್ ಬ್ರದರ್ಸ್."

"ಲಿಮಿಟ್ ಮೀರಿ ಹೋದವರಿಗೆ ಉಳಿಗಾಲವೆಲ್ಲಿ ? ಇಸ್ಪೀಟ್ ಎಲೆ ತರಹ ಬಿಸಾಡುತ್ತಾರಲ್ಲ ಚೆಕ್ಕುಗಳನ್ನು ! ಖಾತೆಯಲ್ಲಿ ಹಣವಿಟ್ಟು ಚೆಕ್ಕು ನೀಡಲಿಕ್ಕೆ ಏನಾಗಿದೆ ಧಾಡಿ ಇವರಿಗೆ ?" ಉಬ್ಬು ಹಲ್ಲು ಲಾಲ್ ಬುಸುಗುಟ್ಟಿದ.

"ಚೆಕ್ ಬಂದಿದೆ. ಏನು ಮಾಡುವುದು ಅಂತ ಫೋನ್ ಮಾಡಿ ಕೇಳ್ರೀ"

"ದಿನವಹೀ ಫೋನ್ ಮಾಡಿ ಏನು ಕೇಳುವುದು ಸಾಬ್? ಚೆಕ್ ವಾಪಸ್ಸು ಕಳುಹಿಸಿದರೆ ಓಡೋಡಿ ಬರುತ್ತಾರೆ ನಾಳೆ!"

ಉಬ್ಬುಹಲ್ಲು ಲಾಲ್ ಬೇಸರದಿಂದ ಹೇಳಿದ. ಆದರೆ ಚೆಕ್ ವಾಪಸ್ಸು ಮಾಡಿ, ಅವನ ವ್ಯಾಪಾರ ಕೆಡಿಸಿ ನಮ್ಮ ಬ್ಯಾಂಕ್‌ಗೆ ಮರ್ಯಾದೆ ಕೆಡಿಸಿಕೊಳ್ಳುವುದು, ಎಷ್ಟು ಸುಲಭ. ಒಂದು ಫೋನ್ ಮಾಡಿ ಗಿರಾಕಿಗೆ ವಿಷಯ ತಿಳಿಸಿ ಅವನ ಮಾರ್ಯಾದೆ ಉಳಿಸಿದರೆ ನಮ್ಮ ಗಂಟು ಹೋಗುವುದೇನು? ಆದರೆ, ಮಿತಿಮೀರಿ ಕಾರ್ಯ ಮಾಡುವವರಿಗೇ ಗತಿ ಎಲ್ಲಿದೆ? ಪರಿಮಿತಿಯ ಅವಶ್ಯಕತೆ ಜೀವನದಲ್ಲಿ ಎಷ್ಟು ಮುಖ್ಯ! ಸಾಲದ ಪರಿಮಿತಿ ಮೀರಿ ವ್ಯಾಪಾರ ಮಾಡ ಬಯಸಿದ ಈ ವ್ಯಾಪಾರಿಗೆ ಉಬ್ಬುಹಲ್ಲುಗಳ ಬಾಯಿಗೆ, ಕೈಗೆ, ಕಾಲಿಗೇ ಸಿಕ್ಕಿಹಾಕಿಕೊಂಡರೆ, ಜಜ್ಜಿ ಹಣ್ಣುಗಾಯಿ ನೀರುಗಾಯಿ ಮಾಡಿಯಾರು !

'ಜೈನ್ ಬ್ರದರ್ಸ್'ನ ಜೈನ್‌ಗೆ ಫೋನ್ ಮಾಡಿ ಚೆಕ್ ಬಂದಿರುವ ವಿಷಯ ತಿಳಿಸಿ, ಹಣ ಕಟ್ಟುವಂತೆ ಹೇಳಿದೆ.

"ಕುಮಾರಿ ಕಮಲಳ ಕಥೆ ಏನು ಸಾಬ್?"

ವರ್ಮಾ ಕೇಳಿದ ಪ್ರಶ್ನೆಗೆ ಉತ್ತರವಾಗಿ ಅವನ ಮುಖವನ್ನೇ ದೃಷ್ಟಿಸಿದೆ. ಯಾಕೆ ಈ ಪ್ರಶ್ನೆ ಕೇಳಿದ ಈತ? ಕಮಲಳ ಬಗ್ಗೆ ಉತ್ಸಕತೆ ಯಾಕೆ ತೋರುತ್ತಿದ್ದಾನೆ? ಇವ ಪ್ರಶ್ನೆ ಕೇಳಬೇಕಾದರೆ, ಉತ್ಸುಕತೆ ತೋರಬೇಕಾಗಿದ್ದರೆ, ಅವಳ ಬಗ್ಗೆ ನನಗೆ ಅರಿಯದಿದ್ದ ಸಂಗತಿ ಅವನು ಅರಿತಿರಬೇಕು!

"ಅವಳಿಗೆ ವರ್ಗವಾಯಿತು. ಅವಳ ತಂದೆಗೆ ಮರು ಮದುವೆ ಆಯಿತು. ಅವಳಿಗೆ ಮದುವೆ ಆಗಲು ಇಷ್ಟವಿಲ್ಲವಂತೆ."

ಮೂರು ವಾಕ್ಯಗಳಲ್ಲಿ ಸುದ್ದಿ ತಿಳಿಸಿದೆ.

"ಈ ದಿನ ಯಾಕೋ ಮರು ಮದುವೆಯಾದವರ ಸುದ್ದಿಯೇ ಕೇಳಿ ಬರುತ್ತಿದ್ದೆ ಯಲ್ಲಾ !"

ನಕ್ಕು ನುಡಿದ ವರ್ಮಾ.

"ಇವರಿಬ್ಬರ ಪ್ರೇಮ ಬತ್ತದ ಬಾವಿ ನೀರಿನ ಹಾಗೆ ತೋರುತ್ತದಲ್ಲಾ! ಇವರ ಪ್ರೇಮವನ್ನು ಭಾಗಿಸಿದಷ್ಟು ಮೊತ್ತ ಉಳಿಯುತ್ತ ಹೋಗುತ್ತದೆ."

ವರ್ಮನ ಭಾಗಾಕಾರದ ವ್ಯಾಖ್ಯಾನ ಕೇಳಿ ನಾನು ಮನಸ್ಸಿನಲ್ಲೇ ಗುಣಾಕಾರ ಮಾಡಿದೆ.

"ಹೋಗಲಿ, ನಿಮ್ಮ ವಿವಾಹ ಜೀವನ ಹೇಗಿದೆ?"

ಹಠಾತನೆ ಕೇಳಿದ ನನ್ನ ಪ್ರಶ್ನೆಗೆ ಒಂದು ಕ್ಷಣ ವರ್ಮಾ ನನ್ನ ಮುಖವನ್ನು ದುರುಗಟ್ಟಿ ನೋಡಿದ. ನನ್ನ ಹೃದಯವನ್ನು ಹಿಡಿದು ಅಲುಗಿಸಿದಂತಿತ್ತು ಅವನ ದೃಷ್ಟಿ.

"ಸಂಸಾರ ಒಂದು ಸಾಗರ ಅಂತ ಹೇಳಿದ್ದಾರಲ್ಲ ಸಾಬ್ ! ಅದರಲ್ಲಿ ನಾವು ಈಜಬೇಕು. ಮುಳುಗಬಾರದು, ಅಷ್ಟೇ ! ವೈವಾಹಿಕ ಜೀವನವೂ ಅಷ್ಟೇ? ಮದುವೆ ಯಾದ ತಕ್ಷಣ ಅದರಲ್ಲಿ ಮುಳುಗಬೇಕು ಅಂತ ಏನು ಯಾರು ಹೇಳಿಲ್ಲ. ಹೆಂಡತಿ, ಮಕ್ಕಳು, ಪ್ರೀತಿ ವಿಶ್ವಾಸ ಎಲ್ಲಾ ಬೇಕು. ಆದರೆ ಅವರನ್ನು ಕಟ್ಟಿಕೊಂಡು ಜೀವನದಲ್ಲಿ ಮುಳುಗಬೇಕಾಗಿಲ್ಲ. ಏನಂತೀರಿ?"

ಏನು ಉತ್ತರ ನೀಡುವುದು ಇವನ ಪ್ರಶ್ನೆಗೆ?

"ಈಜುವಾಗ ತಲೆ ಎತ್ತಿ ಉಸಿರಾಡುವುದಿಲ್ಲವೇ ? ಮೈ ಮುಖ ನೀರಿನಲ್ಲಿ ಮುಳುಗಿಸಿದ್ದರೂ, ಉಸಿರು ಆಡುತ್ತಲೇ ಇರುತ್ತೇವೆ, ಅಲ್ಲವೇ?"

ಅವನ ಮಾತುಗಳನ್ನು ಕೇಳುತ್ತಲೇ ಇದ್ದೆ.

"ಯಾವುದೇ ವಿಷಯವಾಗಲೀ, ಸಂಗತಿಯಾಗಲೀ, ವೃತ್ತಿಯಾಗಲೀ, ಯಾಕೆ ಸಾಬ್, ಆಟದಲ್ಲೇ ಆಗಲೀ, ಅವುಗಳಲ್ಲಿ ಮುಳುಗಬಾರದು. ಮುಳುಗಿದರೆ, ಸಾಯುತ್ತೇವೆ. ಅದರ ಬದಲು ಚೆನ್ನಾಗಿ ಈಜಿ ತೇಲುವಂತಾಗಬೇಕು.....

ಸಹನೆಯಿಂದ, ಸ್ವಾರ್ಥತೆ ಇಲ್ಲದೆ, ಗುರಿಯಿಟ್ಟು, ಹುಮ್ಮಸ್ಸಿನಿಂದ, ಹುರುಪಿನಿಂದ ಕೆಲಸ ಮಾಡಿದರೆ, ಏನು ಬೇಕಾದರೂ ಸಾಧಿಸಬಹುದು. ಏನು ಹೇಳುತ್ತೀರಾ ಸಾಬ್?"

ತಲೆ ಕೂದಲು ಮೇಲೆ ಕೈ ಆಡಿಸುತ್ತಾ, ತಲೆ ತಗ್ಗಿಸಿ ಕುಳಿತು, ಅವನ ಮಾತುಗಳನ್ನು ಆಲೈಸುತ್ತಾ ಅದರಲ್ಲೇ ಮುಳುಗಿದೆ !

"ತಲೆ ಮೇಲೆ ಕೈ ಯಾಕೆ ಇಟ್ಟುಕೊಂಡಿದ್ದೀರಾ ಸಾಬ್ ?"

ಕೇಳಿದವ ಹೊಟ್ಟೆ ಅಗ್ರವಾಲ್! ಮೊದಲಿನ ಹೊಟ್ಟೆ ಅರ್ಧಕ್ಕಿಳಿದು, ಮುಖ ಒಣಗಿ ಒರಟಾಗಿ, ಹಣೆಯಲ್ಲಿ ನೆರಿಗೆ ಮೂಡಿದ್ದವು.

ಕುರ್ಚಿಯಲ್ಲಿ ಕುಳಿತು ಉದಾಸೀನದಿಂದ, ಮಂದಹಾಸ ಬೀರಿದೆ.

"ಏನಾಗಿದೆ ನಿಮಗೆ? ಆರೋಗ್ಯ ಸರಿ ಇಲ್ಲವೇ ?"

"ಹೊಟ್ಟೆ ಗಾತ್ರ ಇಳಿದಿದ್ದು ನೋಡಿದರೆ ಆರೋಗ್ಯ ಚೆನ್ನಾಗಿಲ್ಲವೆಂದು ಅರ್ಥವೇ ? ನನ್ನ ಆರೋಗ್ಯ ಹೇಗಾದರೂ ಇರಲಿ ! ನೀವು ಯಾಕೆ ತಲೆ ಮೇಲೆ ಕೈ ಇಟ್ಟು ಕುಳಿತುಕೊಂಡಿದ್ದೀರಿ ? ಸಾಲ ನೀಡಿ ವಾಪಸ್ಸು ಪಡೆಯಲಾಗದೇ ತಲೆ ಬಿಸಿಯಾಗಿರಬೇಕು, ಅಲ್ಲವೇ?"

"ಛೆ ! ಛೆ! ಹಾಗೇನಿಲ್ಲ! ಯಾವುದೋ ಕಾರಣಕ್ಕೆ ತಲೆ ಬಿಸಿಯಾಗಿದ್ದು ನಿಜ. ತಲೆ ಮೇಲೆ ಕೈ ಇಟ್ಟಿಕೊಂಡಿದ್ದೆ. ಅಷ್ಟೆ !"

"ಸಧ್ಯ! ಕೈಯನ್ನು ನಿಮ್ಮ ತಲೇ ಮೇಲೆ ಇಟ್ಟುಕೊಂಡಿದ್ದೀರಲ್ಲ ! ಬೇರೆಯವರ ತಲೆ ಮೇಲೆ ಕೈ ಇಟ್ಟು ಅವರ ತಲೆ ಬಿಸಿ ಮಾಡಲಿಲ್ಲವಲ್ಲ!" ಅವನ ಮಾತಿಗೆ ನಕ್ಕು ಕೇಳಿದೆ.

"ಏನು ವಿಶೇಷ ? ಬಹಳ ದಿನಗಳಾಯಿತು ನಿಮ್ಮ ಭೇಟಿಯಾಗದೆ. ಹೇಗಿದೆ ನಿಮ್ಮ ವೈವಾಹಿಕ ಜೀವನ ?"

ಇವನ ಭಾರ ತಾಳಲಾರದೆ, ಕುದುರೆ ಕಾಲು ಮುರಿದುಕೊಂಡು ನೆಲ ಕಚ್ಚಿದ್ದು ನೆನಪಿಗೆ ಬಂದು ಮನದಲೇ ನಕ್ಕೆ. ಕುದುರೆ ಕಾಲು ಮುರಿದು ಬಿದ್ದೊಡನೆ, ಇವರ ಮದುವೆ ಕೂಡ ಬಿದ್ದು ಹೋಗಿದ್ದು ನೆನಪಿಗೆ ಬಂದಿತು. ಬೇರೆ ಹೆಣ್ಣು ಮದುವೆಯಾದ

ಸುದ್ದಿ ತಿಳಿದು ಸಂತೋಷವೂ ಆಗಿತ್ತು. ವ್ಯಾಪಾರ ವೃದ್ಧಿಯಾದಂತೆ, ಈತನ ಸಂತಾನವೂ ವೃದ್ಧಿಯಾಗಿರಬೇಕಲ್ಲವೇ ?

"ಜೀವನವೇ ಬೇಸರವಾಗಿ ಬಿಟ್ಟಿದೆ ಸಾಬ್!"

ಕತ್ತು ತುಂಬಾ ಹೊಸಾ ನೋಟಿನ ಹಾರ ಹಾಕಿಕೊಂಡು ಜರ್ಬಾಗಿ ಕುದುರೆ ಮೇಲೆ ಕುಳಿತು ಮದುವೆ ಮಂಟಪಕ್ಕೆ ಹಾಡುತ್ತಾ ಕುಣಿಯುತ್ತಾ, ನಲಿಯುತ್ತಾ ಬನಿಯಾ ಹೆಂಗೆಳೆಯರ ಮಧ್ಯದಲ್ಲಿ, ತನ್ನ ದಪ್ಪ ಹೊಟ್ಟೆಯನ್ನು ಮೀರಿಸುವ ಹಾಗೆ ತನ್ನ ಬಾಯನ್ನು, ಹಲ್ಲುಗಳನ್ನು ಪ್ರದರ್ಶಿಸಿ, ನೋಡುವ ನೂರಾರು ಕಣ್ಣುಗಳಿಗೆ, ಹೊಟ್ಟೆಗಳಿಗೆ ಕಿಚ್ಚೆಬ್ಬಿಸಿ ಸಾಗುತ್ತಿದ್ದ ಈ ಅಗ್ರವಾಲ್‌ನ ಅದ್ಭುತ, ಆದರೆ ವಿಲಕ್ಷಣ ನೋಟ ನೆನೆಪಿಗೆ ಬಂದ ನನಗೆ ಜೀವನವೇ ಬೇಸರವಾಗಿಬಿಟ್ಟಿದೆ' ಎಂದು ಕೇಳಿ ಬೆಚ್ಚಿ ಬಿದ್ದೆ. ಅಸಹ್ಯವಾದ ಹೊಟ್ಟೆಗಿಂತ ಅವನು ಪ್ರದರ್ಶಿಸಿದ್ದ ಸಂಪತ್ತು ಅಸಹ್ಯಕರ ವಾಗಿದ್ದರೂ, ನನ್ನ ಬಗ್ಗೆ ಆದರ, ಪ್ರೀತಿ, ವಿಶ್ವಾಸ ತೋರಿದ್ದು ಸಹ್ಯವಾಗಿತ್ತು. ಇಂತಹ ವನಿಗೆ ಜೀವನದಲ್ಲಿ ಬೇಸರ ! ನಂಬಲಸಾಧ್ಯವಾಗಿತ್ತು! ಯಾವ ಬನಿಯಾಗೆ ಜೀವನದಲ್ಲಿ ಬೇಸರವಾಗುತ್ತದೆ ?

"ಏನು ಅಂತಹ ಬೇಸರ?" ನಗುತ್ತಲೇ ಕೇಳಿದೆ.

"ನನ್ನ ಹೆಂಡತಿಯನ್ನು ಯಾರೋ ಕೊಲೆ ಮಾಡಿಬಿಟ್ಟರು ಸಾಬ್ !"

ತನ್ನ ಭಾರದಿಂದ ಕುದುರೆ ಕೊಲೆ ಮಾಡಲು ಹೊರಟಿದ್ದ ಈ ಹೊಟ್ಟೆ ಅಗ್ರವಾಲ್‌ನ ಹೆಂಡತಿಯನ್ನು ಯಾರು ಕೊಲೆ ಮಾಡಿದರು? ಮನಸ್ಸು ವ್ಯಗ್ರವಾಯಿತು.

"ಕೊಲೆ ಮಾಡಿದ್ದು ಯಾರು ಅಂತ ಗೊತ್ತಾಗಲ್ಲಿಲ್ಲವೆ ?"

"ಇಲ್ಲ ಸಾಬ್" ಖಿನ್ನನಾಗಿ ನುಡಿದ ಅಗ್ರವಾಲ್.

ಅಗ್ರವಾಲ್‌ನ ಮುಖವನ್ನೇ ದಿಟ್ಟಿಸಿ ನೋಡುತ್ತಾ ಕುಳಿತೆ. ಸುಳ್ಳು ಹೇಳುತ್ತಾ ಇಲ್ಲವಷ್ಟೆ! ಸಾಗೂವಿನ ಹಾಗೆ ಈತನೂ ತನ್ನ ಹೆಂಡತಿಯ ಕೊಲೆ ಮಾಡಿಲ್ಲವಷ್ಟೆ.

"ನೀವೇನಾ ಮೇನೇಜರ್ ?"

ಕುರ್ತಾ ಪೈಜಾಮಾ ಹಾಕಿ, ತೆಳ್ಳಗೆ, ಎತ್ತರಕ್ಕೆ ಕಂದು ಬಣ್ಣದ, ಮಧ್ಯ ವಯಸ್ಸಿನ ವ್ಯಕ್ತಿ ನನ್ನ ಮುಂದೆ ನಿಂತು ಕೇಳಿದ ಪ್ರಶ್ನೆಗೆ ಹೇಗೆ ಉತ್ತರಿಸುವುದು ಎಂದು ಯೋಚಿಸುತ್ತಿರುವಾಗ, ಅಗ್ರವಾಲ್ ನನ್ನ ಸಹಾಯಕ್ಕೆ ಬಂದ.

"ಮೇನೇಜರ್ ಕುರ್ಚಿಯಲ್ಲಿ ಕುಳಿತಿರಬೇಕಾದರೆ, ಮೇನೇಜರ್ ಆಗಿರದೆ ಚಪ್ರಾಸೀ ಆಗಿರಲಿಕ್ಕೆ ಸಾಧ್ಯವೇ?"

"ಮೇನೇಜರ್ ಕುರ್ಚಿಯಲ್ಲಿ ಕುಳಿತು ಚಪ್ರಾಸಿ ತರಹ ಕೆಲಸ ಮಾಡಿದ್ದರಿಂದ ನನಗೆ ಅನುಮಾನವಾಗಿದ್ದರಿಂದ ಈ ಪ್ರಶ್ನೆ ಕೇಳಿದೆ."

ನೂತನ ಪಿಡುಗು ಆತಂಕ ಹೊತ್ತು ನನ್ನ ತಲೆ ಮೇಲೆ ಏರಲು ಬರುವ ಅನುಭವ ಆಯಿತು.

"ಏನು ಬೇಕು ನಿಮಗೆ ? ಕುಳಿತುಕೊಳ್ಳಿರಿ"

ಉಪಚರಿಸಿದೆ. ಕೊಂಚ ಚಕಿತನಾದಂತೆ ತೋರಿದರೂ, ಅದನ್ನು ತೋರಿಸಿಕೊಳ್ಳದೆ, ಮುಂದಿದ್ದ ಕುರ್ಚಿಯನ್ನು ಎಳೆದು, ಕಾಲು ಮೇಲೆ ಕಾಲು ಹಾಕಿ ಕುಳಿತ ಭೂಪ.

"ಬಚಾರ್‌ನ ಎಂ.ಪೀ ಸಾಹೇಬರು ನನ್ನನ್ನು ನಿಮ್ಮಲ್ಲಿಗೆ ಕಳುಹಿಸಿದ್ದಾರೆ."

ರಾಜಕೀಯ ವ್ಯಕ್ತಿ. ಹುಷಾರಾಗಿರಬೇಕು ಎಂದು ಬುದ್ಧಿ ಎಚ್ಚರಿಕೆ ನೀಡಿತು. ಮೌನ ವಹಿಸಿದೆ.

"ನಿಮ್ಮ ಶಾಖೆಯಲ್ಲಿ ನೌಕಾರರನ್ನು ತುಂಬ ಅಸಂತೋಷ, ಆತಂಕ ಮತ್ತು ಅಡಚಣೆಗಳಿಂದ ನೋಡಿಕೊಳ್ಳುತ್ತಿದ್ದೀರಾ ಎಂದು ದೂರು ಬಂದಿದೆ ನಮ್ಮ ಸಾಹೇಬರಿಗೆ. ವಿಚಾರಣೆಗೆ ನಿಮ್ಮಲ್ಲಿಗೆ ಕಳುಹಿಸಿದ್ದಾರೆ."

ನಿಧಾನವಾಗಿ ಮೆಲ್ಲನೆ ಮಾತನಾಡಿದ ರಾಜಕಾರಣಿ.

ಕೊನೆಯ ಬ್ರಹ್ಮಾಸ್ತ್ರವನ್ನು ನೌಕರರು ನನ್ನ ಮೇಲೆ ಬಿಟ್ಟಿದ್ದರು. ರಾಜಧಾನಿ ದಿಲ್ಲೀ ರಾಜಕಾರಣಗಳಿಗೆ ಪ್ರಸಿದ್ಧಿ ಪಡೆದಿರುವುದು ಯಾರಿಗೆ ಗೊತ್ತಿಲ್ಲ? ರಾಜಕಾರಣಿಗಳು ಇಲ್ಲಿನ ಪ್ರತಿಯೊಂದು ವಿಷಯದಲ್ಲೂ ಪ್ರತಿಯೊಂದು ಗಲ್ಲಿ ರಸ್ತೆಗಳಲ್ಲೂ, ಮೊಹಲ್ಲಾಗಳಲ್ಲೂ, ತಮ್ಮ ಇರುವನ್ನು ತೋರಿಸಿಕೊಳ್ಳದಿದ್ದರೆ, ತಮ್ಮ ವೃತ್ತಿಗೆ ಅನ್ಯಾಯ ಬಗೆದಂತೆ ಎಂಬ ನಂಬಿಕೆ.

ನಾನು ಮರುಮಾತನಾಡಲಿಲ್ಲ. ಮೌನ ವ್ರತ, ಸಂಭಾಷಣೆಗೆ ರುಚಿ, ಆಸಕ್ತಿ, ಬೆಲೆ ಹೆಚ್ಚಿಸುವುದಂತೆ. ರಾಜಕಾರಣಿಯ ಸಂಭಾಷಣೆಗೆ ಬೆಲೆ ನೀಡಬೇಕಾದರೆ, ನಾನು ಮೌನದಿಂದಿರುವುದು ಲೇಸು ಎಂದು ಬಗೆದೆ.

"ನಿಮ್ಮ ಶಾಖೆ ಒಂದು ಮೊಘಲ್ ದರ್ಬಾರ್ ಆಗಿಬಿಟ್ಟಿದೆಯಂತೆ. ಮೊಘಲ್ ಬಾದಶಹಾನಂತೆ ನೀವು ಅಧಿಕಾರ ಚಲಾಯಿಸುತ್ತಾ ಇದ್ದೀರ ಎಂದು ದೂರು ಬಂದಿದೆ."

ಎದುರು ಕುಳಿತಿದ್ದ ಅಗ್ರವಾಲ್‌ನ ಮುಖ ನೋಡಿದೆ. ಅವನು ನಸುನಗುತ್ತಿದ್ದ. ಹೆಂಡತಿಯ ಕೊಲೆ ಮರೆತಿದ್ದು, ರಾಜಕಾರಣಿಯು ನನ್ನ ಮೇಲೆ ಹೊರೆಸುತ್ತಿರುವ ಆಪಾದನೆಗಳ ಪಟ್ಟಿಯನ್ನು ಕೇಳುತ್ತಾ ಆನಂದಿಸುತ್ತಿದ್ದ ಎಂದು ಬಗೆದೆ.

"ಶಾಖೆಗೆ ಚಪ್ರಾಸಿಯೊಬ್ಬನನ್ನು ನೇಮಕ ಮಾಡಿ, ಅವನನ್ನು ವಿನಾಕಾರಣ ಮನೆಗೆ ಕಳಿಸಿದ್ದರಂತೆ ನೀವು ?"

ಚಪ್ರಾಸಿಗಳು ರಜೆ ಹೋದಲ್ಲಿ ತಾತ್ಕಾಲಿಕವಾಗಿ, ಅವರ ಜಾಗದಲ್ಲಿ, ಬೇರೊಬ್ಬನನ್ನು ನೇಮಿಸುವುದು ಬ್ಯಾಂಕ್‌ನಲ್ಲಿ ರೂಢಿ ಇದೆ. ನೇಮಕ ತಾತ್ಕಾಲಿಕ ವಾದ್ದರಿಂದ, ಮೇನೇಜರ್‌ಗಳಿಗೆ ಯಾವ ವಿಧವಾದ ಅಧಿಕಾರವೂ ಇಲ್ಲದಿರುವುದ ರಿಂದ, ಬದಲೀ ಚಪ್ರಾಸಿಗಳನ್ನು ಆ ಸ್ಥಾನದಲ್ಲಿ ಧೃಢೀಕರಿಸುವುದು ಅಸಾಧ್ಯದ ವಿಷಯವಾಗಿತ್ತು. ಯಾರೋ ಒಬ್ಬ ಬದಲೀ ಚಪ್ರಾಸೀ ಕಿತಾಪತಿ ಮಾಡಿ ಈ ರಾಜಕಾರಣಿಯ ಮೊರೆ ಹೋಗಿ ನನಗೆ ಆತಂಕ ತಂದಿದ್ದಾನೆ ಎಂದು ತೀರ್ಮಾನಿಸಿದೆ.

"ನಿಮ್ಮಿಂದ ಒಂದು ಉಪಕಾರವಾಗಬೇಕಲ್ಲ?' ಮೌನವ್ರತ ಮುರಿದು, ಬಹಳ ನಮ್ರತೆಯಿಂದೆ ಕೇಳಿದೆ.

"ಏನದು ?"

"ಯಾವ ವರವಾದರೂ ಸರಿ, ನೀಡಬಲ್ಲೆ ' ಎಂಬ ಧಾಟಿಯಲ್ಲಿ ಕೇಳಿದ ಪುಢಾರಿ.

"ನಮ್ಮ ಶಾಖೆಯ ಡಿಪಾಸಿಟ್‌ನ ಸಂಖ್ಯೆ ಏರುವುದು ಕಡಿಮೆ ಆಗಿದೆ. ಬ್ಯುಸಿನೆಸ್ ತುಂಬಾ ಕಡಿಮೆಯಾಗಿದೆ. ಡಿಪಾಸಿಟ್ ಓಡಿ ಹೋಗುತ್ತಾ ಇದ್ದು, ಕೊಟ್ಟ ಸಾಲ ವಾಪಸ್ಸು ಬರುತ್ತಾ ಇಲ್ಲ. ಶಾಖೆಯ ಒಳ್ಳೆಯ ಹೆಸರು ಕೆಟ್ಟು ಹೋಗಿದೆ. ಬೇರೆ ಬ್ಯಾಂಕ್‌ಗೆ ತಮ್ಮ ಖಾತೆ ಮತ್ತು ಬ್ಯುಸಿನೆಸ್‌ನನ್ನು ವರ್ಗಾಯಿಸುತ್ತಿದ್ದಾರೆ..."

"ಅದಕ್ಕೆ ನಾನೇನು ಮಾಡಬೇಕು ? ಅದು ನಿಮ್ಮ ಜವಾಬ್ದಾರಿ. ನಿಮ್ಮನ್ನು ಮೇನೇಜರ್‌ನ್ನಾಗಿ ಮಾಡಿದ್ದು ಶಾಖೆಯನ್ನು, ಅದರ ಬ್ಯುಸಿನೆಸ್ಸನ್ನು ಹೆಚ್ಚಿಸುವುದಕ್ಕೆ. ಒಳ್ಳೆಯ ಸೇವೆಯನ್ನು ನೀಡುವುದಕ್ಕೆ. ನಿಮ್ಮ ಜವಾಬ್ದಾರಿ, ನಿಮ್ಮ ಕೆಲಸ, ನಿಮ್ಮ ಕರ್ತವ್ಯ ಮಾಡುವುದನ್ನು ಬಿಟ್ಟು, ಬೇರೆಯವರಿಗೆ ಯಾಕೆ ಹೇಳುತ್ತೀರಾ?"

ದಪ್ಪ ಧ್ವನಿಯಲ್ಲಿ, ದಬಾಯಿಸಿದ ಪುಢಾರಿ.

"ನೀವು ಹೇಳುವುದು ನಿಜ. ನನ್ನ ಕರ್ತವ್ಯವನ್ನು ನಾನು ಮಾಡಬೇಕು. ನನ್ನ ಕೆಲಸವನ್ನು ಚೆನ್ನಾಗಿ ಮಾಡಬೇಕು. ನನ್ನನ್ನು ಮೇನೇಜರ್ ಆಗಿ ಇಲ್ಲಿ ನೇಮಕ ಮಾಡಿರುವುದೇ ಈ ಕೆಲಸಕ್ಕಾಗಿ. ಆದರೆ ನೀವುಗಳು ಅದಕ್ಕೆ ಅಡ್ಡಿ ಬರುತ್ತಾ ಇದ್ದೀರಲ್ಲಾ ?"

"ಏನು ಹೇಳಲು ಬಯಸುತ್ತಾ ಇದ್ದೀರಾ ? ನಿಮ್ಮ ಕೆಲಸಕ್ಕೆ ನಾನ್ಯಾಕೆ ಅಡ್ಡಿ ಮಾಡಲಿ ? ಬಾಯಿಗೆ ಬಂದ ಹಾಗೆ ಮಾತನಾಡಬೇಡಿ."

ಕಾವಿತ್ತು ಅವನ ಧ್ವನಿಯಲ್ಲಿ

"ನನ್ನ ಕೆಲಸ ಮಾಡಲಿಕ್ಕೆ ಅದು ಸರಿಯಾಗಿದೆಯೋ ಇಲ್ಲವೋ ಎಂದು ನೋಡಿ ತಿಳಿಯಪಡಿಸಲಿಕ್ಕೆ ನನ್ನ ಮೇಲಿನ ಅಧಿಕಾರಿಗಳು ಇದ್ದಾರೆ. ನೀವು ರಾಜಕೀಯ ಪುಢಾರಿ

ಇರಬಹುದು. ಎಂ.ಪಿ.ಯ ನೆಂಟ, ಬಂಟ ಇರಬಹುದು. ನನ್ನನ್ನು ವಿಚಾರಿಸ ಲಿಕ್ಕೆ, ನನ್ನ ಕೆಲಸದ ಬಗ್ಗೆ, ನನ್ನ ಶಾಖೆಯನ್ನು ಹೇಗೆ ನಡೆಸುತ್ತಿದ್ದೇನೆ ಎಂದು ತಿಳಿದು, ಇನ್‌ಸ್ಪೆಕ್ಷನ್ ಮಾಡಲಿಕ್ಕೆ ನಿಮಗೆ ಯಾವ ಅಧಿಕಾರವೂ ಇಲ್ಲ."

"ನೀವು ಯಾರ ಹತ್ತಿರ ಮಾತನಾಡುತ್ತಾ ಇದ್ದೀರಾ ಎಂದು ಅರಿತಿಲ್ಲ!"

"ಹೌದು! ಅರಿತಿಲ್ಲ. ನೀವು ಯಾರು? ಎಲ್ಲಿಂದ ಬಂದವರು? ಯಾವ ಊರಿನವರು ? ನಿಮಗೆ ಯಾರು ಕಳಿಸಿದವರು ? ಯಾವ ಅಧಿಕಾರವಿದೆ? ಒಂದೂ ಅರಿತಿಲ್ಲ! ನಿಮ್ಮ ಬಳಿ ಏನಾದರೂ ಪರಿಚಯ ಪತ್ರವಿದ್ದರೆ ತೋರಿಸಿ. ಅದನ್ನು ನೋಡಿ ಪರೀಕ್ಷಿಸಿ, ಆಮೇಲೆ ಮಾತನಾಡೋಣ."

ಧ್ವನಿ ಏರಿಸಿ ಮಾತನಾಡಿದ್ದು ನೋಡಿ, ಅವ ಮೆತ್ತಗಾದ.

"ನನ್ನ ಅಧಿಕಾರ ಪ್ರಶ್ನಿಸುತ್ತೀರಾ ನೀವು ? ನಮ್ಮ ಎಂ.ಪಿ. ಸಾಹೇಬರು ಒಂದು ಫೋನ್ ಮಾಡಿದರೆ ಈಗಿಂದೀಗಲೆ ನಿಮ್ಮ ಮೇಲೆ ಕ್ರಮ ಜರುಗಿಸಬಹುದು."

ಹೆದರಿಸಿದ ಪುಢಾರಿ. ನನ್ನ ಮೆದಳು ಚುರುಕಾಯಿತು. ಸುಮ್ಮನೆ ಯಾಕೆ ಹಾವಿನ ಹುತ್ತ ಬಡಿದು ಆತಂಕ ಪಡೆದುಕೊಳ್ಳುವುದು ? ಮೊದಲೇ ಮೊಘಲ್ ದರ್ಬಾರಿನಲ್ಲಿ ನನ್ನ ಮೇಲೆ ವಕ್ರ ದೃಷ್ಟಿ ಇದ್ದೇ ಇದೆ. ವಕ್ರ ದೃಷ್ಟಿ ಮತ್ತೂ ವಕ್ರವಾಗಿ ನನ್ನ ದೃಷ್ಟಿಯನ್ನು ಕಿತ್ತು, ಹಿಂಸಿಸಿ ಸೆರೆಮನೆಗೆ ನೂಕಿಸಿಕೊಳ್ಳುವ ಸಾಧ್ಯತೆಯನ್ನು ಯಾಕೆ ಸೃಷ್ಟಿಸಿ ಕೊಳ್ಳಬೇಕು ? ಮೊಘಲ್‌ರು ತಮ್ಮ ಶತ್ರುಗಳ ಕಣ್ಣು ಕಿತ್ತು ಸೆರೆಮನೆಗೆ ನೂಕುವ ಅಭ್ಯಾಸವನ್ನು, ಬ್ಯಾಂಕ್ ಮೊಘಲ್‌ರಿಗೆ ಬಳುವಳಿಯಾಗಿ ನೀಡಿರಲೇ ಬೇಕಲ್ಲವೇ?

"ನೀವು ನಿಜವಾಗಲೂ ಒಬ್ಬ ಪ್ರಭಾವಿತ ವ್ಯಕ್ತಿಯಾಗಿದ್ದರೆ, ನಿಮ್ಮ ಎಂ.ಪಿ. ಸಾಹೇಬರು ನಿಜವಾಗಲೂ ಒಬ್ಬ ಜವಾಬ್ದಾರಿ ಪ್ರಜಾಹಿತಕನಾಗಿದ್ದರೆ, ನನಗೊಂದು ಸಹಾಯ ಮಾಡುತ್ತೀರಾ?"

ಮಾತು ಬದಲಿಸಿದ ರೀತಿ, ನನ್ನ ನಮ್ರತೆಯ ಮಾತಿನ ರೀತಿ, ಅವನನ್ನು ಚಕಿತಗೊಳಿಸಿರಲಿಕ್ಕೂ ಸಾಕು.

"ಏನದು?"

"ನಿಮ್ಮ ಎಂ.ಪಿ. ಸಾಹೇಬರಿಗೆ ಹೇಳಿ, ನನಗೆ ಒಂದು ಕೋಟಿ ಡಿಪಾಸಿಟ್ ಕೊಡಿಸುತ್ತೀರಾ ?"

ನನ್ನ ಮುಖವನ್ನೇ ಒಂದು ಕ್ಷಣ ದೃಷ್ಟಿಸಿ, ಅವ ನುಡಿದ.

"ನಿಮಗೆ ತಲೆ ಕೆಟ್ಟಿದೆಯಾ ?"

ನನ್ನ ಬ್ಲಡ್ ಪ್ರೆಶರ್ ಒಮ್ಮೆಲೆ ಏರಿತು.

“ನಮ್ಮ ಸಾಹೇಬರು ಡಿಪಾಸಿಟ್ ಕೊಡಿಸಲಿಕ್ಕೆ ಎಂ.ಪಿ. ಆಗಿದ್ದಾರಾ ? ಅವರಿಗೆ ಬೇರೆ ಕೆಲಸವಿಲ್ಲವೇ ?”

“ಕೆಲಸ ಕಾಯಂ ಮಾಡಲಿಕ್ಕೆ, ಬ್ಯಾಂಕ್‌ನ ಆಂತರಿಕ ವ್ಯವಹಾರಗಳಿಗೆ ಕೈ ಹಾಕಲಿಕ್ಕೆ, ಬೇರೆಯವರಿಗೆ ಸಾಲ ಕೊಡಿಸುವುದಕ್ಕೆ ಸಮಯ ಇದ್ದು, ಅದೇ ಮುಖ್ಯ ಕೆಲಸವೆಂದು, ನಿಮ್ಮಂತಹವರನ್ನು ನಮ್ಮಲ್ಲಿಗೆ ಕಳುಹಿಸುತ್ತಾ ಇರುವಾಗ, ಅವರಿಗೆ ಬೇರೆ ಇನ್ನೇನು ಕೆಲಸವಿದೆ ?”

ಕುರ್ಚಿಯಿಂದ ಮೆಲ್ಲನೆ ಎದ್ದ ಪುಢಾರಿ ಬಾಗಿಲವರೆಗೆ ಮೆಲ್ಲನೆ ಹೆಜ್ಜೆ ಹಾಕಿದ. ಒಂದು ಕ್ಷಣ ನಿಂತು, ಹಿಂದಿರುಗಿ ನನ್ನ ಮುಖವನ್ನು ನೋಡಿದ.

“ ನೀವು ಪಶ್ಚಾತ್ತಾಪ ಪಡುತ್ತೀರಾ!” ಎಂದು ಹೇಳಿ ಹೊರಗೆ ನಡೆದ.

“ಕೊಂದೇ ಬಿಟ್ಟಿರಲ್ಲಾ ಸಾಬ್, ಅವನನ್ನು !”

ಇದುವರೆಗೂ ಮೌನವಾಗಿ ನಮ್ಮ ಸಂಭಾಷಣೆಗಳನ್ನು ಆಲೈಸುತ್ತಿದ್ದ ಅಗ್ರವಾಲ್ ನುಡಿದ. ಹೆಂಡತಿಯ ಕೊಲೆ ಬಗ್ಗೆ ಮಾತನಾಡಲು ಬಂದ ಅಗ್ರವಾಲ್‌ಗೆ ಪುಢಾರಿಯನ್ನು ನಾನು ಕೊಲೆ ಮಾಡಿ ವಿಜೃಂಭಿಸುವವವನ ಹಾಗೆ ತೋರಿರ ಬೇಕು.

“ಅವನ ಕೊಲೆ ನಾನು ಮಾಡಿದ್ದು ನಿಜವಾದರೆ, ನಿಮ್ಮ ಹೆಂಡತಿಯ ಕೊಲೆ ನೀವು ಮಾಡಿದ್ದು ನಿಜ !”

ಹೊಟ್ಟೆ ಅಗ್ರವಾಲ್‌ನ ಮುಖ ಕೆಂಪಾಯಿತು. ಕಷ್ಟಪಟ್ಟು ತನ್ನ ಹೊಟ್ಟೆಯನ್ನು ಮೇಲಕ್ಕೆತ್ತಿ, ಅಷ್ಟೇ ಕಷ್ಟಪಟ್ಟು ತನ್ನ ಕಾಲುಗಳನ್ನು ಗಟ್ಟಿಯಾಗಿ ನೆಲದ ಮೇಲೆ ಇರಿಸಿ, ಮೆಲ್ಲನೆ ನಿಂತುಕೊಂಡ. ನನ್ನ ಮುಖವನ್ನೇ ದುರುಗುಟ್ಟಿ ನೋಡಿ, ಏನನ್ನು ನುಡಿಯದೇ ಹಿಂದಿರುಗಿ ಕಾಲು ಎಳೆದುಕೊಂಡು, ದಪ್ಪ ದೇಹವನ್ನು ಹೊತ್ತುಕೊಂಡು ನಿರ್ಗಮಿಸಿದ.

# 18

ಬೆಳಿಗ್ಗೆ ೬ ಗಂಟೆಗೆ ಕಿಟಕಿಯ ಬಳಿ, ಎರಡು ಪಾರಿವಾಳಗಳು ತಮ್ಮ ಸಂಸಾರ ತಾಪತ್ರಯಗಳ ಬಗ್ಗೆ ಚರ್ಚಿಸತೊಡಗಿದ್ದವು. ಈ ಪಾರಿವಾಳಗಳಿಗೆ ಬೇರೆ ಸಮಯವೇ ಸಿಗುವುದಿಲ್ಲವೇ ? ಬೆಳ್ಳಂಬೆಳಿಗ್ಗೆ ನನ್ನ ಮನೆಯ ಕಿಟಕಿಯ ಕಟಕಟೆಯೇ ಬೇಕೇನು ತಮ್ಮ ಗುರುಗುಟ್ಟುವಿಕೆಯ ಚರ್ಚೆಗೆ? ನಿದ್ರೆ ಕೆಡಿಸಿದ ಈ ಪಾರಿವಾಳಗಳು ದಿಲ್ಲೀ ತುಂಬಾ ಮನೆ ಮಾಡಿಕೊಂಡು, ದಿಲ್ಲೀವಾಲರಿಗೆ ಬಹು ಪ್ರಿಯವಾಗಿವೆ. ಸಿಮೆಂಟ್ ಬಣ್ಣದ ಈ ದಿಲ್ಲೀ ಪಾರಿವಾಳಗಳು ಇಲ್ಲಿಯ ಜನರನ್ನು ಏಕೆ ಆಕರ್ಷಿಸುತ್ತಿವೆ? ಪಾರಿವಾಳಗಳು ಶಾಂತಿಯ ಸಂದೇಶವನ್ನು ಸಾರುತ್ತವೆ ಎಂದು ದಿಲ್ಲೀವಾಲರಿಗೆ ನಂಬಿಕೆಯಾ? ಶಾಂತಿದೂತ, ಸೌಮ್ಯ ಸ್ವಭಾವದ, ಜಗಳವಾಡದೆ, ಒಗ್ಗಟ್ಟಿನಿಂದ ಆನಂದದಿಂದ ಬದುಕುವ ಪಾರಿವಾಳಗಳನ್ನು ಬಹಳ ಪ್ರೀತಿಯಿಂದ ಸಾಕುವ, ನೋಡಿ ಕೊಳ್ಳುವ, ಅವುಗಳನ್ನು ಹಿಂಸಿಸದೆ ಅದರ ಪಾಡಿಗೆ ಹಾರಿ ಸುಖವಾಗಿರಲು ಬಯಸುವ ಜನರ ಬಗೆ ಹೆಮ್ಮೆಯುಂಟಾಗಲೇ ಬೇಕು ! ಹಿಂದೂಗಳಾಗಲೀ, ಮುಸ್ಲಿಮರಾಗಲೀ, ಸೀಖರಾಗಲೀ ಈ ಪಕ್ಷಿಯ ಬಗ್ಗೆ ಆದರ ತೋರಿಸುವ ಸಂಗತಿ ಸೋಜಿಗವೇ ಆಗಿದೆ. ಇದೇ ರೀತಿಯ ಅದರ, ಸ್ನೇಹ, ಪ್ರೀತಿ, ತಮ್ಮ ತಮ್ಮಲ್ಲೇ ತೋರುವುದಿಲ್ಲವೇಕೆ ? ಈ ಒಂದು ಸಂಗತಿ, ಸೋಜಿಗಕ್ಕಿಂತ ವಿಚಿತ್ರ ಎನ್ನಬಹುದೇ ?

ಚಳಿಗಾಲ ಮುಗಿಯುತ್ತಾ ಬಂದಿದ್ದರೂ, ಚಳಿ ಇಲ್ಲದಿದ್ದರೂ, ಬೆಳಿಗ್ಗೆ ಬೇಗ ಏಳುವ ಮನಸ್ಸೇ ಆಗುವಲ್ಲೊಲ್ಲದು. ಹಿಂದಿನ ದಿನದ ಆಗು ಹೋಗುಗಳನ್ನು ಮೆಲುಕು ಹಾಕುವುದರಲ್ಲಿ ಮನಸ್ಸು ಓಡಿತು.

ಹೊಟ್ಟೆ ಅಗ್ರವಾಲ್‌ನ ಹೆಂಡತಿಯ ಕೊಲೆ ಯಾರು ಮಾಡಿರಬಹುದು? ಯಾವ ಕಾರಣಕ್ಕಾಗಿ ಮಾಡಿರಬಹುದು. ಕೊಲೆಗಾರನನ್ನು ಒಳಕ್ಕೆ ಬರಮಾಡಿಕೊಂಡು, ಅವನಿಗೆ ಚಾ ಕುಡಿಸಿ, ಅವನಿಂದಲೇ ಕೊಲೆಯಾದಳೆಂದು ಪೊಲೀಸರು ಊಹಿಸಿದ್ದು, ಆ ಕೊಲೆಗಾರ ಹೊರಗಿನವನಲ್ಲ ಒಳಗಿನವನೆ, ಆಕೆಗೆ ತಿಳಿದವನೆ! ಅಂದರೆ ಮನೆಯಲ್ಲಿ ಗಂಡ ಹೆಂಡತಿ ಇಬ್ಬರೇ ಇರಬೇಕಾದರೆ, ಒಳಗಿನವರು ಗಂಡನಲ್ಲದೆ ಬೇರೆ ಯಾರು ಆಗಿದ್ದರು ? ಪೊಲೀಸರ ಗುಮಾನಿ ಹೊಟ್ಟೆ ಅಗ್ರವಾಲ್‌ನ ಮೇಲೆ ಬಿದ್ದು, ಅವನನ್ನು ಎಳೆದುಕೊಂಡು ಹೋಗಿ, ನಿಜಸ್ಥಿತಿಯನ್ನು ಅವನ ಬಾಯಿಯಿಂದ ಬಿಡಿಸಲಿಕ್ಕೆ ಚಚ್ಚಿ, ನೀರುಗಾಯಿ ಮಾಡಿದ್ದರು. ಪಾಪದ ಅಗ್ರವಾಲ್ ಪೊಲೀಸ್‌ರ ಹಿಂಸೆಗೆ ತತ್ತರಿಸಿ, ಅರ್ಧವಾಗಿ ಬಿಟ್ಟಿದ್ದ. ಗುಡಾಣದ ಹೊಟ್ಟೆ, ಇಲಿ ಬಿಲದ ಹಾಗೆ ಆಗಿತ್ತು!

"ನನ್ನ ಹೆಂಡತಿಯ ಕೊಲೆಯನ್ನು ನಾನ್ಯಾಕೆ ಮಾಡಲಿ ಸಾಬ್ ?"

ಹಲುಬಿದ್ದ ನನ್ನ ಸಂಗಡ.

ಸಾಗೂವಿಗೆ ತನ್ನ ಹೆಂಡತಿಯನ್ನು ಕೊಲೆ ಮಾಡಲು ಕಾರಣವಿತ್ತೆಂದು ಹೇಳುತ್ತಾರೆ ಜನರು. ವರ್ಮಾ ಹೇಳಿದ ಹಾಗೆ ಇಬ್ಬರಲ್ಲೂ ವೈಮನಸ್ಸು ಬೆಟ್ಟದಷ್ಟು ಮನೆ ಮಾಡಿತ್ತು. ಹಾಗೂ ತನ್ನ ಹೆಂಡತಿ ಸತ್ತರೆ ಅವಳ ಹಣ ಸಿಗುವ ಕಾರಣವಿತ್ತು. ಹೊಟ್ಟೆ ಅಗ್ರವಾಲ್‌ನಿಗೆ ಗುಡಾಣದಷ್ಟು ಹಣವಿತ್ತು, ಬೆಟ್ಟದಷ್ಟು ಐಶ್ವರ್ಯವಿತ್ತು. ವೈಮನಸ್ಸು ಇರಲಿಲ್ಲ. ಕೊಲೆಗಾರ ಹಣ, ಚಿನ್ನ ಆಭರಣಗಳಿಗೆ ಕೈ ಹಾಕಿರಲಿಲ್ಲ. ಹಾಗಾದರೆ ಯಾರು, ಯಾತಕ್ಕೆ ಅವಳ ಕೊಲೆ ಮಾಡಿದರು? ನಿಗೂಢವಾಗಿತ್ತು ಪ್ರಶ್ನೆ!

ಪಾರಿವಾಳಗಳು ಏತಕ್ಕೋ ಗುಟುರು ಹಾಕುವುದನ್ನು ನಿಲ್ಲಿಸಿ, ಹಾರಿ ಹೋದವು. ಹೊಟ್ಟೆ ಹಸಿದಿರಬೇಕು. ಬೆಳಗಿನ ಉಪಾಹಾರಕ್ಕೆ ಸಮಯವಾಗಿರಬೇಕು ಅವಕ್ಕೆ! ಈ ಎರಡು ಪರಿವಾಳಗಳ ವೈವಾಹಿಕ ಜೀವನ ಎಷ್ಟು ಅನ್ಯೋನ್ಯ, ಎಷ್ಟು ಆನಂದಕರ! ಯಾಕೆ ಮಾನವ ಈ ಪಕ್ಷಿಗಳ ಹಾಗೆ ಇರಲಾರ? ಗಂಡು ಹೆಣ್ಣು ಪಾರಿವಾಳ ಜೀವಮಾನವಿಡೀ ಒಟ್ಟಿಗೆ ಪ್ರೀತಿಯಿಂದ ತಮ್ಮ ಸುಖ ಜೀವನವನ್ನು ಸಾಗಿಸುತ್ತದಂತೆ ಅವುಗಳ ವೈವಾಹಿಕ ಜೀವನವೂ ಒಂದು ಪ್ರೇಮಕಥೆಯೇ?

ಮನಸ್ಸು ಓಡಿತು ಸಾಗೂವಿನ ವಿಚಿತ್ರ ಜೀವನದ ಬಳಿಗೆ. ಹಣಕ್ಕೆ, ಕುಡಿತಕ್ಕೆ ಜೂಜಿಗೆ ಹೆಣಗಿ ಒದ್ದಾಡಿ, ತನ್ನ ಸುಖವನ್ನೇ ಶೂಲಕ್ಕೇರಿಸಿದ ವ್ಯಕ್ತಿಯ ಜೀವನ ಎಂತಹ ವಿಚಿತ್ರ. ಜನ ಯಾಕಾದರೂ ಹಣಕ್ಕಾಗಿ ಒದ್ದಾಡುತ್ತಾರೆ ? ಅದು ಸುಖ ನೀಡುವುದೇ ? ಹಣದಿಂದ ಸುಪ್ಪತ್ತಿಗೆ ಕೊಂಡರೂ ನಿದ್ರೆ ನೀಡುತ್ತದೆಯೆ ? ಅಪಾರ ಆಹಾರ -ಭೋಜನ ಸಿಕ್ಕಿದರೂ ಹಸಿವನ್ನುಂಟು ಮಾಡುತ್ತದೆಯೇ ? ಸಕಲ ಐಶ್ವರ್ಯ ಹೊಂದಿದರೂ, ಸಂಸ್ಕೃತಿ ನೀಡುತ್ತದೆಯೇ ?

ಪಾರಿವಾಳಗಳು ವಾಪಸ್ಸಾದವು. ಬೆಳಗಿನ ಫಲಾಹಾರ ಮುಗಿಸಿರಬೇಕು. ನೆಮ್ಮದಿಯ ಗುಟುರು ಹಾಕತೊಡಗಿದ್ದವು. ಎಂತಹ ಶಾಂತಿಯುತ, ವೈವಾಹಿಕ ಜೀವನ ಇವುಗಳದ್ದು! ನನ್ನ ಹೊಟ್ಟೆ ಹಸಿದು ಉರಿಯತೊಡಗಿದೆಯೆ? ಅಥವ ಪಾರಿವಾಳಗಳ ನೆಮ್ಮದಿಯ ಜೀವನ ಕಂಡು ಹೊಟ್ಟೆ ಉರಿಯತೊಡಗಿದೆಯೇ ?

ಮತ್ತೆ ಮನಸ್ಸು ಸಾಗೂವಿನ ವೈವಾಹಿಕ ದುರಂತ ಜೀವನದ ಬಗ್ಗೆ ಗುಟುರು ಹಾಕತೊಡಗಿತು.

ಮದುವೆ ಒಂದು ಮಿಥ್ಯೆ ಎಂದು ಹೇಳುತ್ತಾರೆ. ಮದುವೆ ಎಂಬ ಮನೆ ತುಂಬ ಸುಖ, ಸಮೃದ್ಧಿ, ಗೆಳೆತನ, ಒಡನಾಡಿತನ, ಪ್ರೇಮ - ಕಾಮಗಳ ಪೂರೈಕೆ, ಎಲ್ಲವೂ ದೊರಕುವೆಂಬ ಮಿಥ್ಯೆಯನ್ನು ನಂಬಿ ಅದರೊಳಗೆ ಹೊಕ್ಕಿ ನೋಡಿದಾಗ, ಭ್ರಮನಿರಸ

ರಾಗುತ್ತಾರಂತೆ. ಖಾಲಿ ಮನೆ ನೋಡಿ ದಂಗಾಗಿ ಬೆಚ್ಚಿ ಹುಚ್ಚರಾಗುತ್ತಾರಂತೆ. ಆದರೆ ನಿಜಸ್ಥಿತಿ ಏನು? ಆ ಖಾಲಿ ಮನೆಯನ್ನು ಮದುವೆಯಾದವ ಪ್ರೇಮವನ್ನು, ಶ್ರಮದಿಂದ ತುಂಬು ಹೃದಯದಿಂದ ತುಂಬಬೇಕಂತೆ! ಮದುವೆ ಎರಡು ದೇಹ ಮತ್ತು ಮನಸ್ಸು ಕೂಡಿಸುವ ವ್ಯವಸ್ಥೆ ಎಂದು ಹೇಳಿದರೂ, ಆ ವ್ಯವಸ್ಥೆಯ ಆಡಳಿತ ಮಾತ್ರ ಒಬ್ಬರ ಕೈಯಲ್ಲಿರುವುದಿಲ್ಲವಂತೆ ! ಆಡಳಿತ ಇಬ್ಬರ ಕೈಯಲ್ಲಿ ಸಿಕ್ಕರೆ ಯಾವ ಸಂಘ ಸಂಸ್ಥೆಗಳು ವ್ಯವಸ್ಥಿತ ರೀತಿಯಲ್ಲಿ ಜರುಗುತ್ತವೆ ?

ಸಾಗೂ ಹಣಕ್ಕೆ ಮದುವೆಯಾದರೂ, ಹೆಂಡತಿಯನ್ನು ಸಾಯಿಸುವ ಸಾಹಸಕ್ಕೆ ಕೈಹಾಕಿದ್ದು ನೀಚತನದ ಪರಮಾವಧಿಯಾಗಿತ್ತು. ಆದರೆ ಅವನು ನಿಜವಾಗಲು ಹಣಕ್ಕೆ ಮದುವೆಯಾದನೆ ? ಅವನ ಬಗ್ಗೆ ಇರುವ ಅಭಿಪ್ರಾಯಗಳನ್ನು ಬಲು ಬೇಗ ನಂಬಿದ ಹಾಗೆ ತೋರಿತು. ವರ್ಮನ ಅಭಿಪ್ರಾಯ ನಂಬುವುವಾದರೆ, ಅವನು ಹೆಂಡತಿಯ ಜೊತೆ ಹತ್ತು, ಹದಿನೈದು ವರ್ಷ ಬಾಳ್ವೆ ಯಾಕಾದರೂ ಮಾಡಬೇಕಿತ್ತು ! ಬರೀ ಹಣಕ್ಕಾಗಿ ಬಾಳ್ವೆ ನಡೆಸಿದನೇ? ಹಣ ಏನು ಬೇಕಾದರೂ ಮಾಡಿಸುತ್ತದಂತೆ. 'ಅದು ಮಾತನಾಡುತ್ತಂತೆ. ನಾವು ಬಹಳ ಉತ್ಸುಕತೆ ಅಂದರೆ ಬಡ್ಡಿ ನೀಡಿ ಅದನ್ನು ಕೇಳುತ್ತೇವಂತೆ!' ಆದರೆ ಹಣ ಮಾತನಾಡದೆ, ಕೇಳದೆ ಓಡಿಯೂ ಹೋಗುತ್ತದೆ ಎಂದು ಹೇಳುವವರೆ ! ಸಾಗೂ ಓಡಿ ಹೋಗುವ ಹಣವನ್ನು ಹಿಡಿದುಕೊಳ್ಳಲು ತನ್ನ ಹೆಂಡತಿಯನ್ನು ಕೊಲೆ ಮಾಡಿದನೆ? ಪದವಿ, ಅಂತಸ್ತು, ರಾಜಕೀಯ, ಅಧಿಕಾರಕ್ಕಾಗಿ ಕೊಲೆ ಸುಲಿಗೆ ಮಾಡುವವರಿಗೆ ಸಾಗೂವನ್ನು ಹೋಲಿಸಿದರೆ ಹೇಗೆ ? ಇಬ್ಬರೂ ಒಂದೇ ಪಂಗಡಕ್ಕೆ ಸೇರಿದ್ದವರೆ! ಯಾರು ಹೆಚ್ಚು? ಯಾರು ಕಮ್ಮಿ? ತನ್ನ ಧ್ಯೇಯಕ್ಕಾಗಿ ಹೊಡೆದಾಡುತ್ತಿರುವ ಸರದಾರಜೀ ಕೊಲೆ, ಸುಲಿಗೆ ಮಾಡಲಿಕ್ಕೆ ತಯಾರ್ ಆಗಿದ್ದಾನೆ! ಇತಿಹಾಸದುದ್ದಕ್ಕೂ ಇನ್ನೊಬ್ಬರ ರಕ್ತ ಹರಿಸಿ ತಮ್ಮ ರಕ್ತ ಉಳಿಸಿ, ಸಿಂಹಾಸನ ಸಂಪಾದಿಸಿದ ಪ್ರಸಿದ್ಧ ಮಹಾ ಪುರುಷರ ಕಥೆ ಓದಿದ್ದು ನಿಜವಲ್ಲವೇ ?

'ಪಟ ಪಟ' ರೆಕ್ಕೆಗಳನ್ನು ಹಾರಿಸಿ, ಶಬ್ದ ಮಾಡುತ್ತಾ, ಪಾರಿವಾಳಗಳು ಹಾರಿ ಹೋದವು. ಏನು ಆಯಿತು ಇವಕ್ಕೆ ? ಮಲಗಿದ್ದ ಹಾಗೇ ಸ್ವಲ್ಪ ಪಕ್ಕಕ್ಕೆ ವಾಲಿ, ಕಿಟಕಿಯ ಹೊರಗೆ ಇಣಕಿದೆ. ಗಡವ ಬೆಕ್ಕೊಂದು ಬಿಸಿಲು ಕಾಯಿಸುತ್ತಾ ಕುಳಿತಿತ್ತು. ಕಾರಣ ಅರಿತು ಮತ್ತೆ ಮಗ್ಗುಲಾದೆ. ಪಾರಿವಾಳಗಳು ಬೆಕ್ಕು ಜಾಗ ಖಾಲಿಮಾಡುವ ತನಕ ವಾಪಸ್ಸು ಬರುವುದಿಲ್ಲವೆಂದು ಖಾತರಿ ಮಾಡಿಕೊಂಡೆ. ಮತ್ತೆ ಮನಸ್ಸಿನ ರೆಕ್ಕೆ ಬಿಚ್ಚಿ ಹಾರತೊಡಗಿತು, ಪಾರಿವಾಳದ ರೆಕ್ಕೆಗಳ ಹಾಗೆ.

"ಸೀಖ್‌ರು ತಮ್ಮ ಸಂಖ್ಯೆಗೆ ಮೀರಿ ದೇಶಕ್ಕಾಗಿ, ತಮ್ಮ ಧರ್ಮಕ್ಕಾಗಿ ಬಲಿದಾನ ಮಾಡಿದರು.'

ಸರದಾರಜೀಯ ಮಾತುಗಳು ನೆನಪಿನ ಪುಟಗಳ ಮೇಲೆ ಮೂಡಿ ಬಂದವು. ಹೌದು ! ಸಾವಿರಾರು ಸೀಖ್ಖರನ್ನು ಕೊಂದು, ಅವರ ನೆತ್ತರನ್ನು ಹರಿಸಿದ್ದರು, ಮೊಘಲ್‌ರು. ಸಿಖ್ಖರ ಗುರು ಅರ್ಜುನ್ ದೇವ, ಸಿಖ್ಖರಿಗೆ ಗ್ರಂಥ ಸಾಹಿಬ್ ಪುಸ್ತಕವನ್ನು ನೀಡಿ, ಅದನ್ನು ಪೂಜಿಸುವಂತೆ ಆದೇಶ ನೀಡಿ, ಬಾದಶಹ್ ಜಹಂಗಿರ್‌ನ ಕೈಲಿ ಚಿತ್ರಹಿಂಸೆಗೀಡಾಗಿ ತನ್ನ ಜೀವನ್ನೇ ತೆತ್ತ ಮೊದಲ ಸೀಖ್ ಗುರು ಹುತಾತ್ಮ! ಅವನ ಬಲಿದಾನದಿಂದ, ಕ್ಷಾತ್ರ ಸ್ವಭಾವಕ್ಕೆ ಮೈಮನಕೊಟ್ಟು ಜಾಹಿರ್ ಅಮೀರಿ, 'ವತನ್ ಫಕೀರಿ' ಎಂದು ಹೇಳಿ ಶಸ್ತ್ರ ಹಿಡಿದ ಗುರು ಹರ ಗೋಬಿಂದ್, ಶೀಖರಿಗೆ ವೀರತನದ ಪಾಠ ಕಲಿಸಿದ ಗುರು. ಕ್ರೂರಿ ಮತಾಂಧ ಔರಂಗ್‌ಜೇಬ್‌ನ ಕ್ರೂರತನ, ಉಪಟಳ ತಾಳಲಾರದೆ, ಹಿಂದೂಗಳು, ಅದರಲ್ಲೂ ಕಾಶ್ಮೀರಿ ಬ್ರಾಹ್ಮಣರು ಗುರು ತೇಘಬಹದೂರ್‌ರನ್ನು ಆಶ್ರಯಿಸಿದಾಗ, ನನ್ನನ್ನು ಮತಾಂತರಗೊಳಿಸಲು ನಿಷ್ಫಲನಾದರೆ, ಬ್ರಾಹ್ಮಣರು ಮತಾಂತರಗೊಳ್ಳಲು ಅಡ್ಡಿಯಾಗುವುದಿಲ್ಲ ಎಂದು ಹೇಳಿ ಕಳುಹಿಸಿದಾಗ, ಸಿಟ್ಟಿಗೆದ್ದ ಬಾದಶಹ ಗುರುವನ್ನು ಸೆರೆ ಹಿಡಿದು, ಅವನ ವಧೆ ಮಾಡಿ, ಗುರುವನ್ನು ಹುತಾತ್ಮನನ್ನಾಗಿ ಮಾಡುತ್ತಾನೆ. ಗುರುವಿನ ಬಲಿದಾನ ಸೀಖ್‌ರ ಕೆಚ್ಚು, ಶಕ್ತಿ, ಪ್ರಾಣತ್ಯಾಗದ ಮೇಲಿನ ಪ್ರೀತಿ ಉಕ್ಕಿ ಹರಿಯುವಂತಾಗಿದ್ದು, ಇತಿಹಾಸ ಸತ್ಯವಲ್ಲವೇ? ಗುರು ಗೋವಿಂದ್ ಸಿಂಹ, ಸೀಖ್ ರಿಗೆಲ್ಲಾ 'ಸಿಂಹ' ದ ಹೆಸರಿಟ್ಟು, ಅವರನ್ನು ತನ್ನ 'ಖಾಲ್ಸಾ' ಸೈನ್ಯಕ್ಕೆ ಸೇರಿಸಿ, ಅವರನ್ನು ಸಿಂಹದ ಮರಿಗಳನ್ನಾಗಿ ಮಾಡಿ, ಅವರಿಗೆ ಹೊಸ ಹುಟ್ಟು, ಪಟ್ಟ ನೀಡಿ, ಹೊಸ ಅಪೂರ್ವ, ವರ್ಣಾರಂಜಿತ ಇತಿಹಾಸವನ್ನೇ ಬರೆದ ವೀರ ಪುರುಷ ! ತನ್ನ ಮಕ್ಕಳನ್ನು ಬಲಿ ಕೊಟ್ಟು, ತಾನು ಮತಾಂಧರ ಕತ್ತಿಗೆ ಬಲಿಯಾದ ಗುರು ಗೋಬಿಂದ್ ಸಿಂಗ್, ಪ್ರಾಯಶಃ ಭಾರತದ ಇತಿಹಾಸದ ಪುಟಗಳಲ್ಲಿ ಚಿನ್ನದ ಅಕ್ಷರಗಳಲ್ಲಿ ಬರೆದಿಡಬಹುದಾದ ಪ್ರಚಂಡ ವ್ಯಕ್ತಿಯಲ್ಲವೆ? ಇಂತಹ ವೀರ ಪುರುಷರು ತಮ್ಮ ಧರ್ಮಗ್ರಂಥವನ್ನು ಅಮೃತಸರ ದಲ್ಲಿನ ಸ್ವರ್ಣಮಂದಿರಲ್ಲಿಟ್ಟು, ಪೂಜಿಸಿ, ಮಂದಿರವನ್ನು ಒಂದು ಅತ್ಯಂತ ಪುಣ್ಯ, ಪವಿತ್ರ ಮಂದಿರವನ್ನಾಗಿ ಮಾಡಿ ಕೃತಾರ್ಥರಾಗಿದ್ದರೆ ಆಶ್ಚರ್ಯ ವೇನಲ್ಲ. ಈ ಮಂದಿರವನ್ನು ಪವಿತ್ರವಾಗಿಡಲು ಸೀಖರು ಮಾಡಿದ ತ್ಯಾಗಕ್ಕೆ ಬೆಲೆ ಕಟ್ಟುವುದಾದರೂ ಹೇಗೆ ?

ಪವಿತ್ರ ಸ್ಥಳವನ್ನಾಗಿ ಮಾಡಿದ ಒಂದು ಜನಾಂಗ, ಮತ್ತೊಂದು ಜನಾಂಗಕ್ಕೆ ಅದನ್ನು ಅಪವಿತ್ರ ಮಾಡಲು ಹೆಣಗುವ ಹವ್ಯಾಸಕ್ಕೆ ಏನು ಕಾರಣ ? ಪ್ರಪಂಚದ ಯಾವುದೇ ಪವಿತ್ರ ಸ್ಥಳವನ್ನು ಹಾಳುಗೆಡುವಲು, ಅಪವಿತ್ರಗೊಳಿಸಲು ನಿರಂತರ ಪ್ರಯತ್ನ ನಡೆಸುವ ಜನರ ಮನೋಭಾವವಾದರೂ ಹೇಗೆ ಮೂಡಿ ಬರುತ್ತದೆ ? ಜೆರೂಸಲಂನಂತಹ ಉತ್ತಮ ನಿದರ್ಶನ ಸಾಕಲ್ಲವೇ ? ಕಾಶಿ, ಮಥುರಾ,

ಅಯೋಧ್ಯಾ, ದ್ವಾರಕಾ ನಮ್ಮಲ್ಲೇ ಇವೆಯಲ್ಲವೇ ? ಹಾಳುಗೆಡಿಸಿ ಅಪವಿತ್ರಗೊಳಿಸುವ ಪ್ರವೃತ್ತಿ ಮನುಷ್ಯನ ಮನಸ್ಸನ್ನು ಏಕೆ ಕಾಡುತ್ತದೆ ? ಒಬ್ಬನಿಗೆ ಪವಿತ್ರ-ವಾದರೆ, ಇನ್ನೊಬ್ಬನಿಗೆ ಅದು ಅಪವಿತ್ರವಾಗುವುದಾದರೂ ಹೇಗೆ ? ಹಾಳು ಮಾಡುವುದು ಕುಲಗೆಡಿಸುವುದು, ಅಪವಿತ್ರಗೊಳಿಸುವುದು, ಮಾನವನ ಹುಟ್ಟು ಗುಣಗಳಲ್ಲಿ ಒಂದಾಗಿದೆಯೊ ? 'ಅಕ್ರ ಮಣ ಪ್ರವೃತ್ತಿ ಮಾನವನ ಹುಟ್ಟುಗುಣಗಳಲ್ಲಿ ಒಂದಾಗಿದೆ ಮತ್ತು ಅದು ನಾಗರೀಕತೆಯ ಅಭ್ಯುದಯಕ್ಕೆ ಕಂಟಕಪ್ರಾಯವಾಗಿದೆ' ಎಂದು ಮನಶ್ಶಾಸ್ತ್ರಜ್ಞರ ಅಭಿಪ್ರಾಯವನ್ನು ನಂಬಬಹುದಾಗಿದೆಯಲ್ಲವೇ ? ವಸ್ತು, ಪ್ರಾಣಿ, ಊರು, ಮನೆ ಮಠ,ಆಹಾರ, ಹಣ, ವ್ಯಾಪಾರ, ಉದ್ಯೋಗ, ರಾಜ್ಯ, ಇತ್ಯಾದಿಗಳ ಮೇಲೆ ಆಕ್ರಮಣ ಮಾಡಿ, ತನ್ನ ದರ್ಪ, ಗರ್ವ, ಆಡಂಬರ, ಪ್ರಭುತ್ವ ಅನಾದಿ ಕಾಲದಿಂದ ಸಾಧಿಸಲು ಸತತವಾಗಿ ಪ್ರಯತ್ನಿಸುತ್ತಿದ್ದರು. ಮಾನವನಿಗೆ, ವಿಧ್ವಂಸ ಮಾಡುವ ಕೆಟ್ಟ ಚಟ ಯಾಕೆ ಹುಟ್ಟಿಕೊಂಡಿತು ? ಅತ್ಯಂತ ಸುಂದರ ಮನೋಹರ, ಪವಿತ್ರ ಸ್ಥಳಗಳ ಧ್ವಂಸ ಮಾಡುವ ಹುಚ್ಚು ಮನೋಭಾವ ಏಕೆ ಹುಟ್ಟಿತು? ಅದರಲ್ಲೂ ಧರ್ಮಕ್ಷೇತ್ರಗಳು, ದೇವ ಮಂದಿರಗಳು, ಪ್ರಾರ್ಥನಾ ಮಂದಿರಗಳು, ಮಾನವನ ಧ್ವಂಸ ಕಾರ್ಯಗಳಿಗೆ ತುತ್ತಾಗುವುದು ಎಂತಹ ವಿಪರ್ಯಾಸ ! ಧರ್ಮಗಳನ್ನು ಮಾನವ ಹುಟ್ಟಿಹಾಕಿ, ಧರ್ಮಕಾರ್ಯಗಳನ್ನು ಅವುಗಳ ಮುಖಾಂತರ ಮಾಡಿ, ಅವುಗಳ ಏಳಿಗೆಗೆ ಅಭಿವೃದ್ಧಿಗೆ ತನ್ನ ತನು, ಮನ, ಧನ ವ್ಯಯ ಮಾಡಿ, ಅವುಗಳ ಅಸ್ತಿತ್ವಕ್ಕೆ ತನ್ನ ಪ್ರಾಣ ತ್ಯಾಗ ಮಾಡಿ, ಮತ್ತೊಬ್ಬರ ಪ್ರಾಣ ತೆಗೆಯಲಿಕ್ಕೂ ತಯಾರಾಗುವುದು ಎಂತಹ ವಿಪರ್ಯಾಸ! 'ಧರ್ಮದಿಂದ ಮಾನವನಾಗಲಾರ; ಧರ್ಮ ದಬ್ಬಾಳಿಕೆಗೆ ಒಳಗಾದ ಮಾನವನ ನಿಟ್ಟುಸಿರು, ಹೃದಯಹೀನ ಪ್ರಪಂಚದ ಹೃದಯ, ಆತ್ಮವಿಲ್ಲದ ಪರಿಸ್ಥಿತಿಯ ಆತ್ಮ: ಅದು ಒಂದು ಅಫೀಮು' ಎಂಬ ಮಾರ್ಕ್ಸ್‌ನ ಉದ್ಗಾರ ಎಷ್ಟು ಸಮಂಜಸ ? ಧರ್ಮವನ್ನು ಉಳಿಸಲು ಅಧರ್ಮದ ಕಾರ್ಯ ಮಾನವ ಎಷ್ಟು ಬಗೆಯಾಗಿ ಮಾಡುತ್ತಿಲ್ಲ ?. ಎಲ್ಲಾ ಧರ್ಮಗಳೂ ಒಳ್ಳೆಯದನ್ನು ಹೇಳಿದರೂ, ಅನುಯಾಯಿಗಳು ಪರಧರ್ಮ ದ್ವೇಷಿಗಳಾಗಿ ಏಕೆ ವರ್ತಿಸುತ್ತಾರೆ ? ಎಲ್ಲಾ ಧರ್ಮಗಳು ದಾರಿ ದೀಪ ಹಚ್ಚಿ ತೋರಿಸಿದರೆ, ಜನರೇಕೆ ಅದನ್ನು ಸುಡುವ ಬೆಂಕಿ ಎಂದು ಬಗೆದು, ಒಬ್ಬರಿಗೊಬ್ಬರು ಸುಟ್ಟು ಏಕೆ ಘಾಸಿ ಮಾಡಿಕೊಳ್ಳುತ್ತಾರೆ ? ಪರಧರ್ಮ ದ್ವೇಷದಿಂದ, ಗುಡಿ, ಗೋಪುರ, ಮಂದಿರ ಧ್ವಂಸಮಾಡಿ ವಿಲಕ್ಷಣ ಸಂತೋಷ ಹೊಂದುವ ಈ ಮಾನವರಿಗೆ ಉತ್ತರವಾಗಿ, ಈಗಾಗಲೇ ಬೃಹತ್ತಾಗಿ ನಿಂತಿರುವ ದೇವರು ನಿರ್ಮಿಸಿದ ಗುಡಿಯನ್ನು ಕಂಡು ಏಕೆ ಆನಂದಿಸಬಾರದು ? ಪ್ರಕೃತಿಯ ಈ ಸೊಬಗಿನ ನೀಲ ಗೋಲ ಆಕಾಶ, ಹಸಿರ ಸೀರೆ ಉಟ್ಟ ನೆಲ, ಪರ್ವತ,

ಕಣಿವೆ, ಜಲಸಾಗರ, ಸರೋವರ, ನದಿ, ಜಲಪಾತ, ಮೋಡ, ಮಳೆ, ಮಿಂಚುಗಳಿಂದ ವಿಜೃಂಭಿಸುತ್ತಿರುವ ಈ ಭೂಮಿಯನ್ನು ಏಕೆ ಪೂಜಿಸ ಬಾರದು ? ಪೋಷಿಸಬಾರದು? ಗರ್ಜಿಸುವ ಸಾಗರದ ಅಲೆಗಳು ಮೇಘ ಸಂದೇಶದ ಮೊರೆ, ಲವಲವಿಕೆ ಹರಿಯುವ ನದಿಗಳ ಝುಳ ಝುಳ ನಾದದ ಸುಲಲಿತ ಗಾನ, ಗಾನಲೋಕದ ಮೊದಲ ಗಾಯಕರಾದ ಪ್ರಕೃತಿಯ ಕೊಡುಗೆಯಾದ ಸುಂದರ ಪಕ್ಷಿಗಳ ಹಾಡು, ಇವುಗಳನ್ನು ಯಾಕೆ ಸ್ವಾದಿಸಿ, ಮೋಹ ಪರವಶರಾಗಿ, ದಿವ್ಯಾನಂದಗೊಳ್ಳ ಬಾರದು ? ದಿವ್ಯಾಮೃತದ ರುಚಿ ಯಾಕೆ ಅನುಭವಿಸಬಾರದು ?

ಕಲ್ಪನಾ ಪ್ರಪಂಚದಲ್ಲಿ ಹುಟ್ಟಿ, ಭ್ರಮಾರಾಜ್ಯದಲ್ಲಿ ವಿಹರಿಸಿ, ಹಗಲುಗನಸು ಕಾಣುತ್ತಿದ್ದ ನನಗೆ ನನ್ನ ಬಗ್ಗೆ ಜುಗುಪ್ಸೆ ಉಂಟಾಯಿತು. ನನ್ನ ಅನಿಸಿಕೆ ಸ್ವಪ್ನ, ಆಸೆ, ಹಂಬಲಗಳನ್ನು ಸೂರ್ಯರೇಷ್ಮೆಯಲ್ಲಿ ಕಟ್ಟಿದ ಹೂವಿನ ಹಾರದಷ್ಟೇ ದಿಟವಲ್ಲವೇ ? ಕನಸುಗಾರ ಚಂದ್ರನ ಬೆಳಕಿನಲ್ಲಿ ಹಾದಿ ಕಂಡುಕೊಳ್ಳು ತ್ತಾನಂತೆ. ಅವನ ಅಪರಾಧವೆಂದರೆ, ಎಲ್ಲರಿಗಿಂತ ಮೊದಲು ಮುಂಜಾನೆಯ ಸೊಬಗನ್ನು ಅನುಭವಿಸುತ್ತಾನುತೆ ! ಸಧ್ಯ ! ನಾನು ಆ ಅಪರಾಧ ಮಾಡುತ್ತಿಲ್ಲ ವಷ್ಟೆ ! ಮುಂಜಾನೆ ಎದ್ದು ವಿಹರಿಸುವ ಅಭ್ಯಾಸ ತಪ್ಪಿ ಎಷ್ಟೋ ವರ್ಷಗಳೇ ಕಳೆದಿವೆ. ಆದರೆ ಕನಸು ಕಾಣುವುದು ಅಪರಾಧವೇ ? ಅಥವಾ ಮೂಢತನವೇ ? ಅಥವಾ ಆಶಿಸ್ತ ಮನಸ್ಸಿನ ಅನಿಸಿಕೆಗಳೇ? ಕನಸು ಕಂಡು ಅದರಂತೆ ಆಗದಿದ್ದರೆ, ಜರುಗದಿದ್ದರೆ, ದೊರಕದಿದ್ದರೆ, ಪ್ರಳಯವಾಗುವ ಸಂಭವವೇನಿಲ್ಲ. ಆದರೆ ಕನಸು ಕಾಣದಿದ್ದರೆ ಮಾತ್ರ ಪ್ರಳಯವಾಗುವುದು ಖಂಡಿತವೆನ್ನುತ್ತಾರೆ ಕೆಲವರು ! ಕನಸು ಕಾಣುವುದು ಮಾನವನ ಹಕ್ಕು. ಅದನ್ನು ಯಾರೂ ಕಸಿಯಲಾರರು ! ಅಂದಮೇಲೆ ನಾನು ಕನಸನ್ನು ಯಾಕೆ ಕಾಣಬಾರದು ? ಘರ್ಷಣೆ ಇಲ್ಲದ, ತಿಕ್ಕಾಟವಿಲ್ಲದ, ಆತಂಕವಿಲ್ಲದ, ಗುಡಿ, ಗೋಪುರ, ಪವಿತ್ರ ಸ್ಥಳವೆಂದು ಹೇಳಲಾಗಿ, ಅವಕ್ಕಾಗಿ ನೆತ್ತರು ಚೆಲ್ಲಾಡದೆ, ಕಾದಾಡದೆ, ಸತ್ಯಗಿರುವ ಜನರು ತಾವು ಇದ್ದಲ್ಲೇ ತಮ್ಮ ಹೃದಯದಲ್ಲೇ ಒಂದು ಗುಡಿ ಕಟ್ಟಿಕೊಂಡು ತಮ್ಮ ದೇವರನ್ನು ಅಲ್ಲೇ ಪೂಜಿಸಿ, ಹಾಡಿ, ಕೊಂಡಾಡುವ ಅನುಪಮ ನೋಟವನ್ನು ಕಲ್ಪಿಸಿ ಕನಸನ್ನು ಕಾಣುವ, ಕಂಡು ಆರಾಧಿಸುವ ಮನೋ ಭಾವವನ್ನು ಏಕೆ ಅನುಭವಿಸಿಬಾರದು ?

ಆದರೆ, ಕನಸೆಲ್ಲಾ ನನಸಾಗುವ ಕನಸು ಕಾಣುವುದು ತಪ್ಪೇ ? ಸರಿಯೇ?

'ಕನಸೆಲ್ಲಾ ನನಸಾಗಬೇಕಾದರೆ, ನಿದ್ರೆ ಮಾಡಬಾರದಂತೆ ! ಒಂದು ಗಾದೆಯ ಪ್ರಕಾರ.

'ಸಂಸಾರ ಸಾಗರದಲ್ಲಿ ಈಜಬೇಕು, ಈಜಿ ಜೈಸಬೇಕು ! ಮುಳುಗಿ ಸಾಯ

ಬಾರದು!' ಎಂಬ ವರ್ಮನ ಮಾತುಗಳು ಕಿವಿಯಲ್ಲಿ ಮೊಳಗಿದವು. ಅವನ ಹೇಳಿಕೆಯಂತೆ, ಗುಡಿ, ಗೋಪುರ ಕಟ್ಟಿ ಅದಕ್ಕಾಗಿ ಹೊಡೆದಾಡಿ, ಬಡಿದು, ಅದರಲ್ಲೇ ಮುಳುಗಿ ಸಾಯುವುದಕ್ಕಿಂತ, ನಮ್ಮ ಹೃದಯಮಂದಿರದಲ್ಲೇ ದೇವರನ್ನು, ಗುಡಿಯನ್ನು ಕಟ್ಟಿ ಸುಖಸಾಗರದಲ್ಲಿ ಈಜಾಡಬಾರದೇಕೆ ?

'ಪಟ್ !ಪಟ್!' ಬಾಗಿಲು ಬಾಡಿದ ಶಬ್ದ ಕೇಳಿ, ಗಲಿಬಿಲಿಗೊಂಡು ಹಾಸಿಗೆಯಿಂದ ಮೇಲೆಕ್ಕೆ ಎದ್ದು, ಬಾಗಿಲ ಬಳಿ ಓಡಿ, ಚಿಲುಕ ತೆರೆದೆ. ಕೈಯಲ್ಲಿ ಇಂಗ್ಲಿಷ್ ದಿನ ಪತ್ರಿಕೆ ಹಿಡಿದು, ಮನೆ ಮಾಲಿಕ ಸಿಂಧೀ ನಿಂತಿದ್ದ. ಮುಖ ಗಾಬರಿಗೊಂಡಿತ್ತು. ಬೆಳ್ಳಗಿನ ಮುಖ ಮತ್ತೂ ಬಿಳಿಚಿಕೊಂಡು, ತಲೆ ಕೂದಲು ಕೆದರಿ ಅಸ್ತವ್ಯಸ್ತಗೊಂಡು, ನೆಲ ಕಚ್ಚಲು ನಿಂತಿದ್ದವು.

"ಏನು ಸಮಾಚಾರ ? ಒಳಗೆ ಬನ್ನಿ!" ಒಳಗೆ ಬರಲು ಅವನನ್ನು ಆಹ್ವಾನಿಸಿದೆ.

"ತೆಗೆದುಕೊಳ್ಳಿರಿ ಪೇಪರನ್ನು ! ಓದಿರಿ!" ಹೆದರಿದ ಧ್ವನಿಯಲ್ಲಿ ನುಡಿದು, ಪೇಪರನ್ನು ಕೈಗೆ ನೀಡಿದ.

'ಅಮೃತಸರದ ಸ್ವರ್ಣಮಂದಿರಕ್ಕೆ ಸೇನೆಯ ಪ್ರವೇಶ ! ಹಲವಾರು ಮಂದಿಯ ಸಾವು ನೋವು !'

ಬಹಳ ದಿನಗಳಿಂದ ನಿರೀಕ್ಷಿಸುತ್ತಿದ್ದ ಸುದ್ದಿ, ಈ ದಿನ ದಿಟವಾಗಿದ್ದವು. ಸೈನ್ಯದ ಕಾರ್ಯಚರಣೆ ಜರುಗುವ ಸಾಧ್ಯತೆ ತಳ್ಳಿಹಾಕದಿದ್ದರೂ, ಮಂದಿರದೊಳಗೆ ಧಾಳಿ ನಡೆಸುವುದರ ಬಗ್ಗೆ ಅನುಮಾನವಿದ್ದೇ ಇದ್ದಿತು.

ಮುಂದೆ ಏನಾಗಬಹುದು ? ಚಿಂತಾಕ್ರಾಂತನಾದ ನನ್ನ ಮುಖ ನೋಡಿ, ಸಿಂಧೀ ಮಾಲೀಕ ಹೇಳಿದ '

"ಹುಶಾರಾಗಿರಿ ಸಾಬ್ !"

ಅವನ ಎಚ್ಚರಿಕೆ ಕೇಳಿ ನನಗೆ ಆಶ್ಚರ್ಯವಾಯಿತು. ಸ್ವರ್ಣಮಂದಿರಕ್ಕೆ ನುಗ್ಗಿದರೆ ನನ್ನ ಹೃದಯಮಂದಿರಕ್ಕೆ ನುಗ್ಗಿದಂತಾಯಿತೆ ? ನನ್ನ ಹೃದಯ ಘಾಸಿಯಾಗಬೇಕೆ ? ಅಥವಾ ಘಾಸಿಯಾಗಿದೆಯೆ ? ಆಗದಿದ್ದರೆ ಮುಂದೆ ಆಗುವ ಸಾಧ್ಯತೆ ಇದೆಯೆ?

"ಹುಶಾರಾಗಿರಿ ಸಾಬ್ !"

ಸಾಗೂವಿನ ಎಚ್ಚರಿಕೆ ನೆನಪಿಗೆ ಬಂತು. ಶಾಖೆಯಲ್ಲಿನ ನೌಕರರ ಬಗ್ಗೆ ಎಚ್ಚರಿಕೆ ನೀಡಿದ್ದ ಸಾಗೂ ನನ್ನ ಮೇನೇಜರ್‌ಗಿರಿಯ ವೈಖರಿ, ಅವರಿಗೆ ದಾದಾಗಿರಿ ಎನ್ನಿಸಿ ನನ್ನ ಕೈಕಾಲು ಮುರಿದು ನನ್ನೂರಿಗೆ ಕಳುಹಿಸುವ ಬೆದರಿಕೆ ಹಾಕಿದ್ದರು. ಈಗ ಸ್ವರ್ಣ ಮಂದಿರಕ್ಕೆ ಸೈನ್ಯ ನುಗ್ಗಿಸಿ ಅದರಿಂದ ಆಗುವ ಅನಾಹುತ, ಗಲಾಟೆ, ಕಾಡ್ಗಿಚ್ಚು, ನನ್ನನ್ನು ಆವರಿಸಬಹುದೆಂಬ ಎಚ್ಚರಿಕೆ ನೀಡುತ್ತಿರುವ ಈ ಸಿಂಧೀ ಮಾಲೀಕನ

ಎಚ್ಚರಿಕೆಯ ಅಗ್ನಿಕುಂಡಕ್ಕೆ ನಾನೇಕೆ ಬಲಿಯಾಗಬೇಕು? ಆದರೆ ಈ ಆತಂಕ, ಅಶಾಂತಿಗಳು ಮನುಷ್ಯನ ಹೃದಯದಲ್ಲಿ ಗಟ್ಟಿಯಾಗಿ ಮನೆಮಾಡಿಕೊಂಡಿದ್ದಾದರೂ ಏಕೆ ? ಅವನ್ನು ಓಡಿಸಲು ಯಾವ ಕೋರ್ಟ್ ಕಚೇರಿಗಳಿಂದಲೂ ಸಾಧ್ಯವಿಲ್ಲವೇ? "ಮೂರ್ಖರು ಮತ್ತು ಸನ್ಯಾಸಿಗಳಿಬ್ಬರ ಹೃದಯದಲ್ಲಿ ಆತಂಕ ಮನೆ ಮಾಡಿಕೊಳ್ಳುವುದಿಲ್ಲವಂತೆ". ನಾನು ಸನ್ಯಾಸಿಯಾಗಲೆ ?

ಲಗುಬಗನೆ, ಸ್ನಾನ ಮಾಡಿ, ಬಟ್ಟೆ ಧರಿಸಿ, ಶಾಖೆಗೆ ಹೊರಟೆ. ದಿಲ್ಲೀ ನಗರ ಎಂದಿನಂತೆ ತನ್ನ ಎಲ್ಲಾ ನಾಗರೀಕರನ್ನು ಸುಖ, ದುಃಖ, ಸಿಟ್ಟು, ಸೆಡವು, ಆಸೆ ನಿರಾಸೆ, ಎಲ್ಲವನ್ನೂ ಹೊತ್ತು ತ್ವರೆಯಿಂದ ಬೆಳೆಯುವ ದೃಶ್ಯ ಕಂಡುಬಂದಿತು. ನಾನೂ ಅದರಲ್ಲಿ ಲೀನವಾಗಿ ಶಾಖೆಗೆ ಬಂದಾಗ, ಶಾಖೆಯ ಸಿಬ್ಬಂದಿಗಳು, ಗುಂಪಾಗಿ ಬಹಳ ಶ್ರದ್ಧೆಯಿಂದ ಸಮಾಲೋಚನೆ ನಡೆಸುವ ದೃಶ್ಯ ನೋಡಿ, ನನ್ನ ಮಂದಿರಕ್ಕೆ ಲಗ್ಗೆ ಹಾಕುವ ಯೋಜನೆ ಖಂಡಿತ ಜರುಗುತ್ತದೆ ಎಂದು ಮನವರಿಕೆ ಆಯಿತು.

ಕುರ್ಚಿಯಲ್ಲಿ ಕುಳಿತು ವರ್ಮನಿಗೆ ಹೇಳಿಕಳುಹಿಸಿದೆ. ವರ್ಮ ಬಂದೊಡನೆ, ಹೇಳಿದ:

"ಭಿಂಡರ್ ವಾಲೆ ಸತ್ತನಂತೆ ಸಾಬ್ !"

ಒಂದು ಕ್ಷಣ ಅವಾಕ್ಕಾದೆ. ತಕ್ಷಣ ಚೇತರಿಸಿಕೊಂಡು, ಕೇಳಿದೆ.

ಪ್ರಪಂಚದ ಹೆಚ್ಚಿನ ಜನರು ತಮ್ಮ ಜೀವನದ ಮುಖ್ಯ ಭಾಗವನ್ನು ತಮ್ಮ ಉಳಿದ ಭಾಗದ ಜೀವನವನ್ನು ದುಃಖಮಯವನ್ನಾಗಿ ಮಾಡಲು ಸತತ ಪ್ರಯತ್ನ ಮಾಡುತ್ತಾರಂತೆ!

" ಮುಂದೆ ಏನಾಗುವುದು ?"

ನನ್ನ ಧ್ವನಿಯಲ್ಲಿ ಯಥಾಪ್ರಕಾರ, ನನ್ನ ಬ್ಯಾಂಕಿಂಗ್ ಔದ್ಯೋಗಿಕದ ಆತಂಕ, ಉದ್ವೇಗದ ಕಾಯಿಲೆಯ ಲಕ್ಷಣಗಳು ಗೋಚರಗೊಂಡವು.

ಭಿಂಡರ್‌ವಾಲೆಯನ್ನು ಕೊಂದು ಯಾರಿಗೆ ಹೊಸ ಜೀವನವನ್ನು ನೀಡಿದರು? ಇದರಲ್ಲಿ ಯಾರ ತಪ್ಪಿದೆ ?

"ಈ ದಿನ ಸಾಯಂಕಾಲ ಕಪೂರ್‌ನನ್ನು ನೋಡಲು ಹೋಗೋಣವೇ ಸಾಬ್?"

'ಕಪೂರ್'ನ ಹೆಸರು ಕೇಳಿದ ಕೂಡಲೆ ನನ್ನ ಕುತೂಹಲ ಕೆರಳಿ, ಮೈ ಮನಸ್ಸು ಉತ್ಸುಕತೆಯಿಂದ ಪುಳಕಿತವಾಯಿತು.

ಸಾಯಂಕಾಲ, ಶಾಖೆ ಕೆಲಸ ಮುಗಿಸಿ, ಮಾಳವೀಯನಗರದಲ್ಲಿನ ಕಪೂರ್‌ನ ಮನೆಗೆ ಬಂದಾಗ ಗಂಟೆ ೬ ಆಗಿತ್ತು.

ಬಾಗಿಲು ಬಡಿದೊಡನೆ, ಕದ ತೆರೆದುಕೊಂಡಿತು. ಕಪೂರ್‌ನ ಬದಲು ಕುಮಾರಿ ಕಮಲ ಬಾಗಿಲು ತೆರೆದು ನಮ್ಮನ್ನು ನೋಡಿ ಚಕಿತಳಾಗಿ ಒಳಗೆ ಬರಲು ಆಹ್ವಾನಿಸಿದಳು. ಸಂಕೋಚ, ಪೇಚಾಟ ಅಚ್ಚರಿಗೆ ಎಡೆಮಾಡಿತ್ತು.

ವರ್ಮನ ಮುಖವನ್ನು ನೋಡಿದೆ. ಅವನ ಮುಖ ಎಂದಿನಂತೆ ಪ್ರಜ್ಞಾರೂಢವಾಗಿತ್ತು. ಭಾವನೆಗಳ ವೈಭವ ಅವನ ಮುಖದಲ್ಲಿ ಕಾಣಬರಲಿಲ್ಲ.

ಒಳಗೆ ಬಂದು, ಸೋಫಾದಲ್ಲಿ ಆಸೀನರಾದೆವು. ಕುಮಾರಿ ಕಮಲ ನಮ್ಮ ಹಿಂದೆ ಬಂದವಳು, ಕೋಣೆಯೊಳಗೆ ಹೋಗಿ, ಕೆಲವೇ ನಿಮಿಷಗಳಲ್ಲಿ ವಾಪಸ್ಸಾದಳು. ಅವಳನ್ನು ಹಿಂಬಾಲಿಸಿ ಕಪೂರ್ ನಾವು ಕುಳಿತ ಕಡೆ ನಿಧಾನವಾಗಿ ನಡೆದು ಬಂದ. ಈತ ನಾನು ಈ ಹಿಂದೆ ನೋಡಿದ ಕಪೂರ್‌ನಾಗಿರಲಿಲ್ಲ. ಅವನ ಆರೋಗ್ಯ ಕುಂದಿರುವ ದೃಶ್ಯ ಕಣ್ಣಿಗೆ ರಾಚಿ ಬಡಿಯಿತು. ಕಣ್ಣುಗಳು ಗುಳಿ ಬಿದ್ದು ಕೆನ್ನೆಗಳು ಚಪ್ಪಟೆಯಾಗಿ, ಹುಲುಸಾಗಿ ಬೆಳೆದ ಗಡ್ಡ ಅವನ ಆರೋಗ್ಯಕರ ಟಮೆಟೋ ಬಣ್ಣವನ್ನು ಮರೆಮಾಚಿತ್ತು.

"ಹೇಗಿದ್ದೀರಾ ?"

ನನ್ನ ಪ್ರಶ್ನೆಗೆ ಉತ್ತರ ನೀಡದೆ, ಕಪೂರ್ ಕ್ಷೀಣವಾಗಿ ನಕ್ಕ.

ಕ್ಷಣ ಹೊತ್ತು ಮೌನ ನಮ್ಮನ್ನ ಆವರಿಸಿತು.

ಕುಮಾರಿ ಕಮಲಾ, ಅಡಿಗೆ ಮನೆ ಕಡೆ ಸಾಗಿದಳು. ಪ್ರಾಯಶಃ ನಮಗೆ ಚಾ ತರಲೆಂದು.

"ತಂದೆ ಹೇಗಿದ್ದಾರೆ ?"

"ಮಲಗಿದ್ದಾರೆ. ಯಾವಾಗಲೂ ನಿದ್ರೆ ಮಾಡುತ್ತಾ ಇರುತ್ತಾರೆ. ಸಾಯಲಿಕ್ಕೆ ಅಭ್ಯಾಸ ನಡೆಸುತ್ತಾ ಇದ್ದಾರೆ."

ಸಾಯಲಿಕ್ಕೆ ಅಭ್ಯಾಸ? ಎಂತಹ ಮಾತು?

"ನೀವು ಹೇಗಿದ್ದೀರಿ?" ಮತ್ತೆ ಪ್ರಶ್ನಿಸಿದೆ.

"ದಿನ ದೂಡುತ್ತಾ ಇದ್ದೇನೆ. ವಯಸ್ಸಾಗುವುದನ್ನೇ ಕಾಣುತ್ತಾ, ಅನುಭವಿಸುತ್ತಾ ಇದ್ದೇನೆ."

ವಿರಕ್ತಿಯಾದ ಹಾಗೆ ಕಾಣುತ್ತಾನಲ್ಲ ! ಏನಾಗಿದೆ ಇವನಿಗೆ ? ವಿರಕ್ತಿಪಾಶ ಸೆಳೆದ ಹಾಗೆ ತೋರಿದರೂ, ಕುಮಾರಿ ಕಮಲಳ ಪಾಶ ಇವನನ್ನು ಬಂಧಿಸಿದ ಹಾಗೆ ತೋರುತ್ತದಲ್ಲ !

ನಾನು ಎಣಿಸಿದಂತೆ, ಕುಮಾರಿ ಕಮಲಾ ಎರಡು ಲೋಟ ಚಾ ಹಿಡಿದುಕೊಂಡು

ಬಂದು, ಟೀಪಾಯಿ ಮೇಲೆ ಇಟ್ಟಳು. ನಾನು ಅವಳ ಮುಖ ನೋಡಿ ನಸುನಕ್ಕು ಕೇಳಿದೆ.

"ಗಂಡಸರ ಮೇಲಿನ ಕೋಪ ಕಡಿಮೆಯಾದ ಹಾಗೆ ತೋರುತ್ತದೆಯಲ್ಲ!"

ಮಾತುಗಳು ಬಾಯಿಯಿಂದ ಹೊರಬಿದ್ದಿದ್ದವು. ಈ ಸಮಯ, ಸಂದರ್ಭದಲ್ಲಿ ಉಚಿತವೋ ಇಲ್ಲವೋ ಎಂಬ ಆತಂಕ ಆವರಿಸಿತು. ಕೆಳಗೆ ಬಿದ್ದ ಮಾತುಗಳನ್ನು ಹೊಟ್ಟೆಯಲ್ಲಿ ವಾಪಸ್ಸು ಹಾಕಿಕೊಳ್ಳಲಾಗುವುದೇ ?

"ಚಾ ಕುಡಿಯಿರಿ" ಮೆಲ್ಲನೆ ಹೇಳಿದಳು ಕುಮಾರಿ ಕಮಲ.

ಚಾ ಬಟ್ಟಲು ಕೈಗೆ ಎತ್ತಿಕೊಂಡು, ಚಾ ಹೀರತೊಡಗಿದೆ. ಚಾ ಚೆನ್ನಾಗಿತ್ತು. ಕುಡಿಯಲು ಯೋಗ್ಯವಾಗಿ, ರುಚಿಕರವಾಗಿತ್ತು. ಚಾ ಕುಡಿದು, ಬಟ್ಟಲು ಬರಿದು ಮಾಡಿ, ಟೀಪಾಯ್ ಮೇಲೆ ಇಟ್ಟೆ. ನನ್ನನ್ನು ಅನುಸರಿಸಿ, ವರ್ಮಾ ಕೂಡ ಚಾ ಕುಡಿದು ಖಾಲೀ ಬಟ್ಟಲನ್ನು ಕೆಳಗೆ ಇರಿಸಿದ.

"ಇವಳು ಈಗ ನಮ್ಮ ಮನೆಯಲ್ಲೇ ಇರುತ್ತಾಳೆ. ನನಗೆ ಆರೋಗ್ಯ ಸುಧಾರಿಸಿಕೊಳ್ಳುವವರೆಗೆ."

ನಿಧಾನವಾಗಿ ಹೇಳಿದ ಕಪೂರ್

ತಂದೆಯ ಮದುವೆಯಿಂದ ಗಂಡಸು ಜಾತಿಯನ್ನು ಪ್ರಬಲವಾಗಿ ದ್ವೇಷಿಸುತ್ತಿದ್ದ ಈ ಮಹಿಳೆ, ಕಪೂರ್‌ನ ರೋಗ ಗುಣಪಡಿಸುವುದರಲ್ಲಿ ಶ್ರಮ ವಹಿಸುತ್ತಿರುವ ರೀತಿ ಕಂಡು ವಿಸ್ಮಯಗೊಂಡೆ. ಆಶ್ರಯದಾತಳಾಗಿ, ಮಾನವ ಹಿತದೃಷ್ಟಿಯುಳ್ಳವಳಾಗಿ, ಉಪಕಾರ, ದೈನ್ಯತೆಯ ಮೂರ್ತಿಯಾಗಿ, ಸೇವಾ ಕನ್ಯೆಯಾಗಿ ನನ್ನ ಮುಂದೆ ನಿಂತಿರುವುಳೆ ಈ ಕುಮಾರಿ ಕಮಲಾ? ಆ ದರ್ಪ, ಬಿಂಕದ ಕುಮಾರಿ ಸಮಾಧಾನ ಚಿತ್ತ ಸಹನಾ ಕುಮಾರಿಯಾಗಿ ಪರಿವರ್ತನೆಯಾಗಿದ್ದು ಹೇಗೆ ?

"ಆ ದಿನ ನಮ್ಮನ್ನು ಬಿಟ್ಟು ಯಾಕೆ ಹೋಗಿದ್ದು?"

ಅಮೃತಸರದಲ್ಲಿ ನಡೆದ ಘಟನೆ ಬಗ್ಗೆ ವಿವರಗಳನ್ನು ಪಡೆದುಕೊಳ್ಳುವ ಬಗ್ಗೆ ನನ್ನ ಆಸಕ್ತಿಗೆ ಪೀಠಿಕೆ ಹಾಕಿದೆ.

ಕಪೂರ್, ವರ್ಮನ ಮುಖವನ್ನೊಮ್ಮೆ ನೋಡಿ, ಕಿಟಕಿಯ ಕಡೆ ಮುಖ ಮಾಡಿದ. ಎಲೆಕ್ಟ್ರಿಕ್ ದೀಪದ ಬೆಳಕು ಚುರುಕಾಗಿ ಅವನ ಮೇಲೆ ಬಿದ್ದು, ಅವನ ಕೆದರಿದ ತಲೆ ಕೂದಲುಗಳು ಕಪ್ಪಾಗಿ ಹೆಚ್ಚು ಕಪ್ಪಾಗಿ ಕಂಡವು. ನಿಧಾನವಾಗಿ ಅವನು ಕುಳಿತಲ್ಲಿಂದ ಎದ್ದು, ಕಿಟಕಿಯ ಬಳಿ ಹೋಗಿ ಬಾಗಿಲು ತೆರೆದು, ತಂಗಾಳಿ ಒಳಗೆ ಬರಲು ಅನುವು ಮಾಡಿ ವಾಪಸ್ಸು ಬಂದು ಕುಳಿತ.

"ಸರದಾರ್‌ಜೀಯನ್ನು ನೋಡಲು ಹೋಗಿದ್ದೆ "

ನನಗೆ ಈ ಮೊದಲೇ ತಿಳಿದಿದ್ದ ವಿಷಯ ಅದು.

"ಅವನು ತಂಗಿದ್ದ ಅಥವಾ ಅವಿತು ಕುಳಿತಿದ್ದ ವಿಳಾಸ ನಿನಗೆ ಹೇಗೆ ಗೊತ್ತಾಯಿತು?"

"ಅದನ್ನು ನಿಮಗೆ ಹೇಳಬೇಕೇನು ?"

ತುಂಟತನವಿತ್ತೆ ಅವನ ಧ್ವನಿಯಲ್ಲಿ ? ಅಥವಾ ಅಸಮಾಧಾನ?

"ಅವನನ್ನು ಹುಡುಕಿಕೊಂಡು ಹೋದದ್ದೇ ನನ್ನ ಕಷ್ಟಗಳಿಗೆ ನಾಂದಿಯಾಯಿತು!"

ಮುಖ ಕೆಳಗೆ ಹಾಕಿದ ಕಪೂರ್ ದುಃಖಿಸುತ್ತಿದ್ದಾನೆಯೆ?

"ಬೇಗ ಮುಗಿಸು ನಿನ್ನ ಕಥೆ. ನಾನು ಬೇಗ ಮನೆಗೆ ಹೋಗಬೇಕು" ವರ್ಮಾ ಬಡಬಡಿಸಿದ.

ಕಪೂರ ತಲೆ ಎತ್ತಿ ವರ್ಮನ ಮುಖ ನೋಡಿ, ನುಡಿದ.

"ಈ ನಿಮ್ಮ ಸ್ನೇಹಿತ ವರ್ಮಾ ನನ್ನ ಸಹಾಯಕ್ಕೆ ಬಾರದಿದ್ದರೆ, ಅಮೃತಸರದ ಜೈಲ್‌ನಲ್ಲಿ ಇನ್ನೂ ಕೊಳೆಯುತ್ತಿದ್ದೆ."

ವರ್ಮಾನ ಉಪಕಾರ ಸ್ಮರಣೆ ಮಾಡಿದ ಕಪೂರ್.

"ಹೊಗಳಿಕೆ ಬೇಡ ! ನಾನು ಬಾಯಿ ಬಿಟ್ಟರೆ, ತೆಗಳಿಕೆ ಶುರು ಮಾಡುತ್ತೀಯ. ಈಗ ನಿನ್ನ ಕಥೆ ಬಿಚ್ಚು!"

ವರ್ಮನ ಆಗ್ರಹ ಕೇಳಿ, ಕಪೂರ್ ನವಿರಾಗಿ ನಕ್ಕ. ನಕ್ಕಿದ್ದು ಕೆಲವೇ ಕ್ಷಣಗಳು ಮಾತ್ರ. ಮುಖ ಗಂಟು ಮಾಡಿಕೊಂಡ. ಕಣ್ಣುಗಳು ತೀಕ್ಷ್ಣವಾದವು.

"ಸೋರುವ ಮಾಡು, ಮೊಘಲ್ ಕಾಲದ ಗೋಡೆಗಳು, ಮುರಿದು, ಹರಿದು ಹೋದ ಕಿಟಕಿ ಬಾಗಿಲುಗಳು, ಧೂಳು ತುಂಬಿದ ಮಣ್ಣಿನ ನೆಲ, ರಕ್ತ ಹೆಪ್ಪುಗಟ್ಟಿಸುವ ವಾತಾವರಣ. ಇದು ಸರದಾರ್‌ಜೀ ಇದ್ದ ಮನೆ... ಅಲ್ಲ... ಗುಡಿಸಲು. ತಲೆ ಮರೆಸಿ ಅವಿತುಕೊಂಡಿದ್ದ ಗೂಡು. ಯಾರಿಗೂ ಸಂಶಯ ಬರದ ರೀತಿಯಲ್ಲಿ ವಾಸ ಮಾಡಿಕೊಂಡಿದ್ದ. ನಾನು ಅವನ ಪತ್ತೆ ಹಚ್ಚಿದ್ದೆ. ಅದೇ ನನಗೆ ಮುಳುವಾಯಿತು...?"

ಮಾತು ನಿಲ್ಲಿಸಿ, 'ನೀರು ಬೇಕು' ಎಂದು ಸನ್ನೆ ಮಾಡಿದ. ಕುಮಾರಿ ಕಮಲಳಿಗೆ ಹೇಗೆ ಅರಿವಾಯಿತೋ ಅವನ ಸನ್ನೆ! ಒಳಗೆ ಆಲೈಸುತ್ತಾ ಇದ್ದವಳು, ಲಗುಬಗೆಯಿಂದ ಒಂದು ಲೋಟ ನೀರು ತಂದು ಅವನ ಕೈಗೆ ಇತ್ತಳು. ಸಣ್ಣಗೆ ತುಟಿಯಲ್ಲೇ ನಗುತ್ತಾ, ಲೋಟ ಕೈಗೆ ತೆಗೆದುಕೊಂಡು, ತುಟಿಗೆ ಅದನ್ನು ತಾಗಿಸಿ, ನೀರನ್ನು ಹೀರಿದ.

" 'ನೀನು ಯಾಕೆ ಇಲ್ಲಿಗೆ ಬಂದೆ?' ಸರದಾರ್‌ಜೀ ಕಿರಿಚಿದ್ದ. ನನ್ನನ್ನು ನೋಡಿ ಸಂತಸಪಡಲಿಲ್ಲ. ಅವನು ಸಂತಸದ ಬದಲು ಕಡು ಕೋಪ ಪ್ರದರ್ಶಿಸಿದ್ದ. ನಾನು

ಉತ್ತರಿಸಿದೆ, ಸಮಾಧಾನದಿಂದ ಅವನ ಬಳಿ ಸಾರಿ, ಬಳಿಯಲ್ಲೆ ಕುಳಿತೆ, "ನಿನಗೇನಾಗಿದೆ? ಏಕೆ ಇಷ್ಟು ಕೋಪ?" ಎಂದು ಕೇಳಿದಕ್ಕೆ, ಮತ್ತೆ ಕೆಂಡ ಕಾರಿದ. 'ನೀನು ಯಾಕೆ ಇಲ್ಲಿಗೆ ಬಂದೆ? ಯಾರು ಕಳುಹಿಸಿದರು ನಿನ್ನನ್ನು? 'ಯಾರೂ ಕಳುಹಿಸಲಿಲ್ಲ. ನಿನ್ನನ್ನು ನೋಡಲೂ ಬರಲಿಲ್ಲ. ಸ್ನೇಹಿತರ ಜೊತೆಯಲ್ಲಿ ಸ್ವರ್ಣ ಮಂದಿರ ನೋಡಲು ಬಂದೆ. ಇದ್ದಕ್ಕಿದ್ದ ಹಾಗೆ ನಿನ್ನನ್ನು ನೋಡುವ ಮನಸ್ಸಾಯಿತು. ಬಂದೆ. ಇದರಿಂದ ನಿನಗೇನು ನಷ್ಟ?' ' ನಷ್ಟ? ಬೇವಕೂಫ್? ಬದ್ಮಾಷ್! ನೀನು ಬಂದದ್ದರಿಂದ ನನ್ನ ಪ್ರಾಣಕ್ಕೆ ಸಂಚಕಾರ ಬಂದಿದೆ. ಮೊದಲು ಇಲ್ಲಿಂದ ಹೊರಟು ಹೋಗು' ಸಣ್ಣದಾಗಿ ಚೀರಿದ ಅವ..... ನನಗೇನು ತೋಚಲಿಲ್ಲ. ಎದ್ದು, ಹೊರಗೆ ಕಾಲಿರಿಸಿದೆ. ಬಾಗಿಲ ಬಳಿ ಬಂದಾಗ ಆಘಾತ ಕಾದಿತ್ತು."

ಮಾತು ನಿಲ್ಲಿಸಿದ ಕಪೂರ್ ನೀರಿನ ಲೋಟ ಕೈಗೆ ತೆಗೆದುಕೊಂಡು ನೀರನ್ನು ಹೀರಿದ. ಲೋಟ ಕೆಳಗಿಟ್ಟು, ನಮ್ಮ ಕಡೆ ದೃಷ್ಟಿ ಹಾಯಿಸಿದ. ಮುಖದ ಮೇಲೆ ಬೆವರಿನ ಹನಿಗಳು ಎಲಕ್ಟ್ರಿಕ್ ಬಲ್ಬ್‌ನ ಬೆಳಕಿಗೆ ಹೊಳೆದವು.

"ಗನ್ ಹಿಡಿದ ಪೊಲೀಸರು ಯಮದೂತರಂತೆ ಬಾಗಿಲ ಬಳಿ ನಿಂತಿದ್ದರು.... ಒಬ್ಬ ನನ್ನ ಎರಡು ಭುಜವನ್ನು ಹಿಡಿದು ಬಲವಾಗಿ ಹಿಂದಕ್ಕೆ ನೂಕಿದ. ಎದುರಿಗಿದ್ದ ಗೋಡೆಗೆ ಬೆನ್ನು ತಲೆ ಬಡಿದು ನಾನು ಕುಸಿದು ಕುಳಿತೆ. ಸರದಾರ್‌ಜೀ ಪರಾರಿಯಾಗುವ ಯತ್ನದಲ್ಲಿ, ಬಾಗಿಲ ಬಳಿ ಹಾರಿದ. ಆದರೆ ಹತ್ತಾರು ಕೈಗಳು ಅವನನ್ನು ಹಿಡಿದು ನೆಲಕ್ಕೆ ಬೀಳಿಸಿ, ಕಾಲುಗಳು ಅವನನ್ನು ಒದೆಯಲಾರಂಭಿಸಿದವು. ಪೆಟ್ಟುಗಳು, ಬಲವಾಗಿದ್ದವು. ಯಾಕೆಂದರೆ ಸ್ವಲ್ಪ ಹೊತ್ತಿನಲ್ಲೇ ಅವನಿಂದ ಚೀರುವಿಕೆ, ನರಳುವಿಕೆ ನಿಂತವು... ಒಬ್ಬ ಪೊಲೀಸ್ ಪ್ಯಾದೇ ನನ್ನ ಬಳಿ ಬಂದು, ನನ್ನ ತಲೆ ಕೂದಲು ಹಿಡಿದು ಮೇಲಕ್ಕೆಬ್ಬಿಸಿದ. ಇನ್ನೊಬ್ಬ ನನ್ನ ಮುಖ ಮೂತಿ ಮೈ ನೋಡದೆ, ಹೊಡೆಯಲಾರಂಭಿಸಿದ. ಅಷ್ಟರಲ್ಲೇ ಒಬ್ಬ ಅಧಿಕಾರಿ ಒಳಕ್ಕೆ ಬಂದು, ನಿಲ್ಲಿಸಿ ಎಂದು ಕಿರುಚಿ, ನನ್ನನ್ನು ಪಾರು ಮಾಡಿದ.....

"ನನ್ನ ಕತ್ತಿನ ಪಟ್ಟಿ ಹಿಡಿದು ಹೊರಗೆ ಎಳೆದುಕೊಂಡು ಹೋಗಿ ಜೀಪ್‌ನಲ್ಲಿ ಕುಳ್ಳಿರಿಸಿದರು.... ಸರದಾರ್‌ಜೀಯನ್ನು ಹೊತ್ತುಕೊಂಡು ಬಂದು ಜೀಪ್‌ನಲ್ಲಿ ಮಲಗಿಸಿದ್ದರು.... ಮಲಗಿಸಿದ್ದರೆ ? ಇಲ್ಲ ಹೊತ್ತುಹಾಕಿದರು ! ಅವನಿಗೆ ಪ್ರಜ್ಞೆ ತಪ್ಪಿತು. "ಎಲ್ಲಿಗೆ ಕರೆದು ಕೊಂಡು ಹೋಗುತ್ತಾ ಇದ್ದೀರಾ?' ಎಂದು ಕಷ್ಟಪಟ್ಟು ಕೇಳಿದೆ. 'ಪಟ್ ' ಅಂತ ಕೆನ್ನೆಗೆ ಒಬ್ಬ ಕೊಟ್ಟ. ಮೂರ್ಛೆ ಹೋದ ಹಾಗಾಯಿತು. 'ನನ್ನಿಂದ ಏನು ತಪ್ಪಾಗಿದೆ?' ಸುಧಾರಿಸಿಕೊಂಡು ಕೇಳಿದೆ. ಮತ್ತೆ ಬಿತ್ತು ಏಟು! 'ಎಲ್ಲಿಗೆ ಕರೆದುಕೊಂಡು ಹೋಗುತ್ತಾ ಇದ್ದೀರಾ ?' ಕಷ್ಟಪಟ್ಟು ಕೇಳಿದೆ. ಈ ಸಲ

ಅವರು ಸುಮ್ಮನಿರಲಿಲ್ಲ. ನನ್ನ ಪ್ರಶ್ನೆಗಳಿಗೆ ಕೊನೆಗಾಣಿಸಲು, ಬಾಯಿ ಮೇಲೆ ಎರಡು ಬಲವಾದ ಏಟು ಕೊಟ್ಟರು. ಹಲ್ಲುಗಳು ಉದುರಿ, ರಕ್ತ ಸುರಿಯಿತು. ಮುಂದೆ ಏನಾಯಿತು ಅಂತ ಗೊತ್ತಾಗಲಿಲ್ಲ. ಎಚ್ಚರ ಬಂದಾಗ ಒಂದು ಕತ್ತಲ ಕೋಣೆಯಲ್ಲಿ ಮಲಗಿದ್ದು ಗೊತ್ತಾಯಿತು. ನನ್ನ ನರಳಾಟ ಕೇಳಿ ಒಬ್ಬ ಪೊಲೀಸ್ ಪ್ಯಾದೆ ಬಂದು, ಯಾಕೆ ನರಳುತ್ತಾ ಇದ್ದೀಯಾ? ಅಂತ ನನ್ನ ಪಕ್ಕೆಗೆ ಒದ್ದ. 'ಅಯ್ಯೋ' ಎಂದು ಕಿರುಚಿದೆ. ಬೇಕಂತಲೆ ಜೋರಾಗಿ ಕಿರುಚಿದೆ. ತಕ್ಷಣ, ಮೂರು ನಾಲ್ಕು ಜನ ಬಂದರು. 'ಯಾಕೆ ಹೊಡಿತಿದ್ದೀಯಾ? ಸತ್ತು ಹೋದರೆ, ಇವನ ಹೆಣ ಹೊರಸ್ತಾರೆ ನಮ್ಮ ಕೈಲಿ' ಅವನ ಮಾತು ಕೇಳಿ ಎಲ್ಲರೂ ಹೊರಟು ಹೋದರು. ಸರದಾರ್‌ಜೀ ಗತಿ ಏನು ಆಯಿತು ಅಂತ ಯೋಚಿಸತೊಡಗಿದೆ. ಅವನನ್ನು ಸಾಯುವ ಹಾಗೆ ಹೊಡೆದದ್ದು ನೋಡಿದರೆ ಇನ್ನು ಅವನನ್ನು ಪುನಃ ಜೀವ ಸಹಿತ ಕಾಣುವ ಹಾಗೆ ತೋರಲಿಲ್ಲ. ಯೋಚಿಸುತ್ತಾ ಇರುವಾಗ ನಿದ್ರೆ ಬಂದಿತೋ ಅಥವಾ ಎಚ್ಚರ ತಪ್ಪಿತೋ ಗೊತ್ತಿಲ್ಲ. ಎಚ್ಚರ ಆದಾಗ ಬೆಳಗಾಗಿತ್ತು. ಏಳಲು ಪ್ರಯತ್ನಿಸಿದೆ. ತಡೆಯಲಾರದ ನೋವು. ಮೈ ಕೈಯೆಲ್ಲಾ ಪುಡಿ ಪುಡಿ ಮಾಡಿದ್ದ ಹಾಗೆ ತೋರಿತು. ನೋವು ತಾಳಲಾರದೆ, ನರಳಿದೆ, ಕಿರುಚಿದೆ. ಕೂಗಿದೆ.

'ಯಾಕೆ ಬಡಕೋತಾ ಇದ್ದೀಯಾ ಬದ್ಮಾಶ್.'

"ಬಾಗಿಲು ತೆರೆದು ಒಳಗೆ ಬಂದು ಒಬ್ಬ ಬಾಯಿಗೆ, ಬಂದ ಹಾಗೆ ಬೈದ. 'ನನಗೆ ಕುಡಿಯಲು ನೀರು ಕೊಡು' ಎಂದೆ. ಹೊರಗೆ ಹೋಗಿ ಒಂದು ಹೂಜಿ ತಂದ. ಮುಖದ ಮೇಲೆ ಎರಚಿದ ನೀರು. ಕಾದ ಹೆಂಚಿಗೆ ಬಿದ್ದ ಎಣ್ಣೆಯ ಹಾಗೆ ಆಯಿತು ನನ್ನ ಸ್ಥಿತಿ. ಉರಿಯ ಭಾದೆ ತಡಯಲಾರದೆ ಬಡಕೊಳ್ಳಲಿಕ್ಕೆ ಶುರುಮಾಡಿದೆ. ನನ್ನ ಅರಚುವಿಕೆ ಕೇಳಿ ಮತ್ತೊಬ್ಬ ಬಂದ. 'ಚುಪ್ !' ಎಂದು ಗದರಿಸಿ, ಅಲ್ಲೇ ಇದ್ದ ಒಂದು ಕುರ್ಚಿಯಲ್ಲಿ ಕುಳಿತ. 'ಸರದಾರ್‌ಜೀಯ ಪರಿಚಯ ನಿನಗೆ ಹೇಗಾಯಿತು? ಯಾಕೆ ಅವನನ್ನು ಹುಡಕಿಕೊಂಡು ಬಂದೆ?' ಪ್ರಶ್ನೆಗಳ ಸುರಿಮಳೆ ಹಾಕಿದ. ನನಗೆ ತಿಳಿದ ವಿಷಯ ತಿಳಿಸಿದೆ. ಆದರೆ ಅವರು ನಂಬುವ ಹಾಗೆ ತೋರಲಿಲ್ಲ. ಅರ್ಧ ಗಂಟೆ ನನ್ನನ್ನು ಪ್ರಶ್ನಿಸಿದ ಮೇಲೆ ಹೊರಟು ಹೋದರು."

" ನಮ್ಮ ಸಂಗತಿ ಹೇಳಲಿಲ್ಲವೇ ?"

ಮಧ್ಯ ಬಾಯಿ ಹಾಕಿದೆ.

ನನ್ನ ಮುಖವನ್ನೇ ಕೆಲವು ಕ್ಷಣ ನೋಡಿ, ಕಪೂರ್ ತಲೆ ಕೆಳಗೆ ಹಾಕಿದ.

ಯಾಕೋ ನನ್ನೆದೆ 'ಡವ ಡವ' ಎಂದು ಹೊಡೆದುಕೊಳ್ಳಲಿಕ್ಕೆ ಶುರು ಆಯಿತು. ಆತಂಕದ ಬೆಟ್ಟ ಏರುವ ಹಾಗೆ ತೋರಿತು. ಒಂದು ವೇಳೆ ನಾವು ಇವನ ಸಂಗಡ

ಅಮೃತಸರಕ್ಕೆ ಹೋದ ಸಂಗತಿ ಹೇಳಿದ್ದರೆ, ನಮ್ಮನ್ನು ಪೊಲೀಸರು ಸುಮ್ಮನೆ ಬಿಟ್ಟಾರೆಯೇ? ಆದರೆ, ಇದುವರೆಗೂ ನಮ್ಮನ್ನು ಸುಮ್ಮನೆ ಬಿಟ್ಟಿದ್ದಾರಲ್ಲ! ಆತಂಕ ವೇಕೆ? ಭಯವೇಕೆ ? ಏಕೆ ಈ ದುಗುಡ, ದುಮ್ಮಾನ?

"ಹೇಳಲಿಲ್ಲವೇ?"

ಪುನಃ ಪ್ರಶ್ನಿಸಿದೆ.

"ಹೇಳಿದೆ. ಆದರೆ ತಕ್ಷಣ ಹೇಳಲಿಲ್ಲ. ಆ ದಿನ ಹೇಳಲಿಲ್ಲ. ಒಂದು ದಿನ ತಡೆದೆ. ನೀವು ವಾಪಸ್ಸು ದಿಲ್ಲೀ ತಲುಪುವ ತನಕ ಕಾದೆ."

ತಡೆದು, ತಡೆದು, ಉತ್ತರಿಸಿದ ಕಪೂರ್.

"ನಾವು ಅದೇ ದಿನ ದಿಲ್ಲೀಗೆ ವಾಪಸ್ಸಾಗುವ ಸಂಗತಿ ನಿನಗೆ ಹೇಗೆ ತಿಳಿಯಿತು?"

"ಅಮೃತಸರದಲ್ಲೇ ಇದ್ದು ಪೊಲೀಸರ ಕೈಗೆ ಸಿಕ್ಕಿ ಹಾಕಿಕೊಳ್ಳುವಷ್ಟು ಮೂರ್ಖ ರಲ್ಲ ಎಂದು ನನಗೆ ಗೊತ್ತಿತ್ತು."

ನೀರಿನ ಲೋಟಕ್ಕೆ ಕೈ ಹಾಕಿದ ಕಪೂರ್. ಇವ ಯಾಕೆ ಈ ರೀತಿ ನೀರು ಕುಡಿ ಯಲಿಕ್ಕೆ ಶುರುಹಚ್ಚಿದ್ದಾನೆ? ಸಕ್ಕರೆ ಕಾಯಿಲೆ?

"ನೀರು ಯಾಕೆ ಕುಡೀತೀದ್ದೀರಾ?"ತುಂಬಾ ಬಾಯಾರಿಕೆಯಾ?"

"ಪೊಲೀಸರು ನೀರು ಕುಡಿಸಿ, ಕುಡಿಸಿ, ಅಭ್ಯಾಸಮಾಡಿರಬೇಕು! ಅಲ್ಲವಾ?"

ವರ್ಮಾ, ನನ್ನ ಪ್ರಶ್ನೆಗೆ ಉತ್ತರಿಸಿ, ನವಿರಾಗಿ ತನ್ನ ಉತ್ತರಕ್ಕೆ ತಾನೇ ನಕ್ಕ.

"ನೀನು ಹೇಳುತ್ತಿರುವುದು ನಿಜವಿರಬಹುದು" ಕಪೂರ್ ಮೆಲ್ಲನೆ ನುಡಿದು, ಒಳಕ್ಕೆ ಹೋದ. ಕೊಠಡಿಯಲ್ಲಿ ಕುಮಾರಿ ಕಮಲಳ ಜೊತೆ ಮಾತನಾಡುವ ಶಬ್ಧ ಕೇಳಿಸಿತು. ಸ್ವಲ್ಪ ಹೊತ್ತಿನಲ್ಲೇ ವಾಪಸ್ಸಾದ. ಕುರ್ಚಿಯ ಮೇಲೆ ಕುಳಿತು ಮಾತನಾಡ ತೊಡಗಿದ.

"ಸಾಯಂಕಾಲವಾದ ಮೇಲೆ ನನ್ನನ್ನು ಕರೆದುಕೊಂಡು, ಇನ್ನೊಂದು ಕೊಠಡಿ ಯೊಳಗೆ ದಬ್ಬಿದರು. ಕತ್ತಲಕೊಠಡಿಯೊಳಗೆ ಕುಳಿತು ಮಾಡುವುಧೇನು? ಅದೂ ಒಬ್ಬನೇ? ಹೊರಗೆ ಜನ ಮಾತನಾಡುವ ಶಬ್ದ ಕೇಳಿಸಿತು. ನಾನಿರುವ ಕೊಠಡಿ, ಯಾವುದೋ ಪೊಲೀಸ್ ಠಾಣೆಯ ಆವರಣದಲ್ಲೆ ಇರಬೇಕೆಂದು ಊಹಿಸಿದೆ. ಪೊಲೀಸ್ ಬೂಟ್ಸ್ ಕಾಲಿನ ಶಬ್ಧ ಕೇಳುತ್ತಲೇ ಇತ್ತು. ಹೊಟ್ಟೆ ಚುರು ಚುರು ಗುಟ್ಟುತ್ತಿತ್ತು. ಇಪ್ಪತ್ತನಾಲ್ಕು ಗಂಟೆಗಳು ಉರುಳಿದ್ದವು ನನ್ನ ಸೆರೆಯಾಗಿ; ಹೊಟ್ಟೆಗೂ ಉಪವಾಸದ ಹೊರೆ ಹೊರೆಸಿದ್ದರು. ಯೋಚಿಸುತ್ತ ಹಾಗೇ ನೆಲದ ಮೇಲೆ ಉರುಳಿದೆ. ಹಲ್ಲು ಉದರಿ, ಬಾಯೆಲ್ಲಾ ರಕ್ತದ ಅಂಟು,ನಾಲಿಗೆಯಿಂದ ಸವರಿಕೊಂಡಾಗಲೆಲ್ಲಾ

ಪ್ರಾಣ ಹೋಗುವ ರೀತಿಯಲ್ಲಿ ನೋವುಂಟಾಗುತ್ತಿತ್ತು. ಈ ಚಿತ್ರಹಿಂಸೆಯಿಂದ ಬಿಡುಗಡೆ ಇಲ್ಲವೇ? ಯಾವಾಗ ನನ್ನ ತಂದೆಯನ್ನು ನೋಡುವುದು? ನೆಂಟರು, ಆಪ್ತರನ್ನು ಕಾಣುವುದು? ರಾತ್ರಿಯೆಲ್ಲಾ ಅರ್ಧ ಎಚ್ಚರ ನಿದ್ರೆಗಳಲ್ಲೆ ಕಳೆದೆ.

"ಮಾರನೆದಿನ ಬೆಳಗಾದಾಗ, ನನಗೆ ಅಚ್ಚರಿ ಕಂಡಿತ್ತು. ಒಬ್ಬ ಪ್ಯಾದೆ, ಬಾಗಿಲು ತೆರೆದು, ಬಚ್ಚಲಿಗೆ ಕರೆದುಕೊಂಡು ಹೋಗಿ, ಮುಖ ತೊಳೆಯಲು ನೀರು ಕೊಟ್ಟ. ಕಷ್ಟಪಟ್ಟು ಮುಖ ತೊಳೆದುಕೊಂಡ ಮೇಲೆ, ವಾಪಸ್ಸು ಕೊಠಡಿಯಲ್ಲಿ ಬಿಟ್ಟ. ಸ್ವಲ್ಪ ಹೊತ್ತಿನಲ್ಲೇ ಚಾ, ಎರಡು ತುಂಡು ಬ್ರೆಡ್ ತೆಗೆದುಕೊಂಡು ಬಂದ. ಬ್ರೆಡ್ ತುಂಡನ್ನ ಒಮ್ಮೇಲೆ ಬಾಯಿಗೆ ಹಾಕಿ ಅಗಿಯಲಾರದೆ ಕಷ್ಟಪಡುತ್ತಿದ್ದ ನನ್ನನ್ನು ನೋಡಿ, ಆ ಪ್ಯಾದೆ ನಕ್ಕ ಮತ್ತು ಹೇಳಿದ 'ಚಾದೊಂದಿಗೆ ಬ್ರೆಡ್ ತಿನ್ನು?' ಬ್ರೆಡ್ ತಿಂದು, ಚಾ ಕುಡಿದ ಮೇಲೆ ಮಲಗಲು ಹೇಳಿದ. ಸ್ವಲ್ಪ ಹೊತ್ತಿನಲ್ಲೇ ಅವನು ಒಬ್ಬ ಡಾಕ್ಟರನ್ನ ಕರೆದುಕೊಂಡು ಬಂದ. ಆತ ನನ್ನ ಮೈಮುಟ್ಟಿ, ಬಾಯಿ ಅಗಲಿಸಿ ಕೆಲವು ಮಾತ್ರೆ ತಿಂದ ಮೇಲೆ, ನಿದ್ರೆ ಆವರಿಸಿತು. ಮತ್ತೆ ಎಚ್ಚರವಾದಾಗ, ರಾತ್ರಿಯಾಗಿತ್ತು. ಹೊಟ್ಟೆ ಹಸಿದಿದ್ದರಿಂದಲೋ ನಿದ್ರೆಯಿಂದಲೋ, ಮೈ ಕೈ ನೋವಿನಿಂದಲೋ, ಅಸಾಧ್ಯ ಸುಸ್ತು ಸಂಕಟಗಳಿಂದ ನರಳಿದೆ, ನನ್ನ ನರಳಾಟ ಕೇಳಿ ಪ್ಯಾದೆ ಬಂದ. ನನ್ನ ಸ್ಥಿತಿ ನೋಡಿ, ಸ್ವಲ್ಪ ಹೊತ್ತಿನಲ್ಲೇ, ಕೈಯಲ್ಲಿ ಒಂದು ಪ್ಲೇಟ್‌ನಲ್ಲಿ ಎರಡು ರೊಟ್ಟಿ, ಸ್ವಲ್ಪ ಸಬ್ಜಿ, ನನ್ನ ಮುಂದೆ ಇಟ್ಟು ಬಾಗಿಲು ಹಾಕಿ ಹೊರಟು ಹೋದ.

"ಸ್ವಲ್ಪ ರೊಟ್ಟಿ ತೆಗೆದುಕೊಳ್ಳಿರಿ" ಎಂದು ಹೇಳಿ, ಕಪೂರ್‌ನ ವೃತ್ತಾಂತಕ್ಕೆ ತಡೆ ಹಾಕಿದಳು ಕುಮಾರಿ ಕಮಲ. ಎರಡು ಪಿಂಗಾಣಿ ತಟ್ಟೆಗಳಲ್ಲಿ ರೊಟ್ಟಿ, ಸಬ್ಜಿ ಇಟ್ಟು ನಮ್ಮ ಮುಂದೆ ಇದ್ದ ಟೀಪಾಯ್ ಮೇಲೆ ಇರಿಸಿ, ಅಡಿಗೆ ಮನೆ ಕಡೆ ನಡೆದಳು. ಪುನಃ ಬಂದು ಪ್ಲೇಟಿನಲ್ಲಿ ರೊಟ್ಟಿ ಇಟ್ಟು, ಕಪೂರ್‌ನ ಕೈಗೆ ಅದನ್ನು ನೀಡಿ, ನಿರ್ಗಮಿಸಿದಳು.

ನನಗೂ ಹಸಿವಾಗಿತ್ತು. ಯಾರ ಉಪಚಾರವೂ ಬೇಡವಾಗಿತ್ತು. ಯಾವ ಮುಜುಗರವಿಲ್ಲದೇ, ಹೇಳಿಸಿಕೊಳ್ಳದೆ, ತಟ್ಟೆಗೆ ಕೈಹಾಕಿ ರೊಟ್ಟಿ ತುಂಡು ಮಾಡಿ ಸಬ್ಜಿ ಸೇರಿಸಿಕೊಂಡು ತಿನ್ನತೊಡಗಿದೆ. ಎರಡು ಮೂರು ತರಕಾರಿ ಹಾಕಿದ ಪಲ್ಯ ರುಚಿಯಾಗಿತ್ತು. ಎರಡು ರೊಟ್ಟಿಯನ್ನು ಕಬಳಿಸುವುದಕ್ಕೆ ಹೆಚ್ಚು ಸಮಯ ಬೇಕಾಗಿರಲಿಲ್ಲ. ಹೊಟ್ಟೆ ಹಸಿದಿರುವಾಗ, ಕಪೂರ್‌ನ ಕಥೆ ಹಳಸಿ ಹೋಯಿತೆ?

ವರ್ಮಾ, ತನ್ನ ಎರಡೂ ಕೈಗಳನ್ನು ಉಪಯೋಗಿಸಿ, ರೊಟ್ಟಿ ತುಂಡರಿಸಿ, ಸಬ್ಜಿಯನ್ನು ರೊಟ್ಟಿಯಲ್ಲಿರಿಸಿ, ಬಾಯಲ್ಲಿ ಹಾಕಿ ನಿಧಾನವಾಗಿ ಅಗಿಯತೊಡಗಿದ. ನಾವಿಬ್ಬರೂ ರೊಟ್ಟಿ ತಿನ್ನುವುದನ್ನೇ ನೋಡುತ್ತಿದ್ದ ಕಪೂರ್, ಕೂಗಿದ.

"ನನಗೆ ರೊಟ್ಟಿ ಇಲ್ಲವೆ?"

"ತರ್ತಾ ಇದ್ದೇನೆ"

ಕುಮಾರಿ ಕಮಲಾ, ಅವನಷ್ಟೇ ಎತ್ತರದ ಧ್ವನಿಯಲ್ಲಿ ಕೂಗಿದಳು.

" 'ನನಗೆ ರೊಟ್ಟಿ ಇಲ್ಲವೇ?' ಅಂದು ಇದೇ ರೀತಿ ಕೂಗಿದ್ದೆ, ಆ ದಿನ ಜೈಲಿನಲ್ಲಿ."

ಕಪೂರ್ ತನ್ನ ಕತೆಯನ್ನು ಮುಂದುವರಿಸಿದ್ದ.

"ಒಂದು ವಾರ ಇದೇ ರೀತಿ ಕಳೆದಿರಬಹುದು. ದಿನವಹೀ ಅಧಿಕಾರಿಯೊಬ್ಬ ನನ್ನನ್ನು ಪ್ರಶ್ನೆಗಳ ಮಳೆಯಲ್ಲಿ ಮುಳುಗಿಸಿ, ನೀರು ಕುಡಿಸಿ, ಉಸಿರು ಕಟ್ಟುವ ಹಾಗೆ ಮಾಡಿ ಹೋಗುತ್ತಿದ್ದ...."

"ಸರದಾರ್‌ಜೀ ಕತೆ ಏನಾಯಿತು?

ಮಧ್ಯೆ ಬಾಯಿ ಹಾಕಿದೆ.

"ಹೇಳ್ತೀನಿ. ಸ್ವಲ್ಪ ತಡೀರಿ.....ಅವನ ವಿಷಯಕ್ಕೆ ಬರುತ್ತಿದ್ದೆ...ಒಂದು ವಾರದ ನಂತರ ಕತ್ತಲ ರಾತ್ರಿ, ಕೊಠಡಿಯ ಬಾಗಿಲು ತೆರೆದು, ಒಬ್ಬ ವ್ಯಕ್ತಿಯನ್ನು ಒಳಗೆ ದಬ್ಬಿದರು. ಕತ್ತಲಿನಲ್ಲಿ ನನಗೆ ಏನೂ ಕಾಣಿಸಲಿಲ್ಲ. ಅವ ಯಾರೆಂದು ನೋಡುವ ಕುತೂಹಲವಾದರೂ ದಟ್ಟ ಕತ್ತಲು ಅಡ್ಡಬಂದಿತ್ತು.

"ಕೋಣೆಯಲ್ಲಿ ದೀಪವಿರಲಿಲ್ಲವೇ?"

ವರ್ಮಾ ಕೇಳಿದ.

"ಇಲ್ಲ. ಬೆಳಕಿನ ಸೌಕರ್ಯವಿರಲಿಲ್ಲ"

"ಶಾಖದ ಸೌಕರ್ಯವಿತ್ತು, ಅಲ್ಲವೇ?"

"ಮುಂದುವರೆಸು ನಿನ್ನ ಕಥೆ"

ವರ್ಮಾ ಆಗ್ರಹ ಪಡಿಸಿದ. ಅವನು ಕತೆಕೇಳಿ, ಬೇಗ ಮನೆಗೆ ಹೋಗುವ ಆತುರದಲ್ಲಿದ್ದ.

ನಾನು ನನ್ನ ಕೈಗಡಿಯಾರ ನೋಡಿಕೊಂಡೆ. ಆಗಲೇ ಎಂಟು ಗಂಟೆಯಾಗಿತ್ತು. ನನಗೇನು ಅವಸರದ ಕೆಲಸವಿರಲಿಲ್ಲ. ಈ ರಾತ್ರಿ ಎಷ್ಟು ಸಮಯವಾದರೂ, ಕಪೂರ್‌ನ ಕತೆ ಕೇಳಿಯೇಬಿಡಬೇಕೆಂಬ ಹಟ ಅಂಕುರಿಸಿತು ಮನದಲ್ಲಿ.

" 'ಯಾರು ನೀನು?' ಎಂದು ಕೇಳಿದ್ದಕ್ಕೆ ಉತ್ತರಿಸಲಿಲ್ಲ ಆತ. ಕೆಳಗೆ ಒಂದು ಮೂಲೆಯಲ್ಲಿ ಮಲಗಿದ ಹಾಗೆ ತೋರಿತು. ಇಷ್ಟು ಸಣ್ಣ ಕತ್ತಲ ಕೋಣೆಯಲ್ಲಿ ಇಬ್ಬರನ್ನು ಕೂಡಿ ಹಾಕುವ ದುರ್ಬುದ್ಧಿ ಯಾಕೆ ಬಂತು ಈ ಪೊಲೀಸರಿಗೆ? ಒಂದು ಸೀಮೆಎಣ್ಣೆ ದೀಪವಾದರೂ ನೀಡಬಹುದಿತ್ತು ನಮಗೆ. ಮಲಗಲಿಕ್ಕೆ ಒಂದು ಚಾಪೆ

ಕೂಡ ಕೊಟ್ಟಿರಲಿಲ್ಲ. ಬರೀ ನೆಲದ ಮೇಲೆ ಮಲಗಿ, ಮೊದಲೇ ಹೊಡೆತ ತಿಂದು ದೋರಗಾಯಿಯಾಗಿದ್ದ ಮೈ ಹಣ್ಣಾಗಿ, ಕೊಳೆಯುವುದು ಬಾಕಿ ಇತ್ತು.

"ಬೆಳಿಗ್ಗೆ ಎದ್ದು ಕಣ್ಣು ಉಜ್ಜಿ ಪಕ್ಕಕ್ಕೆ ತಿರುಗಿ ನೋಡಿದಾಗ, ನನ್ನ ತಲೆ ಒಮ್ಮೆಲೆ ತಿರುಗತೊಡಗಿತು. 'ಸರದಾರ್‌ಜೀ' ಎಂದು ಜೋರಾಗಿ ಕಿರುಚಿದೆ. ನನ್ನ ಆರ್ಭಟಕ್ಕೆ ಮಲಗಿದ್ದ ಸರದಾರ್‌ಜೀ ಕಣ್ಣು ಬಿಟ್ಟ. ನನ್ನನ್ನು ನೋಡಿದವನೆ, 'ಥತ್ ಬದ್ಮಾಶ್' ಎಂದು ಬೈದು ಗೋಡೆ ಕಡೆ ಮುಖಮಾಡಿ ಮಲಗಿದ! ನನ್ನನ್ನು ನೋಡಿ ಅವನಿಗೆ ಸಂತೋಷ ಆಗಲಿಲ್ಲ ಎನ್ನುವುದು ಮನವರಿಕೆ ಆಯಿತು. ಸರದಾರ್‌ಜೀನ ಇಲ್ಲಿಗೆ ಯಾಕೆ ತಂದು ಬಿಟ್ಟರು? ಸಧ್ಯ! ಸರದಾರ್‌ಜಿ ಬದುಕಿದ್ದಾನಲ್ಲಾ ಎಂದು ಖುಷಿ ಪಟ್ಟೆ. ಅವನಿಗೆ ಬಿದ್ದ ಪೆಟ್ಟು ನೋಡಿದಾಗ ಅವನು ಬದುಕಿ ಉಳಿಯುವುದೇ ಅಸಾಧ್ಯ ಎಂದು ಅನಿಸಿತ್ತು. 'ಸರದಾರ್‌ಜೀ! ಕೋಪಾ ಇನ್ನೂ ಆರಿಲ್ಲವಾ" ಎಂದು ಕೇಳಿದೆ. 'ನನ್ನ ಕೈ ಮುರಿದು ಬಿಟ್ಟಿದ್ದಾರೆ ನೋಡು!' ಎಂದು ತನ್ನ ಬಲಗೈಯನ್ನು ತೋರಿಸಿದ. ಪ್ಲಾಸ್ಟರ್ ಹಾಕಿದ ಕೈ ನೋಡಿ ಗಾಬರಿಯಾಯಿತು. ಕೈ ಮುರಿಯದೇ ಹೋಗಿದ್ದರೆ, ನಿನ್ನ ಕತ್ತು ಮುರಿತಾ ಇದ್ದೆ' ಎಂದು ಚೀರಿದ ಅವ. ನನ್ನ ಗಾಬರಿ ಮತ್ತೂ ಜಾಸ್ತಿಯಾಯಿತು. "ನಿನಗೇನಾಗಿದೆ? ನನ್ನ ಮೇಲೆ ಇಷ್ಟು ಕೋಪ ಮಾಡಿ ಕೊಳ್ಳುವುದಕ್ಕೆ?"

" 'ನಿನ್ನಿಂದಲೇ ನನಗೆ ಈ ಸ್ಥಿತಿ ಉಂಟಾಗಿದ್ದು! ನೀನು ನನ್ನನ್ನು ಕಾಣಲು ಬರದೇ ಹೋಗಿದ್ದರೆ, ನನ್ನನ್ನು ಪೊಲೀಸರು ಹಿಡಿಯಲು ಸಾಧ್ಯವಾಗುತ್ತಿರಲಿಲ್ಲ. ನನ್ನ ಎಲ್ಲ ಕೆಲಸ ಹಾಳುಮಾಡಿಬಿಟ್ಟೆ. ನನ್ನ ಜೀವನವನ್ನೇ ಕೆಡಿಸಿ ನಿರ್ನಾಮ ಮಾಡಿ ಬಿಟ್ಟೆ.' ಸಿಟ್ಟಿನಿಂದ ಕುದಿಯುತ್ತಿದ್ದ. ನಾನು ಮರುಮಾತನಾಡದೆ ತೆಪ್ಪಗೆ ಕುಳಿತೆ. ಗಾಢ ಮೌನ ಆವರಿಸಿತ್ತು ಕೋಣೆಯಲ್ಲಿ. ನಾನು ಯೋಚಿಸತೊಡಗಿದೆ. ಸರದಾರ್ ಜೀಗೆ ನಿಜ ಹೇಳಿಬಿಡಲೆ? ನಾನು ಯಾಕೆ ಅವನನ್ನು ಕಾಣಲು ಬಂದಿದ್ದು ಎಂದು? ನಿಜ ಹೇಳಿದರೆ ಅವನು ಒಪ್ಪಿಯಾನೆ? ನಂಬಿಯಾನೆ? ಈ ಮನೋಸ್ಥಿತಿಯಲ್ಲಿ ಅವನು ನನ್ನ ಮಾತನ್ನು ನಂಬುವುದು ಅಸಂಭವ ಎಂದು ತೋರಿತು. ಮನಸ್ಸು ಹುಚ್ಚೆದ್ದು, ಆತಂಕದಿಂದ ಒಳಗೇ ಕುದಿಯತೊಡಗಿತು.

" 'ಪೂನಂ ಹೇಳಿ ಕಳುಹಿಸಿದಳು. ಅದಕ್ಕೆ ಬಂದೆ' ಎಂದೆ. 'ಪೂನಂ' ಎಂದ ಕೂಡಲೆ ಅವನ ಮುಖ ಒಂದು ಕ್ಷಣ ಅರಳಿ, ಮತ್ತೆ ಸಿಟ್ಟಿನ ಗಂಟಾಯಿತು. 'ಪೂನಂ ನಿನಗೆ ನನ್ನ ಪತ್ತೆ ತಿಳಿಸಿದಳೇ?'

"ಹೌದು" ಎಂದು ಅಳುಕುತ್ತಾ ಹೇಳಿದೆ.

"ಪೂನಂ ಎಂದರೆ ಯಾರು?" ಕೇಳಿದೆ ನಾನು, ಅವನ ವೃತ್ತಾಂತಕ್ಕೆ ಅಡ್ಡ ಹಾಕಿ.

"ಪೂನಂ, ಸರದಾರ್‌ಜೀಯ ಪ್ರೇಯಸಿ. ಇಲ್ಲೇ ದಿಲ್ಲಿಯಲ್ಲಿದ್ದಾಳೆ. ಅವರು ಬಾಲ್ಯ ಸ್ನೇಹಿತರು. ತನ್ನ ಗುರಿ ಮುಟ್ಟುವವರೆಗೂ, ಮದುವೆಯಾಗುವುದಿಲ್ಲವೆಂದು ಪಣ ತೊಟ್ಟಿದ್ದಾನೆ ಸರದಾರ್‌ಜೀ. ಅವಳು ಕೂಡ ತನ್ನ ಒಪ್ಪಿಗೆ ನೀಡಿದ್ದಾಳೆ."

"ನಿನಗೆ ಹೇಗೆ ಗೊತ್ತಾಯಿತು ಇವರ ಪ್ರೇಮ ಪ್ರಕರಣ?"

ವರ್ಮಾ ಕೇಳಿದ.

"ನನ್ನ ಹತ್ತಿರ ಸರದಾರ್‌ಜೀ ಯಾವ ವಿಷಯವನ್ನೂ ಬಚ್ಚಿಟ್ಟಿರಲಿಲ್ಲ"

"ಹಾಗಾದರೆ, ಅವನು ಅಮೃತಸರದಲ್ಲಿ ಬಚ್ಚಿಟ್ಟುಕೊಂಡಿದ್ದ ಸ್ಥಳ ನಿನಗೆ ಗೊತ್ತಿತ್ತಾ?"

"ಗೊತ್ತಿರಲಿಲ್ಲ"

"ಯಾಕೆ ತಿಳಿಸಲಿಲ್ಲ, ಅವನು?"

ಖಾರವಾಗಿತ್ತು ವರ್ಮನ ಪ್ರಶ್ನೆ.

"ಗೊತ್ತಿಲ್ಲ."

"ಅಂದರೆ ನಿನ್ನ ಮೇಲೆ ನಂಬಿಕೆ ಇರಲಿಲ್ಲ, ಅಲ್ಲವೇ?"

ಕಪೂರ್ ಉತ್ತರಿಸಲಿಲ್ಲ. ತಟ್ಟೆಯಲ್ಲಿದ್ದ ಉಳಿದ ರೊಟ್ಟಿಯನ್ನು ಬಾಯಿಗಿರಿಸಿ, ತಟ್ಟೆ ಕಾಲಿ ಮಾಡಿದ.

ಕಪೂರ್‌ನ ಕತೆಗಿಂತ, ಸರದಾರ್‌ಜೀಯ ಜೀವನದಲ್ಲಿ ಏರುಪೇರು ಜರುಗುತ್ತಿರುವ ಸಂಗತಿ ಕೇಳುತ್ತಿದ್ದ ಹಾಗೆ ಕತೆಯು ನಿಗೂಢ ರೀತಿಯಲ್ಲಿ ಸಾಗುತ್ತಿರುವ ದೃಶ್ಯ, ಮನಸ್ಸಿನಲ್ಲಿ ಮೂಡಿ, ಕೇಳುವ ಉತ್ಸಾಹದ ಅಲೆ ಏರಿ ಬಂತು.

"ಪೂನಂಳ ಸಂಗತಿ ನಿನಗೇನಾದರೂ ತಿಳಿದಿತ್ತೇ?"

ವರ್ಮಾ ಕೇಳಿದ.

"ಇಲ್ಲ" ಎಂದು ತಲೆಯಾಡಿಸಿದ ಅವನು.

ಪೂನಂ ಪ್ರಕರಣವನ್ನು ಏಕೆ ಬಚ್ಚಿಟ್ಟಿದ್ದ ಕಪೂರ್?

ಕಪೂರ್ ಕೈ ತೊಳೆದು, ಬಾಯಿ ಒರೆಸಿಕೊಂಡು ಕುರ್ಚಿಯಲ್ಲಿ ಕುಳಿತ.

"ಸರದಾರ್‌ಜೀ ಅಮೃತಸರದಲ್ಲಿ ಒಂದೇ ಸ್ಥಳದಲ್ಲಿ ಬಚ್ಚಿಟ್ಟುಕೊಳ್ಳುತ್ತಿರಲಿಲ್ಲ. ಆದರೆ ಪೂನಂಳಿಗೆ ಅವನು ಇರುತ್ತಿದ್ದ ಒಂದು ವಿಳಾಸ ಮಾತ್ರ ತಿಳಿದಿತ್ತು. ಪತ್ರ ಬರೆಯುವಂತಿರಲಿಲ್ಲ. ಸ್ವತಃ ಹೋಗಿ ಕಾಣು ವಂತಿರಲಿಲ್ಲ. ಪೇಚಾಡುತ್ತಿದ್ದಳು. ಅವಳು...."

"ಏನು ಹೇಳಿ ಕಳುಹಿಸಿದ್ದಳು ನಿನ್ನ ಹತ್ತಿರ ಪೂನಂ?"

ವರ್ಮಾ, ಕಪೂರ್‌ನ ಮಾತಿಗೆ ಅಡ್ಡಬಾಯಿ ಹಾಕಿದ.

ಕಪೂರ್ ಉತ್ತರಿಸದೆ ಮುಖ ಕೆಳಗೆ ಹಾಕಿ ಕುಳಿತ. ಉತ್ತರಿಸಲು ಇಷ್ಟವಿಲ್ಲ ವೆಂದು ಅವನ ಮುಖಭಾವ ಹೇಳಿತು. ಕೆಲವು ಕ್ಷಣ ಕಳೆದ ಬಳಿಕ, ತನ್ನ ಮುಖವನ್ನೆತ್ತಿ ನಮ್ಮ ಕಡೆ ನೋಡಿದ. ದಂತವರ್ಣದ ಮುಖ ಕೆಂಪೇರಿ ಬಿರುಸಾಗಿತ್ತು.

"ಅವಳು ಗರ್ಭಿಣಿಯಾಗಿದ್ದಳು."

ಅವನ ಗಡಸಿನ ಧ್ವನಿ ನಮ್ಮನ್ನು ನಗಾರಿ ಹೊಡೆದಂತೆ ಬೆಚ್ಚಿಬೀಳಿಸಿತು.

"ಅವಳು ಬಸಿರಾದ ಸಂಗತಿ ತಿಳಿಸಲು ನನಗೆ ಹೇಳಿದ್ದಳು. ಅವಳಿಗೆ ಈ ಸಂಗತಿ ಸಂತೋಷ ಮತ್ತು ಗಾಬರಿ ಎರಡೂ ಉಂಟು ಮಾಡಿದ್ದವು. ತಾನು ತಾಯಿಯಾಗುತ್ತಿರುವುದು ಸಂತೋಷ ಉಂಟು ಮಾಡಿದ್ದರೆ, ಮದುವೆಯಾಗದೆ ತಾಯಿಯಾಗುವ ಸಂಗತಿ ಗಾಬರಿಯಾಗಿದ್ದವು. ಏನೇ ಕಾರ್ಯವಿರಲಿ, ಸರದಾರ್‌ಜೀ ಒಮ್ಮೆ ಅವಳನ್ನು ಬಂದು ಕಾಣಲು ಹೇಳಿಕಳುಹಿಸಿದ್ದಳು."

ಕಪೂರ್, ಮಾತು ಮುಗಿಸಿ ಸುಮ್ಮನಾದ. ಮತ್ತೆ ಮುಖ ಕೆಳಕ್ಕೆ ಹಾಕಿ ಕುಳಿತ.

"ಸಂಗತಿ ತಿಳಿದು ಸಂತೋಷಗೊಂಡನೇ ಸರದಾರ್‌ಜೀ?"

ವರ್ಮಾ ಪ್ರಶ್ನಿಸಿದ.

"ಗೊತ್ತಿಲ್ಲ! ಆದರೆ ನನ್ನ ಮೇಲೆ ಮತ್ತೆ ಕೋಪಗೊಳ್ಳಲಿಲ್ಲ."

"ಮತ್ತೇನಾಯಿತು?"

ಉತ್ತರಿಸಲಿಲ್ಲ ಕಪೂರ್. ಅವನ ಸಪೂರವಾದ ತುಟಿಗಳು ನವಿರಾಗಿ ಅದುರುತ್ತಿದ್ದವು. ಬಾಯಿ ಅರೆ ತೆರೆದು ಮಾತುಗಳು ಹೊರಬಂತು. ಅಂಜಿಕೆಗೊಂಡಿದೆಯೋ ಎಂಬಂತೆ ತೋರಿತು. ಅರಳು ಹುರಿದಂತೆ ಮಾತನಾಡುತ್ತಿದ್ದ ಕಪೂರ್ ಇಂದೇಕೆ ಇಷ್ಟು ಕಷ್ಟಪಡುತ್ತಿದ್ದಾನೆ? ಅವನ ಹಣೆಗಳ ಮೇಲೆ ಬೆವರಿನ ಹನಿಗಳು ಮತ್ತಷ್ಟು ಮೂಡಿ ಬೆಳಕಿನ ಕಿರಣಗಳಿಗೆ ಮಿಂಚಿ ಹೊಳೆಯತೊಡಗಿದಾಗ, ತಾನು ಪಟ್ಟ ಕಷ್ಟ ಪಾಡುಗಳು, ನರಕಯಾತನೆ, ಮೈ ಮನಸ್ಸು ಜರ್ಜಿತಗೊಂಡು ಹಿಂಡಿ ಹನಿಯಾಗಿ, ನೀರಾಗಿ ಕಾಣಿಸಿಕೊಂಡವೇನೋ ಎಂಬಂತೆ ತೋರಿತು.

"ಮೂರು ದಿನ ನನ್ನ ಹತ್ತಿರ ಮಾತನಾಡಲಿಲ್ಲ. ನನ್ನ ಎಲ್ಲ ಪ್ರಶ್ನೆಗಳಿಗೂ ಉತ್ತರ ನೀಡಲಿಲ್ಲ. ಪೊಲೀಸರು ದಿನವಿಡೀ ನಮ್ಮಿಬ್ಬರನ್ನೂ ಪರೀಕ್ಷೆಗೆ ಈಡು ಮಾಡಿದ್ದರು.

"ನಮ್ಮಿಂದ ಅವರಿಗೆ ಯಾವ ಸಮರ್ಪಕ ಉತ್ತರಗಳೂ ದೊರಕಲಿಲ್ಲ ....ಅವರೂ ಹತಾಶರಾಗಿದ್ದರು."

"ಹೊಡೆಯುವುದು, ಹಿಂಸಿಸುವುದನ್ನು ನಿಲ್ಲಿಸಿದರೆ.?"

ವರ್ಮಾ ಕೇಳಿದ.

"ಬೀಳುತ್ತಿತ್ತು. ಆದರೆ ಅದು ಪೊಲೀಸ್ ಅಧಿಕಾರಿಗಳ ಮರ್ಜಿಗೆ ಬಿಟ್ಟಿತ್ತು. ಕೆಲವರು ಕೋಪಿಸಿ ಕೈ ಮಾಡುತ್ತಿದ್ದರು.ಕೆಲವರು ಸಮಾಧಾನದಿಂದ ಪ್ರಶ್ನಿಸುತ್ತಿದ್ದರು. ಆದರೆ ನಾನು ಮನಸ್ಸು ಮಾಡಿದೆ. ಏನೇ ಆದರೂ ಪೂನಂಳ ಸಂಗತಿ ಅವರಿಗೆ ತಿಳಿಸ ಬಾರದೆಂದು..."

"ಪೂನಂ ಸರದಾರ್‌ಜೀಯ ಗುಂಪಿಗೆ ಸೇರಿದವಳಾಗಿದ್ದಳೆ?"

ನನ್ನ ಮನಸ್ಸಿನಲ್ಲಿದ್ದ ಸಂಶಯವನ್ನು ನಿವಾರಿಸಿಕೊಳ್ಳುವ ಸಲುವಾಗಿ ಕೇಳಿದ ಈ ಪ್ರಶ್ನೆ.

ಕಪೂರ್ ನನ್ನ ಕಡೆ ಒಂದು ಬಗೆ ಕನಿಕರದ ನೋಟ ಬೀರಿದ. ನನ್ನ ಪ್ರಶ್ನೆ ಅಸಂಬದ್ಧ ಎನ್ನಿಸಿತು. ಸರದಾರ್‌ಜೀಯ ಆಪ್ತಳೂ, ಪ್ರೇಯಸಿಯೂ ಆದ ಮೇಲೆ ಅವನ ಗುಂಪಿನ ಸದಸ್ಯಳೂ ಆಗಿರಬೇಕಲ್ಲವೇ? ಒಂದು ವೇಳೆ, ಆಕೆ ಗುಂಪಿನ ಸದಸ್ಯ ಳಾಗಿರದಿದ್ದರೂ, ಸಹಾನುಭೂತಿ ಇಟ್ಟುಕೊಳ್ಳುವವಳಾಗಿದ್ದರೂ ಆಗಿರಬಹುದು.

"ಪೂನಂಳಿಗೆ ತೊಂದರೆಯಾಗಬಾರದು ಮತ್ತು ಒಂದು ವೇಳೆ ಪೂನಂ ಪೊಲೀಸರ ಕೈಗೆ ಸಿಕ್ಕಿದರೆ, ಗುಂಪಿನ ಸಮಸ್ತ ಸದಸ್ಯರಿಗೂ ತೊಂದರೆ ಉಂಟಾಗುವ ಪರಿಸ್ಥಿತಿ ನನಗೆ ಅರಿವಿತ್ತು. ಹಾಗಾಗಿ ನನಗೆ ಎಷ್ಟೇ ಕಷ್ಟವಾದರೂ ಅವಳ ಸಂಗತಿ ಹೊರಪಡಿಸಲು ಸಿದ್ಧನಿರಲಿಲ್ಲ."

ಕಪೂರ್ ಕಥೆ ಮುಂದುವರೆಸಿದ್ದ.

"ಮೂರು ದಿನಗಳಾದ ಮೇಲೆ ನಮ್ಮಿಬ್ಬರನ್ನು ಬೇರೆ ಕೊಠಡಿಗೆ ವರ್ಗಾಯಿಸಿ ದರು. ಮಲಗಲು ಎರಡು ಕಲ್ಲುಮಂಚವಿತ್ತು. ಲೈಟ್ ಇತ್ತು. ಸಣ್ಣ ಕಿಟಕಿ ಇತ್ತು. ಭದ್ರವಾದ ಕಬ್ಬಿಣಗಳ ಬಾಗಿಲಿತ್ತು. ಇಬ್ಬರನ್ನೂ ಒಟ್ಟಿಗೆ ಬಿಟ್ಟಿರುವುದಕ್ಕೆ ಕಾರಣ ಬಹುಶಃ ನಾವು ಏನಾದರೂ ಗೋಪ್ಯವಾಗಿ ಮಾತನಾಡಿಕೊಳ್ಳುವ ಹಾಗಿದ್ದರೆ, ಪೊಲೀಸರು ಅದನ್ನು ಕದ್ದು ಆಲೈಸುವ ವ್ಯವಸ್ಥೆ ಮಾಡಿಕೊಂಡರಬಹುದೆಂದು ನಾನು ಊಹಿಸಿದೆ. ಆದರೆ ನಾವು ಮಾತಾಡಲೇ ಇಲ್ಲ. ಮೌನ ನಮ್ಮನ್ನು ಆವರಿಸಿತ್ತು.... ಒಂದು ದಿನ ನಾನು ಸರದಾರಜೀಯನ್ನು ಕೇಳಿದೆ. 'ನನ್ನ ತಮ್ಮನನ್ನು ಕೊಲೆಯಾದ ಸಂಗತಿ ನಿನಗೆ ಗೊತ್ತಿದೆಯಾ ?" ಅವ ನನ್ನ ಮುಖ ನೋಡಿದ. ಮುಖದಲ್ಲಿ ಅಚ್ಚರಿ ಮೂಡಿತ್ತು. 'ಕೊಲೆ?" ಮೂರು ದಿನಗಳ ನಂತರ ಅದೇ ಅವನ ಮಾತಾಗಿತ್ತು. 'ಕೊಲೆ?' ಮತ್ತೆ ಕೇಳಿದ. "ಹೌದು ! ಕೊಲೆ !" ಎಂದೆ, 'ಯಾರು ಮಾಡಿದ್ದು ?' 'ಯಾವುದೋ ಔಷಧಿ ಕಂಪನಿ ಮಾಲೀಕರನನ್ನು ನನ್ನ ತಮ್ಮ ಹಿಡಿದಿದ್ದನಂತೆ. ಕಳ್ಳ ಅಶುದ್ಧ ಔಷಧಿ ತಯಾರಿಸುತ್ತಿದ್ದನಂತೆ. ಲಂಚದ ಆಮಿಷ ತೋರಿಸಿದರೂ, ಇವ ತನ್ನ ಪಟ್ಟು ಬಿಡಲಿಲ್ಲ. ಕೆಲಸ ದಾಖಲು ಮಾಡಿದನಂತೆ. ಅವ ಹೆದರಿಸಿದನಂತೆ.

ಇವ ಹೆದರಲಿಲ್ಲ. ಕೊನೆಗೆ ಅವ ಯಾರೋ ಕೊಲೆಗಡುಕರಿಗೆ ಹಣ ಕೊಟ್ಟು, ನನ್ನ ತಮ್ಮನ ಕೊಲೆ ಮಾಡಿಸಿಯೇ ಬಿಟ್ಟ. 'ಕೊಲೆಗಾರರು ಸಿಕ್ಕಿಹಾಕಿಕೊಂಡರೆ ?' ಅವನ ಧ್ವನಿಯಲ್ಲಿ ಒಡಕಿತ್ತು. 'ಹೇಗೆ ಸಿಕ್ಕಿ ಹಾಕಿಕೊಳ್ಳುತ್ತಾರೆ ?' ಪೊಲೀಸರಿಗೆ ಸಿಕ್ಕ ಸುಳಿವಿನ ಪ್ರಕಾರ, ಅವರು ಪಂಜಾಬಿ ಭಯೋತ್ಪಾದಕರ ಕೆಲಸ ಎಂದು. ಇಡೀ ದಿಲ್ಲಿ ಶೋಧಿಸಿದರೂ, ಅವರ ಪತ್ತೆ ಆಗಲಿಲ್ಲ.

ನನ್ನ ಮಾತಿಗೆ ಸರದಾರ್‌ಜೀ ಯಾವ ಪ್ರತಿಕ್ರಿಯೆಯನ್ನು ಪ್ರಕಟಿಸಲಿಲ್ಲ. ನನ್ನ ತಮ್ಮನ ಪರಿಚಯ ಅವನಿಗೆ ಇರಲಿಲ್ಲ, ಸ್ನೇಹವೂ ಇರಲಿಲ್ಲ. ಸಾಕಷ್ಟು ಹಿಂಸಾಚಾರ ಮಾಡಿ, ನೋಡಿ ಅನುಭವಿಸಿದ್ದ ಸರದಾರ್‌ಜಿಗೆ ನನ್ನ ತಮ್ಮನ ಕೊಲೆ ಅವನ ಮೇಲೆ ಯಾವ ಪರಿಣಾಮ ಉಂಟು ಮಾಡಿರಲಿಲ್ಲ.

" 'ನಿನ್ನ ತಮ್ಮನ ಮನೆ ಎಲ್ಲಿದೆ ?' ಕೇಳಿದ ಸರದಾರ್‌ಜೀ. 'ಶಾಲೀಮಾರ್ ಬಾಗ್‌ನಲ್ಲಿತ್ತು" 'ಮನೆ ನಂಬರ್ ಮುನ್ನೂರ್ ಹತ್ತು?" 'ಹೌದು !" ಎಂದೆ. ನನಗೆ ಆಶ್ಚರ್ಯವಾಗಿತ್ತು. ಅವನ ಪ್ರಶ್ನೆ ಕೇಳಿ. ಅವನಿಗೆ ನನ್ನ ತಮ್ಮನ ಮನೆ ನಂಬರ್ ಹೇಗೆ ತಿಳಿಯಿತು ಎಂದು.

'ನಿನಗೆ ಗೊತ್ತಿತ್ತೆ ನನ್ನ ತಮ್ಮನ ಮನೆಯ ಪತಾ?' ಅವ ಅದಕ್ಕೆ ಉತ್ತರ ನೀಡದೆ ನನ್ನ ಮುಖವನ್ನೆ ದಿಟ್ಟಿಸಿ ನೋಡಿದ. ನನಗೆ ಭಯ ಶುರುವಾಯಿತು, ಅವನ ದೃಷ್ಟಿ ಎದುರಿಸಲಿಕ್ಕೆ.

" 'ನಿನ್ನ ತಮ್ಮನನ್ನು ಕೊಲೆ ಮಾಡಿದ್ದು ಯಾರು ಎಂದು ನಿನಗೆ ತಿಳಿಯಿತೆ?' ಕೇಳಿದ ಸರದಾರ್‌ಜೀ. 'ಇಲ್ಲ' ಎಂದೆ.

'ಕೊಲೆ ಮಾಡಿದ್ದು ನಾನು!'

# 19

"ಮಲ್‌ಹೋತ್ರಾನ ಅಂಗಡಿ ಸುಟ್ಟು ಹೋಯಿತಂತೆ ಸಾಬ್ !"

ವರ್ಮಾ, ಬ್ಯಾಂಕ್‌ಗೆ ಬಂದೊಡನೆ ಬಿತ್ತರಿಸಿದ ಬಿಸಿ ಬಿಸಿ ಸುದ್ದಿ.

"ಹೇಗೆ ಸುಟ್ಟಿತು?" ಕೇಳಿದೆ.

"ಎಲಿಕ್ಟ್ರಿಕ್ ಶಾರ್ಟ್ ಸರ್ಕ್ಯೂಟ್ ಆಯಿತಂತೆ. ಶನಿವಾರ ರಾತ್ರಿ ೧೨ ಗಂಟೆಗೆ ಬೆಂಕಿ ಹತ್ತಿಕೊಂಡಿತಂತೆ. ಅವನ ಬಂಬೂ ಕ್ಯಾಬಿನ್ ನಿಮಿಷದಲ್ಲಿ ಭಸ್ಮವಾಯಿತಂತೆ. ಮಾರನೆ ದಿನ ಭಾನುವಾರವಾದ್ದರಿಂದ ಅಕ್ಕಪಕ್ಕದ ಅಂಗಡಿಗಳೆಲ್ಲಾ ಬೀಗಹಾಕಿದ್ದವು. ಯಾರೋ ದಾರಿಹೋಕರು ಪೊಲೀಸರಿಗೆ ಹೇಳಿದರಂತೆ. ಅವರು ಫೈರ್ ಸ್ಟೇಷನ್‌ಗೆ ಹೇಳಿ ಕಳುಹಿಸಿ, ಲಾರಿಯಲ್ಲಿ ನೀರು ತುಂಬಿಸಿ ಬರುವಷ್ಟರಲ್ಲಿ ಬೆಂಕಿ ತನ್ನ ಕೆಲಸ ಮಾಡಿ ಅಕ್ಕಪಕ್ಕದ ಅಂಗಡಿಗಳಿಗೆಲ್ಲಾ ದಾಳಿ ಮಾಡಿ, ಅವನ್ನು ಧ್ವಂಸ ಮಾಡಿ ಮುಂದೆ ಒಂದು ಕಲ್ಲು ಕಟ್ಟಡವಿದ್ದುದರಿಂದ, ಅಲ್ಲೇ ನಿಂತಿತಂತೆ ಸುಸ್ತಾಗಿ !"

ವರದಿ ಒಪ್ಪಿಸಿದ ವರ್ಮಾ.

ಬ್ಯಾಂಕ್‌ಗೆ, ತನ್ನ ಸಾಲುಗಾರರಿಗೆ, ಸಾಮಾನು ಸರಬರಾಜು ಮಾಡಿದವರಿಗೆ, ಈ ಮಲ್‌ಹೋತ್ರಾ ಹೇಗೆ ಲುಕ್ಸಾನು ತುಂಬಿಸಿಕೊಡುತ್ತಾನೆ? ಬೆಂಕಿ ಅನಾಹುತದಿಂದ ಹೇಗೆ ಚೇತರಿಸಿಕೊಳ್ಳುತ್ತಾನೆ? ಬ್ಯಾಂಕ್‌ಗೆ ಕೊಡಬೇಕಾದ ಹಣವನ್ನು ಹೇಗೆ ವಸೂಲಿ ಮಾಡುವುದು? ತಲೆ ಬಿಸಿಯಾಯಿತು. ಹೃದಯ ಆತಂಕದ ಗೂಡಾಯಿತು.

"ಹೋಗಿ ನೋಡಿಬರೋಣವೇ?"

"ನೋಡಿ ಬರಲಿಕ್ಕೆ ಏನಿದೆ ಅಲ್ಲಿ?"

ವರ್ಮಾ ಉತ್ತರಿಸಿದ ನಗುತ್ತಾ.

"ತುಂಬಾ ಲುಕ್ಸಾನು ಆಗಿರಬೇಕು ಅಲ್ಲವಾ?"

"ಲುಕ್ಸಾನು ಆಗಲಿಕ್ಕೆ ಅಲ್ಲಿ ಏನಿತ್ತು?"

ಉತ್ತರಕ್ಕೆ ಬದಲಾಗಿ ಒಗಟಿನ ಪ್ರಶ್ನೆ ಹಾಕಿ ವರ್ಮಾ ನನ್ನನ್ನ ತಬ್ಬಿಬ್ಬಾಗಿಸಿದ.

"ಹಳೇ ರಬ್ಬರ್ ಮತ್ತು ರೆಕ್ಸೀನ್ ಶೀಟ್‌ಗಳು ಬೆಂಕಿಗೆ ತುತ್ತಾದವು. ಎಲ್ಲಕ್ಕಿಂತಲೂ ಹೆಚ್ಚಾಗಿ ಅವನ ಬಂಬೂ ಕ್ಯಾಬಿನ್ ಸುಟ್ಟು ಬೂದಿಯಾಯಿತು."

"ಫೈರ್ ಇನ್ಶೂರೆನ್ಸ್ ಮಾಡಿಸಿದ್ದನೆ?"

"ಅದಕ್ಕೇ ಬೆಂಕಿ ಕೊಟ್ಟಿದ್ದು ಅವನು!"

"ಏನು ಹೇಳ್ತೀದೀರಿ ವರ್ಮಾ?"

ಧ್ವನಿ ಎತ್ತರಿಸಿ ಕೇಳಿದೆ.

"ಐದು ಲಕ್ಷಕ್ಕೆ ವಿಮಾ ಇಳಿಸಿದ್ದನಂತೆ. ವಿಮಾ ಇನ್ಸ್‌ಪೆಕ್ಟರ್‌ಗೆ ಕೈ ಬೆಚ್ಚು ಮಾಡಿ, ಕ್ಲೈಮ್ ಸ್ಯಾಂಕ್ಷನ್ ಮಾಡಿಸಿಕೊಳ್ಳುವವನಿದ್ದಾನೆ."

ನನ್ನ ತಲೆ ಬಂಬೂ ಗೂಡಾಯಿತು. ಅದಕ್ಕೆ ಯಾರೋ ಬೆಂಕಿ ಇಟ್ಟ ಹಾಗೆ ಆಯಿತು. ಬೆಂಕಿಯ ತಾಪ ಏರಿ, ತಲೆ ಕೈಯಲ್ಲಿ ಹಿಡಿದು ಕುಳಿತೆ.

"ನೀರು ಬೇಕೆ ಸಾಬ್?"

"ಬೇಕು" ಎಂದೆ.

ನೀರು ಕುಡಿದು, ತಲೆಯಲ್ಲಿ ಹತ್ತಿದ ದಳ್ಳುರಿಯನ್ನು ಆರಿಸಿಕೊಳ್ಳುವುದಾದರೆ, ಯಾಕೆ ಕುಡಿಯಬಾರದು? ವರ್ಮಾ ತಂದಿಟ್ಟ ನೀರು ಕುಡಿಯತೊಡಗಿದೆ.

"ನನ್ನ ಕಾರಖಾನೆ, ಮನೆಗೆ ಬೆಂಕಿ ಹಚ್ಚಿ ಯಾವ ನರಕಕ್ಕೆ ಹೋಗುತ್ತೀರಾ?"

ಕ್ಯಾಬಿನ್ ಬಾಗಿಲು ತೆರೆದೆ. ಒಳಗೆ ಒಬ್ಬ ಸುಂದರ ಯುವಕ, ಭರ್‌ನೆ ಬಂದು, ಬಡಬಡಿಸಹತ್ತಿದ್ದ.

ಇದು ಯಾವ ಹೊಸಾ ಪಿಡುಗು? ತಲೆ ತುರಿಸಿಕೊಂಡೆ. ತಲೆಗೂದಲು ಹತ್ತಿ ಉರಿದು ಕೈಬೆರಳಿಗೆ ಉರಿ ಸೋಂಕಿ ಬೆಚ್ಚಗಾಯಿತು.

"ಮ್ಯಾನೇಜರ್ ಆಗಿಬಿಟ್ಟೇದ್ದೀರೆಂದು ಜನರ ಜೀವನವನ್ನೇ ಹಾಳು ಮಾಡ ಬೇಕೆಂದು ನಿಶ್ಚಯಿಸಿದ್ದೀರಾ?"

ಬೆಳ್ಳಗೆ, ಬಹಳ ಸಪೂರ, ಆರು ಅಡಿ ಎತ್ತರದ, ಉದ್ದದ ಹುಡುಗ ತನ್ನ ನಾಲಿಗೆಯನ್ನು ಉದ್ದವಾಗಿ ಹರಿಯಬಿಟ್ಟಿದ್ದ.

ವರ್ಮನ ಮುಖ ನೋಡಿದೆ. ಅವ ಹುಡುಗನ ಮುಖವನ್ನೇ ದಿಟ್ಟಿಸಿ ನೋಡು ತ್ತಿದ್ದ. ದಿಟ್ಟಿಸಿ ನೋಡುವ ಬದಲು, ಉದ್ದವಾಗಿ ಬೆಳೆಯುತ್ತಿದ್ದ ಈ ಹುಡುಗನ ನಾಲಿಗೆಯನ್ನು ಕತ್ತರಿಸಿ ಹಾಕಬಹುದಲ್ಲ?

"ಮನೆಗೆ ನುಗ್ಗಿ ಬೆಂಕಿ ಹಾಕಿ ನಮ್ಮನ್ನು ಸುಡಬೇಕೆಂದು ಮಾಡಿದ್ದೀರಾ?"

ನಾಲಿಗೆಯ ಉದ್ದ ಬೆಳೆಯುತ್ತಲೇ ಹೋಯಿತು.

"ನಿಮ್ಮ ತಂದೆ ಎಲ್ಲಿ ಹೋಗಿದ್ದಾರೆ? ಅವರನ್ನು ಕರೆದುಕೊಂಡು ಬಂದರೆ ನಿನ್ನ ಎಲ್ಲಾ ಪ್ರಶ್ನೆಗಳಿಗೆ ಉತ್ತರ ಕೊಡುತ್ತೇನೆ."

ವರ್ಮಾ ಕೊನೆಗೂ ಬಾಯಿಬಿಟ್ಟ.

ನಾನು ವರ್ಮನನ್ನು ಹುಡುಗನ ಬಗ್ಗೆ ಅವನ ಉದ್ದ ನಾಲಿಗೆಯ ಬಗ್ಗೆ ವಿಚಾರಿಸಲು ಬಾಯಿ ತೆರೆಯುವಷ್ಟರಲ್ಲೇ ಅವನೇ ತನ್ನ ಬಾಯಿಯನ್ನು ತೆರೆದು ನುಡಿದಿದ್ದ.

"ಪ್ರಮೋದ್ ಜೈನ್ ಕಂಪನಿಯ ಮೇಲೆ ಕೇಸ್ ಹಾಕಿ, ಅವರ ಸ್ಟಾಕ್ ನಾವು

ವಶಪಡಿಸಿಕೊಳ್ಳಲಿಲ್ಲವೇ ಸಾಬ್? ಪ್ರಮೋದ್ ಜೈನ್‌ನ ಮಗ ಇವನು. ಕೋಪ ಬಂದಿದೆ ಇವನಿಗೆ. ಇವನ ಅಪ್ಪನ ಕಾರ್‌ಖಾನೆಗೆ ನುಗ್ಗಿದ್ದಕ್ಕೆ ಮತ್ತು ಕೇಸ್ ಹಾಕಿದ್ದಕ್ಕೆ."

'ಪ್ರಮೋದ್ ಜೈನ್' ಎಂದ ಕೂಡಲೆ, ಜ್ಞಾಪಕಕ್ಕೆ ಬಂದಿತು. ಕೇವಲ ಎರಡು ವಾರದ ಹಿಂದೆ, ಹತ್ತು ಲಕ್ಷ ರೂಪಾಯಿ ಸಾಲ ವಸೂಲಿಗಾಗಿ, ಹಲವಾರು ಪ್ರಯತ್ನದಿಂದ, ಕೋರ್ಟ್‌ನಿಂದ ಆರ್ಡರ್ ಪಡೆದು, ಕಾರ್‌ಖಾನೆ ಜಪ್ತಿ ಮಾಡಿ, ಅದರ ಕೆಲವು ಸಾಮಾನುಗಳನ್ನು ನಮ್ಮ ಸುಪರ್ದಿಗೆ ವಹಿಸಿಕೊಂಡಿದ್ದು ಒಂದು ಸಾಹಸ ಕಥೆಯಾಗಿತ್ತು. ಖದೀಮ ಜೈನ್ ಊರು ಬಿಟ್ಟು ಓಡಿಹೋಗಿದ್ದಾಗಿ, ಸುಳ್ಳು ಹೇಳಿ ಅವನ ಹೆಂಡತಿ, ಕಾರಖಾನೆ ನಡೆಸಿಕೊಂಡು ಬರುತ್ತಿದ್ದಳು. ಮಗ ಇಂಜಿನಿಯರಿಂಗ್ ಓದಲಿಕ್ಕೆ ಬೆಂಗಳೂರಿನಲ್ಲಿದ್ದ. ಈ ನರಪೇತಲ ಉದ್ದನಾಲಿಗೆಯ ಹುಡುಗನೇ ಪ್ರಮೋದ್ ಜೈನ್‌ನ ಮಗ!

"ಕುಳಿತುಕೊಳ್ಳಿ ಮಾತನಾಡೋಣ" ಎಂದೆ.

"ಇವನ ಹತ್ತಿರ ಮಾತನಾಡುವುದು ಏನೂ ಇಲ್ಲ ಸಾಬ್. ಸಾಲ ಇವನು ತೆಗೆದುಕೊಂಡಿಲ್ಲ. ಇವನದಲ್ಲ ಫ್ಯಾಕ್ಟರಿ." ವರ್ಮ ಖಾರವಾಗಿ ಹೇಳಿದ.

ವರ್ಮನನ್ನು ಸುಟ್ಟುಬೂದಿ ಮಾಡುವಂತೆ ಒಂದು ಸಲ ಅವನ ಮುಖವನ್ನು ದಿಟ್ಟಿಸಿದ ಜೈನ್ ಕುಮಾರ. ವರ್ಮನ ಮುಖ ಶಾಂತವಾಗಿತ್ತು. ಅದನ್ನು ಮಂಜುಗಡ್ಡೆಯಿಂದ ಮೆತ್ತುಕೊಂಡಿದ್ದರಿಂದ, ಹೇಗೆ ತಾನೆ ಸುಡಲಿಕ್ಕೆ ಸಾಧ್ಯ?

"ನಿಮ್ಮ ತಂದೆಯನ್ನು ಕರೆದುಕೊಂಡು ಬಾ. ಈಗ ನಿನ್ನ ಜೊತೆ ಮಾತಾಡಿ ಪ್ರಯೋಜನವಿಲ್ಲ."

ಹುಡುಗ ಉತ್ತರ ಕೊಡುವ ಮೊದಲೇ ನಾನು ಕೂಡ ವರ್ಮನ ಮಾತಿಗೆ ಪುಷ್ಟಿ ಕೊಟ್ಟೆ.

"ನಮ್ಮ ತಂದೆ ಪರವಾಗಿ ಮಾತನಾಡಲು ನನಗೆ ಹಕ್ಕಿಲ್ಲವೇ?"

ಕೂಗಿದ ಹುಡುಗ.

"ಹಕ್ಕಿದೆ. ಹಾಗೇನೆ ನಿಮ್ಮ ತಂದೆ ಮಾಡಿದ ಸಾಲ ವಾಪಸ್ಸು ಕೊಡಲಿಕ್ಕೂ ನಿನಗೆ ಹಕ್ಕಿದೆ. ಆ ಹಕ್ಕು ಯಾಕೆ ಉಪಯೋಗಿಸಬಾರದು ನೀನು?"

ನನ್ನ ಮಾತು ಕೇಳಿ ಹುಡುಗ ತೆಪ್ಪಗಾದ. ಉದ್ದ ನಾಲಿಗೆ ಸ್ವಲ್ಪ ಮಟ್ಟಿಗೆ ಕಡಿದ ಹಾಗೆ ತೋರಿತು.

"ಅಧಿಕಾರ ಇದೆ ಎಂದು ದುರುಪಯೋಗ ಮಾಡಬೇಡ್ರಿ. ನಮ್ಮ ವ್ಯಾಪಾರ ಕೆಡಿಸಿ, ನಿಲ್ಲಿಸಿ, ನಿರ್ನಾಮ ಮಾಡಿದರೆ ನಿಮಗೇನು ಸಿಗುತ್ತದೆ?"

ತರ್ಕದ ಕಣಕ್ಕೆ ಇಳಿದ ಹುಡುಗ.

"ಸಾಬ್! ಈ ದಿನ ಕೋರ್ಟ್‌ನಲ್ಲಿ ಒಂದು ಬ್ಯಾಂಕ್ ಕೇಸ್ ಇದೆ. ಹನ್ನೊಂದು ಗಂಟೆಗೆ ತಾವು ತೀಸ್ ಹಜಾರೀ ಕೋರ್ಟ್‌ಗೆ ಹೋಗಬೇಕು. ಇವನ ಹತ್ತಿರ ಹರಟೆ ಹೊಡೆಯುತ್ತಾ ಇದ್ದರೆ, ಕೋರ್ಟ್‌ಗೆ ಹೋಗುವುದಕ್ಕೆ ಆಗುವುದಿಲ್ಲ."

ವರ್ಮಾ ನನ್ನನ್ನು ಎಚ್ಚರಿಸಿದ.

"ನನಗೆ ಉತ್ತರ ಕೊಡ್ರೀ. ಏನೋ ಸಬೂಬು ಹೇಳಿ ಓಡಿ ಹೋಗಬೇಡ್ರೀ!"

ಗುಡುಗಿದ ಹುಡುಗ, ಅವನ ನಾಲಿಗೆ ಮತ್ತೆ ಚುರುಕಾಗಿ ಬೆಳೆಯತೊಡಗಿತ್ತು.

ನಾನು ಕುರ್ಚಿಯಿಂದ ಎದ್ದೆ. ಮೇಜಿನ ಮೇಲೆ ಇದ್ದ ಹಲವಾರು ಫೈಲುಗಳಲ್ಲಿ, ಆ ದಿನದ ಕೋರ್ಟ್ ಕೇಸ್ ಫೈಲನ್ನು ಹುಡುಕಿ ತೆಗೆದೆ.

"ಮಾತಾಡ್ರೀ! ದರ್ಪ ತೋರಿಸಿ ನನ್ನನ್ನು ಹೆದರಿಸಬೇಕು ಅಂತ ಮಾಡಿದ್ದೀರಾ?"

"ಒಂದು ಕೆಲಸ ಮಾಡಪ್ಪಾ. ನಿಮ್ಮ ತಂದೆಯನ್ನು ಕರೆದುಕೊಂಡು, ನೀನೂ ಬಾ, ಆಗ ನಿನ್ನ ಜೊತೆ ಮಾತನಾಡುತ್ತೇನೆ. ಈಗ ನನಗೆ ಸಮಯವಿಲ್ಲ. ಕೋರ್ಟ್‌ಗೆ ಹೋಗಬೇಕು" ಎಂದು ಹೇಳಿ ಫೈಲ್ ಕೈಯಲ್ಲಿ ಹಿಡಿದು, ಕ್ಯಾಬಿನ್‌ನಿಂದ ಹೊರಗೆ ಕಾಲಿರಿಸಿದೆ.

"ಯಾರು ಯಾರನ್ನೋ ನಾಲಾಯಕರನ್ನು ಮೇನೇಜರ್‌ನ್ನಾಗಿ ಮಾಡಿ ನಮ್ಮ ಪ್ರಾಣ ತೆಗೀತಾರೆ!"

ಕೊನೆಯ ಹರಿತವಾದ ಬಾಣವನ್ನು ತಾಗಿಸಿದ ಹುಡುಗ.

'ನಾಲಾಯಕ್ ಮೇನೇಜರ್' ಬಿರುದು ಹೊತ್ತು ದಾರಿಗುಂಟ ನಡೆದೆ. ತಲೆ ಮೇಲೆ ಬಿಸಿಲ ಝಳ ಹೊಡೆಯುತ್ತಿತ್ತು. ಬಿರುದಿನ ಭಾರ ಕೂಡ ತಡೆಯದಾಗಿತ್ತು. ಮನಸ್ಸು ಘಾಸಿಗೊಂಡು, ಅಪಮಾನದಿಂದ ಹೃದಯ ಹಿಂಡತೊಡಗಿತು. ಆತಂಕ, ಉದ್ವೇಗ, ಅಶಾಂತಿಗಳಿಂದ ಜೀವ ತತ್ತರಿಸತೊಡಗಿತು. ನಡೆದು ಹೋಗುವುದು ದುಸ್ಸಾಧ್ಯವೆನಿಸಿ, ಸೈಕಲ್ ರಿಕ್ಷಾ ಬಾಡಿಗೆ ಹಿಡಿದು, ಅದರಲ್ಲಿ ಕುಳಿತು 'ತೀಸ್ ಹಜಾರಿ' ಕೋರ್ಟ್ ಕಡೆ ಹೊರಟೆ.

ಬಜಾರ್‌ನಿಂದ ಕೋರ್ಟ್ ವಿಸ್ತೀರ್ಣ ಸಮೀಪದಲ್ಲೇ ಇತ್ತು. ಹಳೇ ದಿಲ್ಲೀ ರೈಲು ನಿಲ್ದಾಣದ ಸಮೀಪವಾದ್ದರಿಂದ, ರಸ್ತೆ ಪ್ರಯಾಣಿಕರಿಂದ ತುಂಬಿಹೋಗಿತ್ತು. ಕೈಯಲ್ಲಿ ಚೀಲ ಹಿಡಿದು ನಡೆಯುತ್ತಿರುವ ಪ್ರಯಾಣಿಕರು, ನನ್ನಂತೆ ಸೈಕಲ್ ರಿಕ್ಷಾ ಗಳಲ್ಲಿ ಚೀಲ, ಹಾಸಿಗೆ ಮತ್ತು ಇತರೆ ಸಾಮಾನುಗಳನ್ನು ಏರಿಸಿ, ಸಾಗುತ್ತಿರುವ ಪ್ರಯಾಣಿಕರು, ಕಾರು, ಟ್ಯಾಕ್ಸೀಗಳಲ್ಲಿ 'ಭರ್' ಎಂದು ಸಾಗುವ ಪ್ರಯಾಣಿಕರು,

ಸಿಟಿಬಸ್‌ಗಳಲ್ಲಿ ಕುಳಿತು, ನಿಂತು, ನುಗ್ಗಾಟದಿಂದ ಜರ್ಜಿತರಾಗಿ ಪಯಣಿಸುತ್ತಿರುವ ಜನರು ಎಲ್ಲವೂ ವಿಚಿತ್ರವೆನಿಸಿತು ನನಗೆ. ಈ ಪ್ರಯಾಣಿಕರ ಜೊತೆ, ಗುರಿಯಿಲ್ಲದೆ ನಡೆದಾಡುವ ಅಲೆಮಾರಿಗಳು, ಬೆವರು ಸುರಿಸುತ್ತಾ, ಏದುಸಿರುಬಿಡುತ್ತಾ, ಹರಕಂಗಿ, ಚಲ್ಲಣ, ಲುಂಗಿ ತೊಟ್ಟ ಭಾರವಾದ ಸಾಮಾನುಗಳನ್ನು ತಲೆಮೇಲೆ ಹೊತ್ತು ಓಡುವ ಕೂಲಿಗಳು, ಹೊರರಾಜ್ಯಗಳಿಂದ ದಿಲ್ಲೀ ಶಹರನ್ನು ನೋಡಲು ಬಂದ ಬಡ ರೈತರು, ವ್ಯಾಪಾರಸ್ಥರು, ಕೈಯಲ್ಲಿ ಪುಸ್ತಕ ಹಿಡಿದು, ಗೆಳೆಯರೊಂದಿಗೆ ಹರಟೆಕೊಚ್ಚುತ್ತಾ ಅಡ್ಡಾದಿಡ್ಡಿ ಓಡಾಡುತ್ತಾ ಇರುವ ವಿದ್ಯಾರ್ಥಿ ಸಮೂಹಗಳು, ಕೈಯಲ್ಲಿ ಬಂದೂಕು ಹಿಡಿದು, ದೂರದ ಯಾವುದೋ ಕೇಳರಿಯದ ಯುದ್ಧರಂಗ ಪ್ರದೇಶಕ್ಕೆ ಸೈನಿಕ ಪೋಷಾಕು ಧರಿಸಿ, ಲಗುಬಗೆಯಿಂದ ಸಾಗುವ ಸೈನಿಕರ ಗುಂಪು, ಈ ರಸ್ತೆಯಲ್ಲಿ ಕಾಣುವುದು ಸರ್ವೇ ಸಾಮಾನ್ಯವಾಗಿತ್ತು. ಆದರೆ, ಈ ಎಲ್ಲಾ ವರ್ಗದವರಿಗಿಂತ ಬಹು ಮುಖ್ಯ ವರ್ಗದವರಾದ ಕರೀಕೋಟು, ಬಿಳೀ ಪ್ಯಾಂಟ್ ಧರಿಸಿ, ಎಲ್ಲಾ ತರಹದ ವಾಹನಗಳಲ್ಲಿ ಓಡಾಡುವ ವಕೀಲ ಮಹಾಶಯರ ದೃಶ್ಯ ನೋಡಲು ರಂಜಕ ವಾಗಿತ್ತು.

ಕೋರ್ಟಿನ ಆವರಣಕ್ಕೆ ಹೊಕ್ಕೊಡನೆ, ದಿಲ್ಲೀ ರೈಲು ನಿಲ್ದಾಣದ ಆವರಣ ದೊಳಗೆ ಹೊಕ್ಕ ಅನುಭವ. ಅದೇ ಜನಜಂಗುಳಿ, ಅದೇ ಕೂಗಾಟ, ಅದೇ ಕಿರುಚಾಟ, ಅದೇ ಅರ್ಭಟ, ಅದೇ ಸಡಗರ, ಅದೇ ನೂಕುನುಗ್ಗಲು, ಅದೇ ಅವಸರ, ಅದೇ ಕಾತುರ.

ಆದರೆ ಒಂದು ಎದ್ದು ಕಾಣುವ ದೃಶ್ಯವೆಂದರೆ, ಅಲ್ಲಿ ಪ್ರಯಾಣಿಕರ ಕೈಯಲ್ಲಿ ಚೀಲ, ಹಾಸಿಗೆ ಇತರ ಸಾಮಾನು ಸರಂಜಾಮುಗಳು ಕಂಡರೆ, ಇಲ್ಲಿ ಫೈಲುಗಳ ಜಾತ್ರೆಯೋ ಜಾತ್ರೆ! ಅಲ್ಲಿ ಎಲ್ಲಾ ಬಗೆಯ ಚಿತ್ರವಿಚಿತ್ರ ಉಡುಪು ಧರಿಸಿದ ಪ್ರಯಾಣಿಕರನ್ನು ಕಂಡರೆ, ಇಲ್ಲಿ, ಕರೀಕೋಟುಗಳು, ಕೈಯಲ್ಲಿ ಫೈಲ್ ಹಿಡಿದು, ತಮ್ಮ ಗಿರಾಕಿಗಳು, ಹಿಂಬಾಲಕರು ಇತರರ ಜೊತೆ ರೈಲು ತಪ್ಪಿಹೋಗುವ ಭಯ, ಆತಂಕಗಳಿಂದ ಓಡಾಡುವ ದೃಶ್ಯ ಅನುಪಮ! ಅಲ್ಲಿ ಯಾವ ಯಾವ ಊರಿಗೆ ಪಯಣಿಸುವವರೋ, ಯಾವ ಕಾರ್ಯದ ನಿಮಿತ್ತ ಸಾಗುವರೋ, ಸಂತಸದಿಂದ, ಹರುಷದಿಂದ ಕೇಕೆ ಹಾಕುತ್ತಾ ನಗುತ್ತಾ, ಬಡಬಡಿಸುತ್ತಾ ಕೆಲವರು ದುಃಖದಿಂದ, ಕಣ್ಣೀರು ಸುರಿಸುತ್ತಾ, ಯಾವ ಕಾರಣಕ್ಕೋ, ಯಾರ ಕಾರಣಕ್ಕೋ, ಯಾರ ಪ್ರಯೋಜನಕ್ಕೋ, ಯಾರ ಸುಖಕ್ಕೋ, ಸಾಗುತ್ತಿರುವ ಪ್ರಯಾಣಿಕರನ್ನು ಕಂಡರೆ ಇಲ್ಲಿ ಅದೇ ರೀತಿ ಸಂತಸದಿಂದ, ಕೇಕೆ ಹಾಕಿ ನಗುತ್ತಾ ಯುದ್ಧದಲ್ಲಿ ಗೆದ್ದವರಂತೆ ಪರೀಕ್ಷೆಯಲ್ಲಿ ಪಾಸಾದ ವಿದ್ಯಾರ್ಥಿಗಳಂತೆ, ಓಡಾಡುವ ದುಗುಡ, ದುಮ್ಮಾನ,

ದುಃಖ, ಅಶ್ರು ತುಂಬಿದ ಕಣ್ಣುಗಳಿಂದ, ನಿಧಾನವಾಗಿ ಚಲಿಸುವ ಜನರನ್ನು ಕಾಣುವಾಗ, ಮನಸ್ಸು ವಿಚಿತ್ರ ರೀತಿಯಲ್ಲಿ ಹೊಯ್ದಾಡತೊಡಗಿತು. ಈ ಕೋರ್ಟ್ ವಿಸ್ತೀರ್ಣ ಒಂದು ಪಯಣ ನಿಲ್ದಾಣವೇ ಸರಿ! ಹಳಿ ಇಲ್ಲದ ರೈಲು ನಿಲ್ದಾಣ! ಈ ನಿಲ್ದಾಣಕ್ಕೆ ಬರುವವರು, ಒಂದು ವಿಚಿತ್ರ ರೀತಿಯ ಪ್ರಯಾಣಿಕರು! ಅತ್ಯಂತ ಆಸೆ, ಆಕಾಂಕ್ಷೆ, ಕೇಸ್‌ನ್ನು ಗೆದ್ದೇ ಬಿಡುವ ಛಲ ಹೊತ್ತು, ಎಷ್ಟೇ ವರ್ಷಗಳಾದರೂ ಲೆಕ್ಕಿಸದೇ, ಹೋರಾಡುವ ಪ್ರವೃತ್ತಿ ಇಟ್ಟುಕೊಂಡು, ತಮ್ಮ ಜೀವಮಾನವಿಡೀ ನೆಲೆ ಇಲ್ಲದ, ಅಲೆಮಾರಿಗಳ ತರಹ ಪಯಣಿಸುವವರೆ! ಬ್ರಿಟಿಷರು ತಮ್ಮ ಕಾನೂನು ಪದ್ಧತಿಯನ್ನು ನಮಗೆ ಬಳುವಳಿಯಾಗಿ ಬಿಟ್ಟುಕೊಟ್ಟು ಹೋದನಂತರ, ನ್ಯಾಯಸ್ಥಾನಕ್ಕೆ ಪ್ರಯಾಣ ಮಾಡುವ ಹುಚ್ಚು ಹವ್ಯಾಸ, ಕುಡಿತ ಜೂಜುಗಳ ಚಟಕ್ಕಿಂತ ಹೆಚ್ಚಾಗಿ ಅಂಟಿಕೊಂಡು, ತಮ್ಮ ಜೀವನದ ಬಹು ಭಾಗವನ್ನು ಈ ಕೋರ್ಟ್ ನಿಲ್ದಾಣದಲ್ಲೇ ಕಳೆದು ಕಾನೂನು ವೈಭವದ ಜೀವನ ಸಾರ್ಥಕ ಮಾಡಿಕೊಳ್ಳುವುದರಲ್ಲಿ, ಸಫಲರಾಗಿದ್ದಾರಲ್ಲವೇ? ಪಂಚಾಯತ್ ಪದ್ಧತಿಗೆ ಬಲಿದಾನ ನೀಡಿ, ಶತಮಾನದ ಉದ್ದ ಕಾನೂನು ಗಾಡಿ ಹಿಡಿದು ನಿರಂತರ ಪ್ರಯಾಣ ಜರುಗಿಸುವ ಈ ಕಾರ್ಯ ಎಷ್ಟು ಗಮನಾರ್ಹವಾಗಿದೆ!

ಸುಮ್ಮಾರು ಐದು ನೂರು ಕೋರ್ಟ್ ರೂಮುಗಳಿರುವ ಈ ಬೃಹತ್ ಕಟ್ಟಡದೊಳಗೆ ಹೊಕ್ಕಿ ನನಗೆ ಬೇಕಾದ ಕೋರ್ಟ್ ರೂಮನ್ನು ಹುಡುಕಿ ಹೊರಟೆ. ಬೃಹತ್ ಜನಜಾತ್ರೆಯಲ್ಲಿ ಕೊಚ್ಚಿ ಹೋಗುತ್ತಿದ್ದ, ಜನ ಪ್ರವಾಹದೊಳಗೆ ನುಗ್ಗಿದಾಗ, ನನಗೆ ಅರಿವಾಗದಂತೆ ಸುಳಿಯೊಂದು ನನ್ನನ್ನು ಎಳೆದು ನೆಲಕ್ಕೆ ತಳ್ಳತೊಡಗಿತು. ಹೇಗೋ ಕಷ್ಟಪಟ್ಟು, ಆ ಸುಳಿಯಿಂದ ತಪ್ಪಿಸಿಕೊಂಡು, ಸನಿಹದಲ್ಲೇ ಕಾಣುತ್ತಿದ್ದ ಮಹಡಿ ಮೆಟ್ಟಿಲು ಬಳಿ ಹೋಗಿ, ಮೆಟ್ಟಿಲ ಮೇಲೆ ಕಾಲಿಟ್ಟ ಕೂಡಲೆ ಹಿಂದಿನಿಂದ ದಬ್ಬಿದ ಗುಂಪಿನ ದೆಸೆಯಿಂದ, ಬಹು ಬೇಗ ಮೊದಲನೆ ಮಹಡಿಗೆ ಅನಾಮತ್ತಾಗಿ ಸಾಗಿಸಲ್ಪಟ್ಟೆ. ಮೂರನೆ ಮಹಡಿಗೆ ಇದೇ ರೀತಿ ಸಾಗಿಸಲ್ಪಟ್ಟು, ಕೋರ್ಟ್‌ಕೋಣೆಯ ಮುಂದೆ ನಿಂತಾಗ, ಒಳಗೆ ಹೋಗಲಾರದಷ್ಟು ಜನ ಗುಂಪು ಕಟ್ಟಿ ನಿಂತಿದ್ದರು. ಬಹಳ ತ್ರಾಸ ಪಟ್ಟು ಸ್ವಲ್ಪ ಸ್ವಲ್ಪವೇ ಜಾಗ ಮಾಡಿಕೊಂಡು , ಜಡ್ಜನ ಮುಖ ನೋಡುವ ಎಂದು ಸಾವರಿಸಿಕೊಂಡು, ಒಂದೊಂದೇ ಇಂಚು ಕಾಲು ಮುಂದೆ ಮಾಡಿ, ಗೊಣಗಾಟ, ಬೈಗಳಗಳನ್ನು ಎದುರಿಸಿ, ಸಾಗಿದಾಗ, ಅಚ್ಚರಿ ಕಾದಿತ್ತು. ಜಡ್ಜ್‌ನ ಮುಂದೆ ಹತ್ತಿಪ್ಪತ್ತು ಜನ ನಿಂತು ಅವನ ಕೂಡ ಜಗಳ, ಕೂಗಾಟ, ಚೀರಾಟ ನಡೆಸಿ, ನ್ಯಾಯ ಕೇಳುತ್ತಿದ್ದರು. ಮಧ್ಯದಲ್ಲಿ ಕುಳಿತ ಕರೀ ಕೋಟುಗಳನ್ನು ನೋಡಿದೆ. ಎಲ್ಲೂ ನಮ್ಮ ಬ್ಯಾಂಕ್ ವಕೀಲ ಕಾಣಸಿಗಲಿಲ್ಲ. ಹಾಗಾದರೆ ಇವ ಎಲ್ಲಿಗೆ ಹೋದ? ಬ್ಯಾಂಕ್ ಕೇಸ್ ಗತಿ

ಏನಾಯಿತು? ಕೇಸ್ ಮುಂದೂಡಿತೆ? ಬೆಂಚ್ ಕ್ಲರ್ಕ್‌ನ ಕೇಳುವ ಅಂದರೆ, ಅವನ ಬಳಿ ಸಾಗಲು, ನ್ಯಾಯ ಕೇಳಲು ಬಂದಿರುವ ನೂರಾರು ಜನರ ದೇಹಗಳನ್ನೂ ಎದುರಿಸಬೇಕಾಗಿತ್ತು. ಜಡ್ಜ್‌ನ ಮುಂದೆ ಈ ಪಾಟಿ ಜನರನ್ನು ಯಾಕೆ ಬಿಡುತ್ತಾರೆ? ಈ ಜಡ್ಜ್ ಆದರೂ ಅವರನ್ನು ತನ್ನ ಸಮೀಪ ಬರಲು ಹೇಗೆ ಅನುಮತಿ ನೀಡಿದ? ನ್ಯಾಯಾಲಯದಲ್ಲೇ ಶಿಸ್ತು ಕಾಣಬರದಿದ್ದರೆ, ನಮ್ಮ ಬ್ಯಾಂಕ್‌ನಲ್ಲಿ ಹೇಗೆ ಕಾಣಬೇಕು?

ಜನರ, ಕಕ್ಷಿದಾರರ, ಕರೀಕೋಟುಗಳ ಜನಜಂಗುಳಿಯಿಂದ ಬಿಡಿಸಿಕೊಂಡು, ಹೊರಬಂದೆ. ವಕೀಲ ಮಹಾಶಯನನ್ನು ಅರಸುತ್ತಾ ಇಡೀ 'ತೀಸ್ ಹಜಾರಿ' ಕೋರ್ಟ್ ಕಟ್ಟಡವನ್ನು ಸುತ್ತಾಡಿದೆ. ವಕೀಲ ಮಹಾಶಯ ತಪ್ಪಿಸಿಕೊಂಡುಬಿಟ್ಟಿದ್ದ. ಸುಮಾರು ಹತ್ತು ಸಾವಿರ ವಕೀಲು ಮಹಾಶಯರ ಮಹಾಸಮುದ್ರವನ್ನು ಒಂದು ಚಿಕ್ಕ ಮೀನಿನ ಗಾತ್ರದ ನಮ್ಮ ಬ್ಯಾಂಕ್ ವಕೀಲನನ್ನು ಹೇಗೆ ಹುಡುಕುವುದು? ದೇಶದ ರಾಜಧಾನಿಯಲ್ಲಿ ಹತ್ತು ಸಾವಿರಕ್ಕೂ ಹೆಚ್ಚು ವಕೀಲರಿದ್ದರೆ, ಕೋರ್ಟುಗಳಲ್ಲಿ ಎಷ್ಟು ಲಕ್ಷ ಕೇಸ್‌ಗಳು ಇತ್ಯರ್ಥಕ್ಕೆ ಕಾದು ಕುಳಿತಿರಬೇಕು? ಚಿಕ್ಕ ಪುಟ್ಟ ಸಮಸ್ಯೆಗಳಿಗೂ ಕೋರ್ಟಿನ ಮೆಟ್ಟಿಲು ಹತ್ತುವ ಪ್ರವೃತ್ತಿ ನಮಗೆ ಇಂಗ್ಲಿಷ್‌ರಿಂದ ಬಂದ ಬಳುವಳಿ ಇನ್ನು ಯಾಕೆ ಕಿತ್ತು ಬಿಸಾಡಿಲ್ಲ? ಒಮ್ಮತದ ಮಾತುಕತೆ, ಸೌಹಾರ್ದತೆಯ ಇತ್ಯರ್ಥ, ಜಗಳ, ಗಲಾಟೆ, ಮನಸ್ತಾಪಗಳಿಲ್ಲದ ಒಪ್ಪಂದಕ್ಕೆ ಏಕೆ ಮನಸ್ಸು ಮಾಡುವುದಿಲ್ಲ? ದೇವರ ಗುಡಿಯ ಮೆಟ್ಟಿಲನ್ನು ಎಷ್ಟೇ ಕಡಿದಾಗಿರಲಿ, ಸಾಹಸ, ಸಮಯ, ಹಣ, ವ್ಯಯ ಮಾಡಿ ಹತ್ತಿ, ತಮ್ಮ ಇಷ್ಟಾರ್ಥ ಪೂರ್ತಿ ಮಾಡಲು ದೇವರನ್ನು ಪೂಜಿಸಿ, ಮೆಚ್ಚಿಸಲು ಪ್ರಯತ್ನ ಪಡುವ ನಾವು, ಅಷ್ಟೇ ಸಾಹಸ ಸಮಯ ಹಣ ವ್ಯಯ ಮಾಡಿ, ಹಲವಾರು ಕೋರ್ಟ್‌ಗಳ ಕಡಿದಾದ, ಮೆಟ್ಟಿಲುಗಳನ್ನು ಏರುವ ಪ್ರಯತ್ನ ನಿರಂತರವಾಗಿ ಮಾಡುತ್ತಲೇ ಇದ್ದೇವಲ್ಲವೇ?

ಈ ಪ್ರವೃತ್ತಿ ರಾಷ್ಟ್ರೀಯ ಬೆಪ್ಪುತನವೇ?

ಕೋರ್ಟ್‌ನ ಹೊರಗಡೆ, ವಿಶಾಲ ಹೊರಾಂಗಣದಲ್ಲಿ, ಸಾಲಾಗಿ ವಕೀಲ ಮಹಾಶಯರ ಚೇಂಬರ್ಸ್‌ಗಳ ಬಳಿ ನಡೆದೆ. ನಮ್ಮ ಹಳ್ಳಿಯ ಚಾ ಅಂಗಡಿಗಳು, ಪೆಟ್ಟಿಗೆ ಅಂಗಡಿಗಳು, ಹಜಾಮರ ಅಂಗಡಿಗಳು, ಈ ವಕೀಲರ ಚೇಂಬರ್ಸ್‌ಗಳಿಗಿಂತ ಸಾವಿರ ಪಾಲು ಚಂದದ ರೀತಿಯಲ್ಲಿ ಕಟ್ಟಲ್ಪಟ್ಟಿವೆ. ಹೆಸರಿಗೆ 'ಚೇಂಬರ್ಸ್' ನೋಡಿದರೆ, ಕೆಟ್ಟ ರೀತಿಯಲ್ಲಿ ಕಟ್ಟಲ್ಪಟ್ಟ ತಟಿಕೆ ಗುಡಿಸಲುಗಳು. ಒಂದು ಮರದ ಮೇಜು, ಕಬ್ಬಿಣದ ಕುರ್ಚಿ, ಅದರ ಎರಡೂ ಬದಿಯಲ್ಲಿರಿಸಿದ ಪುಟ್ಟ ಪುಟ್ಟ ಮರದ ಬೆಂಚುಗಳು, ಈ 'ಚೇಂಬರ್ಸ್'ನ ಮುಖ್ಯ ಲಕ್ಷಣಗಳು. ತಟಿಕೆಯ ಮಾಡಿಗೆ ತೂಗಾಡುವ

ವಕೀಲನ ಹೆಸರು, ಅದರ ಮುಂದೆ 'ಲಾಯರ್ಸ್ ಚೇಂಬರ್' ಎನ್ನುವ ನಾಮಫಲಕ ಇನ್ನೊಂದು ವಿಶೇಷ ಸಾಧನ.

ನಮ್ಮ ವಕೀಲನನ್ನು ಅರಸುತ್ತಾ ಈ 'ಚೇಂಬರ್ಸ್' ನ ಸಾಲುಗಳ ಮುಂದೆ ಸಾಗಿ, ಸುಮಾರು ಒಂದು ಗಂಟೆ ಎಲ್ಲಾ ಚೇಂಬರ್‌ಗಳನ್ನು ನೋಡಿ, ಕೋರ್ಟ್‌ನ ಸುತ್ತ ಪ್ರದಕ್ಷಿಣೆ ಹಾಕಿ, ಬಳಲಿ ಬೆಂಡಾಗಿ, ಉಸ್ಸಪ್ಪಾ ಎಂದು ಒಂದು 'ಚೇಂಬರ್'ನ ಮುಂದೆ ಇದ್ದ ಖಾಲಿ ಬೆಂಚ್‌ನ ಮೇಲೆ ಕುಳಿತೆ.

"ಏನು ಬೇಕು?"

'ಚೇಂಬರ್'ನ ಮಾಲೀಕ ಕೇಳಿದ.

ವಯಸ್ಸಾದ ವಕೀಲ, ನ್ಯಾಯವಾದಿ, ವ್ಯಾಧಿಯಿಂದ ನರಳುವ ಹಾಗೆ ತೋರಿದ.

"ಈ ದಿನ ಬ್ಯಾಂಕ್ ಕೇಸ್ ಇತ್ತು. ನಮ್ಮ ವಕೀಲರನ್ನು ಕಾಣುವ ಎಂದು ಬಂದೆ. ಆದರೆ ಆತ ಸಿಗಲಿಲ್ಲ" ಎಂದು ಉತ್ತರಿಸಿ, ವಕೀಲನ ಹೆಸರು ತಿಳಿಸಿದೆ.

"ನಿಮ್ಮ ವಕೀಲನ ಚೇಂಬರ್ಸ್ ಇಲ್ಲಿಲ್ಲ. ಆತನ 'ಚೇಂಬರ್ಸ್' ಹೊಸಾ ಕಟ್ಟಡ ದಲ್ಲಿದೆ."

"ಎಲ್ಲಿದೆ ಆ ಕಟ್ಟಡ?"

"ಇಲ್ಲೇ ಸಮೀಪ. ಸ್ಕೂಟರ್ ಸ್ಟಾಂಡ್ ಬಳಿ ಇದೆ. ನಾಯಿಗೂಡುಗಳ ಹಾಗೆ ಕಟ್ಟಿದ್ದಾರೆ ನೋಡಿ ಆ ಕಟ್ಟಡ."

ನ್ಯಾಯವಾದಿ ತಿರಸ್ಕಾರದಿಂದ ನುಡಿದು, ಕೆಮ್ಮ ತೊಡಗಿದ.

"ಹುಷಾರಿಲ್ಲವೇ?" ಕನಿಕರದಿಂದ ಕೇಳಿದೆ.

ಮುದುಕ ನ್ಯಾಯವಾದಿ, ಕೆಮ್ಮನ್ನು ಕೆಲವು ಕ್ಷಣ ಮುಂದುವರೆಸಿ, ಸಾವಕಾಶ ದಿಂದ ನುಡಿದ.

"ಆಸ್ತಮಾ ರೋಗ. ಜನ್ಮಕ್ಕೆ ಅಂಟಿದ್ದು. ತೀಸ್ ಹಜಾರಿ ಕೋರ್ಟ್‌ನ ಧೂಳು, ಎದುರು ವಾದಿಗಳು ವಾದ ಮಾಡುವಾಗ ಹೊರಹೊಮ್ಮುವ ದುರ್ನಾತದ ಉಸಿರು, ನಮ್ಮ ಕಕ್ಷಿದಾರರು ಬಿಡುವ ದರಿದ್ರದ ಉಸಿರು, ವಿರೋಧ ಪಕ್ಷದ ಕಕ್ಷಿದಾರರು ಕಾರುವ ಶಾಪದ ಗಾಳಿ, ಪ್ರತಿವಾದಿ ಕಕ್ಕುವ ವಿಷದ ಬಿರುಗಾಳಿ ನನ್ನನ್ನು ಈ ಕಾಯಿಲೆಗೆ ಈಡು ಮಾಡಿದೆ!"

ಅವನ ಆಸ್ತಮಾಯುಕ್ತ ಮಾತುಗಳಿಗೆ ತಲೆ ತೂಗಿದೆ, ಬೆಪ್ಪಾಗಿ ಕುಳಿತೆ.

"ನೀರು ಕುಡಿಯುತ್ತೀರಾ?"

ವಕೀಲ ವ್ಯಾಧಿ ಕೇಳಿದ.

"ಬೇಡ" ಎಂದು ಥಕ್ಕನೆ ಕೇಳಿದೆ:

"ತೀಸ್ ಹಜಾರಿ' ಎಂಬ ಹೆಸರು ಈ ಕೋರ್ಟ್‌ಗೆ ಏಕೆ ಬಂತು?"

ಎಲೆ ಅಡಿಕೆ ಜಗಿದು ಕೆಂಪಗಾಗಿದ್ದ, ಮುರಿದು ಉಳಿದ ಕೆಲವೇ ಹಲ್ಲುಗಳನ್ನು ಪ್ರದರ್ಶಿಸುತ್ತಾ ವಕೀಲ ವಾದಿ ಉತ್ತರಿಸಿದ.

"ಮೊಘಲ್ ಕಾಲದಲ್ಲಿ ಯಾರೋ ಒಬ್ಬ ಸರದಾರ್‌ನಿಗೆ ಮೂವತ್ತು ಸಾವಿರ ಕುದುರೆ ಪಡೆ ನೀಡಿದ್ದರಂತೆ. ಅವನು ತನ್ನ ಮೂವತ್ತು ಸಾವಿರ ಕುದುರೆ ಪಡೆಯನ್ನು ಈ ಪ್ರದೇಶದಲ್ಲಿ ಪಾಳೆಯ ಬೀಡು ಬಿಟ್ಟಿದ್ದನಂತೆ. ಹಾಗಾಗಿ, ಈ ಪ್ರದೇಶಕ್ಕೆ 'ತೀಸ್ ಹಜಾರಿ' ಎಂಬ ಹೆಸರು ನಿಂತುಹೋಯಿತಂತೆ. ಬ್ರಿಟಿಷ್‌ರು ಈ ಪ್ರದೇಶದಲ್ಲಿ ಕೋರ್ಟ್ ಕಟ್ಟಡ ಕಟ್ಟಿದರು. ಜನರು ಹಳೇ ಹೆಸರು ಮರೆಯದೇ ಮೊಘಲ್ ಸರದಾರ್‌ನ ಪಡೆಯನ್ನು ಜ್ಞಾಪಿಸಿಕೊಳ್ಳುತ್ತಿದ್ದಾರೆ. ಇನ್ನು ಒಂದು ಕಾರಣ ಹೇಳುತ್ತಾರೆ ಕೆಲವರು – ಈ ಕೋರ್ಟಿಗೆ ದಿನವಿಡೀ ಸರಾಸರಿ ಹತ್ತು ಸಾವಿರ ವಕೀಲರು, ಹತ್ತು ಸಾವಿರ ಕಕ್ಷಿದಾರರು ಮತ್ತು ಹತ್ತು ಸಾವಿರ ಇತರೆ ಜನರು ಒಟ್ಟಿಗೆ, ಒಮ್ಮೆಲೆ ಬಂದು ಕೆಲಸ ಮಾಡಿಕೊಂಡು ಹೋಗುವುದರಿಂದ, ಈ ಪ್ರದೇಶಕ್ಕೆ 'ತೀಸ್ ಹಜಾರಿ' ಎಂದೂ ಕರೆಯುತ್ತಾರಂತೆ. ಯಾವುದು ಸತ್ಯ, ಯಾವುದು ಮಿಥ್ಯ ಎಂದು ಹೇಳುವುದು ಕಷ್ಟ! ಆದರೆ ಒಂದು ಮಾತ್ರ ಸತ್ಯ. ಪ್ರಪಂಚದ ಯಾವುದೇ ಕೋರ್ಟ್ ಕಟ್ಟಡಕ್ಕೆ 'ತೀಸ್ ಹಜಾರಿ' ಎಂಬ ಹೆಸರಿಟ್ಟಿದ್ದನ್ನು ನಾನು ಕೇಳಿಲ್ಲ, ಕಂಡಿಲ್ಲ, ಓದಿಲ್ಲ!"

ಇಷ್ಟು ಹೇಳಿ, ಕೆಮ್ಮ ತೊಡಗಿದ ಮುದುಕ ವಕೀಲ.

ಈ ವಕೀಲನ ವ್ಯಾಧಿ, ದೇಶದ ಕಾನೂನಿನ ವ್ಯವಸ್ಥೆಯ ಅವ್ಯವಸ್ಥೆಯ ತರಹವೇ ಆಗಿತ್ತು. ಆಸ್ತಮಾ ರೋಗಕ್ಕೆ ಮದ್ದೇ ಇಲ್ಲವಂತೆ. ಈ ಕಾನೂನು ಅವ್ಯವಸ್ಥೆಗೂ ಮದ್ದೇ ಇಲ್ಲವೇನೋ!

'ನೀವು ಮೇನೇಜರ್ ಎಂದು ಹೇಳಲಿಕ್ಕೆ ಏನು ಸಬೂತು ಇದೆ ನಿಮ್ಮ ಬಳಿ' ಎಂದು ಕೇಳಿದ್ದ ಒಬ್ಬ ಪ್ರತಿವಾದಿ ಒಮ್ಮೆ ಕೋರ್ಟಿನಲ್ಲಿ. 'ಬ್ಯಾಂಕ್‌ನವರು ನೀಡಿದ ಪವರ್ ಆಫ್ ಆಟರ್ನಿ' ಇದೆ. ತೆಗೆದುಕೊಳ್ಳಿರಿ ಇದನ್ನು ನೋಡಿರಿ' ಎಂದು ಹೇಳಿದ್ದಕ್ಕೆ, ' ಈ ಪವರ್ ಆಫ್ ಆಟರ್ನಿ' ನೋಟರೈಸ್ಡ್ ಆಗಿಲ್ಲವಲ್ಲ. ಇದನ್ನು ನಾವು ನಂಬುವುದಿಲ್ಲ' ಎಂದು ಹೇಳಿ, ಜಡ್ಜ್ ಸಾಹೇಬ ಈ ಬಗಗೆ ಫೀರ್ಯಾದು ಮಾಡಿ, ಕೇಸ್ ಡಿಸ್‌ಮಿಸ್ ಮಾಡಿಸಿಬಿಟ್ಟ ಸಂಗತಿ ನನ್ನ ನೆನಪಿಗೆ ಬಂತು. ಒಂದು ಸಣ್ಣ ಕ್ಷುಲ್ಲಕ ಕಾರಣದಿಂದ, ಸಾವಿರಾರು ರೂಪಾಯಿ, ಸಮಯ ವ್ಯರ್ಥ ಮಾಡಿದರೂ, ಕೇಸ್ ಡಿಸ್‌ಮಿಸ್ ಆಗಿಹೋಗಿತ್ತು. ಇದೆಂತಹ ಕಾನೂನು? ಎಂತಹ ಕಾನೂನು ವ್ಯವಸ್ಥೆ? ಎಂತಹ ವ್ಯಾಧಿ? ಈ ವ್ಯಾಧಿಗೆ ಮದ್ದೇ ಇಲ್ಲವೇ?

'ಬ್ಯಾಂಕ್‌ನಿಂದ ಸಾಲ ತೆಗೆದುಕೊಂಡಿದ್ದಕ್ಕೆ ಒಪ್ಪಂದ ಆಗಿದೆ. ಆ ಒಪ್ಪಂದಕ್ಕೆ

ಬ್ಯಾಂಕ್ ಅಧಿಕಾರಿ ಮತ್ತು ಸಾಲಗಾರ ಸಹಿ ಹಾಕಿದ್ದೀರಾ? ಸಾಲ ವಾಯದೆ ಮೀರಿ, ಪಾವತಿ ಮಾಡದಿದ್ದರೆ, ಅಡುವು ಇಟ್ಟ ಸಾಮಾನು ಅಥವಾ ಮನೆ ಮಾರು ಇತ್ಯಾದಿ ತಮ್ಮ ವಶ ಪಡಿಸಿಕೊಳ್ಳಬಹುದು ಎಂದು ಒಪ್ಪಂದಕ್ಕೆ ಸಹಿ ಹಾಕಿದ ಮೇಲೆ, ತಂಟೆ ತಕರಾರು ಏತಕ್ಕೆ? ಇಂತಹ ಕೇಸ್ ನನ್ನ ಬಳಿ ತಂದು ಯಾಕೆ ನನ್ನ ಸಮಯ, ನಿಮ್ಮ ಹಣ ವ್ಯರ್ಥ ಮಾಡುತ್ತೀರಾ?' ಎಂದು ಅಮೇರಿಕಾದ ಒಬ್ಬ ಜಡ್ಜ್ ಹೇಳಿದ ನಂತೆ. ಆದರೆ ನಮ್ಮ ಕೋರ್ಟ್‌ಗಳಲ್ಲಿ ಈ ರೀತಿ ಹೇಳುವ, ನಡೆಯುವ ಅಭ್ಯಾಸ ವಿದೆಯೋ? ಒಂದು ಕೇಸ್ ಇತ್ಯರ್ಥವಾಗಲೂ ಹಲವಾರು ವರ್ಷಗಳೇ ಬೇಕು. ಇತ್ಯರ್ಥವಾದ ಮೇಲೆ, ಡಿಕ್ರೀ ಪಡೆದ ಮೇಲೆ ಅದನ್ನು ನಿರ್ದೇಶಿಸಲು ಹಲವಾರು ವರ್ಷಗಳು ಉರುಳಿದಾಗ, ಸಾಲಗಾರ ಸತ್ತು ಅವನ ಹಣ ಉರುಳಿರುತ್ತದೆ!

ಇದೆಂತಹ ಅವ್ಯವಸ್ಥೆ ಅಥವಾ ಇದೂ ಒಂದು ರಾಷ್ಟ್ರೀಯ ಬೆಪ್ಪುತನವೇ?

"ಏನು ಯೋಚಿಸುತ್ತಾ ಕುಳಿತಿದ್ದೀರಾ? ಹೀಗೇ ಕುಳಿತಿದ್ದರೆ ನಿಮ್ಮ ವಕೀಲವಾದಿ ಹೇಗೆ ಸಿಗುತ್ತಾನೆ?"

ಕೆಮ್ಮು ನಿಲ್ಲಿಸಿ, ನನ್ನ ಮುಖ ನೋಡುತ್ತಾ ಹೇಳಿದ ವಕೀಲ ವ್ಯಾಧಿ.

'ಸುಮ್ಮನೆ ಒಂದು ಮೂಲೆಯಲ್ಲಿ ಕುಳಿತುಕೊಳ್ಳುವುದಕ್ಕಿಂತ ತಪ್ಪು ದಾರಿಯಾದರೂ ಸರಿ, ಹುಡುಕಿ ಓಡಾಡುವುದು ಮೇಲು' ಎಂದು ಯೋಚಿಸಿದೆ.

"ಜಸ್ಟೀಸ್ ಡಿಲೇಡ್, ಜಸ್ಟೀಸ್ ಡಿನೈಡ್' ಅಂತಾರಲ್ಲ. ನಮ್ಮ ಕೋರ್ಟ್‌ಗಳಲ್ಲಿ ಯಾಕೆ ಕೇಸ್‌ಗಳು ಇತ್ಯರ್ಥವಾಗಲು ಇಷ್ಟು ವಿಳಂಬ ಎಂದು ಯೋಚಿಸುತ್ತಿದ್ದೆ."

"ನಿಮಗೆ ಅಷ್ಟು ಅರ್ಥವಾಗಿಲ್ಲವೇ? ಬೇಗ ಇತ್ಯರ್ಥವಾದರೆ, ನಮಗೆಲ್ಲಿಯ ಕೆಲಸ? ಹಣ ಸಂಪಾದನೆಯಾಗುವುದು ಹೇಗೆ? ಎಲ್ಲಾ ಸೇವಾ ಕ್ಷೇತ್ರಗಳಲ್ಲೂ ಇದೇ ಪಾಡು! ಖಾಯಿಲೆ ಬೇಗ ವಾಸಿಯಾಗಿಬಿಟ್ಟರೆ, ಡಾಕ್ಟರ್‌ಗಳಿಗೆ, ಔಷಧ, ವ್ಯಾಪರಸ್ಥರಿಗೆ ಹಣ ಸಂಪಾದನೆ ಹೇಗೆ ಆಗುತ್ತದೆ? ಸರಕಾರಿ ನೌಕರರು ಅತಿ ಶೀಘ್ರದಲ್ಲಿ ತಮ್ಮ ತಮ್ಮ ಕೆಲಸ ಮಾಡಿಬಿಟ್ಟರೆ, ಅವರಿಗೆ ಲಂಚದ ಹಣ ಹೇಗೆ ಪಾವತಿಯಾಗುತ್ತದೆ!"

"ಬರ್ತೇನೆ! ನಮಸ್ಕಾರ!" ಎಂದು ಅವನಿಗೆ ವಿದಾಯ ಹೇಳಿ, ಅಲ್ಲಿಂದ ಕಾಲ್ಕಿತ್ತೆ.

ವಕೀಲ ವಾದಿ ಹೇಳಿದರಲ್ಲಿ ಹೊಸದೇನು ಇರಲಿಲ್ಲ. ಅದು ಎಲ್ಲರಿಗೂ ತಿಳಿದಿರುವ ವಿಷಯವೇ ಆಗಿತ್ತು. ಆದರೆ, ಅದರ ಬಗ್ಗೆ ಚಿಂತಿಸಿ, ಪರಿಹಾರ ಒದಗಿಸಿ ಕೊಳ್ಳಬೇಕೆಂಬ ಒತ್ತಾಯ ಯಾರಿಗೂ ಇರಲಿಲ್ಲ. ಇದೂ ಒಂದು ದೌರ್ಭಾಗ್ಯವೇ? ಅಥವಾ ರಾಷ್ಟ್ರೀಯ ಬೆಪ್ಪುತಕ್ಕಡಿತನವೇ?

ಸ್ಕೂಟರ್ ಸ್ಟಾಂಡ್ ಬಳಿ, ಇದ್ದ ಏಕಮಹಡಿ ಕಟ್ಟಡದ ಬಳಿ ತೆರಳಿದೆ. ಸುಮಾರು ೨೦೦ ಅಡಿ ಉದ್ದದ ಕಟ್ಟಡದಲ್ಲಿ ನೂರು ಬಾಗಿಲುಗಳು ಕಾಣಿಸಿದವು. ಬಾಗಿಲ ಪಕ್ಕದಲ್ಲೇ ಸಣ್ಣ ಕಿಟಕಿಗಳು. ಬಾಗಿಲು ಮೇಲೆ ವಕೀಲ ಮಹಾಶಯನ ನಾಮ ಮತ್ತು 'ವಕೀಲನ ಚೇಂಬರ್ಸ್' ಎಂಬ ಅಂಕಿತ ನಾಮ. ಚೇಂಬರ್ಸ್ ನೊಳಗೆ ಒಬ್ಬನೇ ಕುಳಿತುಕೊಳ್ಳಬಹುದಾದಷ್ಟು ಜಾಗ. ಅದರಲ್ಲೇ ಒಂದು ಕುರ್ಚಿ, ಮೇಜು, ಕಕ್ಷಿದಾರನಿಗೆ ಒಂದು ಕುರ್ಚಿ. ತಮ್ಮ ಬ್ಯಾಂಕ್‌ನ ವಕೀಲನನ್ನು ಹುಡುಕುತ್ತಾ ಹೋದೆ. ಒಂದೊಂದೇ ಬಾಗಿಲನ್ನು ನೋಡುತ್ತಾ, ಪರಮಾತ್ಮನ ವಿವಿಧ ನಾಮಾವಳಿಯನ್ನು ಉಚ್ಛರಿಸುತ್ತಾ, ಕಟ್ಟಡವನ್ನು ಒಂದು ಪ್ರದಕ್ಷಿಣೆ ಹಾಕಿದೆ. ಎಲ್ಲಾ ಗರ್ಭಗುಡಿಗಳ ದರ್ಶನವಾದರೂ, ದೇವರ ದರ್ಶನವಾಗಲೇ ಇಲ್ಲ. ಪಾಪಿಷ್ಟರಿಗೆ ದೇವರು ಕಾಣದಿರುವುದು ದಿಟ ಮತ್ತು ಸ್ವಾಭಾವಿಕ. ಇದು ನನಗೆ ಈ ಮೊದಲೇ ಏಕೆ ಹೊಳೆಯಲಿಲ್ಲ? ಅಲ್ಲೇ ಒಂದು ಚೇಂಬರ್ಸ್‌ನೊಳಗೆ ನುಗ್ಗಿ, ಒಬ್ಬ ಕರಿಕೋಟನ್ನು ನಮ್ಮ ಬ್ಯಾಂಕ್‌ನ ವಕೀಲನ ಹೆಸರನ್ನು ಹೇಳಿ, ಅವನ ಪತ್ತೇಯನ್ನು ಮಾಡುವುದು ಹೇಗೆ ಎಂದು ಕೇಳಿದೆ.

"ಅವನಿಗೆ ಇಲ್ಲಿ ಯಾವ ಚೇಂಬರ್‍ರೂ ಇಲ್ಲ. ಅವನ ಚೇಂಬರ್ಸ್ ಇರುವುದು ಚಾಂದನೀ ಚೌಕ್‌ನ ಒಂದು ಗಲ್ಲಿಯಲ್ಲಿ. ಈಗ ಅವನನ್ನು ನೋಡಬೇಕಾದರೆ, ಕೋರ್ಟ್‌ನಲ್ಲೇ ನೋಡಬೇಕು"

ಅವನ ಹುಕುಂ ಅನುಸಾರವಾಗಿ ಪುನಃ ಕೋರ್ಟಿನ ಮಹಾ ಸಾಗರದಲ್ಲಿ ಧುಮುಕಿದೆ. ಬ್ಯಾಂಕ್ ಕೆಲಸ ಜರುಗುತ್ತಿದ್ದ ಕೋರ್ಟ್ ಕೋಣೆಗೆ ತಲುಪಿದೆ. ಬಾಗಿಲ ಬಳಿಯೇ ಪ್ರತ್ಯಕ್ಷವಾದ ನಮ್ಮ ವಕೀಲ!

ಕುಳ್ಳಗೆ ಬಕ್ಕತಲೆ ಒಡೆಯ, ಕಂಡೂಕಾಣದ ರೀತಿಯಲ್ಲಿ ಮೀಸೆ ಹೊಂದಿದ್ದ ಈ ನರಪೇತಲ ನಾರಾಯಣ ಹೇಗೆ, ಏಕೆ ವಕೀಲನಾದನೋ ಆ ಶ್ರೀಮನ್ನಾರಾಯಣನೇ ಬಲ್ಲ!

"ಈಗ ಬೆಳಗಾಯಿತಾ?"

ನನ್ನನ್ನು ನೋಡಿ ಪ್ರಶ್ನಿಸಿದ.

"ಎಲ್ಲಿ ಹೋಗಿದ್ದಿರಿ ಇಷ್ಟು ಹೊತ್ತು?"

ಮತ್ತೆ ಪ್ರಶ್ನಿಸಿದ ನಾನು ಉತ್ತರಿಸುವ ಮೊದಲೇ,

"ನಿಮ್ಮ ಕೇಸ್ ಡಿಸ್‌ಮಿಸ್ ಆಯಿತು!"

ಅಸಾಧ್ಯ ಕೋಪ ಬಂದಿತು ನನಗೆ.

"ಏನು ಹೇಳುತ್ತಾ ಇದ್ದೀರಾ ನೀವು?"

"ಕೇಳಿಸಲಿಲ್ಲವೇ? ಕೇಸ್ ಡಿಸ್‌ಮಿಸ್!"

ಚಂಡಾಲ! ಮಹಾಪಾತಕ! ಇವನನ್ನು ಕೊಂದು ಈ ಲೋಕದಿಂದಲೇ ಡಿಸ್‌ಮಿಸ್ ಮಾಡಬೇಕೆಂಬ ಅತೀವ ಬಯಕೆ ಆಯಿತು. ಬ್ಯಾಂಕ್ ಕೇಸ್ ಡಿಸ್‌ಮಿಸ್ ಆದ್ರರೆ, ನನ್ನನ್ನು ಡಿಸ್‌ಮಿಸ್ ಮಾಡಿಯಾರು ನಮ್ಮ ಬಾದಶಹರೂ, ನವಾಬರು.

"ಯಾಕಾಯಿತು ಡಿಸ್‌ಮಿಸ್?"

"ಈ ದಿನ ನಿಮ್ಮ ಎವಿಡೆನ್ಸ್ ಇತ್ತು. ನೀವು ಬರಲಿಲ್ಲ. ಕೇಸ್ ಡಿಸ್‌ಮಿಸ್ ಮಾಡ್ತೇನೆ ಅಂದರು ಜಡ್ಜ್, ಮಾಡಿ ಅಂದೆ ಅಷ್ಟೆ!"

ಲೀಲಾಜಾಲವಾಗಿ, ಯಾವ ಉದ್ವೇಗವೂ ಇಲ್ಲದೇ ಹೇಳಿದ ನರಪೇತಲ.

"ಕೇಸ್ ಮುಂದೂಡಲು ಕೇಳಬಹುದಾಗಿತ್ತಲ್ಲ!"

ಆಕ್ಷೇಪಿಸಿದೆ. ಅಡ್ಜರ್ನ್‌ಮೆಂಟ್ ತೆಗೆದುಕೊಳ್ಳಲಿಕ್ಕೆ ಏನು ಧಾಡಿ ಇವನಿಗೆ?

"ನಾನ್ಯಾಕೆ ಮುಂದೂಡಿಸಲಿ? ನನಗೇನು ಲಾಭ ಸಿಗುತ್ತದೆ ಅದರಿಂದ? ಬ್ಯಾಂಕ್‌ನವರು ಕೇಸ್ ಮುಂದೂಡಿಸಿದರೆ, ಫೀಸ್ ಕೊಡುತ್ತಾರಾ?"

ಖಾಸಗಿಯವರು ಕೇಸ್ ಅಡ್ಜರ್ನ್‌ಮೆಂಟ್‌ಗೆ ಕೊಡುವ ಫೀಸ್ ಬ್ಯಾಂಕ್‌ನವರು ಕೊಡುವುದಿಲ್ಲ, ನಿಜ. ಆದರೆ, ಅದೇ ಕಾರಣಕ್ಕೆ ಕೇಸ್ ಡಿಸ್‌ಮಿಸ್ ಮಾಡಿಸುವುದೇ? ಪಾಪಿ! ಕೋಪ ಉಕ್ಕೇರಿತು.

"ನೋಡಿ! ಈ ದಿನ ನಾನು ಕೋರ್ಟ್‌ಗೆ ಬಂದಿದ್ದೇನೆ. ಸೀದಾ ಜಡ್ಜ ಬಳಿ ಹೋಗಿ ನಿಲುತ್ತೇನೆ. 'ದಯವಿಟ್ಟು ಕೇಸ್‌ನ್ನು ಮರುಪರಿಶೀಲನೆಗೆ ತೆಗೆದುಕೊಳ್ಳಿ' ಎಂದು ನಿವೇದಿಸಿ ಕೊಳ್ಳುತ್ತೇನೆ. ನೋಡೋಣ"

ನನ್ನ ಬೆದರಿಕೆಗೆ ಮಣಿಯಲಿಲ್ಲ ಆ ನರಪೇತಲ ವಕೀಲ. ತನ್ನ ಇದ್ದಬದ್ದ ಎದೆಯನ್ನು ಉಬ್ಬರಿಸಿ, ಕತ್ತನ್ನು ಮುಂದಕ್ಕೆ ಚಾಚಿ, ಅಣುಕಿಸಿದ.

"ಜಡ್ಜ ನಿಮ್ಮ ಅಪ್ಪ ಅಲ್ಲ. ಕೇಸ್ ಡಿಸ್‌ಮಿಸ್ ಮಾಡಿ ಅಂತ ವಕೀಲನೇ ಹೇಳಿದ ಮೇಲೆ ಯಾವ ಜಡ್ಜನೂ ಯಾರ ಮಾತು ಕೇಳುವುದಿಲ್ಲ! ಸುಮ್ಮನೆ ಮನೆಗೆ ಹೋಗಿ!"

ಪಟಪಟನೆ ಪುಟ್ಟ ಬೂಟ್ಸಿನ ಶಬ್ಧ ಮಾಡುತ್ತ ನಡೆದ ವಕೀಲ. ಹಿಂದೆಯೇ ಓಡಿದೆ ನಾನು.

"ದಯವಿಟ್ಟು ಕೇಸ್‌ನ ರಿವ್ಯೆವ್ ಮಾಡಿಸಿರಿ. ಬ್ಯಾಂಕ್ ಕೇಸ್ ಡಿಸ್‌ಮಿಸ್ ಆದರೆ, ನನ್ನ ಮೇಲೇ ಕ್ರಮ ಜರುಗಿಸುತ್ತಾರೆ."

ಬೇಡಿದೆ ಅವನನ್ನು. ಅವನ ಮನ ಕರಗಲೇ ಇಲ್ಲ. ನಡೆಯುತ್ತಲೇ ಇದ್ದ ಮುಂದೆ. ಪಕ್ಕದಲ್ಲಿ ನಾನು ಬೇಡುತ್ತಲೇ ಓಡಿದೆ. ಎಲ್ಲಾ ತರಹದ ಒತ್ತಾಸೆ ಇಟ್ಟೆ.

ಅವನ ಕಾಲಿಗೆ ಬೀಳುವುದೊಂದೇ ಬಾಕಿ ಇತ್ತು. ಹಟಾತ್ತನೆ, ಜೇಬಿನಿಂದ ಒಂದು ನೂರು ರೂಪಾಯಿ ನೋಟೊಂದು ತೆಗೆದು ಅವನ ಮುಖದ ಮುಂಧೆ ಹಿಡಿದು, ಪಟಪಟನೆ ಗಾಳೀಪಟದ ಹಾಗೆ ಅಲ್ಲಾಡಿಸಿದೆ. ಗಕ್ಕನೆ ನಿಂತ ಅವ. ಥಕ್ಕನೆ ನೋಟನ್ನು ಕಸಿದು ತನ್ನ ಜೇಬಿಗೆ ತೂರಿಸಿದ.

'ಕೇಸ್ ರಿವ್ಯೆವ್ ಮಾಡಿ ನಿಮಗೆ ತಿಳಿಸುತ್ತೇನೆ." ಎಂದ. ಮಾತನಾಡದೆ ಅವನನ್ನು ಹಿಂಬಾಲಿಸಿದೆ.

"ವಕೀಲರೆ! ಇನ್ನು ಮೇಲೆ ದಯವಿಟ್ಟು ಇಂತಹ ಕೆಲಸ ಮಾಡಬೇಡಿರಿ. ಬೇಕಾದರೆ ಹಣ ಕೇಳಿರಿ.ಆದರೆ ದಯವಿಟ್ಟು ಕೇಸ್ ಡಿಸ್‌ಮಿಸ್ ಮಾಡಿಸಬೇಡ್ರಿ."

ಕಳಕಳಿಯಿಂದ ಬೇಡಿಕೊಂಡೆ.

"ಯಾಕ್ರೀ ಮಾಡಬಾರದು? ಎಷ್ಟು ಕೇಸ್ ಕೊಟ್ಟಿದ್ದೀರಿ ನೀವು? ಕೊಟ್ಟಿರೋ ಮೂರು ಕೇಸ್‌ಗಳಲ್ಲಿ ನನಗೆ ಸಿಕ್ಕಿರೋ ಫೀಸ್ ಬರೀ ಸಾವಿರ ರೂಪಾಯಿ. ಸಾವಿರ ರೂಪಾಯಿಗೆ ಎಷ್ಟು ಸಾವಿರ ಗಂಟೆಗಳನ್ನು ನಾನು ನಿಮಗೆ ಹಾಳುಮಾಡಬೇಕು? ಎಷ್ಟು ಕಾಗದ, ಪತ್ರ, ಇಂಕು ಖರ್ಚು ಮಾಡಬೇಕು? ಎಷ್ಟು ಸಲ ಫೋನ್ ಮಾಡ ಬೇಕು? ಕಾಸು ಜಾಸ್ತಿ ಕೊಟ್ಟರೆ, ಸೇವೆನೂ ಜಾಸ್ತಿ ಸಿಗುತ್ತದೆ. ನೀವು ಕೊಡೋ ಜುಜುಬಿ ಫೀಸ್‌ಗೆ ಗಂಟೆಗಟ್ಟಲೆ ಕೋರ್ಟ್‌ನಲ್ಲಿ ಕುಳಿತು ನನ್ನ ಸಮಯ ಹಾಳು ಮಾಡಿಕೊಳ್ಳಬೇಕೆ?"

ಅವನ ಮಾತುಗಳನ್ನು ಕೇಳಿ ನಾನು ಅಲ್ಲೇ ನಿಂತೆ, ಅಘಾಕ್ಕಾಗಿ. ವಕೀಲ ಮಾತ್ರ ಪುಟಪುಟನೆ ಮುಂದೆ ಸಾಗಿ, ಕರೀ ಕೋಟುಗಳ ಸಮುದ್ರದಲ್ಲಿ ಲೀನನಾಗಿ ಹೋದ.

ಹಣಕ್ಕಾಗಿ, ಬೇಕಂತಲೆ, ಬ್ಯಾಂಕ್ ಕೇಸ್ ಡಿಸ್‌ಮಿಸ್ ಮಾಡಿಸಿದ ಈ ವಕೀಲನ ಎಂತಹ ಕರ್ತವ್ಯ ಪ್ರಜ್ಞೆ? ಎಷ್ಟು ನಿಷ್ಠಾವಂತ ? ಎಷ್ಟು ಬುದ್ಧಿವಂತ ? ಅಥವ ಇದು ಒಂದು ಬಗೆಯ ರಾಷ್ಟ್ರೀಯ ಹುಂಬುತನವೇ? ನನ್ನ ಹುಂಬುತನದಿಂದ ಈ ವಕೀಲನಿಗೆ ಸುಖ, ಸಂತೋಷವಾಗಿದ್ದರೆ, ನಾನೇಕೆ ಕೋಪ ಮಾಡಿಕೊಂಡು ನನ್ನ ಮನಸ್ಸು ಕೆಡಿಸಿ ಕೊಳ್ಳಬೇಕು. ಅವನಿಗೆ ಸಂತೋಷವಾದರೆ, ನನಗೂ ಸಂತೋಷ!

ಯೋಚಿಸುತ್ತಾ, ಮೆಟ್ಟಿಲು ಇಳಿದು, ಕೆಳಗೆ ಬಂದು, ಹೊರಾಂಗಣಕ್ಕೆ ಕಾಲಿರಿ ಸಿದೆ. ನಿಧಾನವಾಗಿ ನಡೆದು ಗೇಟ್ ಬಳಿ ಬಂದೆ. ಒಂದು ಪೋಲೀಸ್ ವ್ಯಾನ್ ಗೇಟ್ ದಾಟಿ, ನನ್ನ ಪಕ್ಕದಲ್ಲೇ ನಿಧಾನವಾಗಿ ಚಲಿಸುತ್ತಾ ಬಂದಿತು. ದಾರಿಯಲ್ಲಿ ನೆಡೆಯು ತ್ತಿದ್ದ ಜನಸಂದಣಿಯ ನಿಮಿತ್ತ ಅದು ನಿಂತಿತು. ಏಕೋ ನನ್ನ ದೃಷ್ಟಿ ಪೋಲೀಸ್ ವ್ಯಾನ್‌ನ ಕಬ್ಬಿಣದ ಸರಳುಗಳ ಕಿಟಕಿಯೊಳಗೆ ಹಾದವು. ಹಲವಾರು ಕೈದಿಗಳು ನನ್ನ ಕಣ್ಣಿಗೆ ಬಿದ್ದರು. ಎಲ್ಲರೂ ಆತಂಕವಾದಿಗಳ ಹಾಗೆ ಕಂಡರು. ಗಡ್ಡಬಿಟ್ಟ

ಸಿಖರು. ಪಕ್ಕದಲ್ಲಿ ಗನ್ ಹಿಡಿದ ಪೋಲೀಸರು. ನೋಡಲು ಭಯಂಕರವಾಗಿ ಕಾಣುವ ಆತಂಕವಾದಿಗಳು. ಇವರಲ್ಲಿ ನಮ್ಮ ಸರದಾರ್‌ಜಿ ಇದ್ದಾನೆಯೊ?ನನ್ನ ಕಣ್ಣುಗಳು ತೀಕ್ಷ್ಣವಾಗಿ ಹುಡುಕಾಡತೊಡಗಿದವು. ವ್ಯಾನ್ ಚಲಿಸತೊಡಗಿತು. ನಾನು ಅದರ ಪಕ್ಕದಲ್ಲೇ ತ್ವರೆಯಿಂದ ಹೆಜ್ಜೆ ಹಾಕತೊಡಗಿದೆ, ಕೆಲವೇ ಕ್ಷಣಗಳಲ್ಲಿ ನಾನು ಓಡ ತೊಡಗಿದೆ. ಎಲ್ಲರೂ ನನ್ನ ಓಟ ನೋಡಿ ಕಣ್ಣುಗಳಲ್ಲಿ ಅಚ್ಚರಿ ವ್ಯಕ್ತ ಪಡಿಸುವಾಗ ನನ್ನ ನಡತೆ ಬಗ್ಗೆ ನಾಚಿಕೆಯಾಗಿ, ಗಕ್ಕನೆ ನಿಂತೆ. ಆಶ್ಚರ್ಯವೆನಿಸುವಂತೆ, ಪೋಲೀಸ್ ವ್ಯಾನ್ ಕೂಡ ಗಕ್ಕನೆ ನಿಂತಿತು.

'ಸರ್‌ದಾರ್‌ಜೀ'ಎಂದು ಕೂಗಿದೆ.

ವ್ಯಾನ್ ನೊಳಗಿಂದ ಹತ್ತಾರು ಕಣ್ಣುಗಳು ನನ್ನ ದೃಷ್ಟಿಯನ್ನು ಎದುರಿಸಿದವು. ಅವುಗಳಲ್ಲಿ ಒಬ್ಬನದು ಮಾತ್ರ ಬಹು ತೀಕ್ಷ್ಣವಾಗಿ ನನ್ನನ್ನು ತಿನ್ನುವಂತೆ ನೋಡ ತೊಡಗಿತು. ಅವನೇ ಸರದಾರ್‌ಜೀಯಾಗಿರಬಹುದೇ? ನನ್ನ ಎದೆ ವೇಗದಿಂದ ಬಡಿದು ಕೊಳ್ಳತೊಡಗಿತು. ತಲೆಗೆ ಪೇಟವಿರದ ಈತ ಸರದಾರ್‌ಜೀಯೇ ಇರಬೇಕು! ಬಲು ಹುಲುಸಾಗಿ ಬೆಳೆದಿದ್ದ ಗಡ್ಡ ಅವನ ಮುಖವನ್ನು ಮುಚ್ಚಿ, ಅವನ ಬಿಳೀ ಚರ್ಮವನ್ನು ಮರೆಮಾಚಿಸಿತ್ತು. ಇವನೇ ನಮ್ಮ ಸರದಾರ್‌ಜೀ ಆಗಿರಬೇಕು! ನನ್ನ ಬುದ್ಧಿ, ಮನಸ್ಸು, ಅಂತಃಕರಣ ಕೂಗಿ ಹೇಳುತ್ತಿತ್ತು. ಬಾಯಿಯಿಂದ ಮತ್ತೊಮ್ಮೆ 'ಸರದಾರ್‌ಜೀ" ಎಂದು ಹೊರಬೀಳುವ ಮುನ್ನ ವ್ಯಾನ್ ಭರನೇ ಹೊರಟು, ವೇಗವಾಗಿ, ಗೇಟ್ ದಾಟಿ ರಸ್ತೆಯಲ್ಲಿ ಮಾಯವಾಯಿತು.

# 20

"ಬಜಾರ್ ಸೀತಾರಾಮ್'ಗೆ ದಾರಿಯಾವುದು?"

'ಚಾಂದನೀ ಚೌಕ್'ರಸ್ತೆಯಲ್ಲಿ ನಡೆದು ಹೋಗುತ್ತಾ, ಒಬ್ಬ ದಾರಿಹೋಕ ನನ್ನು ಕೇಳಿದೆ.

"ಸೀದಾ ಹೋಗಿ.'ಬಲ್ಲಿ ಮರಾನ್' ಎಂಬ ಗಲ್ಲಿ ಸಿಗುತ್ತದೆ. ಅ ಗಲ್ಲಿಯಲ್ಲಿ ನೇರ ಹೋದರೆ, ಬಜಾರ್ ಸೀತಾರಾಮ್'ತಲುಪಬಹುದು."

'ಬಲ್ಲಿ ಮರಾನ್' ಪ್ರಸಿದ್ಧ ಉರ್ದೂ ಕವಿ ಮಿರ್ಜಾ ಗಾಲೀಬ್‌ನಿದ್ದ ಜಾಗ. ಈಗಲೂ ಅವನ ಮನೆ ಇದೆಯಂತೆ. ನಮ್ಮ ಬ್ಯಾಂಕ್‌ನ ವಕೀಲ ನರಪೇತಲ ನಾರಾಯಣನ ಆಫೀಸ್ ಮತ್ತು ಮನೆ ಇದೇ ಗಲ್ಲಿಯಲ್ಲಿ ಇದೆ ಎಂದು ತಿಳಿದು ಬಂದದ್ದರಿಂದ, ಅವನನ್ನು ಹುಡುಕಿ ಹೊರಟಿದ್ದೆ.

ಕೇವಲ ಆಟೋಗಳು, ಸೈಕಲ್ ರಿಕ್ಷಾಗಳು ಮತ್ತು ಜನರು ಓಡಾಡಬಹುದಾದ ಇಕ್ಕಟ್ಟಾದ ಈ ಮೊಘಲ್ ಕಾಲದ ಗಲ್ಲಿ ಇತಿಹಾಸ ಪ್ರಸಿದ್ಧ. ಈ ಗಲ್ಲಿಯ ಸುತ್ತ ಮುತ್ತ ಪ್ರದೇಶದಲ್ಲಿ, ಮುಸ್ಲಿಮ್‌ರು ದಿಲ್ಲೀಯನ್ನು ಆಕ್ರಮಿಸಿದ ನಂತರ, ತಮ್ಮ ಭಾಷೆ, ವರ್ಚಸ್ಸು, ಸಂಸ್ಕೃತಿ, ಕಟ್ಟಡ ವಿನ್ಯಾಸ, ಉಡುಗೆ ತೊಡುಗೆ ಎಲ್ಲವನ್ನೂ ಹರಿಸಿ ಕಂಗೊಳಿಸಿದ್ದಾರೆ. ಇಂದಿಗೂ ಅವರ ವರ್ಚಸ್ಸು ಇಲ್ಲಿ ಕಾಣಬಹುದು. ಒಂದೆ ಒಂದು ಹಿಂದೂ ದೇವರ ಗುಡಿ, ಬ್ರಿಟಿಷ್‌ರು ದಿಲ್ಲೀಯನ್ನು ಆಕ್ರಮಿಸಿಕೊಳ್ಳುವ ತನಕ, ದಿಲ್ಲೀಯಲ್ಲಿ ಕಂಡು ಬರಲಿಲ್ಲವಂತೆ! ಇಲ್ಲಿನ ಮೊಘಲ್ ಶೈಲಿಯ ಪುರಾತನ ಕಟ್ಟಡಗಳು, ಅವುಗಳಿಗೆ ಇರುವ ಕಂಪು ಕಲ್ಲಿನ ಕಲಾಕೃತಿಯ ಹೆಬ್ಬಾಗಿಲುಗಳು, ವಿಶಿಷ್ಟ ಮೊಘಲ್ ಶೈಲಿಯ ಛಾವಣಿ, ಕಿಟಕಿಗಳು, ಅಡಿಗಡಿಗೆ ಸಿಗುವ ಅಂಗಡಿಗಳಲ್ಲಿ ದೊರಕುವ ಪಾನ್, ಚಪಾತಿ ಮತ್ತು ಸೀಖ್ ಕಬಾಬ್‌ಗಳು,'ಚಾ'ಅಂಗಡಿಗಳು, ಹೊರಗಡೆ, ದೊಡ್ಡ ದೊಡ್ಡ ಕಡಾಯಿಗಳಲ್ಲಿ ಬಿಸಿಬಿಸಿಯಾಗಿಸಿ ಇಟ್ಟಿರುವ ಹಾಲಿನ ಖೋವಾ, ಖೀರುಗಳು, ಜೀಲೇಬಿ, ಜಹಂಗೀರ್‌ಗಳು, ಮೂಗಿಗೆ ಗಮ್ ಎಂದು ತಾಗುವ ಅತ್ತರ್‌ನ ಪರಿಮಳವೂ ಮತ್ತು ಗಲ್ಲೀ ಬದಿಯಲ್ಲೇ ಉಚ್ಚೇ ಹುಯ್ಯುವ ಹವ್ಯಾಸವಿರುವ ದಿಲ್ಲೀವಾಲರ ದೆಸೆಯಿಂದ ಗಬ್ಬು ಉಚ್ಚೇ ವಾಸನೆ ಬಹು ಪ್ರಸಿದ್ಧ!

ಇವನ್ನೆಲ್ಲಾ ನೋಡಿ, ಅನುಭವಿಸುತ್ತಾ, ಆನಂದಿಸುತ್ತಾ ಸಾಗಿದೆ. ಅವರಿವ ರನ್ನು ಕೇಳುತ್ತಾ, ಕೊನೆಗೂ ಬಲ್ಲಿ ಮರಾನ್‌ನ ಗಲ್ಲೀಯಲ್ಲಿನ ಮಿರ್ಜಾ ಗಾಲೀಬ್‌ನ ೨೦೦ ವರ್ಷ ಪುರಾತನ ಮನೆ ಕಂಡು ಹಿಡಿದು, ಅದರ ಮುಂದೆ ನಿಂತೆ. ಅವನ ಮನೆ ಈಗ ಬರಿದು ಸೌದೆ ಅಂಗಡಿ, ಮತ್ತು ಸಣ್ಣ ಕೈಗಾರಿಕೆಯ ಒಂದು ಘಟಕವಾಗಿ

ಬದಾಲಾಯಿಸಿತ್ತು. ಒಬ್ಬ ಪ್ರಸಿದ್ಧ ಉರ್ದೂ ಕವಿಯ ನೆನಪಿನ ವೃಕ್ಷವನ್ನು, ತುಂಡು ತುಂಡು ಮಾಡಿ, ಅಂಗಡಿಯಲ್ಲಿಟ್ಟು ಮಾರಾಟ ಮಾಡುವ ಪುಣ್ಯ ಕಾರ್ಯಕ್ಕೆ ನಾವು ನಮ್ಮನ್ನೇ ಎಷ್ಟು ಕೊಂಡಾಡಿದರೂ ಸಾಲದು. ಕವಿ ಗಲೀಬ್‌ನ ಕವಿತೆಗಳನ್ನು ಓದಿ, ಹಾಡಿ, ಕೊಂಡಾಡಿ, ಅವನ ಕರುಣಾಜನಕ ಜೀವನದ ಬಗ್ಗೆ ಕನಿಕರಿಸಿ, ಅವನು ಕರೆದ ಕಣ್ಣೀರೆಂಬ ಬೆವರು ಮತ್ತು ರಕ್ತದಲ್ಲಿ ನಾವು ಮೀಯುತ್ತದ್ದೇವೆಯೊ?

ಗಾಲೀಬ್‌ನ ಸೌದೇ ಅಂಗಡಿ-ಮನೆಯನ್ನು ಕಂಡು, ಕಣ್ಣು ತೇವ ಮಾಡಿ ಕೊಂಡು, ಬಜಾರ್ ಸೀತಾರಾಮನಲ್ಲಿದ್ದ ವಕೀಲ ನರಪೇತಲ ನಾರಾಯಣನ ಮನೆ ಹುಡುಕಿ ಹೊರಟೆ. ಸುಮಾರು ಒಂದು ಕಿಲೊಮೀಟರ್ ಕ್ರಮಿಸಿದ ಮೇಲೆ, 'ಬಜಾರ್ ಸೀತಾರಾಮ್' ರಸ್ತೆ ಕಾಣಿಸಿತು. ರಸ್ತೆ ಗುಂಟ ನೆಡೆದೆ. ಒಬ್ಬ ದಾರಿಹೋಕನನ್ನು ನಾರಾಯಣನ ಹೆಸರು, ಮನೆ ನಂಬರ್ ತಿಳಿಸಿ,'ದಾರಿ ತೋರಿಸಯ್ಯ ವೈಕುಂಠಕೆ'ಎಂದು ಹಾಡಿದೆ. ಆತ ಕೂಡಲೆ ಹೇಳಿದ "ಕಮಲಾ ನೆಹರೂ"ರವರ ಮನೆಗೆ ಹೋಗ್ರೀ. ಅಲ್ಲೇ ಇದ್ದಾನೆ ನಿಮ್ಮ ನಾರಾಯಣ"ಎಂದ.

ದಾರಿ ಉದ್ದಕ್ಕೂ 'ಕಮಲಾ ನೆಹರೂ'ಮನೆ ಎಲ್ಲಿದೆ? ಎಂದು ಕೇಳುತ್ತಾ, ಒಂದು ಕಬ್ಬಿಣದ ಅಂಗಡಿಯ ಮುಂದೆ ನಿಂತೆ. 'ಕಮಲಾ ನೆಹರೂ'ಮನೆ ಎಲ್ಲಿದೆ ಎಂದು ಕೇಳಿದೆ ಅಂಗಡಿ ಮಾಲೀಕನ್ನು, 'ಇದೇ ಕಮಲಾ ನೆಹರೂ ಮನೆ. ಏನು ಬೇಕು ನಿಮಗೆ?ತಲೆ ಎತ್ತಿ ನೋಡಿದೆ. ಸುತ್ತಲೂ ನೋಡಿದೆ. ಅಕ್ಕ ಪಕ್ಕ ನೋಡಿದೆ. ಎಲ್ಲೆಲ್ಲೂ ಅಂಗಡಿಗಳ ಸಾಲೇ ಸಾಲು. ವಾಸದ ಮನೆಗಳ ಕುರುಹೇ ಇರಲಿಲ್ಲ.

"ವಕೀಲ ನಾರಾಯಣರವರ ಆಫೀಸ್ ಎಲ್ಲಿದೆ?"

"ಒಳಗೆ ಹೋಗಿ. ಸಿಗುತ್ತದೆ."

ಸಾಲು ಅಂಗಡಿಗಳ ಮಧ್ಯ ಒಂದು ಕೆಂಪು ಕಲ್ಲಿನ ಬೃಹತ್ ಹೆಬ್ಬಾಗಿಲು ಕಾಣಿಸಿತು. ಒಳಗೆ ಹೋದರೆ, ಒಂದು ಬೃಹತ್ ಅಂಗಳ, ಎದುರಿಗೆ ೨೦ ಅಡಿ ಎತ್ತರದ ಅಡ್ಡಗೋಡೆ. ಬಲಗಡೆ ಮೆಟ್ಟಿಲುಗಳು, ಎಡಗಡೆ ಹಳೇ ಮನೆಗಳು. ಮೆಟ್ಟಿಲು ಹತ್ತಿ ಹೋದೆ. ಒಂದೇ ಒಂದು ಸಣ್ಣ ಕೋಣೆ ಕಾಣಿಸಿತು. ಕೋಣೆ ತುಂಬಾ ಧೂಳು, ಜೇಡರಬಲೆ, ಬೀಡಿ ತುಂಡುಗಳು, ಬಣ್ಣ ಕಾಣದ ಗೋಡೆಗಳು, ಅವಕ್ಕೆ ಅಂಟಿಕೊಂಡು ನಿಂತಿದ್ದ ಮುರುಕು ಮರದ ಕಪಾಟುಗಳು, ಹಳೇ, ದಪ್ಪ ಕೊಳಕಾದ ಕಾನೂನು ಪುಸ್ತಕಗಳು, ಮತ್ತು ಇತರ ಸಾಮಾನ್ಯ ಪುಸ್ತಕಗಳು ಕಣ್ಣಿಗೆ ಕಂಡವು. ಕೆಲವು ಇಂಗ್ಲಿಷ್, ಹಿಂದೀ ಕಾದಂಬರಿಗಳು, ಕವಿತೆಯ ಪುಸ್ತಕ ಕೂಡ ಇದ್ದವು.

ಈ ವಕೀಲ ಖದೀಮನಾದರೂ, ಪುಸ್ತಕ ಓದುವ ಹವ್ಯಾಸ ಇಟ್ಟುಕೊಂಡಿದ್ದಾನೆ. 'ಪರವಾಗಿಲ್ಲ' ಎಂದು ಅವನನ್ನು ಮನದಲ್ಲೇ ತಾರೀಪು ಮಾಡಿದೆ. ಮನುಷ್ಯ

ನಿಗೆ ಒಂದೇ ಒಂದು ಜೀವತದ ಕಾಲವೆಂದು ಹೇಳುತ್ತಾರೆ. ಆದರೆ ಇದು ಸುಳ್ಳು, ಮನುಷ್ಯನಿಗೆ ಹಲವಾರು ಜೀವಗಳಿವೆ, ಪ್ರಪಂಚಗಳಿವೆ, ತನ್ನ ಜೀವತ ಕಾಲದಲ್ಲಿ. ಓದುವ ಹವ್ಯಾಸವಿದ್ದವರಿಗೆ ಅಭೂತಪೂರ್ವ ಪುಸ್ತಕದ ಪ್ರಪಂಚವನ್ನು ಹೊಕ್ಕವರು ಹೊರಗೆ ಬರಲು ಸಾಧ್ಯವೇ? ಜ್ಞಾನ ಗಂಗೆಯಲ್ಲಿ ಮಿಂದವರು ಮೋಕ್ಷ ಲಭಿಸದೇ ಇರುತ್ತದೆಯೇ?

'ಶಾರದಾದೇವಿಯ ಭಂಡಾರವು ಅಪೂರ್ವವಾದವು. ವೆಚ್ಚ ಮಾಡಿದರೆ ಬೆಳೆಯುತ್ತದೆ, ಕೂಡಿಟ್ಟರೆ ಕ್ಷಯಿಸುತ್ತದೆ' ಎಂಬ ಸಂಸ್ಕೃತ ಶ್ಲೋಕ ನೆನಪಿಗೆ ಬಂದಿತು. ಆದರೆ ಈ ಪುಸ್ತಕ ಭಂಡಾರವನ್ನು ಯಾಕೆ ಶುಚಿಯಾಗಿ ಇಟ್ಟಿಲ್ಲ? ಛೆ! ಛೆ! ಶುಚಿ ಎಂಬ ಪದ ನಮ್ಮ ಜೀವನದ ನಿಘಂಟುವಿನಲ್ಲಿ ಕಾಣೆಯಾಗಿದೆಯಲ್ಲಾ! ಇವುಗಳ ಮಧ್ಯ ಒಂದು ಪುರಾತನ ಮರದ ಕುರ್ಚಿಯಲ್ಲೇ ವಿರಾಜಿಸುತ್ತಿದ್ದ ನಮ್ಮ ನರಪೇತಲ ನಾರಾಯಣ. ಅವನ ಮುಂದಿದ್ದ ಮರದ ಮೇಜಿನ ತುಂಬ ಪುಸ್ತಕಗಳು, ಫೈಲ್‌ಗಳು, ಹಳೇ ಕಾಗದಗಳು ತುಂಬಿ ತುಳುಕಾಡುತ್ತಿದ್ದವು. ಒಂದು ಮೂಲೆಯಲ್ಲಿ ಒಬ್ಬ ಮುದುಕ, ಒಂದು ಹಳೇ ಟೈಪ್‌ರೈಟರ್‌ನ ಮೇಲೆ ತನ್ನ ಸುಕ್ಕು ಗಟ್ಟಿದ ಬೆರಳುಗಳನ್ನು, ತುಕ್ಕುಗಟ್ಟಿದ ಬೇರಳಚ್ಚಿನ ಮೇಲೆ, ಬಲು ಪ್ರಯಾಸದಿಂದ ಆಡಿಸುತ್ತಿದ್ದ.

"ಕುಳಿತುಕೊಳ್ಳಿ"

ವಕೀಲ ನನ್ನನ್ನು ಗುರುತಿಸಿದ್ದ. ಉಪಚರಿಸಿದ. ಅವನ ಎದುರಿಗಿದ್ದ ಕಬ್ಬಿಣದ ಕುರ್ಚಿಯ ಮೇಲೆ ಕುಳಿತೆ. ನಾನು ನರಕುವ ಮುನ್ನವೇ ಅದು ನರಕತೊಡಗಿತು.

"ಕೇಸ್ ರಿವ್ಯೆವ್ ಮಾಡಿದ್ದರೆ, ಅದರ ಒಂದು ಕಾಪಿ ತೆಗೆದುಕೊಂಡು ಹೋಗೋಣ ಅಂತ ಬಂದೆ."

"ನೋಡಿದಿರಾ! ಒಂದು ಸಲ ಈ ರೀತಿ ಚುರುಕು ಮುಟ್ಟಿಸಿದರೆ, ನಮ್ಮನ್ನು ಹುಡುಕಿಕೊಂಡು ಬರುತ್ತೀರಾ. ಇಲ್ಲದೇ ಹೋದರೆ, ಬ್ಯಾಂಕ್‌ಗೆ ನಾವು ನಾಯಿ ತರಹ ಅಲೆಯಬೇಕು. ನಿಮ್ಮ ಕೇಸ್ ರಿವ್ಯೆವ್ ಮಾಡಿದ್ದೇನೆ."

ನೆಮ್ಮದಿಯ ನಿಟ್ಟುಸಿರು ಹೊರಟಿತು ನನ್ನ ಬಾಯಿ ಮೂಗಿಂದ.

"ನನ್ನಿಂದ ಬೇಸರವಾಯಿತೆ?"

ನನ್ನ ನಿಟ್ಟುಸಿರು ಅವನಿಗೆ ಕೇಳಿಸಿರಬೇಕು.

ಅದು ಅವನ ಹೆಪ್ಪುಗಟ್ಟಿದ ಹೃದಯವನ್ನು ತಟ್ಟಿ, ಕರಗಿಸಿರಬೇಕು. ದೀನ ಭಾವನೆಯ ಹಕ್ಕಿಯ ರೆಕ್ಕೆ ಹಾರಾಡತೊಡಗಿರಬೇಕು.

"ಬೇಸರವಾಗಿತ್ತು. ಈಗ ಇಲ್ಲ" ನಿಜವನ್ನೇ ನುಡಿದೆ.

ಆತ ಮುಗುಳ್ನಕ್ಕ.

"ಈ ಕಟ್ಟಡ ಕಮಲಾ ನೆಹರೂರವರಿಗೆ ಸೇರಿದೆಯೆಂದು ಕೇಳಿದೆ. ಹೌದಾ?"

"ಹೌದು. ಇದು ಅವರ ಪೂರ್ವಜರ ಮನೆ. ಇಲ್ಲೇ ಅವರ ಜನನವಾಯಿತು. ಇಲ್ಲೇ ಅವರ ಬಾಲ್ಯಾವಸ್ಥೆಯ ಜೀವನ ಕಳೆಯಿತು. ಇಲ್ಲೇ ಅವರ ವಿದ್ಯಾಭ್ಯಾಸ ಆಯಿತು. ಇಲ್ಲೇ ಅವರ ವಿವಾಹ ಕೂಡ ಆಯಿತು. ಇಲ್ಲೇ ಅವರ ಪತಿ ಜವಹರ ಲಾಲ್ ನೆಹರೂರವರು, ಕುದುರೆ ಏರಿ, ಬಾರಾತ್ ತೆಗೆದುಕೊಂಡು ಬಂದು, ಕಮಲ ರನ್ನು ವಿವಾಹವಾದರು. ಆದರೆ, ಈಗ ನೆಹರೂ ವಂಶಸ್ಥರೂ ಯಾರೂ ಇಲ್ಲಿ ವಾಸ ವಾಗಿಲ್ಲ. ಯಾವಾಗಲೋ ಅವರು ಈ ಮನೆಯನ್ನು ಮಾರಿಬಿಟ್ಟರು. ಮನೆ ಕೊಂಡ ವರು ಕೂಡ ಇಲ್ಲಿ ವಾಸ ಮಾಡಲಿಲ್ಲ. ಕಟ್ಟಡವನ್ನು ತುಂಡು ತುಂಡು ಮಾಡಿ, ಅದರ ಆಕಾರ ಕೆಡಿಸಿ, ವಿನ್ಯಾಸ ಬದಲಾಯಿಸಿ, ಮನೆ, ಅಂಗಡಿ ಗೋಡನ್ ಎಂದು ವಿಂಗಡಿಸಿ, ಬಾಡಿಗೆಗೆ ಕೊಟ್ಟು, ತಾವು ದಿಲ್ಲಿ ನಗರವನ್ನೇ ಬಿಟ್ಟು, ಹೋಗಿದ್ದಾರೆ. ಸರಕಾರಕ್ಕಾಗಲಿ, ಜನರಿಗಾಗಲೀ, ಯಾಕೆ ಸ್ವಯಂ ನೆಹರೂ ವಂಶಸ್ಥರಿಗೆ ಆಗಲೀ ಈ ಕಟ್ಟಡವನ್ನು ಒಂದು ಸ್ಮಾರಕವನ್ನಾಗಿ ಪರಿವರ್ತಿಸಿಕೊಳ್ಳಲು ಇಷ್ಟವಿಲ್ಲ."

ವಿಖ್ಯಾತ ಉರ್ದೂ ಕವಿ ಗಾಲೀಬ್‌ನ ಮನೆಯನ್ನೇ ಸ್ಮಾರಕವನ್ನಾಗಿ ಮಾಡಿ ಕೊಳ್ಳುವಷ್ಟು ಹೃದಯವಂತಿಕೆ ಇಲ್ಲದಿರುವಾಗ, ಒಬ್ಬ ರಾಜಕಾರಣಿಯ, ಒಬ್ಬ ಸ್ವಾತಂತ್ರ ಯೋಧನ, ಒಬ್ಬ ಪ್ರಧಾನ ಮಂತ್ರಿಯ ಹೆಂಡತಿಯ ಮನೆಯನ್ನು ಸ್ಮಾರಕ ವನ್ನಾಗಿ ಪರಿವರ್ತಿಸಿಕೊಳ್ಳುವ, ಮನೋಭಾವ ನಮಗೆ ಹೇಗಾದರೂ ಇರುತ್ತದೆ?

"ಈ ಕಟ್ಟಡವನ್ನು ಸ್ಮಾರಕವನ್ನಾಗಿ ಮಾಡಿದರೆ, ಬಾಡಿಗೆದಾರರು ಖಾಲೀ ಮಾಡಿ ಬೇರೆ ಕಡೆ ಹೋಗಲಿಕ್ಕೆ ತಯಾರಿದ್ದಾರಾ?"

"ಸರಕಾರದವರು ನಮಗೆ ಬೇರೆ ಕಡೆ ಮನೆ ಕಟ್ಟಿಕೊಳ್ಳಲು ನಿವೇಶನ ಕೊಟ್ಟರೆ ಸಾಕು, ನಮಗೆ ಹಣ ಬೇಡ ಮತ್ತೇನೂ ಬೇಡ, ಈ ಕಟ್ಟಡ ಖಾಲಿ ಮಾಡಿ ಹೋಗು ತ್ತೇವೆ."

ದಿಲ್ಲೀಯಲ್ಲಿ ಸಣ್ಣ ಸೈಟ್‌ಗೆ ಲಕ್ಷ ಲಕ್ಷ ರೂಪಾಯಿ ಬೆಲೆ ಇರುವಾಗ, ಕಟ್ಟಡದ ಎಲ್ಲಾ ನಿವಾಸಿಗಳಿಗೆ ನಿವೇಶನ ಹಂಚಿದರೆ, ಸರಕಾರದ ಬೊಕ್ಕಸ ಬರಿದಾದೀತು!

"ಎಷ್ಟು ಜನ ಬಾಡಿಗೆದಾರರಿದ್ದೀರಿ?"

"೮೦ ಜನ"

ಬೆಚ್ಚಿದೆ. ೮೦ ಜನ ಬಾಡಿಗೆದಾರರು ಈ ಕಟ್ಟಡದಲ್ಲಿ? ಭಾರೀ ಕಟ್ಟಡವೇ ಇರಬೇಕು ಇದು.

"ಸರಕಾರ ಭಾರಿ ಹಣ ಕೊಟ್ಟು ಈ ಬಾಡಿಗೆದಾರರಿಂದ ಕಟ್ಟಡ ಬಿಡಿಸಿಕೊಂಡು, ಇದನ್ನು ಸ್ಮಾರಕವನ್ನಾಗಿ ಏಕೆ ಮಾಡಬೇಕು? ನೆಹರೂರವರು ತಮ್ಮ ವಂಶಸ್ಥರನ್ನು

ದೇಶಕ್ಕೆ ಮುಡಿಪಾಗಿ ಇಟ್ಟಿರಬೇಕಾದರೆ, ಬೇರೆ ಯಾವ ಸ್ಮಾರಕ ಬೇಕು ನಮಗೆ?"

ನೆಹರೂ ವಂಶಸ್ಥರ ಮೇಲೆ ಇವನಿಗೆ ಅಭಿಮಾನವೇ? ಅಥಾವ ಉದಾಸೀನವೇ?

"ನಮ್ಮ ದೇಶಕ್ಕೆ ನೆಹರೂರವರ ಕೊಡುಗೆ ಅಪಾರ. ಸಮತಾವಾದಿ ನೆಹರೂ ಆದರ್ಶವಾದಿ. ಬಡವರ ಬಂಧು. ಜನರು ಅವರನ್ನು ಎಷ್ಟು ಪ್ರೀತಿಸಿದರೆಂದರೆ, ಅವರು ಏನು ಹೇಳಿದರೂ ಮಾಡಲಿಕ್ಕೆ ತಯಾರಾಗಿದ್ದರು. ಆದರೆ, ನೆಹರೂ ಜನರಿಗೆ ಆಶ್ವಾಸನೆ ನೀಡಿ ನೀಡಿ, ಅವರನ್ನು ಹತಾಶರನ್ನಾಗಿ ಮಾಡಿಬಿಟ್ಟರು. ಸುಂದರ ಮನೋಹರ ಕನಸುಗಳನ್ನು ಕಟ್ಟಿದರು, ಕಟ್ಟಿ ಬೆಳೆಸಿದರು, ಅವನ್ನು ಜನರಿಗೆ ಮಾರಿದರು ನಿಜ! ರಾಜಕಾರಣಿಗಳ ಕೆಲಸವೇ ಕನಸನ್ನು ಮಾರುವುದು! ಎಲ್ಲಾ ರಾಜಕಾರಣಿಗಳು ಮಾಡುವುದೇ ಅದು. ಕನಸಿನ ಕೋಟೆ ಕಟ್ಟಿ, ಅದರಲ್ಲಿ ನಮ್ಮನ್ನು ಭದ್ರವಾಗಿ ಇರಿಸಿ, ಸಕಲ ಐಶ್ವರ್ಯ, ಸಂಪತ್ತು, ಭೂಮಿ, ಕಾಣಿ, ಭದ್ರತೆ, ನೆಮ್ಮದಿ ನೀಡುವ ಭರವಸೆ ಕೊಟ್ಟು ಜನರನ್ನು ಆಳುತ್ತಾರೆ. ಜನರು ನಂಬಿ, ರಾಜಕಾರಣಿಗಳು ಮಾರಿದ ಕನಸನ್ನು ಕೊಂಡು ಅದು ನನಸಾಗದಿದ್ದಾಗ ಕಂಗೆಟ್ಟು ಶಾಪ ಹಾಕುತ್ತಾರೆ. ಆದರೆ, ಅಷ್ಟರಲ್ಲೆ, ರಾಜಕಾರಣಿ ಹೊಸ ಹೊಸ ಕನಸಿನ ಕೋಟೆ ಕಟ್ಟುತ್ತಾರೆ, ಮತ್ತೆ ಮತ್ತೆ ವಿವಿಧ ಭರವಸೆ ನೀಡುತ್ತಾರೆ ಅಥವಾ, ಕಾಲ ಮಿಂಚಿ, ಅವರು ಸಾಯುತ್ತಾರೆ, ಕೊಲೆಯಾಗುತ್ತಾರೆ, ದೇಶಭ್ರಷ್ಟರಾಗುತ್ತಾರೆ. ಇದು ರಾಜಕಾರಣಿಗಳು ನಡೆಸುವ ಪ್ರಮುಖ ಕಾರ್ಯ!"

ಪುಟ್ಟ ಭಾಷಣವನ್ನೇ ಬಿಗಿದಿದ್ದ ನರಪೇತಲ ನಾರಾಯಣ.

"ನೆಹರೂ ಮತ್ತು ಅವರ ಮಗಳು ಇದೇ ರೀತಿ ಮಾಡುತ್ತಾ ಇದ್ದೀರೆಂದು ನಿಮ್ಮ ಅನಿಸಿಕೆಯೊ?"

"ಇದೇ ರೀತಿ ಅಂದರೆ?"

"ಕನಸುಗಳನ್ನು ಮಾರುತ್ತಿದ್ದಾರೆಯೇ?"

"ಬರೀ ಕನಸು ಮಾರಿದ್ದರೆ, ತೊಂದರೆ ಇಲ್ಲ. ಅವರು ಕನಸುಗಾರರು! ಅವರು ಕಟ್ಟುವ ಕನಸುಗಳು, ಅಫೀಮು, ಗಾಂಜಾ ಮತ್ತು ಮಾರಿಜಯಾನಾಗಳು ನೀಡುವ ಮಜಕ್ಕಿಂತ ಹೆಚ್ಚು ಮಜ ನೀಡುತ್ತದೆ! ಜನ ಇವನ್ನು ಕುಡಿದು ಉನ್ಮತ್ತರಾಗುತ್ತಾರೆ, ಇವಕ್ಕೆ ಅಂಟಿಕೊಂಡು ಜೀವಮಾನವಿಡೀ ನರಳುತ್ತಾರೆ."

ಕನಸು ಕಾಣುವುದು, ಕನಸು ಮಾರುವುದು, ಕನಸುಕಟ್ಟುವುದು ಜನರ ಮುಖ್ಯ ಹವ್ಯಾಸ? ಕನಸುಗಳು ಅಫೀಮಿನಂತೆ ಎಂದು ಹೇಳುತ್ತಾನಲ್ಲಾ ಈ ವಕೀಲ? ಕನಸು ಕಾಣುವುದು ಅಪರಾಧವೇ? ಅಘಾತವೇ? ಕನಸು ನನಸಾಗದೆ ಸತ್ತರೆ ಅದೊಂದು

ಅಘಾತವಲ್ಲವೆನ್ನುತ್ತಾರೆ.ಆದರೆ ಕನಸು ಕಾಣದಿರುವುದು ಅಘಾತವೆನಿಸುವುದು ಎನ್ನುತ್ತಾರಲ್ಲ!

"ನಮಸ್ಕಾರ್, ನಮಸ್ಕಾರ್!"

ಬಾಗಿಲ ಬಳಿ ಒಬ್ಬ ಧಡೂತಿ, ಸುಮಾರು ಐವತ್ತು ವರ್ಷ ವಯಸ್ಸಿನ ಆಸಾಮಿ ನಿಂತು, ವಕೀಲನಿಗೆ ವಂದಿಸುತ್ತಾ ನಿಂತಿದ್ದ.

"ನಮಸ್ಕಾರ! ಬಾ! ಬಾ!" ವಕೀಲ ಆಹ್ವಾನಿಸಿದ.

ಒಳಗೆ ಬಂದು, ನನ್ನ ಪಕ್ಕದಲ್ಲಿದ್ದ ಮತ್ತೊಂದು ಕಬ್ಬಿಣದ ಕುರ್ಚಿಯಲ್ಲಿ ಕುಳಿತ. ಅದು 'ಕುಯ್ಯೋ' ಎಂದು ಅರಚಲಿಕ್ಕೆ ಶುರುಮಾಡಿತು.

"ಈ ಕುರ್ಚಿಗೆ ನಿಮ್ಮಷ್ಟೇ ವಯಸ್ಸಾಗಿದೆ. ಒಂದು ಹೊಸಾ ಕುರ್ಚಿ ಕೊಳ್ಳ ಬಾರದೇ?" ಆಕ್ಷೇಪಿಸಿದ ಆತ.

"ಇವರು ನಮ್ಮ ಆಡಿಟರ್ ಮಹಾಶಯ. ಅಗ್ರವಾಲ್ ಅಂತ ಹೆಸರು. ಇವರು ನನ್ನ ಆಪ್ತ ಸ್ನೇಹಿತರು ಕೂಡ."

ನನ್ನ ಪರಿಚಯ ಅವರಿಗೆ ಮಾಡಿಸಿ, ಅವರ ಪರಿಚಯ ನನಗೆ ಮಾಡಿಸಿದ.

"ಈ ಟೈಪಿಸ್ಟ್ ನೋಡಿ. ಎಷ್ಟು ವಯಸ್ಸಾಗಿದೆ. ಅವರನ್ನು ಬದಲಾಯಿಸಿ ಅಂದರೆ ಕೇಳೋದಿಲ್ಲ.ಈ ಕೊಠಡಿ ನೋಡಿ, ಎಷ್ಟು ಹಳೆಯದಾಗಿದೆ. ಬದಲಾಯಿಸಿ ಅಂದರೆ ಕೇಳೋದಿಲ್ಲ!" ಆಕ್ಷೇಪಿಸುತ್ತಲೇ ಇದ್ದ ಅಗ್ರವಾಲ್.

"ಸಧ್ಯ ನಿನ್ನ ಹೆಂಡತಿ ಮುದುಕಿ, ಬದಲಾಯಿಸು ಅಂತ ಹೇಳಲಿಲ್ಲವಲ್ಲ!"

ನಗತೊಡಗಿದ ವಕೀಲ, ತನ್ನ ಜೋಕ್‌ಗೆ.

"ಹೇಳುತ್ತಾ ಇದ್ದೆ. ಆದರೆ ಅದಕ್ಕೆ ಅವಕಾಶ ಕೊಡಲೇ ಇಲ್ಲವಲ್ಲ. ಇವರು ಆಜನ್ಮ ಬ್ರಹ್ಮಚಾರಿ!" ನನ್ನ ಕಡೆ ತಿರುಗಿ ಹೇಳಿ ನಗತೊಡಗಿದ ಅಗ್ರವಾಲ್.

"ನನ್ನ ಹಾಗೆ ನಮ್ಮ ದೇಶದಲ್ಲಿ ಪ್ರತಿ ಹತ್ತು ಮಂದಿಗೆ ಒಬ್ಬ ಬ್ರಹ್ಮಚಾರಿ ಯಾಗಿ ಉಳಿದಿದ್ದರೆ, ಜನಸಂಖ್ಯೆ ಕಡಿಮೆಯಾಗಿ, ದೇಶದ ಪ್ರಗತಿ ಜಾಸ್ತಿಯಾಗು ತ್ತಿತ್ತು!"

"ಹೌದು! ಹೌದು! ದೇಶದ ತುಂಬಾ ಹಡಬೆ ಮಕ್ಕಳು ಹುಟ್ಟಿ, ಹಡಬೆ ರಾಜ್ಯ ಆಗುತ್ತಿತ್ತು."

"ಹೊಲಸು ಮಾತು, ಹೊಲಸು ಮಾತು. ಸಾಕು ಮಾಡು, ನಿನ್ನ ಹೊಲಸು ಮಾತು. ನಾವು ಗಾಂಧಿ-ನೆಹರೂ ವಿಷಯ ಮಾತನಾಡುತ್ತಿದ್ದವು. ಮಧ್ಯ ಬಂದು ನೀನು ಮಾತು ತಿರುಗಿಸಿ, ಕೆಡಸಿ, ಹೊಲಸು ಮಾಡುತ್ತಿದ್ದೀಯ." ನಗುತ್ತಾ ಹೇಳಿದ ವಕೀಲ.

"ಗಾಂಧಿ-ನೆಹರೂ ವಿಷಯ? ಅವರ ಸಂಗತಿ ನಿಮಗ್ಯಾಕೆ?"

ಹೊಲಸು ಬಾಯಿಗೆ ಹಾಕಿಕೊಂಡು ಕ್ಯಾಕರಿಸಿ ಉಗಿಯುವಂತೆ ಮುಖ ಮಾಡಿದ ಅಗ್ರವಾಲ್.

"ನೀವು ಮಾತನಾಡುತ್ತಾ ಇರಿ. ಹೋಗಿ 'ಚಾ' ತರುತ್ತೇನೆ."

ವಕೀಲ ಎದ್ದು ಹೊರಗೆ ಹೋದ.

"ಭಾಯಿಸಾಬ್! ಯಾವಾಗ ನಿಮಗೆ ರಿಟಾಯರ್ ಆಗುತ್ತದೆ?"

ಟೈಪ್ ಮಾಡುತ್ತಿದ್ದ ಮುದುಕನಿಗೆ ಕೂಗಿ ಕೇಳಿದ.

"ನಾಳೆ" ಎಂದು ತನ್ನ ಬೊಚ್ಚು ಬಾಯಿ ತೆರೆದು ನಕ್ಕ.

"ಇಂದೇ ಆಗಿಬಿಡಿ" ಮತ್ತೆ ಕೂಗಿದ. ಮುದುಕನ ಕಿವಿ ಮಂದ ಎಂದು ತಿಳಿದಿದ್ದು ಇವನ ಕೂಗಿನಿಂದ.

"ವಕೀಲರು ಇಂದು ಬೇಡ ಅಂತಾರೆ" ಅವನು ಮತ್ತೆ ನಕ್ಕ.

"ನಾನು ಇಲ್ಲಿಗೆ ಬಂದಾಗಲೆಲ್ಲಾ ಈ ಮುದುಕನ್ನು ಈ ಪ್ರಶ್ನೆ ಹಾಕಿ, ಇದೇ ಉತ್ತರ ಪಡೆದುಕೊಳ್ಳುವ ರೂಢಿ. ಯಾವತ್ತು ಈತ 'ಇಂದೇ ರಿಟೈರ್' ಎಂದು ಹೇಳುತ್ತಾನೋ ಅಂದೇ ಇವನಿಗೆ ಶಾಲು ಹೊದಿಸಿ, ಕೈ ತುಂಬಾ ಹಣ ಕೊಟ್ಟು, ವೃದ್ಧಾಶ್ರಮಕ್ಕೆ ಸೇರಿಸಿಬಿಡುತ್ತೇನೆ."

"ವೃದ್ಧಾಶ್ರಮ? ಏಕೆ ಇವರಿಗೆ ಸಂಸಾರವಿಲ್ಲವೆ?"

"ಎಲ್ಲವೂ ಇದೆ. ಹೆಂಡತಿ, ಮಕ್ಕಳು ಎಲ್ಲರೂ ಇದ್ದಾರೆ. ಸಂಪಾದಿಸುವುದು ನಿಲ್ಲಿಸಿದ ತಕ್ಷಣ ಇವರನ್ನು ಬೀದಿಗೆ ಬಿಸಾಡುತ್ತಾರೆ ಪಾಪಿಗಳು."

ಗೂಢವಾಗಿತ್ತು ಇವನ ಮಾತುಗಳು.

"ನಿಮಗೆ ಅರ್ಥವಾಗಿರಲಿಕ್ಕಿಲ್ಲ ನನ್ನ ಮಾತುಗಳು. ಈ ಮುದುಕನ ಕಥೆ ಕಣ್ಣೀರಿನ ಕಥೇ. ಇವನಿಗೆ ಮಕ್ಕಳಿದ್ದಾರೆ. ಹೆಂಡತಿ ಇದ್ದಾಳೆ. ಆದರೆ ಎಲ್ಲರಿಗೂ ಇವನು ಸಂಪಾದಿಸುವ ಹಣದ ಮೇಲೆ ಕಣ್ಣು. ಕ್ರೂರಿಗಳು ಸಾಬ್, ಕ್ರೂರಿಗಳು. ತಂದೆ ಬಗ್ಗೆ ಕರುಣೆ ಇಲ್ಲ, ಗೌರವ ಇಲ್ಲ. ನಾನಾಗಿದ್ದರೆ, ಅವರನ್ನು ಹಿಡಿದು, ಹೊಡೆದು ಮನೆಯಿಂದ ಹೊರಗಟ್ಟಿಬಿಡುತ್ತಿದ್ದೆ."

ಬಿಸಿ ಉಸಿರು ಹೊರಹಾಕಿದ ಅಗ್ರವಾಲ್.

"ಹೊರಗೆ ಹಾಕಿ ಬಿಟ್ಟಿದ್ದೀಯಲ್ಲ! ಪುನಃ ಏನಾದರೂ ಅವರನ್ನು ಮನೆಗೆ ಸೇರಿಸಿಕೊಂಡಿದ್ದೀಯ?" ಒಳಗೆ ಬಂದ ವಕೀಲ ಕೇಳಿದ.

ಎಲ್ಲವೂ ಒಗಟಾಗಿತ್ತು ನನಗೆ.

"ಸಂಪಾದಿಸುತ್ತಾ ಇದ್ದರೂ, ಮಗ ಕಾಸು ಕೊಡುತ್ತಾ ಇರಲಿಲ್ಲ. ಹೆಂಡತಿ

ಜೊತೆ ಐಶಾರಾಮಾಗಿ ಜೀವನ ನಡೆಸುತ್ತಾ ಇದ್ದ. ಇವ ಏನು ಮಾಡಿದ ಗೊತ್ತೇ? ಒಂದು ಸಣ್ಣ ಪ್ಲಾಟ್ ಕ್ರಯಿಸಿದ. ಹೇಳದೆ ಕೇಳದೆ ಸ್ವಂತ ಮನೆ ಮಾರಿದ. ಮಗ-ಸೊಸೆ ಎರಡು ದಿನದ ಮಟ್ಟಿಗೆ ಶಿಮ್ಲಾಗೆ ಮಜಾ ಮಾಡಿ ಬರುತ್ತೇವೆಂದು ಹೋಗಿದ್ದರು. ಮನೆ ಖಾಲಿ ಮಾಡಿದ. ಕ್ರಯಕ್ಕೆ ಕೊಂಡವರು ಮನೆ ಆಕ್ರಮಿಸಿ ಕೊಂಡರು. ಮಗ ಸೊಸೆ ಬಂದು ನೋಡಿದರೆ, ಅವರಿಗೆ ಶಾಖ್ ಆಗಿ, ಮೂರ್ಛೆ ಹೋಗಿದ್ದರು!"

ಎಂತಹ ಕುತಂತ್ರ! ಮಗ ಸೊಸೆಯನ್ನು ಈ ರೀತಿ ಹೊರಗೆ ಹಾಕುವುದೇ?

"ನಿಮಗಿಷ್ಟವಿಲ್ಲದಿದ್ದರೆ, ಅವರನ್ನು ನೀವಿದ್ದುಕೊಂಡೆ, ಹೊರಗೆ ಹೋಗಿ ರೆಂದು ಹೇಳಬಹುದಾಗಿತ್ತಲ್ಲ?"

ನನ್ನ ಪ್ರಶ್ನೆಗೆ, ಅವ ನನ್ನ ಕಡೆ ಗಂಭೀರವಾಗಿ ನೋಡಿದ.

"ಮಾನ ಮರ್ಯಾದೆ, ಗೌರವ ಇಲ್ಲದ ಮಕ್ಕಳಿಗೆ ಮನೆಯಲ್ಲಿಟ್ಟುಕೊಂಡು ಸಾಕಿದರೆ ನಮಗೂ ಗೌರವ ಸಿಗುವುದಿಲ್ಲ. ಒಬ್ಬನೇ ಮಗ, ನಮ್ಮನ್ನು ಮುಪ್ಪಿನ ಕಾಲದಲ್ಲಿ, ಸಾಯುವ ಕಾಲದಲ್ಲಿ ನೋಡಿಕೊಳ್ಳುತ್ತಾನೆ ಎಂದು ಬಯಸುವುದು ಘೋರ ತಪ್ಪು ಮತ್ತು ಪಾಪ. ನಾವಿದ್ದುಕೊಂಡೇ ನನ್ನ ಮಗನನ್ನು ಹೊರಗೆ ಹಾಕು ವುದು ಅಷ್ಟು ಸುಲಭವಾಗಿದ್ದರೆ, ನಾನೇಕೆ ಕಷ್ಟಪಟ್ಟು ಕಟ್ಟಿದ ಮನೆಯನ್ನು ಮಾರ ಬೇಕು?"

"ಹೋಗಲಿ ಬಿಡು. ಈಗ ಆ ಮಾತು ಯಾಕೆ? ಚಾ ಕುಡಿ"

ಚಾ ಹೊತ್ತು ತಂದ ಹೋಟೆಲ್ ಹುಡುಗನ ಕೈಯಿಂದ, ಲೋಟ ತೆಗೆದು ಕೊಂಡು, ಅಗ್ರವಾಲ್‌ನ ಕೈಗೆ ಇತ್ತ. ನನಗೊಂದು ಚಾ ಕಪ್ ನೀಡಿದ.

"ಚಾ ತೆಗೆದುಕೊಳ್ಳಿ" ಎಂದು ಕೂಗಿದ ಟೈಪಿಸ್ಟ್ ಮುದುಕನಿಗೆ.

"ಗಾಂಧಿ- ನೆಹರೂರವರ ವಿಷಯದ ಬಗ್ಗೆ ಏನೋ ಹೇಳುತ್ತಾ ಇದ್ದೀರಲ್ಲ."

ಅಗ್ರವಾಲ್‌ನನ್ನು ಮಾತಿಗೆ ಎಳೆದೆ, ಚಾವನ್ನು ಹೀರುತ್ತಾ.

ಒಂದೇ ಗುಟುಕಿಗೆ ಚಾ ಕುಡಿದು, ಬರಿದಾದ ಕಪ್ಪನ್ನು ಮೇಜಿನ ಮೇಲೆ ಇರಿಸಿದ ಅಗ್ರವಾಲ್.

"ಕಾಂಗ್ರೆಸ್ ಪಾರ್ಟಿಗೆ ಹಣ ಸಹಾಯ ಮಾಡಿದ ಬನಿಯಾಗಳಿಗೆ, ಎಲ್ಲಾ ಕ್ಷೇತ್ರದಲ್ಲಿ ಲೈಸನ್ಸ್ ನೀಡಿ, ಕೈಗಾರಿಕಾ ಘಟಕಗಳನ್ನು ತೆರೆಸಿ, ಅವರು ತಯಾರು ಮಾಡಿದ ಪದಾರ್ಥ, ಸಾಮಾನುಗಳಿಗೆ ಯಾವ ವಿಧವಾದ ಪೈಪೋಟಿ ಇಲ್ಲದಂತೆ ಮಾಡಿ, ಹೇರಳ ಹಣ ಸಂಪಾದನೆ ಮಾಡುವಂತೆ ಅನುವು ಮಾಡಿಕೊಟ್ಟರು. ಲೈಸನ್ಸ್ ರಾಜ್ ಸ್ಥಾಪಿಸಿದರು. ಸ್ವರಾಜ್ಯ ಯಾರಿಗೆ ಸಿಕ್ಕಿತು? ಹಣವಂತರಿಗೆ, ಸರ್ಕಾರಿ ಅಧಿಕಾರಿ

ಗಳಿಗೆ, ವ್ಯಾಪಾರಸ್ಥರಿಗೆ ಮತ್ತು ರಾಜಕಾರಣಿಗಳಿಗೆ. ಯಾರಿಗೆ ಹೆಚ್ಚು ಪ್ರಭಾವದ ಶಕ್ತಿ, ಪ್ರಾಬಲ್ಯವಿದೆಯೋ ಅವರಿಗೆ ಹೆಚ್ಚು ಹಣ ಅಂತಸ್ತು ಆಸ್ತಿ ದೊರಕಿತು. ಇದರಿಂದ ಪಾರ್ಟಿಗೂ ಹಣ ಸಿಕ್ಕಿತು. ಅವರು ಆ ಹಣದಿಂದ ಕನಸುಗಳನ್ನು ಮಾರಿ, ಒತ್ತಾಸೆ ತೋರಿಸಿ, ಮುಗ್ಧ, ಬಡ, ಪಾಪದ ಜನರ ವೋಟು ಕೊಂಡು, ಅಧಿಕಾರದ ಗದ್ದುಗೆ ಏರಿ, ಪುನಃ ಹಣವಂತರಿಗೆ, ದೊಡ್ಡ ಕೈಗಾರಿಕಾಧಿಪತಿಗಳಿಗೆ ಲೈಸನ್ಸ್ ಮಾರಿ, ತಾವು ಹಣ ಸಂಪಾದಿಸಿ, ಅವರಿಗೂ ಹಣ ಸಂಪಾದಿಸುವ ಮಾರ್ಗ ಹೇಳಿ ಕೊಟ್ಟರು."

"ಹಾಗಾದರೆ, ಸರಕಾರದ ಒಡೆತನದ ಭಾರಿ ಉದ್ದಿಮೆಗಳು ಸ್ಥಾಪನೆ ಮಾಡಿದ್ದು ಈ ಹಣವಂತರ ಪೈಪೋಟಿ ಮುರಿಯಲಿಕ್ಕೆ ಅಲ್ಲವೇ?"

"ಖಂಡಿತ ಇಲ್ಲ. ಸಾವಿರಾರು ಕೋಟಿ ಹಣ ತೊಡಗಿಸಲು ಖಾಸಗಿ ಉದ್ದಮೆದಾರರು ತಯಾರಿರಲಿಲ್ಲ. ಅದೂ ಅಲ್ಲದೆ, ಸರಕಾರೀ ಅಧಿಕಾರಿಗಳಿಗೆ, ರಾಜಕಾರಣಿಗಳಿಗೆ ಉದ್ಯೋಗ ಬೇಕಿತ್ತು, ಹಣ ಬೇಕಿತ್ತು, ಅಂತಸ್ತು ಬೇಕಿತ್ತು. ಸರಕಾರಿ ಒಡೆತನದ ಬೃಹತ್ ಕಾರಖಾನೆಗಳನ್ನು ಸ್ಥಾಪಿಸಲಾಯಿತು. ಇನ್ನು ಒಂದು ಕಾರಣವಿದೆ. ನೆಹರೂರವರ ಸಮಾಜವಾದೀ ಧೋರಣೆಯಿಂದ, ಕಮ್ಯುನಿಸ್ಟ್ ರಾಷ್ಟ್ರಗಳು, ಹಣ ಹೂಡಲು ಮುಂದಾದವು"

"ನೀನೊಬ್ಬ ಹುಚ್ಚ! ಅಥವಾ ಅರೆ ಹುಚ್ಚ! ಪೂರ್ತವಿಷಯ ತಿಳಿದುಕೊಳ್ಳದೆ ಮಾತನಾಡುತ್ತೀಯ. ಪ್ರಪಂಚದ ಎಲ್ಲಾ ಸರಕಾರಗಳೂ, ದೇಶದ ಏಳಿಗೆಗೆ ಶ್ರಮ ಪಡುತ್ತಲೇ ಇವೆ. ಸರಕಾರ ಹಣ ತೊಡಗಿಸದಿದ್ದರೆ, ಸಾವಿರಾರು ರೈಲು ರಸ್ತೆ ಪ್ರಗತಿ ಸಾಧ್ಯತೆ ಇರಲಿಲ್ಲ. ಸರಕಾರದ ಕೈವಾಡ ಇಲ್ಲದಿದ್ದರೆ, ಪೋಸ್ಟಲ್ ಸೇವೆ ನಮಗೆ ದಕ್ಕುತ್ತಿತ್ತೇ? ಆಕಾಶವಾಣಿ, ದೂರದರ್ಶನ, ಬಂದರು ವೃದ್ಧಿ, ಟೆಲಿಫೋನ್, ಇನ್ನೂ ಸಾವಿರಾರು ಕ್ಷೇತ್ರಗಳಲ್ಲಿ ಸರಕಾರದ ಹಣ, ನೀತಿ, ರೀತಿ, ಅಧಿಕಾರಿಗಳು, ಶ್ರಮಿಸಿಲ್ಲವೇ? ಯಾವುದೇ ಪಾರ್ಟಿ ಸರಕಾರ ವಶಪಡಿಸಿಕೊಂಡರೂ, ದೇಶದ ಏಳಿಗೆಗೆ ಶ್ರಮಿಸದೇ ಬಿಡುವುದೇ ಇಲ್ಲ. ಸುಮ್ಮನೆ ನೆಹರೂ ವಂಶಸ್ಥರನ್ನು ಬಯ್ಯುವುದರಲ್ಲಿ ಯಾವ ಹುರುಳೂ ಇಲ್ಲ!"

ನರಪೇತಲ ನಾರಾಯಣ ತನ್ನ ವಕೀಲೀ ಭಾಷೆಯನ್ನು ಬಿಗಿದ. ನೆಹರೂ ವಂಶದವರ ಪರ ಮಾತಾಡ ಹತ್ತಿದ್ದ.

"ನಾನು ಸರಕಾರ ಈ ಕೆಲಸ ಮಾಡಬಾರದು ಎಂದು ಹೇಳಲಿಲ್ಲ. ನನ್ನ ಮಾತು ನಿನಗೆ ಅರ್ಥವಾಗಲಿಲ್ಲ. ನಾನೂ ಹೇಳಿದ್ದು, ಸರಕಾರ ನಡೆಸುತ್ತಾ ಇರುವ ಅಧಿಕಾರದಲ್ಲಿರುವ ರಾಜಕಾರಣಿಗಳು, ತಮ್ಮ ಸ್ವಾರ್ಥತತೆಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟು ಕ್ರಿಯಾಶೀಲತೆಗೆ, ವಿಶಾಲ ಹೃದಯಕ್ಕೆ, ದೂರದೃಷ್ಟಿತನಕ್ಕೆ, ರಾಜ್ಯ ನೀತಿನಿಪುಣತೆಗೆ

ಬೆಲೆ ಕೊಡದೆ, ರಾಜ್ಯವಾಳುತ್ತಾ ಇರುವ ನಿಪುಣರು ನಮ್ಮ ರಾಷ್ಟ್ರಕ್ಕೆ, ನಮ್ಮ ಜನರಿಗೆ ಬೇಕಾದ ಮೂಲಭೂತವಾದ ಬೇಕುಗಳಾದ ಹೊಟ್ಟೆ, ಬಟ್ಟೆ, ಮನೆ ಎಷ್ಟರ ಮಟ್ಟಿಗೆ ನೀಡಲು ಪ್ರಯತ್ನಿಸುತ್ತಿದ್ದಾರೆ, ಎಷ್ಟರ ಮಟ್ಟಿಗೆ ಜನರ ಜೀವನ ಸುಧಾರಿಸಿದೆ, ಎಂಬುದೇ ಮುಖ್ಯ ಪ್ರಶ್ನೇ. ಒಂದು ಮಾತ್ರ ನಿಜ. ದೇಶದ ಪ್ರತೀ ಹಳ್ಳಿ ಹಳ್ಳಿಯಲ್ಲಿನ ಪ್ರತಿ ಬಡಜನರನ್ನು ಹಳ್ಳಿಯಲ್ಲೇ ಉದ್ಧಾರ ಮಾಡಗೊಡದೆ, ನಗರಗಳತ್ತ, ಪಟ್ಟಣ ಗಳತ್ತ, ಹೊಸನಗರಗಳತ್ತ ಓಡಿಸುತ್ತಾ ಇದ್ದಾರೆ. ದೇಶ ಸ್ವಾತಂತ್ರ ಸಿಕ್ಕನಂತರ, ಹಳ್ಳಿಗಳಿಂದ ನಗರಗಳಿಗೆ ನಿರಂತರವಾಗಿ ಮಹಾ ವಲಸೆ ಹೋಗುವುದನ್ನ ಮಾಡಿ ರುವುದು ಒಂದು ಮಹಾನ್ ಕಾರ್ಯ. ಒಂದು ಕಾಲದಲ್ಲಿ, ನಮ್ಮ ಹಳ್ಳಿಗಳು ಎಲ್ಲಾ ರೀತಿಯಲ್ಲೂ ಸ್ವಾವಲಂಬನೆ ಅನುಭವಿಸುತ್ತಿದ್ದವು. ಕಡುಬಡತನವಿದ್ದಿರಬಹುದು. ಆದರೆ ಆತ್ಮತೃಪ್ತಿ ಸಂತೋಷ, ನೆಮ್ಮದಿ ಅದರಲ್ಲಿತ್ತು. ಸುಖ, ಸಂತೃಪ್ತಿ, ಮನುಷ್ಯ ನಿಗೆ ಮುಖ್ಯ. ಹೇರಳ ಹಣ ಸಂಪಾದಿಸುವುದು, ಹೊರೆ ಆಸ್ತಿ ಮಾಡುವುದು, ಹಿರಿದಾದ ಅಂತಸ್ತು ಪ್ರತಿಷ್ಠೆಯಿರಲಿ ಸಿರಿತನವಿರಲಿ, ಚೆನ್ನಾಗಿ ಬಾಳಿ, ಸುಖ ಸಂತೋಷದಿಂದ ಬದುಕಬೇಕೆಂಬ ಅಸಕ್ತಿ ಇತ್ತು. ಬಡತನದ ರೇಖೆಯಿಂದ ಮೇಲಕ್ಕೆತ್ತ ಬೇಕೆಂಬ ಬಯಕೆ ಸರಕಾರಕ್ಕೆ ಬಂದಕ್ಷಣ, ಅವರಿಗೆ ಇಲ್ಲದ ಆಸೆ ಆಕಾಂಕ್ಷೆ ತೋರಿಸಿ, ಐಶ್ವರ್ಯ ಅಂತಸ್ತುಗಳ ಕನಸುಗಳನ್ನು ಅವರಿಗೆ ಮಾರಿ ತಾವು ಕನಸುಗಳ ವ್ಯಾಪಾರಿ ಗಳು ಎಂದು ಲೋಕಕ್ಕೆಲ್ಲಾ ಸಾಬೀತು ಪಡಿಸಿದರು. ಇದರಿಂದ ಬಡವರು ಇನ್ನಷ್ಟು ಬಡವರಾಗಿ ಅವರಲ್ಲಿದ್ದ ಆತ್ಮ ತೃಪ್ತಿ, ಸಂತೋಷ, ನೆಮ್ಮದಿ ಹಾಳುಮಾಡಿ ಕುಲಗೆಡಿಸಿ ದರು. ಅವರ ಜೀವನ ಆತಂಕ, ಆಕ್ರೋಶ, ಅನಿಶ್ಚಿತೆಗಳಿಂದ ತುಂಬಿ ತುಳುಕುವಂತೆ ಮಾಡುವುದರಲ್ಲಿ ಸಫಲರಾದರು. ಅವರ ನೈತಿಕ ಬಲವನ್ನು ಹೀನಗೊಳಿಸಿದರು. ಸಿರಿವಂತರು ಮತ್ತಷ್ಟು ಸಿರಿವಂತರಾಗಿ ಕಂಗೊಳಿಸಿದರು."

ದಿಲ್ಲೀ ಆಂಧೀ ತರಹ ಜೋರಾಗಿ ಒಂದೇ ಸಮನೆ ಮಾತನಾಡಿದ್ದರಿಂದಲೋ ಏನೋ, ಏದುಸಿರು ಬಿಟ್ಟು "ಸ್ವಲ್ಪ ನೀರು ಕೊಡುತ್ತೀಯ?" ಎಂದು ಕೇಳಿದ ಅಗ್ರವಾಲ್.

ಪಕ್ಕದಲ್ಲೇ ಇರಿಸಿದ್ದ ಕರೀ ಮಣ್ಣಿನ ಹೂಜಿಯಿಂದ ಲೋಟಕ್ಕೆ ನೀರು ಬಗ್ಗಿಸಿ, ಅವನಿಗೆ ನೀಡಿದ ನರಪೇತಲ.

ಆಗಲೇ ನಾನು ಬಂದು ತುಂಬಾ ಹೊತ್ತಾಗಿತ್ತು. ಬಂದ ಕೆಲಸವಾದ ಮೇಲೆ ಇವರ ಸಂಭಾಷಣೆ ಆಲೈಸುತ್ತಾ ನನಗೆ ಹೊತ್ತು ಹೋಗಿದ್ದು ಅರಿಯಲಿಲ್ಲ. ಮೇಲೆಕ್ಕೆದ್ದು ಹೊರಡಲು ಅನುವಾದೆ.

"ಕುಳಿತುಕೊಳ್ಳಿ. ಅಗ್ರವಾಲ್ ನಮ್ಮ ಕಚೇರಿಗೆ ಬರುವುದೇ ಅಪರೂಪ.

ನೀವಂತೂ ಬರುವುದೇ ಇಲ್ಲ. ಕುಳಿತು ಹರಟೆ ಹೊಡೆಯೋಣ. ನಾಳೆ ಹೇಗಿದ್ದರೂ ಭಾನುವಾರ. ಕೋರ್ಟ್ ರಜೆ. ಸೋಮವಾರದ ಕೋರ್ಟ್ ಕೆಲಸವನ್ನು ನಾಳೆ ಮಾಡಿದರಾಯಿತು."

ನರಪೇತಲ ಉಪಚರಿಸಿದ. ಎದ್ದವನು ಕೂತೆ. ಆದರೆ ಟೈಪಿಸ್ಟ್ ಮುದುಕ ಎದ್ದ. ಪೇಪರ್ ಜೋಡಿಸಿದ. ಕೆಲವನ್ನು ವಕೀಲನ ಮೇಜಿನ ಮೇಲೆ ಇರಿಸಿದ. ವಕೀಲ ಅವುಗಳನ್ನು ನೋಡಿ, ಓದಿ, ಹುಬ್ಬುಗಂಟಿಕ್ಕಿದ.

"ಪ್ಲೇಂಟ್‌ನಲ್ಲಿ ಇಷ್ಟು ತಪ್ಪು ಮಾಡಿದರೆ, ಎಷ್ಟು ಸಲ ಕ್ಲೈಂಟ್ಸ್‌ನ ಸಹಿ ತೆಗೆದುಕೊಳ್ಳೋದು? ಅವರು ಬೇಸರಗೊಳ್ಳುವುದಿಲ್ಲವೇ?" ಗಟ್ಟಿಯಾಗಿ ಕಿರಿಚಿದ ವಕೀಲ.

"ಸಹಿ ಮಾಡಲಿಕ್ಕೆ ಬೇಸರ ಏಕೆ? ನಾನು ಎಷ್ಟು ಸಲ ಬೇಕಾದರೂ ಸಹಿ ಮಾಡುತ್ತೇನೆ. ನನಗೆ ಬೇಸರವೇ ಇಲ್ಲ!"

ಮುದುಕ ಇದ್ದಬದ್ದ ಹಲ್ಲುಗಳನ್ನು ಪ್ರದರ್ಶಿಸಿ ನಕ್ಕ.

"ನಿಮಗೆ ಸಹಿ ಮಾಡಲಿಕ್ಕೆ ಬಂದರಲ್ಲವೇ ನಿಮ್ಮ ಸಹಿ ಕೇಳುವುದು? ಸಹಿ ಮಾಡಲಿಕ್ಕೆ ಚೆಕ್ ಬುಕ್ ಇಲ್ಲ. ಸಂಬಳಕ್ಕೆ ಸಹಿ ಮಾಡಿ ರಸೀದಿ ಕೊಡೋದಿಲ್ಲ. ಕಾಗದ ಪತ್ರಗಳಿಗೆ ಸಹಿ ಮಾಡಲಿಕ್ಕೆ ಯಾರಿಗೂ ಈ ಜನ್ಮದಲ್ಲಿ ನೀವು ಪತ್ರ ಬರೆದಿಲ್ಲ. ಆಸ್ತಿಪಾಸ್ತಿ ಕೊಂಡು, ಮಾರಿದ್ದಿಲ್ಲ, ಸ್ಟಾಂಪ್ ಪೇಪರ್‌ನಲ್ಲಿ ಸಹಿ ಮಾಡಲಿಕ್ಕೆ ಇನ್ನು ಎಲ್ಲಿ ಸಹಿ ಮಾಡಬೇಕು ನೀವು?"

ವ್ಯಂಗ್ಯ, ವಿಡಂಬನೆ, ಪರಿಹಾಸ್ಯ ಎಲ್ಲವೂ ಸೇರಿಸಿದ್ದ ತನ್ನ ಮಾತುಗಳಲ್ಲಿ, ನರಪೇತಲ ನಾರಾಯಣ.

"ಎಲ್ಲಾ ಸಹಿಗಳನ್ನು ನೀವು ಮಾಡಿ, ಏನು ಕಡಿದಿದ್ದೀರಿ, ಇಷ್ಟರವರೆಗೆ?"

ವಕೀಲನ ಜೋರಿಗೆ, ತಾನೂ ಜೋರು ಮಾಡಿದ ಮುದುಕ.

"ಮನೆ ಮಾಡಿದ್ದೀರಾ? ಮಠ ಕಟ್ಟೇದ್ದೀರಾ? ದಾನ, ಧರ್ಮ ಮಾಡಿದ್ದೀರಾ? ಬರೀ ಪ್ಲೈಂಟ್‌ಗಳ ಮೇಲೆ ನಿಮ್ಮ ಸಹಿ ಇದ್ದಾಕ್ಷಣ ಕೋಡು ಬಂದಿತಾ? ಹೋಗಲಿ, ಒಂದು ಡೆತ್ ವಾರೆಂಟ್‌ಗೆ ಸಹಿ ಮಾಡಿ ಸಾಯಿಸಿದ್ದೀರಾ?"

"ಹೀಗೇ ಮಾತನಾಡುತ್ತಿದ್ದರೆ, ನಿಮ್ಮ ಡೆತ್ ವಾರೆಂಟ್‌ಗೆ ಸಹಿ ಹಾಕಿ ಬಿಡುತ್ತೇನೆ."

"ಹಾಗೇ ಮಾಡಿ. ಆದರೆ ಈ ದಿನ ಬೇಡ. ನಾಳೆ ಮಾಡಿ" ಎಂದು ಹೇಳಿ, ಮುದುಕ, ಕತ್ತು ಬಗ್ಗಿಸಿ, ಕೈಯಲ್ಲಿದ್ದ ಒಂದು ಚೀಲವನ್ನು ಹಿಡಿದು, ನಿಧಾನವಾಗಿ ಮೆಟ್ಟಿಲನ್ನು ಇಳಿದು ಹೊರಟುಹೋದ.

"ಇವನು ಸತ್ತರೆ, ನನಗೆ ಬೇರೆ ಟೈಪಿಸ್ಟ್ ಸಿಗುವುದು ಕಷ್ಟ" ಎಂದ ವಕೀಲ, ಮುದುಕ ಹೋದ ಕೂಡಲೆ.

"ಏಕೆ ಸಿಗುವುದಿಲ್ಲ? ಒಂದು ಎಳೇ ಹುಡುಗಿಯನ್ನು ನೇಮಿಸಿಕೋ. ಬಡ ಹುಡುಗಿಯಾದರೆ, ಒಬ್ಬಳನ್ನು ಉದ್ಧಾರ ಮಾಡಿದಂತಾಗುತ್ತದೆಯಲ್ಲವೇ?"

ಮಾತಿನಲ್ಲಿ ಕುಹಕವಿದ್ದಂತೆ ತೋರಲಿಲ್ಲ.

"ನನ್ನ ಆಕಾರ, ವ್ಯವಹಾರ, ಆಹಾರ ಕಂಡ ಕೂಡಲೆ ಒಂದೇ ದಿನಕ್ಕೆ ಹೆದರಿ ಪರಾರಿಯಾಗುತ್ತಾರೆ. ಇದು ನನ್ನ ಅನುಭವದ ಮಾತು."

ಬಹಳ ಗಂಭೀರವಾಗಿ ಉತ್ತರಿಸಿದ ವಕೀಲ. ಅವನ ಮಾತುಗಳಲ್ಲಿ ಸತ್ಯಾಂಶ ವಿರಬಹುದು ಎಂದು ತೋರಿತು. ಅವನ ಕುಳ್ಳು ಆಕಾರ, ಬಕ್ಕತಲೆ, ಸಣ್ಣ ಮೀಸೆ, ಸಣಕಲ ಮೈ, ಯಾರಿಗಾದರೂ ಅಸಹ್ಯ ತರುವಂತಿತ್ತು. ಹೆಂಡತಿಯಾಗಲು ಇಷ್ಟಪಡ ದಿದ್ದರೂ, ಟೈಪಿಸ್ಟ್ ಆಗಲು ಕಷ್ಟವೇ? ಸಂಬಳ ನೀಡಿದರೆ ಕೆಲಸಕ್ಕೆ ಬರಲು ಹೆದರುವರೆ?

"ಕೈ ತುಂಬಾ ಸಂಬಳ ಕೊಟ್ಟರೆ, ಯಾರಾದರೂ ಸಿಗಬಹುದು" ದೂರುವ ಧ್ವನಿಯಲ್ಲಿ ನುಡಿದ ಅಗ್ರವಾಲ್.

"ಕೈ ತುಂಬಾ ಸಂಬಳ ಕೊಡಲಿಕ್ಕೆ ನಾನೇನು ಜೇಬು ತುಂಬಾ ಸಂಪಾದಿಸುವ ಸುಪ್ರೀಮ್ ಕೋರ್ಟ್ ಲಾಯರ್ ಏನು?"

ರೇಗಿದ ವಕೀಲ.

"ಎಷ್ಟು ಸಂಬಳ ಸಿಕ್ಕಿದರೇನು? ಎಷ್ಟು ಹಣ ಸಂಪಾದಿಸದರೇನು? ಸಂಪತ್ತು, ಆಸ್ತಿ, ವರಮಾನಗಳನ್ನು ಒಳ್ಳೆಯದಕ್ಕೆ ಉಪಯೋಗಿಸಬೇಕೆ ಹೊರತು ಅವನ್ನು ಪೂಜಿಸಬೇಕಾಗಿಲ್ಲ."

ಅಗ್ರವಾಲ್‌ನ ಮಾತುಗಳು ಮತ್ತೆಲ್ಲಿಗೋ ತಿರುಗಿದವು.

"ಅದು ಎಲ್ಲರಿಗೂ ತಿಳಿದಿರುವ ವಿಷಯ. ಈಗ ಯಾಕೆ ಆ ಮಾತು?"

"ಯಾಕೆ ಈ ಮಾತು ಅಂದರೆ, ಆಗಲೆ ಹೇಳಿದ ಹಾಗೆ, ಸಹಕಾರ ತನ್ನ ಕೈಗೆ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಮತ್ತು ಆರ್ಥಿಕ ಕ್ಷೇತ್ರಗಳನ್ನು ತನ್ನ ಹತೋಟಿ ಯಲ್ಲಿಟ್ಟುಕೊಂಡು, ಒಂದು ತರಹದ ಅಧಿಕಾರೀ ಶಾಹೀ ಜಮೀನ್‌ದಾರರಾಗಿ ವರ್ತಿಸತೊಡಗಿದರು. ತಮ್ಮ ಅಧಿಕಾರವನ್ನು ಚಲಾಯಿಸಲು, ಕೈಗಾರಿಕೋದ್ಯಮಿ ಗಳು, ಸರಕಾರೀ ಅಧಿಕಾರಿಗಳು ತಮ್ಮ ಕೈಗೊಂಬೆಯಾಗಿ ಉಪಯೋಗಿಸಿದರು. ಇದರ ಜೊತೆ ತಮ್ಮ ಸ್ನೇಹಿತರು, ಆಪ್ತರು, ಸಹದ್ಯೋಗಿಗಳನ್ನು ನ್ಯಾಯಾಲಯಗಳಿಗೆ ನೇಮಕ ಮಾಡಿ, ತಮ್ಮ ಹಿತಾಸಕ್ತಿಗಳನ್ನು ಭದ್ರ ಮಾಡಿಕೊಂಡರು."

"ನೀವು ಪ್ರಸ್ತುತ ಸರಕಾರ: ಪಾರ್ಟಿ ಜನರನ್ನು ಟೀಕಿಸುತ್ತಾ ಇದ್ದೀರ. ನಿಮ್ಮ ಪ್ರಕಾರ, ಪರಿಸ್ಥಿತಿ ಸುಧಾರಿಸಲು ಏನು ಮಾಡಬೇಕು ಅಥವಾ ಏನು ಆಗಬೇಕು?"

ತಡೆಯಲಾಗದೆ ಮಧ್ಯ ಬಾಯಿ ಹಾಕಿ ಕೇಳಿದೆ.

"ಏನು ಮಾಡಬೇಕೆ?....... ನೋಡಿ, ದೇಶದ ಲಕ್ಷಾಂತರ ಹಳ್ಳಿಗಳನ್ನು ಉದ್ಧಾರ ಮಾಡಬೇಕು. ಹಳ್ಳಿಗಳಲ್ಲಿ ಉದ್ಯೋಗವಕಾಶ ಮಾಡಕೊಳ್ಳಬೇಕು. ಅವರಿಗೆ ಕುಡಿಯುವ ನೀರು, ಮನೆ ಮತ್ತು ಆಹಾರ ಒದಗಿಸಬೇಕು. ಇದಕ್ಕೂ ಮೊದಲು ಜನಸಂಖ್ಯೆಯನ್ನು ತಡೆಯಲು ಎಲ್ಲಾ ಪ್ರಯತ್ನ ಮಾಡಬೇಕು."

"ಇದರಲ್ಲಿ ಹೊಸದೇನು ಇಲ್ಲ. ಎಲ್ಲಾ ರಾಜಕೀಯ ಪಕ್ಷಗಳು, ಅರ್ಥ ಶಾಸ್ತ್ರಜ್ಞರು, ಬುದ್ಧಿಜೀವಿಗಳು ಬೆಳಗಿನಿಂದ ರಾತ್ರಿಯವರೆಗೂ, ವರ್ಷಗಳಿಂದ ಬಡ ಕೊಳ್ಳುತ್ತಾ ಇದ್ದಾರೆ. ಆದರೆ ಈ ಪ್ರಯತ್ನವನ್ನು ಕಾರ್ಯಗತ ಮಾಡಲಿಕ್ಕೆ ಮಾತ್ರ, ಕೋಟ್ಯಾಂತರ ರೂಪಾಯಿ ಹಣ ಬೇಕು. ಹಣ ಎಲ್ಲಿದೆ? ಕರ ಜಾಸ್ತಿ ಹಾಕಿದರೆ, ಜನ ಬೊಬ್ಬೆಡುತ್ತಾರೆ. ಕರ ಹಾಕದಿದ್ದರೆ, ಹಣ ದೊರಕುವುದಿಲ್ಲ."

ವಕೀಲ ಬಕ್ಕತಲೆ ಮೇಲೆ ಕೈಯಾಡಿಸುತ್ತಾ ಹೇಳಿದ.

"ಹಣ ದೊರಕುವುದು, ದುಡಿಯುವುದರಿಂದ. ಇದು ಸಿಂಪಲ್ ಎಕನಾಮಿಕ್ಸ್!' Labour generates production. Production generates Capital and consumption.' ಜನರಿಗೆ ಕೆಲಸ ಕೊಡುವುದರ ಮೂಲಕ ಪ್ರಗತಿ ಸಾಧಿಸಬಹುದು. ದೊಡ್ಡ ದೊಡ್ಡ ಕೈಗಾರಿಕೆಗಳನ್ನು ದೊಡ್ಡ ದೊಡ್ಡ ನಗರಗಳಲ್ಲಿ ಸ್ಥಾಪಿಸಿ, ಹಳ್ಳಿಗಳಿಂದ ಜನರನ್ನು ಅಲ್ಲಿಗೆ ವಲಸೆ ಹೋಗುವಂತೆ ಮಾಡಿ, ಅಲ್ಲಿ ಕೊಳಚೆ ಪ್ರದೇಶ ಹೆಚ್ಚುವಂತೆ ಮಾಡಿದರು. ಇದರ ಬದಲು, ಹಳ್ಳಿಗಳಲ್ಲಿ, ಸಣ್ಣ ಸಣ್ಣ ಕೈಗಾರಿಕಾ ಘಟಕಗಳನ್ನು ಸ್ಥಾಪಿಸಿ, ಜನರಿಗೆ ಉದ್ಯೋಗವಕಾಶ ನೀಡಿದ್ದರೆ, ವಲಸೆ ಹೋಗುವುದು ತಪ್ಪುತ್ತಿತ್ತು ಮತ್ತು ಕೊಳಚೆ ಪ್ರದೇಶ ಉಂಟಾಗುವುದು ತಪ್ಪುತ್ತಿತ್ತು. ಮುಂಬಯಿಯ ಧಾರವೀ ಅಂತಹ ಬೃಹತ್ ಕೊಳಚೆ ನಗರ ಉದ್ಭವವಾಗುವುದು ತಪ್ಪುತ್ತಿತ್ತು."

"ನೀನು ಹೇಳೋ ಉಪಾಯಗಳೆಲ್ಲಾ ಹಳಸಿ ಹೋಗಿ ನಾರುತ್ತಿರುವ ಉಪಾಯ ಗಳು. ಹೊಸದೇನಾದರೂ ಇದ್ದರೆ ಹೇಳಪ್ಪಾ ಅಂದರೆ, ನೀನೂ ಕೂಡ, ಆರಾಮ ಕುರ್ಚಿಯಲ್ಲಿ ಕುಳಿತು ಭಾಷಣ ಬಿಗಿಯುವ ರಾಜಕಾರಣಿ ಮತ್ತು ಅರ್ಥ ಶಾಸ್ತ್ರಜ್ಞರ ಹಾಗೆ ಭಾಷಣ ಬಿಗಿಯುತ್ತಾ ಇದ್ದೀಯಾ."

ನರಪೇತಲ ನಾರಾಯಣ ಸಾಸವೆ ಕಾಳು ವಗ್ಗರಣೆ ಹಾಕಿ ಚಟಪಟಿಸಿದ್ದ.

ವಕೀಲನನ್ನು ಕೆಟ್ಟ ದೃಷ್ಟಿಯಿಂದ ನೋಡಿದ ಅಗ್ರವಾಲ್. ಅವನ ದೃಷ್ಟಿಗೆ ಬೆದರಿದಂತೆ ತೋರಲಿಲ್ಲ ನರಪೇತಲ. ಸಹದ್ಯೋಗಿ ವಕೀಲ ಎದುರು ಪಾರ್ಟಿ ವಕೀಲ

ಕಕ್ಷಿದಾರರ ನ್ಯಾಯಾಧೀಶರ ಇಂತಹ ಕೆಟ್ಟ ದೃಷ್ಟಿಯನ್ನು ಸತತವಾಗಿ ಎದುರಿಸಿ ಅಭ್ಯಾಸವಾಗಿದ್ದರಿಂದ ಅವನಿಗೆ ಭಯವಾದರೂ ಏಕೆ ಆಗಬೇಕು?

"ನೀವಾದರೂ ಹೇಳಿ ಮೇನೇಜರ್ ಸಾಹೇಬರೆ! ನಿಮ್ಮ ಸ್ವಂತ ಅನುಭವದಲ್ಲಿ, ಬಡ ಜನರ ಏಳಿಗೆಗೆ ಸರಕಾರದ ನೀತಿ, ರೀತಿ ಎಷ್ಟರಮಟ್ಟಿಗೆ ಸಫಲವಾಗಿವೆ. ನಮ್ಮನ್ನು 'Armchair economist' ಎಂದು ಕರೆದು ಹೀಯಾಳಿಸಿದ, ಈ ಲಾಯರಿ: ಈಗ ನೀವು ಹೇಳಿ, ನಿಮ್ಮ ಸ್ವಂತ ಅನುಭವ?"

ಹಠಾತ್ತನೆ ನನ್ನ ಮೇಲೆ ಧಾಳಿ ಮಾಡಿದ ಅಗ್ರವಾಲ್‌ನನ್ನು ಹೇಗೆ ಎದುರಿಸುವುದು? ಇವನ ಉದ್ದೇಶವಾದರೂ ಏನು? ಈ ವಿಷಯದಲ್ಲಿ ಏಕೆ ಇಷ್ಟು ಉತ್ಸಕತೆ ತೋರಿದ್ದಾನೆ? ನಾನು ಇಲ್ಲಿಗೆ ಬಂದು ಇವರ ಕೈಗೆ ಯಾಕೆ ಸಿಕ್ಕಿಹಾಕಿಕೊಂಡೆ?

"ನಿಮ್ಮ ಅನಿಸಿಕೆ, ಅಭಿಪ್ರಾಯ, ಅನುಭವ ತಿಳಿಸುವುದಕ್ಕೆ ಭಯವೇನು? ಯಾಕೆ ಸುಮ್ಮನಾದಿರಿ?"

ಅವನ ಒತ್ತಾಯ ಕಂಡು ಮನಸ್ಸು ಹೊಯ್ದಾಡಿತು.

"ಒಂದು ಜನಾಂಗದ ಉದ್ಧಾರವಾಗಬೇಕಾದರೆ, ಅವರ ನೈತಿಕ ಮಟ್ಟ ಏರಬೇಕು. ಯಾವಾಗ ನೈತಿಕಮಟ್ಟ ಏರುತ್ತದೆಯೋ, ಬಾಕಿ ಎಲ್ಲಾ ಮಟ್ಟ ತಾನಾಗಿಯೇ ಏರುತ್ತದೆ. ನಮ್ಮಲ್ಲಿ ಒಂದು ಗಾದೆ ಇದೆ. 'ಯಥಾ ರಾಜಾ ತಥಾ ಪ್ರಜಾ'. ಬ್ಯಾಂಕ್‌ನಿಂದಾಗಲೀ, ಸರಕಾರದಿಂದಾಗಲೀ ಯಾರಿಂದಲೇ ಆಗಲಿ, ಸಾಲ ತೆಗೆದುಕೊಂಡ ಮೇಲೆ ಅದನ್ನು ಮರುಪಾವತಿ ಮಾಡಬೇಕೆಂಬ ನೈತಿಕ ಹೊಣೆ ಜನರಲ್ಲಿದ್ದರೆ, ಅವರು ಉದ್ಧಾರವಾಗುವುದರಲ್ಲಿ ಸಂಶಯವೇ ಇಲ್ಲ. 'ಸಾಲ ತೀರಿಸ ಬೇಕಾಗಿಲ್ಲ' ಎಂದು ಸರಕಾರವೇ ಹೇಳಿದರೆ, ಜನರ ನೈತಿಕ ಮಟ್ಟ ಕುಸಿಯಲು ಎಡೆ ಕೊಟ್ಟಂತಾಯಿತಲ್ಲ. ಬ್ಯಾಂಕ್‌ನಿಂದ ಸಾಲ ಪಡೆಯುವುದೇ ಬ್ಯಾಂಕ್‌ಗೆ ಮೋಸ ಮಾಡಲಿಕ್ಕೆ ಎಂದು ಹೇಳಿಕೊಟ್ಟಮೇಲೆ ಯಾರು ಉದ್ಧಾರವಾಗುತ್ತಾರೆ? ಯಾವ ಬ್ಯಾಂಕ್ ಉದ್ಧಾರವಾಗುತ್ತದೆ?"

ನನ್ನ ಉದ್ದವಾದ ಅಭಿಪ್ರಾಯ ಕೇಳಿ ಸ್ವಲ್ಪ ಹೊತ್ತು ಇಬ್ಬರೂ ಒಬ್ಬರ ಮುಖ ಒಬ್ಬರು ನೋಡಿಕೊಂಡರು.

"ನಾನು ನಿಮ್ಮ ಪ್ರತ್ಯಕ್ಷ ಅನುಭವ ಕೇಳಿದೆ. ನೈತಿಕ ಹೊಣೆಯ ಬಗ್ಗೆ ಪ್ರವಚನ ಅಲ್ಲ. ಇಂತಹ ಪ್ರವಚನಗಳು ಯಾವ ಆಶ್ರಮಕ್ಕೆ ಹೋದರೂ ಸಿಗುತ್ತದೆ. ನೀವೇನು ಹೇಳುವುದು?" ಅಗ್ರವಾಲ್ ಸಿಟ್ಟಾಗಿದ್ದ.

ನೈತಿಕ ಹೊಣೆಯ ಬಗ್ಗೆ ಮಾತಾಡತೊಡಗಿದರೆ, ಯಾರಿಗಾದರೂ ಸಿಟ್ಟು ಬರುವುದು ಸ್ವಾಭಾವಿಕ. ಮೂಲಭೂತ ಪ್ರಶ್ನೆಗೆ ಉತ್ತರ ಕೊಡುವುದು ಕಷ್ಟವಲ್ಲವೇ?

"ನನ್ನ ಅನುಭವದಲ್ಲಿ, ಬಡವರ ಉದ್ಧಾರಕ್ಕೆ ಸಹಾಯ ಹಣದ ಮುಖಾಂತರ ನೀಡಿದರೆ, ಅದು ಅವರಿಗೆ ಉಪಯೋಗವಾಗುವುದಿಲ್ಲ. ಹಳ್ಳಿಯಲ್ಲಿ ನನಗೆ ಪ್ರತ್ಯಕ್ಷ ಅನುಭವದ ಪ್ರಕಾರ, ಯಾವುದೇ ವ್ಯಕ್ತಿಗೆ, ಮುಖ್ಯವಾಗಿ ಬಡವ್ಯಕ್ತಿಗೆ ಅವನು ತನ್ನ ಕಾಲ ಮೇಲೆ ತಾನು ನಿಲ್ಲುವಂತೆ ಮಾಡಬಹುದಾದ, ವಸ್ತು, ಸಾಮಾನು, ಇತರ ಸಲಕರಣೆಗಳನ್ನು, ಸರಕಾರವೇ ತಯಾರಿಸಿ, ಅಥವಾ ಕೊಂಡು, ಅವನಿಗೆ ಸಾಲದ ರೂಪವಾಗಿ ನೀಡಿದರೆ, ಸಮಸ್ಯೆ ಬಹುಮಟ್ಟಿಗೆ ಸುಧಾರಿಸಬಹುದು. ಉದಾಹರಣೆಗೆ, ಒಂದು ಹಳ್ಳಿಯಲ್ಲಿ ಒಂದು ಹೆಣ್ಣು ಮಗಳಿಗೆ, ನೇಯ್ಗೆ ಯಂತ್ರ ಬೇಕಾಗಿತ್ತು. ನಾನು ನೇರವಾಗಿ ನೇಯ್ಗೆ ಯಂತ್ರ ಖರೀದಿಸಿ, ಅವಳಿಗೆ ಕೊಡಿಸಿದೆ. ಅದೇ ರೀತಿ, ಹಸು, ಕುರಿ, ಕೋಳಿ........"

"ಅದು ನಮಗೆ ಗೊತ್ತಿದೆಯಪ್ಪಾ! ಇದರಲ್ಲಿ ಪುನಃ ಹೊಸದೇನೂ ಇಲ್ಲ. ಹಸು, ಕುರಿ, ಕೋಳಿ ಖರೀದಿಸಿದರೆ, ಕೊಟ್ಟರೆ, ಅವರು ಅವನ್ನು ಮಾರಿ, ಮಜಾ ಮಾಡಿ ಬ್ಯಾಂಕ್‌ಗೆ ಮೋಸ ಮಾಡುತ್ತಾರೆ ಅಷ್ಟೇ!"

ಅಗ್ರವಾಲ್ ವ್ಯಂಗ್ಯವಾಗಿ ನುಡಿದ.

"ನಿಜ. ನೀವು ಹೇಳುವುದು ನಿಜ. ಅದಕ್ಕೇ ನಾನು ಮೊದಲೇ ಹೇಳಿದ್ದು. ನಾವು ಜನರ ಆರ್ಥಿಕ ಮಟ್ಟ ಏರಿಸುವುದರ ಜೊತೆಗೆ ನೈತಿಕ ಮಟ್ಟ ಏರಿಸಬೇಕು. ಇನ್ನೊಂದು ವಿಷಯ. ಹಸು, ಕುರಿ, ಕೋಳಿ ಯಾವುದೇ ಸಾಮಾನು ಸರಂಜಾಮು ಸಾಲವಾಗಿ ನೀಡಿದರೂ, ಅವನ್ನು ಅವರು ಮಾರಿಕೊಂಡರೂ, ಅವುಗಳು ಹಾಳಾಗುವುದಿಲ್ಲ. ಅಂದರೆ, ಅವುಗಳ ಉತ್ಪಾದನೆ ಕಡಿಮೆಯಾಗುವುದಿಲ್ಲ. ಬೇರೆ ಯಾರೋ ಒಬ್ಬ ಅವನ್ನು ಕೊಂಡಿರುತ್ತಾನೆ, ಸಾಕುತ್ತಾನೆ, ಲಾಭ ಮಾಡುತ್ತಾನೆ. ನಾವು ಹಣ ಸಾಲವಾಗಿ ನೀಡಿದರೆ, ಅವು ನಿರರ್ಥಕವಾಗುತ್ತದೆ. ಅದರಿಂದ ಉತ್ಪಾದನೆ ಹೆಚ್ಚುವುದಿಲ್ಲ. ಆದರೆ, ಯಾವುದೇ ಉತ್ಪಾದನಾ ಪದಾರ್ಥಗಳು ಸಾಲರೂಪವಾಗಿ ಹಂಚಿದರೆ, ಅವು ವ್ಯರ್ಥವಾಗುವುದಿಲ್ಲ."

"ನೀವು ಹೇಳೋದು, ಪುಕ್ಕಟೆ ಪದಾರ್ಥಗಳ ಬಟವಾಡೆ ಮಾಡುವುದು ಎಂದು ಅಲ್ಲವೇ?"

"ಅಲ್ಲ. ಬ್ಯಾಂಕ್‌ನವರು ಸಾಮಾನ್ಯವಾಗಿ ಮಾರ್ಜಿನ್ ಹಣ ತೆಗೆದುಕೊಂಡಿರುತ್ತಾರೆ. ಆ ಹಣ ಉಳಿಸಿಕೊಳ್ಳಲು ಸಾಲಗಾರ ಕಷ್ಟಪಡುತ್ತಾನೆ."

"ಹೋಗಲಿ ನಿಮ್ಮ ಅಭಿಪ್ರಾಯದಲ್ಲಿ, ಸಾಲಗಾರರು ಸಾಲ ವಾಪಸ್ಸು ಕೊಡುವುದರಲ್ಲಿ ಎಷ್ಟರಮಟ್ಟಿಗೆ ಹೆಣಗಿದ್ದಾರೆ!"

"ಇದು ಅವರವರ ನೈತಿಕ, ಮನೋಧರ್ಮದ ಮೇಲೆ ಅವಲಂಬಿಸಿದೆ. ನಾನು

ಆಗಲೇ ಹೇಳಿದ ಹಾಗೆ, ನೈತಿಕಬಲ ಇರುವವನು ಸಾಲ ಚೆನ್ನಾಗಿ ತನ್ನ ಒಳಿತಿಗಾಗಿ ಉಪಯೋಗಕ್ಕೆ ಬಳಸಿ, ಉದ್ಧಾರಗೊಂಡು, ಮರುಪಾವತಿ ಮಾಡಲು ಪ್ರಯತ್ನಿಸುತ್ತಾನೆ."

"ಒಟ್ಟಿನಲ್ಲಿ ನೈತಿಕ ಮೌಲ್ಯಗಳಿಗೆ ಹೊಡೆದಾಡಬೇಕು ಅಂತ ಹೇಳುತ್ತೀರ?" ಅಗ್ರವಾಲ್ ಕೃತಕ ನಮ್ರತೆಯಿಂದ ಕೇಳಿದ.

"ಹೊಡೆದಾಡಬೇಕಾಗಿಲ್ಲ, ಶ್ರಮಿಸಬೇಕು" ಎಂದೆ.

"ಯಾರು ಹೊಡೆದಾಡಬೇಕು? ರಾಜಕೀಯ ವ್ಯಕ್ತಿಗಳೆ? ಅವರನ್ನು ನಂಬುವುದೇ ಇಲ್ಲ ಜನರು. ಅವರನ್ನು ಕಂಡರೆ ಸಾಕು, ಜನರಿಗೆ ವಾಕರಿಕೆ ಬರುತ್ತದೆ. ನಮ್ಮ ಜನ ಎಷ್ಟು ಸಾಧುಗಳು, ಶಾಂತಿಪ್ರಿಯರು ಅಂದರೆ, ರಾಜಕೀಯ ವ್ಯಕ್ತಿಗಳು ಎಷ್ಟೇ ಕಪಟಿಯಾಗಲಿ, ಕ್ರೂರಿಯಾಗಲಿ, ಲಂಚಕೋರನಾಗಲಿ, ಕುಡುಕನಾಗಲಿ, ವ್ಯಭಿಚಾರಿ ಯಾಗಿರಲಿ, ದಗಾಕೋರನಾಗಲಿ, ಲಂಪಟನಾಗಲಿ, ಡಕಾಯಿತನಾಗಲಿ, ಕೊಲೆಗಾರ ನಾಗಲಿ, ಅವರನ್ನು ತಿರಸ್ಕಾರ, ತಾತ್ಸಾರದಿಂದ. ನೋಡಿ ಹತಾಶರಾಗಿ, ತಾಳಿ ಕೊಳ್ಳುತ್ತಾರೆ. ಹೀಗಿರುವಾಗ ಜನರ ನೈತಿಕ ಮಟ್ಟ ಏರಿಸುವುದಕ್ಕೆ ಪ್ರಯತ್ನಪಡು ವುದಿಲ್ಲ. ಸರಕಾರಿ ಅಧಿಕಾರಿಗಳ ಬಗ್ಗೆ ಏನು ಹೇಳುವುದು? ಅವರಷ್ಟು ಭ್ರಷ್ಟ ಜನ, ಪ್ರಪಂಚದಲ್ಲೇ ಸಿಗುವುದಿಲ್ಲ. ಇನ್ನು ಸಾಧುಗಳು, ಸಂತರು ಮತ್ತು ಧರ್ಮ ಪ್ರಚಾರಕರು ಅವರೆಲ್ಲಾ ಕಪಟನಾಟಕಕಾರರು. ಅವರಷ್ಟು ಆಷಾಢಭೂತಿಗಳು ಬೇರೆಲ್ಲೂ ಸಿಗಲಿಕ್ಕಿಲ್ಲ....."

"ಕೊನೆಯಾದಾಗಿ ನಮ್ಮ ಅಗ್ರವಾಲ್. ಇವನು ಈ ಮೂವರ ಪ್ರತೀಕ! ಏನು ಹೇಳುತ್ತೀಯಪ್ಪಾ?"

ನರಪೇತಲ ನಾರಾಯಣ, ಮಂಗಳ ಹಾಡಿದ.

ನಾನು ಎದ್ದು ಮನೆ ಕಡೆ ಕಾಲು ಬೆಳೆಸಿದೆ.

ದಾರಿಯುದ್ದಕ್ಕೂ, ಅಗ್ರವಾಲ್‌ನ ಜೊತೆ ಸಂಭಾಷಣೆ ನಡೆಸಿದ ಬಗ್ಗೆ ಚಿಂತಿ ಸುತ್ತಾ ನಡೆದೆ. ನಮ್ಮ ಜನ ಇಷ್ಟು ಅಧೋಗತಿಗಿಳಿದಿದ್ದಾರೆಯೆ? ನಮ್ಮ ರಾಜಕೀಯ, ಸಾಮಾಜಿಕ, ಆರ್ಥಿಕ, ನೈತಿಕ ಮೌಲ್ಯಗಳು ಬಹಳಷ್ಟು ಕುಂದಿದೆಯೆ? ಅದಕ್ಕೆ ಕಾರಣರ್‍ಯಾರು? ಕಾರಣಗಳೇನು? ಅಪರಾಧ, ದಂಗೆ, ಸಂಪು, ಲಾಕ್‌ಔಟ್ ಹತ್ತಿಕ್ಕಲು ಅಸಾಧ್ಯವೇ? ಗಗನಕ್ಕೇರುತ್ತಿರುವ ಬೆಲೆಗಳು; ಅತಿಯಾದ ಭೋಗಾಸಕ್ತತೆ; ದಿಕ್ಕಿಲ್ಲದ, ಅಂಕೆಯಿಲ್ಲದ ಸಿಕ್ಕ ಸಿಕ್ಕಿದವರನ್ನು ಕಡಿಯುತ್ತಿರುವ ಲಂಚವೆಂಬ ಹುಚ್ಚು ಹಿಡಿದ ನಾಯಿ; ಅಂಕೆಯಿಲ್ಲದ ಸೂತ್ರವಿಲ್ಲದ ಗಾಳೀಪಟದ ಹಾಗೆ, ಹಾರಾಡುತ್ತಾ, ಯಾವಾಗ ಕಿತ್ತು ಕಣ್ಮರೆಯಾಗುತ್ತದೆಯೋ ಎಂಬ ಭಯ ಉಂಟುಮಾಡುವಂತಹ ಪ್ರತ್ಯೇಕತೆ,

ಪ್ರಾತಂತೆ, ಭಾಷಾದ್ವೇಷ, ಬಹು ವಿಧ ಧರ್ಮಾಂಧತೆ; ತಲೆ ಬಿಸಿಯಾಗಿಸುವ ಕುಲ, ಮತ, ಕೆಟ್ಟ ಜಾತೀ ಪದ್ಧತಿ, ಒಂದೇ ಎರಡೇ ತಲೆ ಚಿಟ್ಟು ಹಿಡಿದು ರಕ್ತ ಹೆಪ್ಪುಗಟ್ಟಿಸುವಂತಹ ಸಮಸ್ಯೆಗಳು! ಎಲ್ಲವೂ ಆತಂಕಕಾರಿಗಳೇ!

ಇವಕ್ಕೆ ಪರಿಹಾರವಿದೆಯೆ?

ಭುಜಕ್ಕೆ ಒಬ್ಬ ಡಿಕ್ಕಿ ಹೊಡೆದಾಗಲೇ ನನಗೆ ಅರಿವಾಗಿದ್ದು, ಯೋಚಿಸಿದ್ದು ಜಾಸ್ತಿಯಾಗಿ, ರಸ್ತೆ ಮರೆತಿದ್ದು!

"ಕಣ್ಣು ಬಿಟ್ಟು ಸರಿಯಾಗಿ ನಡೆದುಕೊಂಡು ಹೋಗ್ರಿ. ಕನಸು ಕಾಣುತ್ತಾ ನಡಿಬೇಡಿ."

ಡಿಕ್ಕಿ ಹೊಡೆದ ಮನುಷ್ಯ, ಜಗಳ ಕಾಯಲು ನಿಂತ. ಭುಜಬಲ ಹೊಂದಿದ್ದ ಆಜಾನುಬಾಹು ಮಾನವ. ಡಿಕ್ಕಿ ಬಲವಾಗಿ ಹೊಡೆದು ನನ್ನ ಭುಜವನ್ನು ಬಲವಾಗಿ ಅಲ್ಲಾಡಿಸಿ, ನೋವು ಮಾಡಿದ್ದಲ್ಲದೆ, ಮಾತುಗಳಿಂದ ನನ್ನ ಮನಸ್ಸನ್ನು ಘಾಸಿ ಮಾಡಲು ತಯಾರಾಗಿ ನಿಂತಿದ್ದಾನೆ ಎಂದು ತೋರಿತು.

"ಕಣ್ಣು, ಸಾಯಂಕಾಲದ ಹೊತ್ತು ಸರಿಯಾಗಿ ಕಾಣಿಸೋದಿಲ್ಲ. ದಯವಿಟ್ಟು ಕ್ಷಮಿಸಿ ಎಂದು ಹೇಳಿ ಅಲ್ಲಿಂದ ಮುಂದಡಿ ಇಟ್ಟೆ. ಅವನಿಗೆ ಕನಿಕರವಾಗಿರಬೇಕು. "ಬೇಚಾರಾ!" ಎಂದು ಕನಿಕರಿಸಿ, ಹೊರಟುಹೋದ. ಅಬ್ಬ! ಬಚಾವಾದೆ ಎಂದು ದೈವವನ್ನು ನೆನೆಯುತ್ತಾ ನಡೆದೆ. ಈ ಆಗಂತುಕ ಬೈದ ಹಾಗೆ ನಾನು ನಿಜವಾಗಲೂ ಹಗಲುಗನಸು ಕಾಣುತ್ತಾ ನಡೆಯುತ್ತಾ ಇದ್ದನೆ? ನನ್ನನ್ನು, ನಮ್ಮ ದೇಶವನ್ನು ಕಾಡುತ್ತಿರುವ ಸಮಸ್ಯೆಗಳಿಗೆ ಪರಿಹಾರ ಹುಡುಕುವ ಕನಸು ಕಾಣುತ್ತಿದ್ದೇನೆಯೆ? ಹೌದು! ನಮ್ಮ ದೇಶ ಇನ್ನು ಯಾಕೆ ಹಿಂದುಳಿದಿದೆ? ಇದರ ಬಗ್ಗೆ ಯೋಚಿಸಿದಷ್ಟು ಸಂಕಟ, ಆತಂಕ. ಯಾಕೆ ಇಷ್ಟು ಆತಂಕ? ಆತಂಕ ಆದಷ್ಟು ಆಕ್ರೋಶ, ಯಾಕೆ ಆಗುತ್ತಿಲ್ಲ? ಆಕ್ರೋಶ ಆದರೆ ಪರಿಸ್ಥಿತಿ ಸುಧಾರಿಸಬಹುದೇನೋ! ಆಕ್ರೋಶದಿಂದ ದಂಗೆ, ಸಮರ, ಕ್ರಾಂತಿಗಳು ನಡೆದು, ಜನರ ಹತ್ಯೆ ನಡೆದು ರಕ್ತದ ಕಾಲುವೆ ಹರಿದು, ಪರಿಸ್ಥಿತಿ ಸುಧಾರಿಸಬಹುದೇನೋ! ಆದರೆ ನಮ್ಮ ದೇಶದಲ್ಲಿ ಆಕ್ರೋಶ ತಾಳೋದಿಲ್ಲವಲ್ಲ ಜನರು. ಸ್ಥೈರಣೆ, ಸಹನೆ, ರಕ್ತದಲ್ಲಿ ಸೇರಿ, ಕ್ರಾಂತಿಕಾರಿಯಾಗಲಿಕ್ಕೆ ಅಸಾಧ್ಯವಾಗಿದೆಯೆ?

ಮನಸ್ಸು ಪುನಃ ಹುಚ್ಚೆದ್ದು ಕುಣಿಯತೊಡಗಿತು.

ಈ ಅಗ್ರವಾಲ್‌ನ ಅನಿಸಿಕೆಗಳು ಎಷ್ಟು ಬೇಜಾವಾಬ್ದಾರಿ ಮತ್ತು ಹತಾಶ ಮನೋಭಾವಗಳಾಗಿವೆ! ನಾವು ಯಾಕೆ ಇಷ್ಟು ಹತಾಶರಾಗಬೇಕಾಗಿ ಬಂದಿದೆ? ನಾವು ಆಶಾವಾದಿಗಳಾಗಲಿಕ್ಕೆ ಯಾವ ಸುಂಕ ಕೊಡಬೇಕು? ಹತಾಶ, ಜುಗುಪ್ಸೆ, ನಿರುತ್ಸಾಹ,

ನಿರಾಸಕ್ತಿ, ಜಡತ್ವ, ಅಸಹಾಯಕತೆ, ಅಶಿಸ್ತು ನಮ್ಮ ರಕ್ತದಲ್ಲೇ ಹರಿಯುತ್ತಿದೆಯೆ? ಕೆಟ್ಟ ಆಹಾರ, ಹವಾಗುಣ, ಶತಮಾನಗಳ ಗುಲಾಮೀ ಜೀವನ, ಅನಕ್ಷರತೆ, ಅಶಿಸ್ತು ಜನರ ಈ ಹತಾಶ, ಜಡತ್ವದ ಗುಣಗಳಿಗೆ ಕಾರಣವಾಗಿದೆಯೇ? ದಬ್ಬಾಳಿಕೆಗೆ ಸಿಡಿದೆದ್ದು, ರಕ್ತ ಹರಿಸಿ, ಹೋರಾಟ ಮಾಡುವ ಪ್ರವೃತ್ತಿ ನಮ್ಮಲ್ಲಿ ಕಾಣೆಯಾಗಿದೆಯೆ? ಇದಕ್ಕೆ ನಮ್ಮ ಧರ್ಮ, ಸಂಸ್ಕೃತಿ, ಬೆಳೆದು ಬಂದ ರೀತಿ, ನೀತಿ, ರಿವಾಜು ಕಾರಣವೇ? ಅಥವಾ ಸರಕಾರದವರು, ಅಧಿಕಾರಿಗಳು, ಧರ್ಮಪ್ರಚಾರಕರು, ಹಣವಂತರು, ಜನರಿಗೆ ಸ್ವಪ್ನಗಳನ್ನು ಮಾರಿ, ಸ್ವಪ್ನಮಂದಿರ ಕಟ್ಟಿಸಿ, ಆವರ ಸ್ವಪ್ನಗಳನ್ನು ಭಗ್ನಗೊಳಿಸುವುದರಲ್ಲಿ ಕಾರಣರಾಗಿದ್ದಾರೆಯೆ? ಪ್ರತೀ ಹಳ್ಳಿಗೆ ಒಂದು ಶಾಲೆ, ಕುಡಿಯುವ ನೀರು, ಆಸ್ಪತ್ರೆ, ಪ್ರತೀ ಸಂಸಾರಕ್ಕೊಂದು ಮನೆ, ಸಂಸಾರದ ಒಬ್ಬನಿಗಾದರೂ ಉದ್ಯೋಗ ಅವಕಾಶ ನೀಡುವುದಕ್ಕೆ ಶ್ರಮಿಸಲು ಸರಕಾರಕ್ಕೆ ಅಥವಾ ಅಧಿಕಾರಿಗಳಿಗೆ ಅಥವಾ ಔದ್ಯೋಗಪತಿಗಳಿಗೆ, ಅಥವಾ ಹಣವಂತರಿಗೆ ಸಾಧ್ಯವಾಗದೇ? ಕೋಟ್ಯಾಂತರ ರೂಪಾಯಿ ಕರವಸೂಲಿ ಮಾಡಿ, ಮೂಲಭೂತ ಮಾನವ ಬೇಡಿಕೆಗಳನ್ನು ಈಡೇರಿಸಲು ಹಣ ಸಾಕಾಗುವುದಿಲ್ಲವೇ? ನಮ್ಮ ಆರ್ಥಿಕ, ಸಾಮಾಜಿಕ, ಕೈಗಾರಿಕ, ಔದ್ಯೋಗಿಕ, ರಾಜಕೀಯ, ಧಾರ್ಮಿಕ, ಕುಟುಂಬಗಳ ವ್ಯವಸ್ಥೆಗಳಲ್ಲಿ ನ್ಯೂನತೆಗಳಿವೆಯೆ? ಈ ವ್ಯವಸ್ಥೆಗಳು ಅವ್ಯವಸ್ಥೆಗಳಾಗಿ ನಮ್ಮನ್ನು ಹಿಂಡಿ ಹಿಪ್ಪಾಗಿಸುತ್ತಿವೆಯೆ? ಸಾಮಾಜಿಕ ಸುಧಾರಣೆಗಳಲ್ಲಿ, ಶಿಕ್ಷಣ ಪದ್ಧತಿಯಲ್ಲಿ, ವಾಣಿಜ್ಯ ನೀತಿಗಳಲ್ಲಿ, ವಾಣಿಜ್ಯ ಮತ್ತು ಹಣಕಾಸಿನ ಸಂಸ್ಥೆಗಳಲ್ಲಿ, ಸ್ವಾಸ್ಥ್ಯ ವಿಭಾಗದಲ್ಲಿ ಎಲ್ಲೆಲ್ಲೂ ಬಿಕ್ಕಟ್ಟು, ಸಂದಿಗ್ಧ ಪರಿಸ್ಥಿತಿ. ಇದಕ್ಕೆ ಏನು ಕಾರಣ? ಯಾರು ಕಾರಣ? ಎಲ್ಲದಕ್ಕಿಂತಲೂ ಮಿಗಿಲಾಗಿ, ಮನುಷ್ಯನ ವ್ಯಕ್ತಿತ್ವವೇ ಬದಲಾದ ಹಾಗೆ ತೋರುತ್ತದೆಯಲ್ಲವೇ? ಈ ಎಲ್ಲಾ ಬಿಕ್ಕಟ್ಟು, ಅವ್ಯವಸ್ಥೆ, ನ್ಯೂನತೆಗಳಿಗೆ ಮನುಷ್ಯನ ವ್ಯಕ್ತಿತ್ವದ ಬದಲಾವಣೆ ಕಾರಣವೇ? ಅಥವಾ ಅವನ ವ್ಯಕ್ತಿತ್ವದ ಬದಲಾವಣೆ ಬಿಕ್ಕಟ್ಟು ಅವ್ಯವಸ್ಥೆಗಳು ಕಾರಣವಾದವೇ? ( ಮನುಷ್ಯನ ಆತ್ಮವೇ ಆತಂಕದ ಸುಳಿಯಲ್ಲಿ ಸಿಕ್ಕಿ ವಿಲವಿಲನೆ ಒದ್ದಾಡುತ್ತಿದೆಯೇ?)

ಧರ್ಮ, ನೀತಿ, ರೀತಿ, ನಿಯಮ, ನೈತಿಕ ಮೌಲ್ಯಗಳೆಲ್ಲವೂ ಮನುಷ್ಯನನ್ನು ಮೇಲಕ್ಕೆತ್ತಲು ಸಫಲವಾದವೇ? ಅಥವಾ ಮನುಷ್ಯನು ಇವನ್ನು ಪಾಲಿಸಲು ಸಾಧ್ಯವಾಗದೆ ಬಳಲಿ ಬೆಂಡಾಗಿ ಬೇರೆ ಯಾವುದೋ ಸಂಸ್ಕೃತಿ, ಧರ್ಮ, ನೀತಿ, ರೀತಿಗಳಿಗೆ ಮಾರುಹೋಗುತ್ತಿದ್ದಾನೆಯೆ? ತನ್ನ ಧರ್ಮ, ನೀತಿ, ಕೆಲಸ, ಕಾರ್ಯ, ಸಂಸಾರ, ಪತ್ನಿ, ಮಕ್ಕಳು, ನೆರೆಹೊರೆ ಎಲ್ಲವೂ ಭಾರವಾಗಿ ಹೊಸ ಪ್ರಪಂಚಕ್ಕೆ ಕಾಲಿರಿಸಲು ಹಾತೊರೆಯುತ್ತಿದ್ದಾನೆಯೆ? ಇದರಿಂದಾಗಿಯೆ ಸಾವಿರಾರು, ಹೊಸ

ಧರ್ಮಸಂಸ್ಥೆಗಳು, ಸಂಸ್ಕೃತಿ ಪೀಠಗಳು, ಯೋಗಶಾಲೆಗಳು, ವ್ಯಕ್ತಿವಿಕಾಸಕೇಂದ್ರಗಳು, ಎಲ್ಲೆಲ್ಲೂ ತಲೆ ಎತ್ತಿ ಜನರನ್ನು ಆಕರ್ಷಿಸುತ್ತಿವೆಯೆ? ಎಲ್ಲೆಡೆಯಲ್ಲೂ ಎಲ್ಲರ ಹೃದಯದಲ್ಲೂ ಅತೃಪ್ತಿಯ ಹೊಗೆ ಹೊಗೆಯಾಡುತ್ತಾ ಇರುವುದು ಪ್ರಾಯಶಃ ಮನುಷ್ಯನ ಅತೀವ ಸ್ವಾರ್ಥತೆಯಿಂದ ಎಂದು ನಂಬಬಹುದೇ? ಮನುಷ್ಯನಷ್ಟು ಸ್ವಾರ್ಥ ಬೇರೊಂದು ಪ್ರಾಣಿ ಇಲ್ಲ ಎಂಬ ಹೇಳಿಕೆ ಎಷ್ಟು ಸಮಂಜಸ! ಪ್ರಪಂಚದ ಎಲ್ಲಾ ಸುಖಗಳಿಗೂ ತಾನು ಒಡೆಯನಾಗಬೇಕೆಂಬ ಬಯಕೆ, ಮತ್ತೊಬ್ಬರ ಮೈ-ಮನಸ್ಸುಗಳ ಮೇಲೆ ತನ್ನ ಹತೋಟಿ, ಭೂಮಿ-ಕಾಣಿಗಳ ಮೇಲೆ ತನ್ನ ಪ್ರಭುತ್ವ, ರಾಜಕೀಯ ಕ್ಷೇತ್ರದಲ್ಲಿ ತನ್ನ ಆಳ್ವಿಕೆ, ಸಂಸಾರದಲ್ಲಿ ತನ್ನ ಒಡೆತನ, ಎಲ್ಲಾ ಕ್ಷೇತ್ರಗಳಲ್ಲೂ ತನ್ನ ಸ್ವಾಮಿತ್ವವನ್ನು ತೋರಿಸಬೇಕೆಂಬ ಉತ್ಕಟ ಬಯಕೆ, ಆಕಾಂಕ್ಷೆ ಪ್ರಾಯಶಃ ಅವನ ಈ ಮಾನಸಿಕ ಅತೃಪ್ತಿ, ಆತಂಕಕ್ಕೆ ಕಾರಣವಾಗಿರಬಹುದೇ? ತಾನು ಆರ್ಥಿಕವಾಗಿ, ಮಾನಸಿಕವಾಗಿ ರಾಜಕೀಯವಾಗಿ ಬಲಿಷ್ಠನಾಗಬೇಕೆಂಬ ಸ್ವಾರ್ಥತೆ ಯಿಂದಲೇ ಮಾನವ-ಮಾನವ ಘರ್ಷಣೆ, ದೇಶದೇಶಗಳ ಘರ್ಷಣೆ, ರಾಷ್ಟ್ರ-ರಾಷ್ಟ್ರಗಳ ಘರ್ಷಣೆಗಳಿಗೆ ಕಾರಣವಾದವೆ? ಈ ಬಯಕೆಯಿಂದಲೇ ಜಗತ್ತಿನಲ್ಲಿ ಹಿಟ್ಲರ್, ಮಸ್ಸಲೋನಿ, ಸ್ಟಾಲಿನ್ ಮುಂತಾದ ಸರ್ವಾಧಿಕಾರಿಗಳು ಹುಟ್ಟಿಕೊಂಡರೇ? ವಸಾಹತು ನಿರ್ಮಾಣದ ಬಯಕೆಯಿಂದ, ಪ್ರಪಂಚದ ಹಲವಾರು ರಾಷ್ಟ್ರಗಳನ್ನು ತಮ್ಮದಾಗಿ ಇರಿಸಿಕೊಂಡ ಯುರೋಪಿಯನ್ ರಾಷ್ಟ್ರಗಳು ತಮ್ಮ ಸ್ವಾರ್ಥಕ್ಕಾಗಿಯೇ ಈ ಕೆಲಸಕ್ಕಾಗಿ ಲಕ್ಷಾಂತರ ಜನರ ಕೊಲೆ, ಸುಲಿಗೆ ರಕ್ತಪಾತ ಜರುಗಿಸಲಿಲ್ಲವೇ? ಇಷ್ಟೆಲ್ಲಾ ಗೊಂದಲ, ಘರ್ಷಣೆ, ದಬ್ಬಾಳಿಕೆ, ಕಾದಾಟ, ಯುದ್ಧ, ಮಹಾಯುದ್ಧಗಳ ನಡುವೆ ಮಾನವ ಮತ್ತು ಅಭಿವೃದ್ಧಿ ಕಾರ್ಯ ಸಾಗುತ್ತಲೇ ಇವೆಯಲ್ಲವೇ? ಜಗತ್ತು, ಕೈಗಾರಿಕಾ ಕ್ರಾಂತಿಯಿಂದ, ಫ್ರಾನ್ಸ್‌ನ ಅಂತರ್ಯುದ್ಧ, ರಷಿಯಾದ ಕಮ್ಯುನಿಸ್ಟ್ ಕ್ರಾಂತಿಯವರೆಗೆ, ನಡೆದು ಬಂದ ದಾರಿ ಅಭೂತಪೂರ್ವ ವಾಗಿದೆಯಲ್ಲವೇ? ಕೈಗಾರಿಕಾ ಕ್ರಾಂತಿ ಸತತವಾಗಿ ಜರುಗುತ್ತಾ ಬಂದು, ಅಸಂಖ್ಯ ಜನರಿಗೆ ಉದ್ಯೋಗವಕಾಶ ನೀಡಿದರೂ, ನಿರುದ್ಯೋಗ ಇನ್ನೂ ಎಲ್ಲಾ ದೇಶಗಳನ್ನು ಕಾಡುತ್ತಿರುವುದು ಒಂದು ವಿಪರ್ಯಾಸವಲ್ಲವೇ? ಹಸಿರು ಕ್ರಾಂತಿ ಜಗತ್ತಿನ ಎಲ್ಲಾ ರಾಷ್ಟ್ರಗಳಲ್ಲಿ ಜರುಗಿದರೂ, ಹಸಿವೆ ಮಾತ್ರ ತಾಂಡವಾಡುತ್ತಿರುವುದು ವಿಪರ್ಯಾಸ ವಲ್ಲವೇ? ಅನಕ್ಷರತೆ ಅಳಿಸಲು ಸಾಧ್ಯವಾಗಿದ್ದರೂ, ಈಗಿನ ವಿದ್ಯಾರ್ಥಿಗಳು ತಮ್ಮ ತಂದೆ-ತಾಯಿಯರಿಗಿಂತ ಬುದ್ಧಿವಂತರಿದ್ದರೂ, ಮಾದಕಪ್ರಿಯರು, ಸಾರಾಯಿ ಪ್ರಿಯರು, ಹೊಡೆದಾಟ ಪ್ರಿಯರೂ ಆಗಿ ಪರಿವರ್ತಿಸಿರುವುದು ವಿಪರ್ಯಾಸವಲ್ಲವೇ? ಪ್ರಜಾಪ್ರಭುತ್ವ, ಎಲ್ಲರೂ ಸಮಾನರು, ಜಾತಿ ಮತ, ಧರ್ಮಗಳ ಭೇದ ಭಾವನೆ

ಸಲ್ಲ ಎಂದು ಸಾರುವ ರಾಜಕಾರಣಿಗಳು, ಅಧಿಕಾರಕ್ಕಾಗಿ ಮುಗ್ಧ ಜನರನ್ನು ನಂಬಿಸಿ, ಎಲ್ಲರು ಒಂದೇ ಎಂಬುದನ್ನು ಸಾರಿ, ಪ್ರಜಾಹತ್ಯೆ ಮಾಡಿ, ಹೊಲಸು ರಾಜಕೀಯ ಮಾಡು ವುದನ್ನು ದಿನಂಪ್ರತಿ ಕಾಣುತ್ತಿರುವುದು ವಿಪರ್ಯಾಸವಲ್ಲವೇ? ಒಂದು ಕಡೆ ವಿವಿಧ ರಾಷ್ಟ್ರಗಳು ಒಂದಾಗಿ, ಒಂದೇ ಪ್ರಭುತ್ವ ಸಾಧಿಸಲಿಕ್ಕೆ ಹೆಣಗುತ್ತಿದ್ದರೆ, ಮತ್ತೊಂದು ಕಡೆ, ರಾಷ್ಟ್ರಗಳು ರಾಷ್ಟ್ರೀಯತೆಯ ಹೆಸರಿನಲ್ಲಿ ಒಡೆದು ಹೋಗಿ, ಸ್ವಾಯತೆ, ಸಾಧಿಸಲು ಸತತ ಪ್ರಯತ್ನ ಮಾಡುತ್ತಿರುವುದು ವಿಪರ್ಯಾಸವಲ್ಲವೇ? ನಮ್ಮ ರಾಷ್ಟ್ರದಲ್ಲೇ ಪ್ರತ್ಯೇಕವಾದಿಗಳು ತಮ್ಮದೇ ಆದ ರಾಜ್ಯ ಸ್ಥಾಪನೆಗೆ ಎಲ್ಲಾ ತನು, ಮನ, ಧನ ವ್ಯಯ ಮಾಡಿ, ರಕ್ತಪಾತ, ಕೊಲೆ, ಸುಲಿಗೆ ನಡೆಸಿ ಆತಂಕವಾದಿ ಭಯೋತ್ಪಾದಕರು ಎಂಬ ಹೆಸರು ಸಂಪಾದಿಸಿರುವುದು ವಿಪರ್ಯಾಸವಲ್ಲವೇ?

ಈ ಪ್ರತಿರೋಧ, ಅಸಂಬದ್ಧ, ವಿಪರ್ಯಾಸಗಳಿಗೆ ಮದ್ದಿಲ್ಲವೇ?

"ಕಿಧರ್ ಜಾನಾ ಹೈ ಸಾಬ್?"

ರಿಕ್ಷಾಚಾಲಕ ನನ್ನ ಪಕ್ಕದಲ್ಲೇ ಗಾಡಿ ನಿಲ್ಲಿಸಿ ಕೇಳಿದ. ಒಂದು ಕ್ಷಣ ಅವನನ್ನೇ ನೋಡಿ, 'ರಾಜೇಂದ್ರನಗರ್' ಎಂದು ಹೇಳಿ ಒಳಗೆ ಕುಳಿತೆ. ನಡೆದು ಕಾಲು ನೋಯುತ್ತಿತ್ತು. ದೀರ್ಘ ಕಾಲ ಯೋಚಿಸಿ ತಲೆ ನೋಯುತ್ತಿತ್ತು.

ಮನೆ ಮುಂದೆ ರಿಕ್ಷಾದಿಂದ ಕೆಳಗೆ ಇಳಿದೊಡನೆ ಬಾಗಿಲ ಬಳಿ ಕಾಯುತ್ತಾ ನಿಂತಿದ್ದ ಸಾಗುವಿನ ಮುಖ ಕಂಡೆ.

"ಎಲ್ಲಿಗೆ ಹೋಗಿದ್ರಿ ಸಾಬ್ ಇಷ್ಟೊತ್ತು? ಶನಿವಾರವಾದರೂ ೭ ಗಂಟೆ ತನಕ ಮನೆಗೆ ಬರಬಾರದೆ? "ಒಳಕ್ಕೆ ಬನ್ನಿ" ಎಂದು ಅವನನ್ನು ಆಹ್ವಾನಿಸಿ, ಕುತುಬ್‌ಮಿನಾರ್ ಮೆಟ್ಟಿಲು ಹತ್ತಿ, ಮೂರನೆ ಮಹಡಿಯ ನನ್ನ ಬಠಸಾತಿ ಮನೆಗೆ ತಲುಪಿದೆ. ಬೀಗ ತೆಗೆದು, ಲೈಟ್, ಫ್ಯಾನ್ ಹಾಕಿ ಮಂಚದ ಮೇಲೆ ಉರಳಿದೆ.

ಸಾಗೂ ಒಳಗೆ ಬಂದು, ಕುರ್ಚಿಯ ಮೇಲೆ ಕುಳಿತು ನುಡಿದ,

"ಬ್ಯಾಂಕ್ ನಿಮ್ಮದೇ ಆಗಿದ್ದರೆ, ಮನೆಗೆ ಬರುತ್ತಲೇ ಇರುತ್ತಿರಲಿಲ್ಲ ಅಂತ ಕಾಣುತ್ತೆ. ಬ್ಯಾಂಕೇ ಮನೆ, ಬ್ಯಾಂಕೇ ಹೆಂಡತಿ, ಬ್ಯಾಂಕೇ ಮಕ್ಕಳು ಅಲ್ಲವೇ ಸಾಬ್?"

ಇವನು ಮನೆ ತನಕ ಬರಬೇಕಾದರೆ ಏನೋ ಮಸಲತ್ತು ಮಾಡಿ ಬಂದಿದ್ದಾನೆ. ಹುಶಾರಾಗಿರಬೇಕು ಎಂದು ಯೋಚಿಸಿದೆ.

"ಏನು ಇಷ್ಟು ದೂರ ಬಂದಿದ್ದು?"

"ತೆಗೆದುಕೊಳ್ಳಿ ಸಾಬ್." ಕೈಗೆ ಒಂದು ಕವರ್ ನೀಡಿದ.

ಕವರ್ ಒಳಗೆ ಒಂದು ಆಮಂತ್ರಣದ ಕಾರ್ಡ್ ಇತ್ತು. ತೆಗೆದು ಓದಿದೆ. ಸಾಗು ನಾರಾಯಣ್‌ನ ಮದುವೆಯ ಕರೆಯೋಲೆ ಅದಾಗಿತ್ತು! ಸಾಗುವಿನ

ಮರುಮದುವೆ. ಹೆಂಡತಿ ಸತ್ತು ಮೂರು ತಿಂಗಳೂ ಆಗಿರಲಿಲ್ಲ! ಆಗಲೇ ಇವನ ಮರುಮದುವೆ! ಸಾಗೂವಿನ ಹೆಂಡತಿಯ ಆತ್ಮಕ್ಕೆ ಎಂತಹ ಶಾಂತಿ ಸಿಕ್ಕಿರಬೇಕು? "ಮದುವೆಗೆ ಬರಬೇಕು ಸಾಬ್."

ನಾನು ಉತ್ತರ ಕೊಡದೆ ಸುಮ್ಮನೆ ಕಾಲು ಚಾಚಿ ಮಲಗಿದೆ. ಮನಸ್ಸು ರೋಸಿ ಹೋಗಿತ್ತು. ಈ ನೀಚನ ಕೈಗೆ ಮತ್ತೊಂದು ಬಲಿಪಶು ಸಿಕ್ಕಿದ್ದಕ್ಕೆ ಮನಸ್ಸು ರೋಧಿಸಿತು.

"ಎಷ್ಟು ವರದಕ್ಷಿಣೆ ಗಿಟ್ಟಿಸಿದಿರಿ?"

"ಹಾ! ಹಾ! ಹಲ್ಲು ಕಿಸಿದ ಸಾಗೂ.

"ಎಷ್ಟು ಲಕ್ಷ?"

"ಲಕ್ಷ ಇಲ್ಲ ಸಾಬ್. ವರದಕ್ಷಿಣೆ ಏನೂ ಇಲ್ಲ. ಹುಡುಗಿಗೆ ವಯಸ್ಸಾಗಿದೆ. ಆದರೆ ಆಸ್ತಿ ತುಂಬಾ ಇದೆ. ಮದುವೆಗೆ ಒತ್ತಾಯಿಸಿದರು ಅವರ ಮನೆಯವರು, ಒಪ್ಪಿಬಿಟ್ಟೆ."

"ಹಣಕ್ಕೋಸ್ಕರ ಮದುವೆ! ಹಣ ಎಲ್ಲಾ ಖರ್ಚು ಆದ ಮೇಲೆ, ಅವಳ ಕೊಲೆ ಮತ್ತೆ ಮರುಮದುವೆ ಅಲ್ಲವೇ?"

ಉದ್ವೇಗದಿಂದ ಕೇಳಿದೆ.

"ತಮಾಷೆ ಯಾಕೆ ಮಾಡ್ತೀರಾ ಸಾಬ್?. ಮದುವೆಗೆ ಬನ್ನಿರಿ."

ನಗುತ್ತಾ ನುಡಿದ ಸಾಗೂ. ಇವರಿಗೆ ಕೋಪ ಬರುವ ಲಕ್ಷಣ ಕಾಣಲಿಲ್ಲ.

"ಈ ಮದುವೆಯಿಂದ ಸಿಕ್ಕ ಹಣ ಖರ್ಚು ಮಾಡಿದ ಮೇಲೆ ಏನು ಮಾಡುತ್ತೀಯ? ಉತ್ತರ ಕೊಡು" ಪುನಃ ಅದೇ ಪ್ರಶ್ನೆ ಹಾಕಿದೆ.

"ನಾಳೆ ಏನು ಮಾಡುತ್ತೇನೆ ಎಂಬುದೇ ನನಗೆ ತಿಳಿದಿಲ್ಲ ಸಾಬ್. ನೆನ್ನೆ ಕಳೆದು ಹೋಯಿತು. ನಾಳೆ ಏನಾಗುತ್ತೆ ತಿಳಿದಿಲ್ಲ. ಈ ದಿನ ಇದೆ., ಇಂದು ಅನುಭವಿಸೋದು, ಮಜಾ ಮಾಡುವುದು, ಗಾದೆ ಇದೆಯಲ್ಲಾ ಸಾಬ್, "Yesterday is a cancelled cheque, tommorow a promissory note, today the only cash we have. spend it." ಕುರ್ಚಿಯಿಂದ ಎದ್ದು

'ಬರ್ತೇನೆ ಸಾಬ್, ಮದುವೆಗೆ ಬನ್ನಿರಿ' ಎಂದು ಮತ್ತೊಮ್ಮೆ ಆಹ್ವಾನಿಸಿ ಹೊರಟುಹೋದ.

ನೀಚ! 'Spend it Wisely' ಎಂದು ಹೇಳದೆ ಬರೀ 'Spend it' ಎಂದು ಹೇಳಿ ಹೋದನಲ್ಲ! 'ಖದೀಮ' ಎಂದು ಬೈದು, ಬಾಗಿಲು ಹಾಕಿ ಹಾಸಿಗೆ ಮೇಲೆ ಉರಳಿ ಯೋಚಿಸತೊಡಗಿದೆ. 'ಈ ಸಾಗೂವಿನ ನೈತಿಕ ಮಟ್ಟ ಹೇಗೆ ಏರಿಸುವುದು?'

# 21

"ಸಾಬ್! ಡಾ. ಕಾಲ್ರಾಗೆ ಖಾಯಿಲೆಯಂತೆ. ಆಸ್ಪತ್ರೆಗೆ ಸೇರಿಸಿದ್ದಾರಂತೆ. ಸಾಯಂಕಾಲ ಹೋಗಿ ನೋಡಿಕೊಂಡು ಬರೋಣವೇ?"

ಡಾಕ್ಟರ್ ಕಾಲ್ರಾನಿಗೆ ಖಾಯಿಲೆ? ಅವನಿಗೆ ಎಂತಹ ಖಾಯಿಲೆ? ವರ್ಮಾ ಬಿತ್ತರಿಸಿದ. ಸುದ್ದಿ ಬಿಸಿ ಬಿಸಿಯಾಗಿತ್ತು. 'ಆಗಲಿ' ಎಂದು ಸಮ್ಮತಿಸಿದೆ.

ಬ್ಯಾಂಕ್‌ನಲ್ಲಿ ಕೆಲಸ ಅಷ್ಟೇನು ಇರಲಿಲ್ಲ. ಹುಡುಗರು ತಮ್ಮ ಕೆಲಸ ತಾವು ಮಾಡುತ್ತಿದ್ದರು. ಪರಿಸ್ಥಿತಿ ಸುಧಾರಿಸಿತ್ತು. ಆದರೆ, ಯಾವಾಗ, ಹೇಗೆ, ಯಾವ ರೀತಿಯ ತಂಟೆ, ತಕರಾರು, ತಾಪತ್ರಯ ಉಂಟು ಮಾಡಿ ತ್ರಾಸು ಕೊಡುತ್ತಾರೋ ಎಂದು ಮೈ ಎಲ್ಲಾ ಕಣ್ಣು ಮಾಡಿ ಕಾದು ಕುಳಿತಿರುವ ಪರಸ್ಥಿತಿ ಮಾತ್ರ ಕಡಿಮೆಯಾಗಿರಲಿಲ್ಲ. ಬ್ಯಾಂಕ್‌ನ ಹೊರಗಡೆ ಆತಂಕವಾದಿಗಳ ಭಯವಿದ್ದರೆ, ಒಳಗಡೆ ಈ ಆತಂಕವಾದಿಗಳ ಭಯವಿದ್ದೇ ಇದ್ದಿತು.

"ಸಾಬ್! ನೀವೇತಕ್ಕೆ ಬರಲಿಲ್ಲ. ಸಾಗೂವಿನ ಮದುವೆಗೆ?" ವರ್ಮಾ ಕೇಳಿದ.

"ನನಗೆ ಇಷ್ಟವಿರಲಿಲ್ಲ" ಎಂದೆ.

"ನೀವು ಬರಬೇಕಿತ್ತು ಸಾಬ್. ಮದುವೆ ಬಹಳ ಚೆನ್ನಾಗಿ ನಡೆಯಿತು. ನಮ್ಮವರ ಮದುವೆ ನೋಡಿಲ್ಲ, ಅಲ್ಲವೆ?"

"ಬಹಳ ನೋಡಿದ್ದೇನೆ."

ಹೊಟ್ಟೆ ಅಗ್ರವಾಲ್‌ನ ಮದುವೆ ನೋಡಿದ್ದು ಸಾಲದೆ?

"ಆದರೂ ಈ ಮದುವೆಗೆ ನೀವು ಬರಲೇ ಬೇಕಿತ್ತು ಸಾಬ್. ಬಹಳ ಚೆನ್ನಾಗಿ ನಡೆಯಿತು."

"ಚೆನ್ನಾಗಿ ನಡೆಯಿತು ಅಂದರೆ ಏನು ಅಂತಹ ವೈಶಿಷ್ಟ್ಯ?"

ಸಾಗೂವಿನ ಮದುವೆಯೆಂದರೆ ವೈಶಿಷ್ಟ್ಯವಿರಲೇ ಬೇಕಲ್ಲ!

"ಹುಡುಗಿ, ಹುಡುಗ ಒಂದೇ ವಯಸ್ಸಾದರೂ, ಹುಡುಗನಿಗಿಂತ, ಅವಳೇ ವಯಸ್ಸಾದ ಹಾಗೆ ಕಾಣುತ್ತಿತ್ತು. ಬಹಳ ದಪ್ಪ ಬೇರೆ. ಬೆಳ್ಳಗಿದ್ದರೂ, ಲಕ್ಷಣ ವಿರಲಿಲ್ಲ."

ಹುಡುಗಿಯ ವರ್ಣನೆ ಕೇಳಿ ನನಗೆ ಮುಜುಗರವಾಯಿತು. ವಯಸ್ಸಾಗಿದ್ದುದ್ದು ಹುಡುಗಿಯ ತಪ್ಪೆ? ವಯಸ್ಸಾದ ಮೇಲೆ ಸೌಂದರ್ಯ ಕುಂದಿದ್ದು ಅವರ ತಪ್ಪೆ? ವಯಸ್ಸಾದಕ್ಷಣ ವಿವಾಹವಾಗಬಾರದೇ? ಆದರೆ ಸಾಗುವನ್ನು ಮದುವೆಯಾದದ್ದು ಮಾತ್ರ ತಪ್ಪೇ ತಪ್ಪು ಎನ್ನಿಸಿತು.

"ಕುದುರೆ ಮೇಲೆ ಕುಳಿತು ಠೀವಿಯಿಂದ ಅವನು ಬರುವ ರೀತಿ ನೋಡಿದರೆ ಮಾತ್ರ ಅದರ ಸುಖ ಅನುಭವ ಸಿಗುವಂತಹದಾಗಿತ್ತು. ನೀವು ಅನ್ಯಾಯವಾಗಿ ಅದನ್ನು ಕಳೆದುಕೊಂಡುಬಿಟ್ಟಿರಿ ಸಾಬ್!"

"ಇದರಲ್ಲಿ ಅನ್ಯಾಯವೇನು?"

ವರ್ಮನ ಆಕ್ಷೇಪಣೆಯಲ್ಲಿ ಏನು ಮರ್ಮವಿದೆ?

"ಹೆಂಡತಿ ಸತ್ತು ಮೂರು ತಿಂಗಳೊಳಗೆ ಮರುಮದುವೆ ಇಷ್ಟು ಜರ್ಬಾಗಿ, ರಾಜಾರೋಷವಾಗಿ, ಯಾರಿಗೂ, ಯಾವುದಕ್ಕೂ ಲೆಕ್ಕಿಸದೆ, ಮಾಡಿಕೊಳ್ಳುವುದೆಂದರೆ, ಮೊಂಡು ಧೈರ್ಯ ಬೇಕು ಸಾಬ್. ಇಂತಹ ಧೈರ್ಯ ಯಾವ ಆತಂಕವಾದಿಗೂ ಇರುವುದಿಲ್ಲ."

ಒಂದು ಮದುವೆಯಾಗಿ ಜೀವನ ನಿಭಾಯಿಸುವುದೇ ಕಷ್ಟಕರವಾಗಿರುವಾಗ, ಹೆಂಡತಿ ಸತ್ತು ಮೂರು ತಿಂಗಳೊಳಗಾಗಿ, ಮತ್ತೊಂದು ಮದುವೆ ಮಾಡಿಕೊಳ್ಳುವುದಕ್ಕೆ ಧೈರ್ಯ ಬೇಕೆ?

"ಯಾವ ಕೆಲಸ ಮಾಡುವುದಕ್ಕೂ ಹೇಸದ ಸಾಗೂ, ಮರುಮದುವೆ ಮಾಡಿಕೊಳ್ಳುವುದರಲ್ಲಿ ಎಂತಹ ವಿಶೇಷವಿದೆ? ಇದರಲ್ಲಿ ಯಾವ ತರಹ ಆತಂಕವಿದೆ?"

"ಅವನಿಗೆ ಏನು ಆತಂಕವಿಲ್ಲ ಸಾಬ್! ಅವನ ನೂತನ ಹೆಂಡತಿಗೆ ಇದೆ ಆತಂಕ. ಆತಂಕವಾದಿಗಳಿಗೆ ಯಾವ ತರಹವಾದ ಆತಂಕವಿರುವುದಿಲ್ಲ. ಅವರ ವೃತ್ತಿಯೇ ಇನ್ನೊಬ್ಬರಲ್ಲಿ ಆತಂಕ ಹುಟ್ಟಿಸುವುದು, ಕೆರಳಿಸುವುದು, ಬಯಸುವುದು. ಇದೇ ಅವರ ಕಸುಬು ಮತ್ತು ಮನೋಧರ್ಮ. ಇದರಿಂದ ಅವರಿಗೆ ಮನೋ ರಂಜನೆಯ ಜೊತೆಗೆ ಖುಷಿ, ಸಂತೋಷ, ತೃಪ್ತಿ ಸಿಗುತ್ತದೆ."

ಆತಂಕವಾದಿಗಳ ಮನೋವಿಶ್ಲೇಷಣೆ ಮಾಡಿದ ವರ್ಮಾ.

"ಹಾಗಾದರೆ, ನಮ್ಮ ಸರ್ದಾರ್ಜೀಗೆ ತನ್ನ ಕಾರ್ಯದಿಂದ ಸಂತೋಷ ಸಿಕ್ಕಿದೆ ಎಂದು ಹೇಳುವಿಯಾ? ಅವನು ಪೊಲೀಸರ ಕೈಗೆ ಸಿಕ್ಕಿ ಯಾತನೆ ಅನುಭವಿಸಿದ್ದು ಅವನಿಗೆ ತೃಪ್ತಿ ತಂದಿದೆಯೆ?"

"ಸರ್ದಾರ್ಜೀ ವಿಷಯ ಮಾತಾಡುವಾಗ ನೆನಪಿಗೆ ಬಂತು ಸಾಬ್. ಅವನನ್ನು ಜಾಮೀನಿನಲ್ಲಿ ಖುಲಾಸೆ ಮಾಡಿದ್ದಾರೆ."

"ಹಾಂ!" ನನ್ನ ಬಾಯಿಯಿಂದ ಬಂದ ಅಚ್ಚರಿ ಮತ್ತು ಸಂತೋಷಗಳ ಶಬ್ದ, ನನಗೇ ಭ್ರಮೆಯುಂಟು ಮಾಡಿತು.

"ಯಾವಾಗ?"

"ಮೂರು ದಿನಗಳಾದವು."

"ಅವನು ಎಲ್ಲಿದ್ದಾನೆ?"

"ಮನೆಯಲ್ಲಿದ್ದಾನೆ. ಅವನನ್ನು ನೋಡಲಿಕ್ಕೆ ಹೋಗಲು ಪ್ರಯತ್ನಿಸಬೇಡಿ. ಅವನು ಈಗ ಬೆಂಕಿಯ ಉಂಡೆ, ಸುಟ್ಟು ಹೋಗುತ್ತೀರ."

ಎಚ್ಚರಿಕೆ ನೀಡಿದ ವರ್ಮ. ಹೌದು. ಆತಂಕವಾದಿಗಳನ್ನು ಕಾಣಲು ಹೋದವರ ಮೇಲೆ ಪೊಲೀಸರ ಹದ್ದಿನ ಕಣ್ಣು ಇದ್ದೇ ಇರುತ್ತವೆ.

ಸಾಯಂಕಾಲ ಬ್ಯಾಂಕ್‌ನ ಕೆಲಸ ಮುಗಿಸಿ, ನೇರ ರಾಮ್‌ಮನೋಹರ ಲೋಹಿಯಾ ಆಸ್ಪತ್ರೆಗೆ ಹೋದೆವು. ಸೊಂಟ ನೋವಿನ ದೆಸೆಯಿಂದ ಕಾಲು ಎಳೆದು ಎಳೆದು ಹಾಕಿಕೊಂಡು ನಡೆಯುತ್ತಿದ್ದ ನನ್ನನ್ನು ಉದ್ದೇಶಿಸಿ ಹೇಳಿದ ವರ್ಮಾ, "ಸ್ವಸ್ಥವಿಲ್ಲವೇ ಸಾಬ್?"

"ಸೊಂಟ ನೋವು. ಬೆಳಗಿನಿಂದ ಸಾಯಂಕಾಲದವರೆಗೆ, ಕುರ್ಚಿಯಲ್ಲಿ ಕುಳಿತು ಕೆಲಸ ಮಾಡಿದ ಫಲ. 'ವ್ಯಾಯಾಮ ಮಾಡಿ, ಓಡಾಡಿ ಎಂದು ಹೇಳಿದರು ಡಾಕ್ಟರ್' ಎಂದೆ.

"ಬ್ಯಾಂಕ್‌ನಲ್ಲಿ ನೌಕರಿ ಸಿಗುತ್ತದೆ ಸಾಬ್. ಆದರೆ ಆರೋಗ್ಯ ಸಿಗೋದಿಲ್ಲ. ಬ್ಯಾಂಕ್‌ನಲ್ಲಿ ಠೇವಣಿ ಇಟ್ಟ ಹಾಗೆ, ಆರೋಗ್ಯ ಇಡಲಿಕ್ಕೆ ಆಗುತ್ತದೆಯೆ?"

ನಾನು ಮೌನವಾಗಿ ನಡೆದೆ.

ಡಾಕ್ಟರ್ ಕಾಲ್ರಾನ ವಾರ್ಡ್ ಹುಡುಕಲು ಕಷ್ಟವಾಗಲಿಲ್ಲ. ಮೊದಲೇ ಬೆಳ್ಳಗಿದ್ದ ಕಾಲ್ರಾ ಮತ್ತೂ ಬೆಳಚಿಕೊಂಡು, ದೇಹ ದಣಿದು ಅರ್ಧವಾಗಿಬಿಟ್ಟಿದ್ದ. ಅವನ ಹೆಂಡತಿ ಮತ್ತು ಮಗಳು ಪಕ್ಕದಲ್ಲೇ ಕುರ್ಚಿಯಲ್ಲಿ ಕುಳಿತಿದ್ದರು. ನನ್ನನ್ನು ನೋಡಿ, ಕಾಲ್ರಾ ನಸುನಕ್ಕ. ಬಹಳ ನಿತ್ರಾಣವಾಗಿದ್ದರಿಂದ ಮಾತನಾಡಲು ಕಷ್ಟವಾಗಿದ್ದಿರಬೇಕು.

"ಈಗ ಹೇಗಿದ್ದೀರಿ?" ಕೇಳಿದೆ.

"ಈಗ ಎಷ್ಟೋ ವಾಸಿ. ನಮಗೆಲ್ಲಾ ಭಯ ಆತಂಕವಾಗಿತ್ತು."

ಕಾಲ್ರಾನ ಹೆಂಡತಿ ಹೇಳಿದಳು.

"ಏನು ಖಾಯಿಲೆ?"

"ಇದ್ದಕ್ಕಿದ್ದ ಹಾಗೆ ಚಳಿ, ಜ್ವರ ಬಂದು ಮಲಗಿಬಿಟ್ಟರು. ತಾವೇ ಡಾಕ್ಟರ್ ಆದ್ದರಿಂದ, ಸ್ವಂತ ಔಷಧ ಮಾಡಿಕೊಂಡರು. ಜ್ವರ ಜಾಸ್ತಿಯಾಗಿ, ಜ್ಞಾನ ತಪ್ಪಿಹೋಗುವ ಪರಿಸ್ಥಿತಿಯಾಯಿತು. ಗಾಭರಿಯಾಗಿ ಡಾಕ್ಟರ್‌ನ ಕರೆಸಿದೆ. ಅವರು ತಕ್ಷಣ ಆಸ್ಪತ್ರೆಗೆ ಸೇರಿಸಿ ಅಂದರು. ಸೇರಿಸಿದೆವು."

"ಡಾಕ್ಟರ್ ಏನು ಹೇಳುತ್ತಾರೆ?"

"ಡೆಂಗೂ ಜ್ವರ ಅಂತ ಹೇಳುತ್ತಾರೆ."

ಮಲೇರಿಯದ ಭಂದು ಡೆಂಗೂ ಜ್ವರ ಬಂದು, ಈ ಬಡವರ ಬಂಧು ಕಾಲ್ರಾಗೆ ಹೇಗೆ ಅಂಟಿಕೊಂಡಿತು ಈ ಖಾಯಿಲೆ?

"ಸಾಬ್. ಹೋಗೋಣವೇ?" ವರ್ಮಾ ಒತ್ತಾಯ ಪಡಿಸಿದ.

ತನಗೆಲ್ಲಿ ಡೆಂಗೂ ಜ್ವರ ಅಂಟಿಕೊಂಡುಬಿಡುತ್ತದೆಯೋ ಎಂಬ ಹೆದರಿಕೆಯಿಂದ ಇಲ್ಲಿಂದ ಬೇಗ ಜಾಗ ಖಾಲಿ ಮಾಡಲಿಕ್ಕೆ ಒತ್ತಾಯ ಮಾಡುತ್ತಿದ್ದಾನೆಯೇ ಎಂದು ಯೋಚಿಸಿದೆ.

"ಹೋಗೋಣ ಸಾಬ್" ಮತ್ತೆ ಒತ್ತಾಯ.

"ದೇವರು ನಿಮಗೆ ಬೇಗ ಗುಣಪಡಿಸಲಿ" ಎಂದು ಹಾರೈಸಿ ಅಲ್ಲಿಂದ ನಾನು ಕಾಲ್ತೆಗೆದೆ.

"ಏನು ಅಷ್ಟು ಅವಸರ?"

ನನ್ನ ಧ್ವನಿಯಲ್ಲಿದ್ದ ಅಸಮಾಧಾನ ಗುರುತಿಸಿ, ವರ್ಮಾ ಉತ್ತರಿಸಿದ.

"ಡಾಕ್ಟರ್ ಕಾಲ್ರಾನಿಗೆ ಡೆಂಗೂನೋ, ಮಲೇರಿಯಾನೋ, ಕಾಲ್ರಾವೋ, ಪ್ಲೇಗೋ ಯಾರಿಗೆ ಗೊತ್ತು? ಆಸ್ಪತ್ರೆಯಲ್ಲಿ ಜಾಸ್ತಿ ಹೊತ್ತು ಕಾಲಹರಣ ಮಾಡಬಾರದು. ರೋಗಿಯನ್ನು ನೋಡಿಯಾಯಿತು, ಮಾತನಾಡಿಸಿಯಾಯಿತು. ಅವರ ಯೋಗಕ್ಷೇಮ ವಿಚಾರಿಸಿಯಾಯಿತು. ರೋಗಿಯಿಂದ ನಮಗೆ ಅವನ ರೋಗ ತಟ್ಟದಂತೆ ಎಚ್ಚರಿಕೆ ವಹಿಸಿ, ಆಸ್ಪತ್ರೆಯಿಂದ ಜಾಗ ಖಾಲಿ ಮಾಡಬೇಕು. ಅದರಲ್ಲೂ ಈ ಸರಕಾರೀ ಆಸ್ಪತ್ರೆಗಳು ರೋಗಗಳ ತೌರೂರು. ಅದೂ ಅಲ್ಲದೆ, ರೋಗಿಗಳಿಗೆ, ರೋಗದಿಂದ ಮುಕ್ತಿಯಾಗಬೇಕಾದರೆ, ಅವರನ್ನು ವಿಚಾರಿಸಿಕೊಂಡು ಉಪದ್ರಕೊಡುವುದರಿಂದ ಮುಕ್ತಿ ಪಡೆಯಬೇಕು...."

"ಸರಿ, ಸರಿ! ಸಾಕ್ ನಿಮ್ಮ ಉಪದೇಶ. ಈಗ ಹೋಗೋಣ" ಅಸಹನೆಯಿಂದ ಅವನ ಮಾತಿನ ಭರವನ್ನು ಕತ್ತರಿಸಿ, ನಡೆದೆ. ಆಸ್ಪತ್ರೆಯಿಂದ ಮೌನದಿಂದ ತಲೆತಗ್ಗಿಸಿ ಹೊರಬರುತ್ತಿದ್ದೆ.

"ಮರ್ ಗಯಾ! ಮೇರಾ ಬೇಟಾ! ಮರ್ ಗಯಾ!" ಹುಯ್ಯಲೆಬ್ಬಿಸಿತ್ತು ಒಂದು ಹೆಂಗಸು. ಕೊಳಕು ಬಟ್ಟೆ ತೊಟ್ಟ ಈ ಹೆಂಗಸು ದಿಲ್ಲೀಯ ಅಸಂಖ್ಯಾತ ಜುಗ್ಗಿ ಜೋಪಡೀಗಳಲ್ಲಿ ವಾಸಿಸುವ ಒಂದು ಕಡುಬಡವಿ ಎಂದು ನೋಡಿದ ಕೂಡಲೆ ಅರಿಯಬಹುದಾದಂತಹ ಅಂಶ. ಕಾಲರಾ, ಢೆಂಗೂ ರೋಗ ಬಡವರಿಗಲ್ಲದೇ ಇನ್ಯಾರಿಗೆ ಬರಬೇಕು ಈ ಕೊಳಕು ದೇಶದಲ್ಲಿ. ಎಲ್ಲೆಲ್ಲೂ ಕೊಳಕು, ಕೊಚ್ಚೆ ಎಂಜಲು ಮರೆಯುತ್ತಿರುವಾಗ, ರೋಗ ತಾಂಡವವಾಡದೆ

ಸುಮ್ಮನಿರುತ್ತದೆಯೆ? ಇದರೊಂದಿಗೆ ಬಡತನದ ರೋಗ ಬೇರೆ. ಈ ಬಡತನದ ಜ್ವರದಿಂದ ನರಳುವವರಿಗೆ ಸಾವೇ ಉತ್ಸವ!

"ಸಾಬ್, ಅಲ್ಲಿ ನೋಡಿ ಎದುರಿಗೆ ಯಾರು ಬರುತ್ತಿದ್ದಾರೆ? ಕೂಗಿದ ವರ್ಮ.

ತಲೆ ಎತ್ತಿ ನೋಡಿದರೆ, ಕಪೂರ್ ಕಾಣಿಸಿದ. ಇವನು ಯಾಕೆ ಇಲ್ಲಿ ಬಂದ? ಯಾರಿಗೆ ಖಾಯಿಲೆ?

"ಏನು ಸಮಾಚಾರ? ನೀವು ಇಲ್ಲಿ?"

ಕೇಳಿದೆ ನಾನು.

"ನಮ್ಮ ತಂದೆಗೆ ಸೌಖ್ಯವಿಲ್ಲ" ಎಂದು ಹೇಳಿ ನಿಂತ. ಅವನ ಮುಖ ಕಳೆಗುಂದಿತ್ತು. ಗಡ್ಡಬಿಟ್ಟಿದ್ದರಿಂದ, ಅನಾರೋಗ್ಯದಿಂದ ನರಳಿ ನಿತ್ರಾಣಗೊಂಡಿದ್ದಂತೆ ಕಾಣುತ್ತಿದ್ದ.

"ನಡೀರಿ, ನೋಡಿ ಬರೋಣ ನಿಮ್ಮ ತಂದೆಯನ್ನು" ಎಂದೆ.

"ಬೇಡ, ಬೇಡ. ನೀವು ಹೋಗಿ. ನಾನು ಒಳಗೆ ಹೋಗಿ ಅವರಿಗೆ ಊಟ ಕೊಟ್ಟು ಬರುತ್ತೇನೆ."

"ನಾವಿಲ್ಲೇ ಇರುತ್ತೇವೆ. ಊಟ ಕೊಟ್ಟು ಬಾ."

ವರ್ಮಾ ನುಡಿದ.

ನಾವು ಇವನ ತಂದೆಯನ್ನು ನೋಡಲು ಇಷ್ಟಪಡುವುದಿಲ್ಲವೇಕೆ?

"ಬನ್ನಿ ಸಾಬ್. ಇಲ್ಲೇ ಕುಳಿತುಕೊಳ್ಳೋಣ" ಎಂದು ವರ್ಮಾ, ಆಸ್ಪತ್ರೆಯ ಹೊರಾಂಗಣದ ಹುಲ್ಲು ಹಾಸಿಗೆಯ ಮೇಲೆ ಕಾಲಿರಿಸಿ, ಒಂದು ಮೂಲೆಯಲ್ಲಿ ಕುಳಿತ. ಅವನನ್ನು ಹಿಂಬಾಲಿಸಿದ ನಾನು ಕೇಳಿದೆ.

"ಕಪೂರ್‌ನ ತಂದೆಯನ್ನು ಕಾಣಲು ಇವನು ಇಷ್ಟಪಡುವುದಿಲ್ಲವೇಕೆ?"

"ತಲೆ ಸರಿಯಿಲ್ಲದವರನ್ನು ತೋರಿಸಲು ಯಾರು ಇಷ್ಟಪಡುತ್ತಾರೆ?"

'ಡಿಪ್ರೆಶನ್' ನಿಂದ ನರಳಿದರೆ, ತಲೆ ಕೆಟ್ಟಿದೆ ಎಂದರ್ಥವೇ? ಎಲ್ಲಾ ಮನುಷ್ಯರಿಗೆ, ಒಂದಲ್ಲಾ ಒಂದು ಬಾರಿ, ಈ ಖಾಯಿಲೆಯಿಂದ ನರಳುವುದು ಖಂಡಿತ. ಅಂದ ಮೇಲೆ ಈ ಖಾಯಿಲೆ ಬಗ್ಗೆ ಏಕೆ ಇಷ್ಟು ಜುಗುಪ್ಸೆ, ಮನಃ ಪ್ರಯಾಸ, ಅಂಜಿಕೆ, ಏಕೆ?

ಅಂದು ರಾತ್ರಿ ಕಪೂರ್‌ನ ಮನೆಯಲ್ಲಿ, ಅವನ ಕಥೆ ಕೇಳಿ ಮರುಕಗೊಂಡಿದ್ದೆ. ಅವನ ದುರಂತ ಜೀವನದ ಬಗ್ಗೆ ಚಿಂತಿಸಿ, ನೊಂದಿದ್ದೆ. ಇನ್ನೊಬ್ಬರ ಹೃದಯದಲ್ಲಿ ತನ್ನ ಇರುವನ್ನು, ಪ್ರೀತಿಯನ್ನು ರೂಪಿಸುಕೊಳ್ಳುವುದರಲ್ಲಿ ಸದಾ ಶ್ರಮಿಸುತ್ತಿರುವ ಕಪೂರ್ ಏನು ತಪ್ಪು ಮಾಡಿದ? ದುಃಖ, ದುಮ್ಮಾನಗಳ ನಡುವೆ ಹರುಷ, ಸರಸ,

ಸಂತಸಗಳ ಕನಸನ್ನು ಕಾಣುತ್ತ ಜೀವನ ಸಾಗಿಸುತ್ತ ತಾನೂ ಸುಖಿಯಾಗಿ, ತನ್ನವರನ್ನು ಸುಖಿಯಾಗಿಸಬೇಕೆಂಬ ಬಯಕೆ ಹೊತ್ತು ಹೋರಾಡುವ ಈ ಪಂಜಾಬೀಯ ಧೈರ್ಯ, ಸಾಹಸ, ಮನೋಧರ್ಮ ಮೆಚ್ಚಿದ್ದೆ. ಭಾವೋದ್ರೇಕನಾದರೂ, ಅದರ ಬೆಲೆ ಅರಿತಿದ್ದು, ಅದರ ಜ್ವಾಲೆಯನ್ನು, ಬೆಳಗಿಸಿ, ಉತ್ಸಾಹದ ಚಿಲುಮೆಯಾಗಿ, ಆದರದ ತಿಂಗಳ ಬೆಳಕಿನ ಹಾಗೆ, ಎಲ್ಲರ ಮನಸ್ಸನ್ನು ಮಂದವಾಗಿರಿಸಿ, ಜೀವನೋತ್ಸಾಹಕ್ಕೆ ಬೆಂಬಲಿಸು ವುದನ್ನು ಕಾಣುವಾಗ, ಸಂತಸವಾಗುತ್ತದೆ. ಭಾವೋದ್ರೇಕ ಮರುಕದ ಪ್ರತಿರೂಪವಂತೆ. ಇನ್ನೊಬ್ಬರ ಬಗ್ಗೆ ಅನುಕಂಪ ಸಹಾನುಭೂತಿ ಅವನಲ್ಲಿ ತುಂಬಿ ಉಕ್ಕಿ ಹೆಚ್ಚಾಯಿ ತೇನೋ ಅನ್ನುವಷ್ಟು ನಡವಳಿಕೆ, ಮಾತುಗಾರಿಕೆ, ಸ್ವಭಾವ. ಈ ಸ್ವಭಾವವೇ ಅವನನ್ನು ಇನ್ನೊಬ್ಬರ, ಪರಿಸ್ಥಿತಿ ಸಂದರ್ಭಗಳ ಅಡಿಯಾಳಾಗಲಿಕ್ಕೆ ಪ್ರೇರೇಪಿಸುತ್ತವೆಯೇನೋ! ಹೆಂಡತಿ, ಇವನನ್ನು ತೊರೆದು ಒಂಟಿತನದ ಬಳುವಳಿ ನೀಡಿ ಅಮೆರಿಕಾಕ್ಕೆ ತೆರಳಿದ ಮೇಲೆ ಕಮಲ ಕುಮಾರಿಯ ಸಂಗಾತಿ ದೊರೆತರೂ, ಅದು ಅವನ ಒಂಟಿತನದ ನೋವು, ಮನೋವೇದನೆ ಹೋಗಲಾಡಿಸಲಾಗಲಿಲ್ಲ. 'ಡಿಪ್ರೆಶನ್' ನಿಂದ ನರಳುವ ತಂದೆ, ಇವನ ಒಂಟಿತನದ ಬೇನೆಯನ್ನು ಹೆಚ್ಚಿಸಿತೇ ವಿನಹ, ಕಡಿಮೆಯಾಗಿಸಲಿಲ್ಲ. ಈ ಒಂಟಿತನದಿಂದ ಇವನಿಗೇ 'ಡಿಪ್ರೆಶನ್' ಖಾಯಿಲೆ ಯಾಕೆ ತಾಗಲಿಲ್ಲವೆಂದು ಸೋಜಿಗವಾಗುತ್ತದೆ. ಆದರೆ ಒಂಟಿತನ 'ಡಿಪ್ರೆಶನ್'ನಂತೆ ಏನೂ ಮಾಡದೆ, ಏನೂ ಮಾತನಾಡದೇ, ತನ್ನ ದುಃಖವನ್ನು ತಾನೇ ನುಂಗುತ್ತಾ, ಅನುಭವಿಸುತ್ತಾ ಇರುವಂತಹ ದಲ್ಲವಲ್ಲ. ಒಂಟಿತನದಿಂದ ಬಾಳುವವರು, ಸುಮ್ಮನೆ ಕೂಡುವವರಲ್ಲ. ಏನಾದರೂ, ಕೆಲಸ ಮಾಡುತ್ತಾ, ಓಡಾಡುತ್ತಾ, ಕೇಳುತ್ತಾ, ಕೊನೇ ಪಕ್ಷ ಪ್ರೇಮಿಸಲಿಕ್ಕಾದರೂ ಹಾತೊರೆಯುತ್ತಾರಲ್ಲವೇ? ಕಪೂರ್ ಇದಕ್ಕೆ ಹೊರತಾ ಗಿರಲಿಲ್ಲ. ಕಮಲ ಕುಮಾರಿ ಯನ್ನು ಪ್ರೇಮಿಸಿ ತನ್ನ ಒಂಟಿತನದ ಬಾಳನ್ನು ಹಸನುಗೊಳಿಸಲಿಕ್ಕೆ ಸಾಹಸವನ್ನು ಮಾಡುತ್ತಿದ್ದಾನಲ್ಲವೇ?

ಅವನ ಉತ್ಸಾಹವಾದರೂ ಎಂತಹುದು? ಅವನ ಕಣ್ಣುಗಳಲ್ಲಿ ಮಿನುಗುವ ಸಡಗರದ ನಕ್ಷತ್ರಗಳು ಹೇಗೆ ನೋಡುವವನ ಕಣ್ಣುಗಳಿಗೆ ಕುಕ್ಕುತ್ತಿದ್ದವು. ಅವನ ಉತ್ಸಾಹದ ಚಿಲುಮೆಯನ್ನು ಬತ್ತಲಿಸಿಕ್ಕಾದರೂ ಸಾಧ್ಯವೇ? ಉತ್ಸಾಹಿಗಳಿಗೆ ಸ್ಥೈರ್ಯ, ಎದೆಗಾರಿಕೆ, ಅವರ ರಕ್ತದಲ್ಲಿಯೂ ಹರಿಯುತ್ತದೆಯಂತೆ. 'ವರ್ಷಗಳು ಕಳೆದು, ಚರ್ಮವನ್ನು ಸುಕ್ಕು ಮಾಡುತ್ತವೆ. ಉತ್ಸಾಹ ತಣ್ಣಗಾದರೆ ಆತ್ಮವನ್ನೇ ಸುಕ್ಕು ಮಾಡಿದಂತೆ' ಹೌದೇ? ಕಪೂರ್‌ನ ಧೈರ್ಯಕ್ಕೆ ಮಿತಿಯುಂಟೆ? ಉತ್ಸಾಹಿಗಳು ಹೋರಾಟಗಾರರಂತೆ! ಕಪೂರ್‌ನ ಜೀವನವಿಡೀ ಹೋರಾಟವೇ ಆ ಗಿದೆಯಲ್ಲವೇ?

'ಬುದ್ಧಿಶಕ್ತಿಯನ್ನು ಹುಲುಸಾಗಿ ಬೆಳೆಸಬೇಕಂತೆ. ಅದು ಸುಂದರ ಚಿಂತನೆ

ಗಳನ್ನು, ಯೋಗ್ಯ ಆಕಾರಗಳನ್ನು, ಚಿತ್ರಗಳನ್ನು, ಸಹಾಯಕ ಯೋಜನೆಗಳನ್ನು ತನ್ನ ಮನಸ್ಸಿನಲ್ಲಿ ಹುಟ್ಟಿಸುವುದಕ್ಕೆ ಸಹಾಯವಾಗುತ್ತದೆಯಂತೆ. ಮನಸ್ಸು ಆತಂಕ ಗೊಂಡಾಗ, ಕಳವಳಗೊಂಡಾಗ, ಭ್ರಮಿಸುವಾಗ, ಇಂತಹ ಸುಂದರ ಚಿಂತನೆಗಳು, ಆಕಾರಗಳು, ಯೋಜನೆಗಳು, ಮನಸ್ಸಿಗೆ ತಂಪನ್ನೆರುವುದಂತೆ.' ಪ್ರಾಯಶಃ ಕಪೂರ್‌ನ ಮನಸ್ಸು ಇದೇ ರೀತಿ ಕೆಲಸ ಮಾಡುತ್ತಿರಬಹುದೇ?

"ಯೋಚನೆಗಳಲ್ಲಿ ಮುಳುಗಿದ್ದೀರಾ ಸಾಬ್? ಕಪೂರ್ ಬಗ್ಗೆ ಯೋಚನೆ ಮಾಡುತ್ತಾ ಇರಬೇಕು, ಅಲ್ಲವಾ?"

ವರ್ಮಾ, ನನ್ನ ಮೌನವನ್ನು ಮುರಿದು ಕೇಳಿದ.

"ಮತ್ತೇನು ಯೋಚನೆ? ಈಗಿನ ರಾಜಕೀಯ ಪರಿಸ್ಥಿತಿಯ ಬಗ್ಗೆ ಯೋಚಿಸಬೇಕೆ? ಅಮೃತಸರದ ಚಿನ್ನದ ಮಂದಿರವನ್ನು ಪುನರ್ ನಿರ್ಮಾಣದ ಬಗ್ಗೆ ಸರಕಾರ ಕೈಗೊಂಡಿರುವ ಕಾರ್ಯದ ಬಗ್ಗೆ ಚರ್ಚಿಸೋಣವೇ?"

"ರಾಜಕೀಯದ ಬಗ್ಗೆ ಚರ್ಚೆ ಬೇಡ ಸಾಬ್. ನಾವು ಕೂತಿರುವ ಜಾಗ ಯಾವುದು ಹೇಳಿ? ಖಾಯಿಲೆಯವರು ತುಂಬಿರುವ ಸ್ಥಳ. ರಾಜಕೀಯ ಕೂಡ ಒಂದು ಬಗೆಯ ಖಾಯಿಲೆ. ಈಗಾಗಲೇ ಈ ಖಾಯಿಲೆ ಕಾಲ್ರಾ, ಪ್ಲೇಗ್‌ಗಳಂತೆ ಎಲ್ಲರನ್ನು ಅಂಟಿಕೊಂಡುಬಿಟ್ಟಿದೆ. ಇದರಿಂದ ಬಿಡಿಸಿಕೊಳ್ಳಲಿಕ್ಕೆ, ತಪ್ಪಿಸಿಕೊಳ್ಳಿಕ್ಕೆ ಪ್ರಯತ್ನ ಮಾಡೋಣ. ನಮಗ್ಯಾಕೆ ಇದರ ಉಸಾಬರಿ?"

ರಾಜಕೀಯ ಹೊಲಸು, ನಾರುವ ಒಂದು ಖಾಯಿಲೆ ಎಂದು ಹೇಳುವ ಈ ವರ್ಮನಿಗೆ ಏನು ಹೇಳುವುದು?

'ಮನುಷ್ಯ ಒಂದು ರಾಜಕೀಯ ಪ್ರಾಣಿ' ಎಂದು ಹೇಳಿದ್ದಾರಲ್ಲ. 'ಬೇಡ' ಅಂದರೂ ರಾಜಕೀಯ ನಮ್ಮನ್ನು ಬಿಡುತ್ತದೆಯೆ?

(ರಶಿಯದ ಪ್ರಧಾನಿಯಾಗಿದ್ದ ಕೃಷ್ಚೆವ್ ಹೇಳಿದರಂತೆ: ರಾಜಕೀಯ ವ್ಯಕ್ತಿಗಳು ಎಲ್ಲೆಡೆ ಒಂದೇ ಬಗೆ. ನದಿಗಳು ಇಲ್ಲದೇ ಇದ್ದರೂ, ಸೇತುವೆಗಳನ್ನು ಕಟ್ಟುವೆವು ಎಂದು ಭರವಸೆ ನೀಡುತ್ತಾರೆ!)

"ಇಗೋ ಬಂದನಲ್ಲ ಕಪೂರ್!"

ವರ್ಮಾ ಕೂಗಿದ. ಅವನ ಕೂಗಿಗೆ, ಕಪೂರ್‌ನ ಕಿವಿಗಳು ನೆಟ್ಟಗಾಗಿರಬೇಕು. ನಮ್ಮ ಕಡೆ ತಿರುಗಿ, ಹೆಜ್ಜೆ ಹಾಕಿದ. ಅವನು ಹತ್ತಿರ ಬಂದ ತಕ್ಷಣ, "ಬನ್ನಿರಿ ಹೋಗೋಣ" ಎಂದ.

"ಎಲ್ಲಿಗೆ?"

"ಎಲ್ಲಿಗಾದರೂ ಸರಿ. ಇಲ್ಲಿ ಮಾತ್ರ ಬೇಡ."

*

ನಾವಿಬ್ಬರೂ ಕೂತಲ್ಲಿಂದ ಎದ್ದು, ನಡೆಯುತ್ತಾ ಹೊರಟೆವು. ನೇರ, ಇಂಡಿಯಾ ಗೇಟ್ ಬಳಿ ಬಂದು, ಸೇರಿದೆವು. ಇಂಡಿಯಾ ಗೇಟ್‌ನ ಇಕ್ಕೆಡೆ ಹಾಸಿದ್ದ ಮೈಲುದ್ದದ ಹಸಿರು ಹುಲ್ಲುಗಾವಲಿನ ಮೇಲೆ ಸಾಯಂಕಾಲದ ತಂಪು ಹವೆಯನ್ನು ಆನಂದಿಸುತ್ತಾ ನಡೆದೆವು. ಸೂರ್ಯ ಮುಳುಗಿದ್ದು, ಅವನ ಕಿರಣಗಳು ಲಿಟ್ಬಿಗ್ ಮಹಾಶಯ ಕಟ್ಟಿದ ಬ್ರಿಟಿಷ್ ಚಕ್ರಾಧಿಪತ್ಯದ ಕುರುಹಾಗಿ ನಿಂತಿರುವ ಭವ್ಯ ಅರಮನೆಯ ಈಗ ಅಧ್ಯಕ್ಷರ ಅರಮನೆ- ಮೇಲೆ ಹಾಯ್ದು ನಮ್ಮ ಮೇಲೆ ಬಿದ್ದು, ಇನ್ನೇನು ಕೆಲವೇ ನಿಮಿಷಗಳಲ್ಲಿ, ನಾವು ಒಬ್ಬರಿಗೊಬ್ಬರ ಮುಖ ನೋಡಿದಂತಾಗುವ ಸಂಧಿಕಾಲವಾಗಿತ್ತು.

ಕಪೂರ್‌ನ ಮುಖ ನೋಡಿದೆ. ಉಲ್ಲಾಸ, ಹರ್ಷ, ಔದಾರ್ಯ, ಸಹಜತೆಗಳ ಮೂರ್ತಿಯಂತಿದ್ದ ಇವನು ಕಳಾಹೀನ ಮುಖ ನೋಡಿ ಮನ ಕರಗಿತು. ಅವನ ಮನೆಯಲ್ಲಿ ಅಂದು ಕೇಳಿದ ಕಥೆ ಮನ ಮಿಡಿಯುವಂತಿತ್ತು. ಸ್ವಂತ ತಮ್ಮನ ಕೊಲೆ, ಪ್ರಾಣಸ್ನೇಹಿತ ಸರ್ದಾರ್ಜೀಯಿಂದ ನಡೆಯಿತು ಎಂಬ ವಿಷಯ ಅರಿತು, ನನ್ನ ಮನಸ್ಸು ಜರ್ಜರಿತವಾಗಿತ್ತು. ಈ ಆಘಾತವನ್ನು ಸಹಿಸಿಕೊಂಡು ಇಲ್ಲಿಯವರೆಗೆ ಬದುಕಿ ಉಳಿದಿದ್ದಾನೆ ಕಪೂರ್! ಅದೇ ಒಂದು ಆಶ್ಚರ್ಯವಾದ ಘಟನೆ ಎಂದು ಹೇಳಬಹುದೆ?

"ಇಲ್ಲೇ ಕುಳಿತುಕೊಳ್ಳೋಣವೇ?"

ವರ್ಮಾ ಕೇಳಿದ.

"ಆಗಲಿ" ಎಂದು ನಾನು ಖಾಲಿ ಜಾಗವಿದ್ದ ಒಂದೆಡೆ ಕುಳಿತೆವು. ಸುತ್ತಲೂ ಕಣ್ಣಾಡಿಸಿ, ಅಂತಹ ಜನಸಂದಣಿ ಇರಲಿಲ್ಲ. ಶನಿವಾರ, ಭಾನುವಾರಗಳಲ್ಲಿ ಕಂಡುಬರುವ ಜನರ ಹಿಂಡು, ಬಾಕಿ ದಿನಗಳಲ್ಲಿ ಕಾಣಬರುವುದಿಲ್ಲ ಇಲ್ಲಿ. ಸ್ಥಳೀಯರಿಗಿಂತ, ದಿಲ್ಲೀ ಶಹರ ನೋಡಲಿಕ್ಕೆ ಎಂದು ಬರುವ ಯಾತ್ರಿಗಳ ಗುಂಪು, ತಮ್ಮ ಇರುವಿಕೆಯನ್ನು ತೋರಿಸಿದರೆ, ಪಂಜಾಬಿಗಳು, ಅದರಲ್ಲೂ ಸಿಖ್‌ರು, ತಮ್ಮ ಸಂಸಾರದೊಂದಿಗೆ, ದೊಡ್ಡ ದೊಡ್ಡ ಟಿಫನ್ ಕ್ಯಾರಿಯರ್ ತುಂಬಾ ತಿಂಡಿತಿನಿಸುಗಳನ್ನು ಹೊತ್ತು ಹೆಂಡತಿ ಮಕ್ಕಳೊಂದಿಗೆ, ಆಡುತ್ತಾ, ಹಾಡುತ್ತಾ, ಕುಣಿಯುತ್ತಾ, ನಲಿಯುವ ದೃಶ್ಯ ಬಲು ಸಾಮಾನ್ಯ. ರಾತ್ರಿ ೧೨ ಗಂಟೆಯಾದರೂ ಇಲ್ಲಿಂದ ಕದಲದ ಇವರ ಧೈರ್ಯ ಮೆಚ್ಚಬೇಕಾದ್ದೆ! ಆತಂಕವಾದಿಗಳ ಮತ್ತು ಭಯೋತ್ಪಾದಕರ ಹಾವಳಿ ದಿಲ್ಲೀ ತುಂಬಾ ಹರಡಿದ್ದರು, ಇವರಿಗೆ ಯಾರ ಭಯವೂ ಇಲ್ಲ, ಆತಂಕವೂ ಇಲ್ಲ.

"ಸರ್ದಾರ್ಜೀಯನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿದ್ದಾರಂತೆ. ನಿನಗೆ ಗೊತ್ತೇ?" ವರ್ಮಾ ಕೇಳಿದ.

"ಹೌದಾ?" ಆಶ್ಚರ್ಯವಾಗಿತ್ತು ಕಪೂರ್‌ನಿಗೆ.

"ಹೌದು! ಆದರೆ ಅವನ ಮೇಲೆ ಖಟ್ಲೆ ನಡೆಸುತ್ತಾರೆ ಸರಕಾರದವರು. ಜೈಲುವಾಸ ಖಂಡಿತ."

ಕಪೂರ್ ಮಾತನಾಡಲಿಲ್ಲ.

"ನಿನ್ನ ತಮ್ಮನ ಕೊಲೆ ಕಾರಣ, ಅವನು ನಿನಗೆ ಹೇಳಿದನೆ?"

ಅರ್ಧಕ್ಕೆ ನಿಂತಿದ್ದ ಅವನ ಕಥೆ ಪುನರಾರಂಭ ಮಾಡಲಿ ಎಂದು ಆಸೆಯಿಂದ ಕೇಳಿದೆ ಪ್ರಶ್ನೆ.

"ಯಾರದೋ ಮಾತಿಗೆ, ಯಾವುದೋ ಕಾರಣಕ್ಕೆ, ಯಾರಿಂದಲೋ ಕೊಲೆ ನಡೆದು ಹೋಯಿತು."

ಕಪೂರ್ ಖಿನ್ನನಾಗಿ, ಉದಾಸೀನತೆಯಿಂದ ನುಡಿದ.

ಯಾವುದೋ ಕಾರಣಕ್ಕಾಗಿ ಯಾರದೋ ಕೊಲೆ ಹಾಗಾದರೆ ಇದು ಉದ್ದೇಶಪೂರ್ವಕ ಕೊಲೆಯಲ್ಲ.

ಯಾವ ರಾಜಕೀಯ ಧೋರಣೆ, ಧ್ಯೇಯ, ಗುರಿಗಳಿಗಾಗಿ ಪ್ರಾಣ ಹಾನಿ ಮಾಡಿದ್ದಲ್ಲ. ಉದ್ದೇಶರಹಿತ ಕೊಲೆ! ಏನೂ ಅರಿಯದ ಪಾಪದ, ನಿಶ್ಕಳಂಕ ವ್ಯಕ್ತಿಯ ಕೊಲೆ!

"ಏನು ಕಾರಣ? ಸ್ವಲ್ಪ ಬಿಡಿಸಿ ಹೇಳಪ್ಪಾ?"

ವರ್ಮಾ ಅಸಹನೆಯಿಂದ ಕೇಳಿದ.

"ಈ ಮನೆಯಲ್ಲಿರುವ ವ್ಯಕ್ತಿಯನ್ನು ಕೊಲೆ ಮಾಡಬೇಕು. ಇವನು ನಮ್ಮ ಎದುರಾಳಿ. ಈ ನಮ್ಮ ಗುರಿಗೆ, ಧ್ಯೇಯಗೆ ಕಳಂಕ ಮತ್ತು ಕಂಟಕ ತರುತ್ತಾನೆ ಇವ. ಇವನ ಹೆಸರನ್ನು ಹಿಟ್ ಲಿಸ್ಟ್‌ನಲ್ಲಿ ದಾಖಲಿಸಲಾಗಿದೆ, ಎಂದು ಸರ್ದಾರ್ಜೀಗೆ ಹೇಳಿ ನಂಬಿಸಿ, ಅವನನ್ನು ಈ ಕಾರ್ಯಕ್ಕೆ ನೇಮಿಸಲಾಯಿತು."

ಕಪೂರ್, ಕುಗ್ಗಿದ ಧ್ವನಿಯಲ್ಲಿ ನಿರುತ್ಸಾಹ, ನಿಸ್ಸಾರದಿಂದ, ಕೊಲೆಯ ಕಾರಣವನ್ನು ವಿವರಿಸಿದ.

"ನಿನ್ನ ತಮ್ಮನ ಹೆಸರು ಅವನಿಗೆ ತಿಳಿದಿರಲಿಲ್ಲವೇ?"

"ಇಲ್ಲ. ಅವನ ಪರಿಚಯವೇ ಆಗಿರಲಿಲ್ಲ."

"ಕೊಲೆಯಾದದ್ದು ನಿನ್ನ ತಮ್ಮ ಎಂದು ತಿಳಿದ ಮೇಲೆ ಅವನ ಪ್ರತಿಕ್ರಿಯೆ ಏನಾಗಿತ್ತು?"

ಕೇಳಿದೆ ನಾನು.

ಕಪೂರ್ ಉತ್ತರಿಸಲಿಲ್ಲ. ತಲೆ ಕೆಳಗೆ ಹಾಕಿ ಕುಳಿತ. ಅವನ ಎದೆಯ ಅಂತರಾಳದಲ್ಲಿ ಜ್ವಾಲಾಮುಖಿ ಸಿಡಿದು ಲಾವಾರಸ ಉಕ್ಕಿ ಹರಿದು ಹೋಗುತ್ತಿರ

ಬೇಕು. ಕತ್ತಲಾವರಿಸಿತ್ತು. ದೂರದಲ್ಲಿ ದಿಲ್ಲೀ ನಗರದ ಗಗನ ಚುಂಬಿ ಕಟ್ಟಡಗಳಲ್ಲಿ ಕಿಟಕಿಗಳಿಂದ ಬೆಳಕಿನ ಕಿರಣಗಳು ನಕ್ಷತ್ರಗಳಂತೆ ಮಿನುಗಲಿಕ್ಕೆ ಶುರುಹಚ್ಚಿದ್ದವು. ಕಿಲಕಿಲನೆ ನಗುತ್ತಾ, ಕುಣಿಯುತ್ತಾ, ನೆಗೆಯುತ್ತಾ, ಹಾರಾಡುತ್ತಾ ಒಂದು ಎಳೇ ಸ್ಕೂಲು ಹುಡುಗ-ಹುಡುಗಿಯರ ಗುಂಪು ನಮ್ಮ ಬಳಿ ಬಂದಿತು. ನೋಡುತ್ತಿದ್ದಂತೆಯೇ ನಮ್ಮ ಪಕ್ಕದಲ್ಲೇ ಖಾಲಿ ಇದ್ದ ಸ್ಥಳದಲ್ಲಿ ಗುಂಪು ಬೀಡು ಬಿಟ್ಟವು. ಸೂಕ್ಷ್ಮವಾಗಿ ಅವರನ್ನು ಅವಲೋಕಿಸತೊಡಗಿದೆ. ಹುಡುಗರಲ್ಲಿ ಕೆಲವರು ತಲೆಗೆ ಪೇಟ ತೊಟ್ಟ ಸಿಖ್‌ರಿದ್ದರೆ, ಇನ್ನು ಕೆಲವರು ತಲೆಗೆ ಕ್ಯಾಪ್ ತೊಟ್ಟು, ನಿಕ್ಕರ್ ಹಾಕಿಕೊಂಡು, ಬರೀ ಕಾಲು ಬಿಟ್ಟುಕೊಂಡು, ಓಡಾಡುವ ಹುಡುಗರನ್ನು ಕಂಡೆ. ತುಂಡುಲಂಗ ಜಂಪರ್ ತೊಟ್ಟು ಪಕ್ಷಿಯಂತೆ ಹಾರಾಡುವ ಹುಡುಗಿಯರು ನನ್ನ ಮನ ಸೆಳೆದರೆ, ರಂಗುರಂಗಿನ ಸಲ್ವಾರ್ ಕಮೀಜ್ ತೊಟ್ಟು, ಹುಲ್ಲೆಗಳ ತರಹ ನೆಗೆಯುತ್ತಾ ಕುಣಿಯುತ್ತಾ ಓಡಾಡುವ ಪಂಜಾಬೀ ಹುಡುಗಿಯರು ದೇವಲೋಕದ ಕನ್ನೆಯರ ಹಾಗೆ ತೋರಿದರು. ಯಾವುದೋ ಒಳ್ಳೆಯ ಶಾಲೆಯ ಮಕ್ಕಳಿರಬೇಕು ಇವರು ಎಂದು ಆಲೋಚಿಸಿದೆ. ಎಲ್ಲಾ ವರ್ಗದ, ಜಾತಿಯ, ಭಾಷೆಯ ಜನಾಂಗದ ಈ ಮಕ್ಕಳ ಆಟ, ಪಾಟ, ಕುಣಿತ ಕಂಡು ಈ ಆನಂದದ ಜೊತೆ ಭಯ ಕೂಡ ಉಂಟಾಗತೊಡಗಿತು. ದಿಲ್ಲೀಯ ಇಂದಿನ ಕಠಿಣ ಪರಿಸ್ಥಿತಿಯಲ್ಲಿ, ಭಯೋತ್ಪಾದಕರು, ಆತಂಕವಾದಿಗಳು ಎಲ್ಲೆಲ್ಲೂ ತಮ್ಮ ಜಾಲನ್ನು ಹರಡುತ್ತಿರುವಾಗ, ಎಲ್ಲೆಲ್ಲೂ ರಕ್ತದ ಓಕಳಿಯಾಟ ಆಡುತ್ತಿರುವಾಗ, ಭಯ, ಆತಂಕದ ನೆರಳು ಎಲ್ಲೆಡೆ ಹರಡುತ್ತಿರುವಾಗ, ಈ ಮಕ್ಕಳಿಗೆ ಏನು ಕೆಲಸ ಈ ಹಸಿರು ಹುಲ್ಲುಗಾವಲಿನಲ್ಲಿ? ಸಣ್ಣಗೆ ನಡುಗಿದೆ. ಈ ಹಸಿರು ಹುಲ್ಲುಗಾವಲು, ಕೆಂಪಗಾಗುವುದೇ? ಏನೂ ಅರಿಯದ ಹಸುಗೂಸುಗಳು ಇವು. ಯಾವ ಜಾತಿ, ಮತ, ಕುಲ, ಬಣ್ಣಗಳ ವ್ಯತ್ಯಾಸ ಅರಿಯದ ನಿಷ್ಕಳಂಕ, ನಿರ್ಮಲ, ನಿರಪರಾಧಿ ಈ ಮಕ್ಕಳ ಮುಂದಿನ ಜೀವನದ ಪಯಣ ಯಾವ ರೀತಿ , ಹೇಗೆ, ಎಲ್ಲಿ ಯಾವ ತರಹೆ ಜರುಗುವುದೋ ಯಾರು ಬಲ್ಲರು?

"ನಿಮ್ಮ ಹೆಂಡತಿ ಸಿಖ್‌ಳೆಂದು ಹೇಳಿದ ನೆನಪು."

ವರ್ಮನನ್ನು ಉದ್ದೇಶಿಸಿ ಮಾತನಾಡಿದೆ.

"ಹೌದು" ಎಂದ.

"ಸಿಖ್‌ಳನ್ನು ಯಾಕೆ ಮದುವೆಯಾದಿರಿ?"

"ಯಾಕೆ ಮದುವೆಯಾಗಬಾರದು? ಅವರೇನು ಮನುಷ್ಯರಲ್ಲವೇ?"

ನಗುತ್ತಾ ಕೇಳಿದ ವರ್ಮ.

ನಾನು ಪೆಚ್ಚಾದೆ.

"ಹಾಗಲ್ಲ. ಸುಮ್ಮನೆ ಕೇಳಿದೆ" ತಡವರಿಸಿದೆ.

"ಪಂಜಾಬೀಗಳಲ್ಲಿ, ಹಿಂದೂ-ಸಿಖ್‌ರಲ್ಲಿ ಯಾವ ತರಹ ಭೇದಭಾವವಿಲ್ಲ. ನಮ್ಮ ಭಾಷೆ, ಸಂಸ್ಕೃತಿ ಒಂದೇ. ನಾವು ಅವರ ಗುರುದ್ವಾರಗಳಿಗೆ ಹೋಗುತ್ತೇವೆ. ಅವರು ನಮ್ಮ ಗುಡಿಗಳಿಗೆ ಬರುತ್ತಾರೆ. ನಮ್ಮಲ್ಲಿ ಹರಕೆ ಹೊತ್ತು, ಮೊದಲನೇ ಮಗನನ್ನು ಸಿಖ್‌ನನ್ನಾಗಿ ಮಾಡುವ ಪರಿಪಾಠವಿದೆ. ನೂರಕ್ಕೆ ಎಂಬತ್ತರಷ್ಟು ಸಿಖ್‌ರು ಹಿಂದೂ ಮತದಿಂದ ಮತಾಂತರ ಹೊಂದಿದವರು ಎಂದು ಹೇಳುತ್ತಾರೆ. ವಿವಾಹ ಸಂಬಂಧ ಇಂದಿಗೂ ಮಾಡುತ್ತಾರೆ."

"ಹೊಸದಾಗಿ ಮತಾಂತರ ಹೊಂದಿದವರು ಮಾತ್ರ ಧರ್ಮಾಂಧತೆ ಉಳ್ಳವರಾಗುತ್ತಾರೆ." ತೆಪ್ಪಗೆ ಕುಳಿತಿದ್ದ ಕಪೂರ್ ಬಾಯಿ ತೆಗೆದಿದ್ದ.

"ಅದು ಹೇಗೆ?"

"ಹೇಗೆ ಅಂತ ಹೇಳಲಿಕ್ಕೆ ಸಾಧ್ಯವಿಲ್ಲ. ಆದರೆ, ಬಹುತೇಕ ಭಯೋತ್ಪಾದಕರು, ಹೊಸದಾಗಿ ಸಿಖ್ ಮತಕ್ಕೆ ಮತಾಂತರಗೊಂಡಿದ್ದವರು ಎಂದು ಒಂದು ನಂಬಿಕೆ ಇದೆ."

ಹೊಸದಾಗಿ ಮತಾಂತರ ಹೊಂದಿದವರು ಧರ್ಮಾಂಧತೆಯಿಂದ ಏಕೆ ನರಳುತ್ತಾರೆ? ಇದರಲ್ಲಿ ಏನು ಗುಟ್ಟು ಅಡಗಿದೆ?

ಇಸ್ಲಾಂ ಮತಕ್ಕೆ ಮತಾಂತರ ಹೊಂದಿದ ಬಹುತೇಕ ಹಿಂದೂಗಳು ಧರ್ಮಾಂಧತೆಯಿಂದ ನರಳಿ, ಹಿಂದೂಗಳ ಕಗ್ಗೊಲೆ, ಹಿಂಸೆ ಮಾಡಿದರೆಂದು ಇತಿಹಾಸ ತಿಳಿಸುತ್ತದೆಯಲ್ಲವೇ? ಹಿಂದೂ ದೇವಮಂದಿರಗಳ ನಾಶ, ಈ ಮತಾಂಧರಿಂದಲೇ ನಡೆಯಿತೆಂದು ಚರಿತ್ರೆಯ ಪುಟಗಳು ಸಾರುತ್ತದೆಯಲ್ಲವೇ? ಅವನ ಹೆಸರೇ ತಿಳಿಸುವಂತೆ 'ಕಾಫಿರ್' ಮಲ್ಲಿಕ್ ಒಬ್ಬ ಹಿಂದೂ ಆಗಿದ್ದು, ಮತಾಂತರಗೊಂಡ ನಂತರ, ಸೇನಾನಿ ಆಗಿ ಮಲ್ಲಿಕ್‌ನಾಗಿ, ದಕ್ಷಿಣಕ್ಕೆ ನುಗ್ಗಿ ಹಿಂದೂಗಳ ಕೊಲೆ, ರಕ್ತಪಾತ, ಹಿಂಸೆ ಜರುಗಿಸಿ, ಹಿಂದೂಗಳ ಪವಿತ್ರ ಮಂದಿರ, ಗುಡಿಗಳ ನಾಶ, ಧ್ವಂಸ ಮಾಡಿ, ಚರಿತ್ರೆಯ ಪುಟಗಳಲ್ಲಿ ತನ್ನ ಹೆಸರನ್ನು ಚಿರಸ್ಥಾಯಿಯಾಗಿ ಮಾಡಿದ್ದು ನಿಜವಲ್ಲವೇ? ಈ ಮತಾಂತರ ಧರ್ಮಯುದ್ಧ, ಕೊಲೆ, ಹಿಂಸೆ, ಧ್ವಂಸ, ಊರು ನಾಶ, ರಕ್ತಪಾತಗಳ ವಿರುದ್ಧ, ಗುರು ಗೋವಿಂದ ಸಿಂಹರು, ತಮ್ಮ ಶಿಷ್ಯರಿಗೆ ಸಿಡಿದೆದ್ದು ಕತ್ತಿ ಹಿಡಿದು, ವೀರಾವೇಶದಿಂದ ಹೋರಾಡಿರೆಂದು, ಅವರಿಗೆ 'ಸಿಂಹ'ದ ಪಟ್ಟಕಟ್ಟಿ, ತಾವೂ ಹೋರಾಡಿ, ವೀರಸ್ವರ್ಗ ಪಡೆದು ಚರಿತ್ರೆಯ ಪುಟಗಳಲ್ಲಿ ಹೆಸರನ್ನು ಚಿನ್ನದ ಅಕ್ಷರಗಳಲ್ಲಿ ಬರೆದಿದ್ದು ದಿಟವಲ್ಲವೆ?

ಮನುಷ್ಯನ ಹೃದಯದಲ್ಲಿ ದಯೆ, ಕರುಣೆ, ವಾತ್ಸಲ್ಯ, ಪ್ರೇಮ ಇರುವಂತೆ

ಕಟುಕತೆ, ಕೆಟ್ಟಗುಣ, ಇರುವುದೂ ಸ್ವಾಭಾವಿಕವೆನ್ನುತ್ತಾರೆ. ಎಲ್ಲಾ ಧರ್ಮಗಳೂ, ಪುರಾಣಗಳೂ, ದಾರ್ಶನಿಕ ತತ್ವಗಳೂ ಇದನ್ನು ಎತ್ತಿ ಹೇಳುತ್ತವೆ. ಎಲ್ಲಾ ಧರ್ಮದಲ್ಲೂ ದೇವತೆ-ಅಸುರಗಳ ವರ್ಣನೆ ಇದೆ. ಕೆಲವೊಮ್ಮೆ ಮಾನವನಲ್ಲಿ ದೇವಗುಣಗಳು ಜಾಸ್ತಿಯಾಗಿ ಮಹಾತ್ಮನೆನಿಸಿಕೊಳ್ಳುತ್ತಾನೆ. ಕೆಲವೊಮ್ಮೆ ಅಸುರಗುಣ ಜಾಸ್ತಿಯಾಗಿ ರಾಕ್ಷಸನಾಗಿ, ಪ್ರಜಾಪೀಡಕನಾಗಿ, ರಕ್ತಪಿಪಾಸಿಯಾಗಿ, ಆತಂಕಕಾರಿಯಾಗಿ, ಭಯೋತ್ಪಾದಕನಾಗಿ ವಿಜೃಂಭಿಸುತ್ತಾನೆ.

ಚರಿತ್ರೆಯ ತುಂಬಾ ಇಂತಹ ಕಟುಕ ರಾಜ, ಮಹಾರಾಜ, ಸುಲ್ತಾನ್, ನವಾಬ್ ಮತ್ತು ಬಾದ್‌ಶಹಾರ ಹುಚ್ಚು ನಡವಳಿಕೆ, ರಕ್ತಪಿಪಾಸಿತನ, ಧೂರ್ತತನ, ಮೂರ್ಖತನ ಕಾಣಬಹುದಾಗಿದೆ. ತೈಮೂರ್ ಲಂಗ್, ಅಲ್ಲಾವುದ್ದೀನ್ ಖಿಲ್ಜೀ, ತೊಘಲಕ್, ಬಾಬರ್, ಲೋದಿ, ಔರಂಗಜೇಬ್, ನಾದಿರ್ ಶಾ, ಅಬ್ದಾಲಿ ಮುಂತಾದವರು ದಿಲ್ಲೀ ಜನರ ಹತ್ಯೆ ನಡೆಸಿ, ರಕ್ತದೋಕಳಿ ಆಡಿ, ತಮ್ಮ ರಕ್ತದಲ್ಲಿ ರಾಕ್ಷಸ ಗುಣಗಳಿರುವುದನ್ನು ಸಾಬೀತು ಪಡಿಸಿದ್ದಾರಲ್ಲವೇ?

ಈ ಪ್ರಪಂಚವಿರುವ ತನಕ, ಪ್ರಾಯಶಃ ಮನುಷ್ಯನ ಈ ರಾಕ್ಷಸೀ ಗುಣಗಳು ಸಾಯುವುದಿಲ್ಲವೇನೋ!

"ಆ ದಿನ ನನ್ನ ಭಾವನೆಗಳನ್ನು ನೆನಸಿಕೊಂಡರೆ, ಇಂದಿಗೂ ನನ್ನ ರಕ್ತ ಕುದಿಯುತ್ತದೆ. ನಾನು ಹುಚ್ಚನಾಗಿದ್ದೆ.

'ಯಾಕೆ? ಯಾಕೆ? ನನ್ನ ತಮ್ಮನನ್ನು ಕೊಲ್ಲಲು ನಿನಗೇನಾಗಿತ್ತು?' ಕಿರಿಚಿದ್ದೆ ನಾನು. 'ನಿನ್ನ ತಮ್ಮನೆಂದು ತಿಳಿದಿದ್ದರೆ ನಾನು ಕೊಲ್ಲುತ್ತಿದ್ದನೆ?' ಸರ್ದಾರ್ಜೀ ಉತ್ತರಿಸಿದ್ದ. 'ಕಪೂರ್ ಎಂಬ ಹೆಸರಿಗಾದರೂ ನೀನು ಬೆಲೆ ಕೊಡಬಹುದಾಗಿತ್ತಲ್ಲ' 'ಹೆಸರಿನಲ್ಲಿ ಏನಿದೆ? ನನ್ನ ಕರ್ತವ್ಯ ಮಾಡಿದೆ.'

ಕಪೂರ್ ತನ್ನ ಮುಖವನ್ನು ಎರಡೂ ಕೈಗಳಿಂದ ಮುಚ್ಚಿಕೊಂಡ. ಅವನು ರೋಧಿಸುತ್ತಿದ್ದಾನೆಯೆ? ದುಃಖ ಮಿತಿಮೀರಿ, ಕಣ್ಣೀರು ಧಾರೆಯಾಗಿ ಹರಿಯುತ್ತದೆಯಲ್ಲವೆ? ಈ ಲೋಕದಲ್ಲಿ ಏಕೆ ಇಷ್ಟು ಕಷ್ಟ, ದುಃಖ, ದುಮ್ಮಾನಗಳಿವೆ? ಇದಕ್ಕೆ ಪರಿಹಾರವಿಲ್ಲವೆ?

"ಏಕೆ ಕಣ್ಣೀರು ಹಾಕುವೆ? ಸತ್ತ ನಿನ್ನ ತಮ್ಮ ಬದುಕಿ ಬರುವನೆ? ಅದರಲ್ಲೂ ಸಾವು ಸಾಮಾನ್ಯವಾಗಿ ಬಿಟ್ಟಿದೆಯಲ್ಲಾ!" 'ಸಾವಿಗಿಂತ ಕಠಿಣ ಮತ್ತು ಉದ್ಧಟ ಬೇರೊಂದಿಲ್ಲ ಎಂದು ಒಂದು ನಂಬಿಕೆ.........

'ಆದರೆ ಈಗ ಯಾವುದು ಕಷ್ಟ ಉತ್ಕಟ? ಸಾವೇ ಸುಲಭ, ಅದಕಿಲ್ಲ ಅಂಜಿಕೆ!' ಗಾಲೀಬ್‌ನ ಕವಿತೆ ಕೇಳಿಲ್ಲವೇ ನೀನು?"

"ಅವನು ನನ್ನ ತಮ್ಮನ ಕೊಲೆ ಮಾಡಿದ್ದಕ್ಕೆ ದುಃಖಿಸುತ್ತಿಲ್ಲ. ಅವನ ಮೇಲಿನ ಭರವಸೆ, ನಂಬಿಕೆ ಮತ್ತು ಸ್ನೇಹಗಳ ಕೊಲೆಯಾಯೊತಲ್ಲಾ ಎಂದು ಕಣ್ಣೀರಿಡು ತ್ತಿದ್ದೇನೆ."

ಬಿಕ್ಕುತ್ತಾ ಹೇಳಿದ ಕಪೂರ್.

ಹೇಗೆ ಅವನ ದುಃಖವನ್ನು ಶಮನ ಮಾಡುವುದು? ಅವನ ಮುಖದಲ್ಲಿ ಕಾಣುವ ಭಾವನೆಗಳ ಅತಿರೇಕಗಳ ರೇಖೆಗಳನ್ನು ಅಳಿಸಿ ಹಾಕುವುದಾದರೂ ಹೇಗೆ? ನಿಷ್ಕಳಂಕ ಸಹೋದರನ ಕೊಲೆ ಯಾವ ಧ್ಯೇಯ, ಯಾವ ಕಾರಣ, ಯಾರಿಗೋಸ್ಕರ ಮಾಡಿ ಈ ದುಃಖವನ್ನು ನೀಡಿದ ಸರ್ದಾರ್ಜೀ? ದಂಗೆಕೋರರ, ಉನ್ಮತ್ತ ಸೈನಿಕರ, ದರೋಡೆಕೋರರ, ಡಕಾಯಿತರ, ಪುಂಡು-ಪೋಕರಿಗಳ, ಯಾಕೆ, ಹೃದಯಶೂನ್ಯ ಆಕ್ರಮಣಕಾರರ ಹೃದಯದಲ್ಲಿರುವ ಕಟುಕತೆ, ಕಠಿಣ ಕಠೋರ, ನಿರ್ದಯ, ನಿಷ್ಕರುಣೆ, ಕ್ರೂರತನಗಳ ಪ್ರೇರಣೆಯಿಂದ ಈ ದುಷ್ಕಾರ್ಯ ಜರುಗಿತೆ? "ಆ ದಿನವೆಲ್ಲಾ ರೋಧಿಸಿದೆ. ರೋಧನೆ ಅಸಮಾಧಾನ ಮತ್ತು ಅವಮಾನಗಳಿಗೆ ಎಡೆಮಾಡಿತು. ದುಃಖ ಶಮನವಾಗಿ, ಕೋಪ ಭುಗಿಲ್ಲೆಂದು ಹೊಗೆಯಾಡಿತು. ಕೋಪದ ತಾಪ ತಾಳಲಾರದೆ ಅವನ ಮೇಲೆ ಬಿದ್ದೆ. ಅವನು ಬೊಬ್ಬೆ ಇಟ್ಟ. ಯಾಕೆಂದರೆ ಅವನ ಮುರಿದ ಕೈ ಹಿಡಿದು ಎಳೆದು ಅವನನ್ನು ಬಿಸಾಡಿದ್ದೆ. ನೋವು ತಾಳಲಾರದೆ, ಕಿರುಚಿ, ಹಾರಾಡಿದ. ಪೊಲೀಸರು ಬರದೇ ಹೋಗಿದ್ದರೆ, ಅವನನ್ನು ಸಾಯಿಸದೇ ಬಿಡುತ್ತಿರ ಲಿಲ್ಲ. ಅಂದೇ ನನ್ನನ್ನು ಬೇರೆ ಕೋಣೆಗೆ ಸಾಗಿಸಿದರು."

ಕಪೂರ್‌ನ ಧ್ವನಿಯಲ್ಲಿನ ಗಡಸು ತೀವ್ರವಾದ ಉದ್ವೇಗ, ಆವೇಶ, ಆತಂಕ ವಿತ್ತು. ಸ್ವಲ್ಪ ಸಮಯ ಸುಮ್ಮನಿದ್ದು ಕರವಸ್ತ್ರದಿಂದ ಕಣ್ಣು ಒರೆಸಿದ. ಪುನಃ ಸಮಾಧಾನ ಕಳೆದುಕೊಂಡು ಭಾವಾತಿರೇಕಕ್ಕೊಳಗಾಗಿದ್ದನೆಯೆ ಎಂಬ ಸಂದೇಹ ಉಂಟಾಯಿತು. ಹೃದಯದ ಧ್ವಂಧ್ವ ಪರಿಭಾಷೆಯ ಸ್ಥಿತಿ ಕಳವಳ ತರುವಂತಿತ್ತು.

"ಹೋ!" ಎಂಬ ಹುಯಿಲು ಕೇಳಿ ಬೆಚ್ಚಿಬಿದ್ದೆ. ಮಕ್ಕಳು, ಇದ್ದಕ್ಕಿದ್ದ ಹಾಗೆ ಬೊಬ್ಬೆ ಇಟ್ಟು, ಕಿರಿಚತೊಡಗಿದ್ದವು. ನಾವೆಲ್ಲ ಗಾಭರಿಯಾಗಿ, ಅವರ ಕಡೆ ನೋಡಿ, ಏನಾಗಿರಬಹುದೆಂದು ನೋಡತೊಡಗಿದೆವು.

"ಪಕಡೋ! ಪಕಡೋ!" ಎಲ್ಲಾ ಹುಡುಗರು ಹುಲ್ಲುಗಳ ನಡುವೆ ಓಡಾಡು ತ್ತಿದ್ದ ಒಂದು ಪುಟ್ಟ ನಾಯಿ ಮರಿಯನ್ನು ಹಿಡಿಯಲು ಪ್ರಯತ್ನಿಸುತ್ತಿದ್ದರು. ನಾಯಿ ಮರಿ ಮುದ್ದಾಗಿತ್ತು. ಯಾರಿಗಾದರೂ ಅದನ್ನು ಹಿಡಿದು ಮುದ್ದಾಡುವ ಆಸೆಯಾಗು ತ್ತಿತ್ತು. ಹತ್ತಾರು ಮಕ್ಕಳು ಅದನ್ನು ಹಿಡಿದು, ಹಿಚುಕಿ, ಅಪ್ಪಿ, ಮುದ್ದಾಡಿ, ತಮ್ಮ ಪ್ರೀತಿಯನ್ನು ತೋರಿಸುವುದನ್ನು ನೋಡಿದ ನನಗೆ ವಿಸ್ಮಯವಾಗಿತ್ತು. ಮಕ್ಕಳ

ನಿಷ್ಕಳಂಕ, ನಿರ್ಮಲ ಪ್ರೇಮದ ಪ್ರದರ್ಶನ ಚಕಿತಗೊಳಿಸುವಂತಿತ್ತು. ಮಕ್ಕಳ ಪ್ರಪಂಚವೇ ಒಂದು ಕುತೂಹಲಕರ, ವಿಸ್ಮಯ, ಆನಂದದ ಲೋಕ ಎಂದು ತೋರಿತು. ಈ ಮಕ್ಕಳಲ್ಲಿ ಎಷ್ಟು ಮಂದಿ, ವಯಸ್ಕರಾದಾಗ, ಉತ್ತಮ ಜವಾಬ್ದಾರಿಯುತ ಪ್ರಜೆಗಳಾಗುತ್ತಾರೆ? ಎಷ್ಟು ಮಂದಿ, ವಿದ್ಯಾವಂತ, ಪ್ರತಿಭಾವಂತ, ವ್ಯಕ್ತಿಗಳಾಗಿ, ವಿವಿಧ ಕ್ಷೇತ್ರಗಳಲ್ಲಿ ದುಡಿಯುವ ಪ್ರಜ್ಞಾವಂತರಾಗುತ್ತಾರೆ? ಎಷ್ಟು ಮಂದಿ, ಭಯೋತ್ಪಾದಕ, ಆತಂಕವಾದಿಗಳಾಗಿ, ಸಾಮಾನ್ಯ ಜನರ, ನಿರಪರಾಧಿಗಳ, ನಿಷ್ಕಳಂಕ ವ್ಯಕ್ತಿಗಳ ಪ್ರಾಣಹಾನಿ ಮಾಡಿ, ಜನಜೀವನವನ್ನು ಅಸ್ತವ್ಯಸ್ತ ಮಾಡುತ್ತಾರೆ?

"ಮಕ್ಕಳೇ! ಇಲ್ಲಿ ಬನ್ನಿ. ನಿಮಗೆ ಏನು ಬೇಕು?"

ಕಪೂರ್ ಮಕ್ಕಳನ್ನು ಕರೆದ. ಅವರು ಬರಲಿಲ್ಲ. ಆದರೆ, ಕಪೂರ್ ಮುಖವನ್ನೇ ನೋಡಿ, ಕಿಸಕಿಸನೆ ನಗಲಿಕ್ಕೆ ಶುರುಮಾಡಿದರು. ಮಕ್ಕಳಿಗೆ ನಗುವುದಕ್ಕೆ ಹೇಳಿ ಕೊಡಬೇಕೆ?

ಕಪೂರ್‌ನ ಮುಖ ನೋಡಿದೆ. ಮುಖದಲ್ಲಿ ಹುಸಿನಗು ಮಿನುಗುತ್ತಿತ್ತು. ಮಕ್ಕಳ ಆಟ ನೋಡಿ, ಇವನು ನಲಿಯುವಂತಾಯಿತಲ್ಲ ಎಂದು ನನ್ನ ಮನಸ್ಸು ಹಗುರವಾಯಿತು. 'ಮಕ್ಕಳ ಆಟ' ಎಂದು ಹಗುರವಾಗಿ ನೋಡುವ, ಮಾತನಾಡುವ ನಾವು ಈ ಮಕ್ಕಳ ಆಟದಿಂದ ಎಷ್ಟು ಸುಖ ಸಿಗುತ್ತದೆ ಎಂಬ ವಿಷಯದಲ್ಲಿ ಗಂಭೀರವಾಗಿ ವಿಚಾರ ಮಾಡುತ್ತೇವೆಯೆ?

"ಏನು ಬೇಕು ನಿಮಗೆ?"

ಪುನಃ ಕೇಳಿದ ಕಪೂರ್. ಮಕ್ಕಳು ಉತ್ತರಿಸಲಿಲ್ಲ. ಮಕ್ಕಳಿಗೆ ನಾವು ಕೊಡುವ ಮಹತ್ತರ ಕೊಡುಗೆ, 'ಜವಾಬ್ದಾರಿಯ ಬೇರುಗಳು ಮತ್ತು ಸ್ವತಂತ್ರದ ರೆಕ್ಕೆಗಳು' ಎಂದು ಹೇಳುತ್ತಾರೆ. ಆದರೆ, ಜವಾಬ್ದಾರಿಯ ಹೊರೆಯನ್ನು ಹೊರಿಸಿ, ಅದರ ಬೇರುಗಳನ್ನು ಬೆಳೆಸುವುದು ಎಷ್ಟು ಕಷ್ಟ! ಎಷ್ಟು ಬಗೆಯ ಗೊಬ್ಬರ, ಸಮಯಕ್ಕೆ ಸರಿಯಾದ ನೀರು, ಕಳ್ಳಕಾಕರ ಭಯದ ನಿವಾರಣೆ, ಪ್ರಕೃತಿ ವಿಕೋಪದಿಂದ ಕಾಪಾಡುವಿಕೆ, ಮಕ್ಕಳ ಜವಾಬ್ದಾರಿಯ ಬೇರುಗಳನ್ನು ಆಳವಾಗಿ ಬೆಳೆಸುವುದಕ್ಕೆ ಸಹಾಯಕವಾಗುವುದು? ಮಕ್ಕಳಿಗೆ ಸ್ವಾತಂತ್ರದ ರೆಕ್ಕೆ ಬೆಳೆಸಿ, ಎಷ್ಟರ ಮಟ್ಟಿಗೆ, ಎಲ್ಲಿಯವರೆಗೆ ಹಾರಾಡಲು ಕಲಿಸಬೇಕು?

ತಂದೆ-ತಾಯಿಯರಿಗೆ ಈ ವಿಷಯದಲ್ಲಿ ಎಷ್ಟು ಅನುಭವಗಳಿವೆ? ಅನುಭವ ವಿದ್ದರೂ, ಹೇಗೆ ಹೇಳಿಕೊಡುವುದು? ಮಕ್ಕಳ ಬೆಳವಣಿಗೆಗೆ, ವಿಕಾಸಕ್ಕೆ, ಏಳಿಗೆಗೆ ತಂದೆ ತಾಯಿಯರ ಪಾತ್ರ ಬಹಳ ದೊಡ್ಡದು ಎಂದು ಹೇಳುತ್ತಾರೆ. ಅವರು ತಮ್ಮ ಕರ್ತವ್ಯದ ಜೊತೆಗೆ, ಸ್ನೇಹದ ಹಸ್ತವನ್ನು ಚಾಚಬೇಕಂತೆ. ಹೆತ್ತವರು ಮಕ್ಕಳ ಜೊತೆ

ಸ್ನೇಹಿತರೂ ಆಗಿರಬೇಕೆಂದರೆ ಹೇಳಿದಷ್ಟು ಸುಲಭವೇ? ಎಂತಹ ಕರ್ತವ್ಯ ಮತ್ತು ಯಾವ ಪರಿಯ ಸ್ನೇಹವನ್ನು ತೂಗಿಸುವುದು. ಎರಡನ್ನೂ ತಕ್ಕಡಿಯಲ್ಲಿ ಹಾಕಿ, ಮಕ್ಕಳನ್ನು ತೂಗಿಸುವುದಕ್ಕೆ ಹೆತ್ತವರ ಬಳಿ ಸಾಕಷ್ಟು ವಿದ್ಯೆ, ಅನುಭವ, ಬುದ್ಧಿ, ಚಾಕಚಕ್ಯತೆ, ಸಮಯ, ಸಂಧರ್ಭ, ಸ್ಥಿತಿ ಗತಿ, ಆರೋಗ್ಯ, ಹಣ, ವೃತ್ತಿ ಇರಬೇಕಲ್ಲವೇ? ಆದರೆ ಈ ಎಲ್ಲ ಗುಣಗಳು ಎಲ್ಲರಲ್ಲೂ ಇರಲು ಸಾಧ್ಯವೇ? ನೆಲ ನಡುಗಿಸುವ ವೇಧಾವಿತನದ ಅವಶ್ಯಕತೆ ಬೇಕೆ? ಸಾಮಾನ್ಯ ಜ್ಞಾನವಿದ್ದು ಮತ್ತು ಪ್ರೀತಿಸುವ ಮನಸ್ಸಿದ್ದರೆ ಸಾಲದೆ? ಮಕ್ಕಳು, ಹೆತ್ತವರು ತಮ್ಮನ್ನು ರಕ್ಷಿಸುತ್ತಾರೆ, ಭದ್ರತೆಯ ಹೊದ್ದಿಕೆ ಹೊದಿಸಿ ಕಾಪಾಡುತ್ತಾರೆ ಎಂಬ ಬಲವಾದ ಆಸೆ ಹೊಂದಿರುತ್ತಾರಂತೆ. ಆಹಾರ, ಆಟ, ಓಟ, ಓದು, ಒಡನಾಟ, ಇವೆಲ್ಲರ ಜೊತೆ, ಹೆತ್ತವರ ಸ್ನೇಹ ಮತ್ತು ಪ್ರೀತಿಯ ನೆಲೆ ಬಹು ಮುಖ್ಯ ಎನ್ನುತ್ತಾರೆ. ಆದರೆ ತಂದೆ-ತಾಯಂದಿರು, ಒಬ್ಬರಿಗೊಬ್ಬರು ಪ್ರೀತಿಸದೆ, ಗೌರವಿಸದೆ, ಆದರಿಸದೆ ಇದ್ದರೆ, ಭದ್ರತೆಯ ಕವಚ ಮಕ್ಕಳಿಗೆ ಲಭಿಸುವುದುದಾದರೂ ಹೇಗೆ?

ಸಾಗೂ, ಕಪೂರ್, ಕಮಲಕುಮಾರಿ, ಸರದಾರ್‌ಜೀ ಇವರನ್ನು ಹೆತ್ತವರು ಈ ಗುಣಗಳನ್ನು ಹೊಂದಿದ್ದರೆ?

"ಕತ್ತಲಾಯಿತು ಹೋಗೋಣವೇ?"

ವರ್ಮನ ತುತ್ತೂರಿ ನನ್ನ ಯೋಚನಾ ಲಹರಿಗೆ ಭಗ್ನ ತಂದಿತು. ಮೆಲಕ್ಕೆದ್ದು ಮನೆಕಡೆ ಹೆಜ್ಜೆ ಹಾಕಿದೆವು.

ಮಾರನೆಯ ದಿನ, ಬ್ಯಾಂಕ್‌ನೊಳಗೆ ಕಾಲಿಟ್ಟು, ನನ್ನ ಕೊಠಡಿಗೆಯೊಳಗೆ ಬಂದು, ಕುರ್ಚಿಯಲ್ಲಿ ಕುಳಿತೊಡನೆ, ಫೋನ್ ಬಾರಿಸಿತು. ಫೋನ್ ಕೈಗೆ ತೆಗೆದುಕೊಂಡು, "ಹಲೋ" ಎಂದೊಡನೆ, ಆ ಕಡೆಯಿಂದ, ಹೊಟ್ಟೆ ಡೀಎಮ್ "ಹೊಸಾ ಡಿ.ಎಮ್. ಒಬ್ಬರು ದಿಲ್ಲೀ ಕಸ್ಟಮರ್ ಸರ್ವೀಸ್ ಡಿಪಾರ್ಟ್‌ಮೆಂಟ್‌ಗೆ ಮರ್ಗವಾಗಿ ಬಂದಿ ದ್ದಾರೆ, ನಮ್ಮವರು ರೀ. ಮಂಗಳೂರಿನವರು. ನಿಮ್ಮ ಶಾಖೆಯ ಇನ್‌ಸ್ಪೆಕ್ಷನ್‌ಗೆ ಬರ್ತಾ ಇದ್ದಾರೆ. ಮಧ್ಯಾಹ್ನ ಒಂದು ಸ್ಟಾಫ್ ಮೀಟಿಂಗ್ ಇಟ್ಟುಕೊಳ್ಳಿ"

"ನೀವೂ ಬರ್ತಿರಾ ಸಾರ್"

"ನನಗೆ ಬೇರೆ ಕೆಲಸವಿದೆ. ಬರಲಿಕ್ಕೆ ಆಗುವುದಿಲ್ಲ"

ಇತನಿಗೆ ಯಾಕೆ ನಮ್ಮ ಶಾಖೆಗೆ ಬರಲಿಕ್ಕೆ ಹೆದರಿಕೆ? ದೂರದ ದಿಲ್ಲಿ ತನಕ ಬಂದವನಿಗೆ ಬಜಾರ್ ಶಾಖೆಗೆ ಬರಲು ಏಕೆ ಭಯ, ಮುಜುಗರ, ಅನುಮಾನ?

ವರ್ಮಾ ಮತ್ತು ಮುಖಂಡ ಸಾಹನೀಯನ್ನು ಕರೆದು ವಿಷಯ ತಿಳಿಸಿದೆ.

ಮಧ್ಯಾಹ್ನ ಮೂರು ಗಂಟೆಗೆ ಮೀಟಿಂಗ್ ಶುರುವಾಯಿತು. ಮಂಗಳೂರು ಡೀ.ಎಮ್. ಬಹಳ ಉತ್ಸುಕತೆ, ಉಲ್ಲಾಸವನ್ನು ತನ್ನ ಮಧ್ಯವಯಸ್ಕನ ಮುಖದಲ್ಲಿ ತೋರಿ, ಈ ಬಜಾರ್ ಶಾಖೆಯ ಕುಶಲಿತ ವಾತಾವರಣವನ್ನೂ ತನ್ನ ಅನುಪಮ ಮಾತಿನ ಕೌಶಲ್ಯ; ಅನುಭವ, ತಾಳ್ಮೆ, ವಿವೇಕ, ವಿವೇಚನೆ, ವಿಚಾರಗಳ ಮೂಟೆಯನ್ನು ಹೊತ್ತು, ಶಾಖೆಯ ಸಿಬ್ಬಂದಿಯ ಮುಂದೆ ಇರಿಸಿ, ಅದರ ಬಾಯಿ ತೆರೆದು ಒಂದೊಂದೇ ಸರಕನ್ನೂ ಬಿಚ್ಚಿ ತೋರಿಸಿ, ಅವರನ್ನು ಹುರುದುಂಬಿಸಿ, ಅವರಲ್ಲಿ, ತಮ್ಮ ಉದ್ಧಾರ, ಶಾಖೆಯ ಉದ್ಧಾರ, ಬ್ಯಾಂಕ್‌ನ ಉದ್ಧಾರ, ಗ್ರಾಹಕರ ಉದ್ಧಾರ, ಕೊನೆಗೆ ದೇಶದ ಉದ್ಧಾರ ಮಾಡಬೇಕೆಂಬ ಮಹಾನ್ ಸಂಕಲ್ಪ ಮಾಡಲು, ಪ್ರಚೋದನೆ ಮಾಡಲು ನಿರ್ಧರಿಸಿ ಬಂದಂತೆ ಕುಳಿತಿದ್ದ.

ನನ್ನ ಸ್ವಾಗತ ಭಾಷಣ ಮಾಡಿ, ಮಂಗಳೂರು ಡಿ.ಎಮ್‌ಗೆ ಮಾತನಾಡುವಂತೆ ಕೇಳಿಕೊಂಡೆ.

ಡೀ.ಎಮ್ ಎದ್ದು ನಿಂತ. ಠೀವಿಯಿಂದ ಭಾಷಣ ಶುರುಮಾಡಿದ. ಇಂಗ್ಲೀಷ್‌ನಲ್ಲಿ.

"ಹಿಂದೀ! ಹಿಂದೀ" ಕೂಗಿದರೂ ಎಲ್ಲರೂ.

"ನನಗೆ ಹಿಂದೀ ಬಾಷೆ ಬರುವುದಿಲ್ಲ. ಕ್ಷಮಿಸಿ. ನೀವು ಇಂಗ್ಲೀಷ್ ಭಾಷೆ ಅರಿತಿದ್ದೀರಾ. ದಯವಿಟ್ಟು ನನ್ನ ಮಾತು ಕೇಳಿ" ಬೇಡಿದ ಡೀ.ಎಮ್.

"ನಹೀ! ನಹೀ ಇಂಗ್ಲೀಷ್ ನಹೀ ಚಲೇಗಾ! ಹಿಂದೀ ಮೇ ಬೋಲಿಯೇ!" ಚೀರಿದರು ಎಲ್ಲರೂ.

"ನೀವು ಈ ರೀತಿ ಕೂಗಿ, ಚೀರಿದರೆ, ಸಭೆಯ ಮರ್ಯಾದೆ ತೆಗೀತೀರಿ. ದಯವಿಟ್ಟು ಅವರ ಮಾತು ಕೇಳಿರಿ"

ನಾನು ಹಿಂದಿಯಲ್ಲಿ ವಿನಂತಿಸಿದೆ.

"ಹಿಂದೀ ಗೊತ್ತಿಲ್ಲದಿದ್ದರೆ, ಇಲ್ಲಿಗೆ ಯಾಕೆ ಬಂದರು? ಅವರ ಇಂಗ್ಲೀಷ್ ಭಾಷಣ ನಮಗೆ ಅರ್ಥ ಆಗುವುದಿಲ್ಲ"

ಒಬ್ಬ ಅಬ್ಬರಿಸಿದ.

ಮಂಗಳೂರು ಡೀ.ಎಮ್‌ನ ಮುಖ ನೋಡಿದೆ. ಅವನ ಮುಖ ಕಪ್ಪಿಟ್ಟಿತ್ತು. ಅವಮಾನದಿಂದಲೋ, ಕೋಪದಿಂದಲೋ ಅರಿವಾಗಲಿಲ್ಲ.

"ಹಿಂದೀ ಬಾಷೆ ಗೊತ್ತಿಲವಂತೆ? ಹೇಗೆ ಡೀ.ಎಮ್ ಆದಿರಿ? ಪ್ರೈಮರಿ ಸ್ಕೂಲ್‌ಗೆ ಹೋಗಲಿಲ್ಲವೇ?"

ಒಬ್ಬ ಅರಚಿದ.

"ಸ್ಕೂಲ್‌ಗೆ ಸೇರಪ್ಪ"

"ದಿಲ್ಲೀಗೆ ಏಕೆ ಬಂದಿರಿ? ಅಲ್ಲೇ ಇರಬಹುದಾಗಿತ್ತಲ್ಲ"

ಇನ್ನೊಬ್ಬ ಬಾಣ ಬಿಟ್ಟ.

"ಭಾಷೆ ಗೊತ್ತಿಲ್ಲದಿದ್ದವರೆಲ್ಲ ದಿಲ್ಲೀಗೆ ವರ್ಗವಾಗಿ ಬಂದು ನಮ್ಮ ಪ್ರಾಣ ತಿನ್ನುತ್ತಾರೆ" ಮತ್ತೊಬ್ಬ ಎಸೆದ ಇನ್ನೊಂದು ಬಾಣ.

"ಏನ್ರೀ ಇದು ? ಒಬ್ಬೊಬ್ಬರು ಒಂದೊಂದು ಮಾತನಾಡುತ್ತಾರಲ್ರೀ. ಹೇಗೆ ನಿಭಾಯಿಸುವುದು?"

ಡಿ.ಎಮ್, ಅಳುಮುಖ ಮಾಡಿ ಹೇಳಿದ.

ಎಲ್ಲೋ ಇದ್ದ ಹಲ್ಲುಬ್ಬ, ಒಂದು ಮುರಿದ ಕುರ್ಚಿ ಕೈಯಲ್ಲಿ ಹಿಡಿದೆತ್ತಿ, ಡಿ.ಎಮ್‌ನ ಮುಂದಿದ್ದ ಮೇಜಿನ ಮೇಲೆ ರೊಪ್ಪೆಂದು ಬಿಸಾಡಿ, ಬೊಬ್ಬೆ ಇಟ್ಟ:

"ಈ ಕುರ್ಚಿ ನೋಡಿ! ಎಷ್ಟು ಹಾಳೇದಾಗಿದೆ! ಇದರಲ್ಲಿ ಕೂತು ಕೆಲಸ ಮಾಡಬೇಕಂತೆ ನಾವು!"

ಇಂಗ್ಲೀಷ್‌ನಲ್ಲಿ ಒದರಿದ ಅವನ ಬೊಬ್ಬೆ ಡಿ.ಎಮ್.ಗೆ ಅರ್ಥವಾಯಿತು. ಆದರೆ ಹಲ್ಲುಬ್ಬ ಬಿಸಾಡಿದ ಮುರುಕು ಕುರ್ಚಿಯ ಶಬ್ದಕ್ಕೆ ಬೆದರಿದ ಅವನು ಉತ್ತರ ನೀಡಲು ಅಸಮರ್ಥನಾದ. ಅವನ ಮುಖ ಈಗ ನಿಜವಾಗಲೂ ಹೆದರಿಕೆಯಿಂದ ಕಪ್ಪಾಗಿತ್ತು. ಬಿಸಾಡಿದ ಮುರಿದ ಕುರ್ಚಿಯಿಂದ ತನಗೆ ಹಾನಿಯಾಗದಿದ್ದರೂ, ಮುರಿದ ಮೇಜನ್ನು ಎತ್ತಿ ತನ್ನಮೇಲೆ ಒಗೆದರೆ ಎಲ್ಲಿ ಅನಾಹುತವಾಗುತ್ತದೋ ಎಂದು ಹೆದರಿ,

"ರೀ! ಸಾಕುಮಾಡ್ರೀ ಈ ಮೀಟಿಂಗ್! ಒಳ್ಳೇ ರೌಡಿಗಳ ತರಹ ವರ್ತಿಸುತ್ತಾ ಇದ್ದಾರಲ್ರೀ"

"ಡೀ.ಎಮ್ ಸಾಬ್! ದೇಖ್‌ಲಿಯಾ ಕೈಸೇ ಹೈ ಬ್ರಾಂಚ್ ಕೀ ಹಾಲಾತ್?"

ಒದರಿದ ಸಿಬ್ಬಂದಿ ನಾಯಕ ಸಿಂಗ್.

"ಈ ಶಾಖೆಯಲ್ಲಿ ಕುಡಿಯಲು ನೀರು ಸಿಗುವುದಿಲ್ಲ. ಊಟ ಮಾಡಲು ಡೈನಿಂಗ್ ಟೇಬಲ್ ಇಲ್ಲ. ಊಟದ ವೇಳೆಯಲ್ಲಿ ಇಸ್ಪೀಟ್ ಆಡಲು ಬಿಡುವುದಿಲ್ಲ!"

ಹಲ್ಲುಬ್ಬನ ಆಬ್ಬರ ಜೋರಾಯಿತು. ಪರಿಸ್ಥಿತಿ ವಿಕೋಪಕ್ಕೆ ತಿರುಗುವ ಭಯ ಉಂಟಾಯಿತು.

ವರ್ಮಾ, ನನ್ನ ಬಳಿ ಬಂದು, ಕಿವಿಯ ಹತ್ತಿರ ತನ್ನ ಬಾಯ ಇರಿಸಿ, ಪಿಸುಗುಟ್ಟಿದ.

"ತಮಾಷೆ ಸಾಕು ಸಾಬ್! ಹುಡುಗರು ಇವನಿಗೆ ಹೊಡೆದಾರು. ತಾವು ಮಾತನಾಡಿ."

ಕುಳಿತಲ್ಲಿಂದ ಎದ್ದೊಡನೆ, ಹುಡುಗರು ಒತ್ತಿ ಹಿಡಿದಿದ್ದ ನನ್ನ ಮೇಲಿನ ಕೋಪದ ಪ್ರತೀಕವನ್ನೂ ಒಮ್ಮೇಲೆ ಸ್ಫೋಟಿಸಿದರು.

"ಬೈಟೋ! ಬೈಟೋ! ಡಿ.ಎಮ್ ಸಾಬ್ ಬೋಲ್‌ನೆ ದೋ!"

"ಡೀ.ಎಮ್ ಸಾಬ್ ಮಾತನಾಡಲಿಕ್ಕೆ ಬರಲಿಲ್ಲ. ನೀವು ಮಾತನಾಡುವುದನ್ನು ಕೇಳಲಿಕ್ಕೆ, ನಿಮ್ಮ ಕುಂದು ಕೊರತೆಗಳು, ನಿಮ್ಮ ಅನಿಸಿಕೆಗಳು, ನಿಮ್ಮ ಇಚ್ಛೆ, ನಿಮ್ಮ ಏನೇ ಕಷ್ಟ ತೊಂದರೆಗಳನ್ನು ಕೇಳಿ ತಿಳಿದುಕೊಳ್ಳಲು ಬಂದಿದ್ದಾರೆ. ನಿಮ್ಮ ಈ ರೀತಿ ಸ್ವಭಾವ, ನಡೆತೆ ಅವರಿಗೆ ಬೇಸರ ತಂದಿರಬಹುದು. ಆದರೆ, ಇದೆಲ್ಲಾ ಅವರಿಗೆ ಬಹಳ ಸ್ವಾಭಾವಿಕವಾಗಿದೆ, ಅವರಿಗೆ ಅನುಭವವಾಗಿದೆ..."

"ಹಾಗಾದರೆ, ನಮ್ಮ ತೊಂದರೆಗಳನ್ನು ಕೇಳಿ-ಮೊದಲನೆಯ ತೊಂದರೆ:- ಈ ಶಾಖೆಯಲ್ಲಿ ಕೆಲಸ ಮಾಡುವ ವಾತಾವರಣ, ಚೆನ್ನಾಗಿಲ್ಲ. ಇಲ್ಲಿ ಉಸಿರು ಕಟ್ಟಿರುವ ವಾತಾವರಣ ಇದೆ. ಮಿಲಿಟರಿ ಶಿಸ್ತು ಇದೆ. ಮೊದಲು ಇದನ್ನು ಸರಿಪಡಿಸಲಿಕ್ಕೆ ಹೇಳಿ"

ಕಾಶ್ಮೀರಿ ನಾಯಕ ಸಾಹನೀ ತನ್ನ ಸಣ್ಣ ಧ್ವನಿಯನ್ನು ಆದಷ್ಟು ಹಿಗ್ಗಿಸಿ ಹೇಳಿದ.

"ಪಾನೀ ! ಪಾನಿ!"

ಹಲ್ಲುಬ್ಬು ಕೂಗಿದ.

"ಕುರ್ಚಿ ! ಕುರ್ಚಿ! ನಯಾ ಕುರ್ಚಿ ದೇದೋ"

"ಬರ್ಷ ಪಾನೀ ದೇ ದೋ! ಹಿಂದಿ ಮೇ ಬೋಲೋ"

ಒಬ್ಬೊಬ್ಬ ಒಂದೊಂದು ಬಗೆಯ ಬೇಡಿಕೆಯನ್ನು ಮಂಡಿಸಿದರು. ಮಂಡಿಸಿದ ಬಗೆಯೂ, ಚಿತ್ರ ವಿಚಿತ್ರವಾಗಿತ್ತು. ಹೀಗೆ ಮುಂದುವರೆದರೆ, ಸ್ವಘಾತ ಮಾಡಿಕೊಂಡು, ಪರಘಾತವೂ ಮಾಡಿಯಾರು ಎಂದು ಎಣಿಸಿದೆ.

"ನೀವು ಹೀಗೆ ಮಾತನಾಡುತ್ತಿದ್ದರೆ, ನಾನು ನನ್ನ ಮಾತೃಭಾಷೆಯಲ್ಲಿ ಮಾತನಾಡಬೇಕಾಗುತ್ತದೆ"

ನನ್ನ ಬೆದರಿಕೆಗೆ ಅವರು ಮಣಿಯಲಿಲ್ಲ.

"ಹಿಂದೀ! ಹಿಂದೀ ಇಂಗ್ಲೀಷ್ ನಹೀ ಚಾಹಿಯೇ"

ಅಬ್ಬರಿಸಿದ ಹೆಬ್ಬಾಯಿ ಹಲ್ಲುಬ್ಬ.

"ನಿಮಗೆ ಇಂಗ್ಲಿಷ್ ಬೇಡವಾದರೆ, ಇಂಗ್ಲಿಷ್ ಷರ್ಟ್, ಇಂಗ್ಲಿಷ್ ಪ್ಯಾಂಟ್, ಇಂಗ್ಲಿಷ್ ಕೋಟ್, ಇಂಗ್ಲಿಷ್ ಸೂಟ್, ಇಂಗ್ಲಿಷ್ ಬೂಟ್ಸ್, ಇಂಗ್ಲಿಷ್ ಟೈ ಯಾಕೆ ಹಾಕಿಕೊಂಡು ಬಂದಿದ್ದೀರಾ? ಹಿಂದೀ ಮೇಲೆ ಅಭಿಮಾನ ಇರುವವರು ಹಿಂದೀ ಜುಬ್ಬಾ, ಹಿಂದೀ ಧೋತಿ, ಹಿಂದೀ ಪೈಜಾಮಾ, ಹಿಂದೀ ಚಪ್ಪಲಿ ಯಾಕೆ

ಧರಿಸುವುದಿಲ್ಲ? ನಿಮಗೇ ನಾಚಿಕೆ, ಮಾನಮರ್ಯಾದೆ ಬೇಡವೇ? ಘನ ಅತಿಥಿಯೊಬ್ಬರು ಶಾಖೆಗೆ ನಿಮ್ಮನ್ನು ಕಾಣಲು ಬಂದಿರುವಾಗ ಹೇಗೆ ನಡೆದುಕೊಳ್ಳಬೇಕೆಂಬ ಶಿಷ್ಟಾಚಾರ ತಿಳಿದಿಲ್ಲವಲ್ಲ! ಎಂತಹ ಜನ ನೀವು?"

ಧ್ವನಿ ಏರಿಸಿ ಮಾತನಾಡಿದೆ ನಾನು.

ನನ್ನ ಧ್ವನಿಗೆ ಅವರು ಸ್ವಲ್ಪ ಮೆತ್ತಗಾದ ಹಾಗೆ ಕಾಣಿಸಿತು.

" 'ಬ್ಯಾಂಕ್' ಎಂಬ ಪದಕ್ಕೆ ಹಿಂದೀ ಅಥವಾ ಬೇರೆ ಯಾವುದೇ ನಮ್ಮ ಭಾಷೆಯಲ್ಲಿ ಸಮನಾರ್ಥ ಕೊಡುವ ಪದ ಇಲ್ಲದಿರುವಾಗ, ಇದೇ 'ಬ್ಯಾಂಕ್' ನಲ್ಲಿ ನೀವೆಲ್ಲಾ ನೌಕರೀ ಮಾಡಿ, ದಿನವಿಡೀ ಈ 'ಬ್ಯಾಂಕ್' ಎಂಬ ಪದ ಉಪಯೋಗಿಸಿ, ಇದರಲ್ಲೇ ನಿಮ್ಮ ಜೀವನವನ್ನು ಸವೆಸುವವರು, ಇಂಗ್ಲಿಷ್ ಭಾಷೆ ಬೇಡ ಎಂದು ಬೊಬ್ಬೆರಿಯುತ್ತೀರಲ್ಲಾ, ನಿಮಗೆ ಏನು ಹೇಳುವುದು?"

ನನ್ನ ಪ್ರವಚನ ಮುಂದುವರೆಸಿದೆ.

ಗಲಾಟೆ, ದೊಂಬಿ ಕಡಿಮೆಯಾಗುತ್ತಾ ಬಂದಿತು.

"ನಿಮ್ಮಲ್ಲಿ ಎಷ್ಟು ಜನ ನಿಮ್ಮ ಮಕ್ಕಳನ್ನು ಹಿಂದೀ ಮಾಧ್ಯಮದ ಶಾಲೆಗೆ ಕಳುಹಿಸುತ್ತಾ ಇದ್ದೀರಾ? ಹೇಳಿ ನೋಡೋಣ?... ಎಲ್ಲರಿಗೂ ಇಂಗ್ಲಿಷ್ ಔಷಧ ಬೇಕು. ಎಲ್ಲರಿಗೂ ಇಂಜಿನಿಯರ್, ಡಾಕ್ಟರ್ ಆಗಬೇಕು. ಎಲ್ಲರಿಗೂ ಇಂಗ್ಲೆಂಡ್, ಅಮೆರಿಕಾಗೆ ಹೋಗಬೇಕು! ಇಲ್ಲಿ, ಈ ಶಾಖೆಯಲ್ಲಿ ಮಾತ್ರ ಇಂಗ್ಲಿಷ್ ಬೇಡ! ಅಲ್ಲವೇ?"

ನನ್ನ ಧ್ವನಿಯ ಮಟ್ಟ, ನನಗೆ ಅರಿವಿಲ್ಲದೆಯೇ ಮುಗಿಲು ಮುಟ್ಟಿ, ಗಾಳಿಯ ಕೊರತೆ ಉಂಟಾಗಿ, ಉಸಿರು ಕಟ್ಟುವಂತಾಯಿತು. ಕಾಶ್ಮೀರೀ ನಾಯಕನ ಹೇಳಿಕೆ-ನಮ್ಮ ಶಾಖೆಯ ಉಸಿರು ಕಟ್ಟುವ ವಾತಾವರಣ-ನಾನು ನಿಜ ಮಾಡುತ್ತಿದ್ದೇನೆಯೇ ಅನ್ನುವ ಭೀತಿ ಉಂಟಾಯಿತು. ಗಂಟಲು ಸರಿ ಮಾಡಿಕೊಂಡೆ.

"ಈ ದಿನದ ಮೀಟಿಂಗ್ ಇಲ್ಲಿಗೆ ಸಾಕು. ನೀವೆಲ್ಲ ನಿಮ್ಮ ನಿಮ್ಮ ಜಾಗಕ್ಕೆ ಹೋಗಿ ಕೆಲಸ ಮಾಡಿ" ಎಂದು ಹೇಳಿ, ನನ್ನ ಕೊಠಡಿಗೆ ಧಾಪು ಕಾಲು ಹಾಕುತ್ತಾ ನಡೆದೆ. ನನ್ನ ಹಿಂದೆ, ತಲೆ ತಗ್ಗಿಸಿ, ಮೈ ಕುಗ್ಗಿಸಿ, ಸೂಟ್ ಬೂಟ್ ಧಾರಿ ಡಿ.ಎಮ್. ನಡೆದ.

"ನೀವು ರಿಪೋರ್ಟ್ ಮಾಡ್ರಿ! ಇವರನ್ನೆಲ್ಲಾ ಇಲ್ಲಿಂದ ವರ್ಗ ಮಾಡಿ ಬಿಡೋಣ. ಏನು ಧಿಮಾಕು? ಎಂತಹ ನಡತೆ? ಏನು ಕಥೆ? ಸ್ವಲ್ಪನೂ ಶಿಸ್ತಿಲ್ಲ, ತಿಳುವಳಿಕೆ ಇಲ್ಲ!"

ಬುಸುಗುಟ್ಟಿದ ಡೀ.ಎಮ್. ಕಣ್ಣುಗಳು ಕೆಂಪಾಗಿ ಕಣ್ಣು ಗುಡ್ಡೆಗಳು ಸಿಡಿದು

ಹೊರಗೆ ನನ್ನ ಮೇಲೆ ಬೀಳಲು ಕಾತುರವಾಗಿದ್ದವು. ಮುಖ ಕೆಂಪೇರಿ, ಅದರ ಶಾಖ ಆಗಲೇ ನನ್ನನ್ನು ತಟ್ಟಿ ಎಬ್ಬಿಸಿದವು. ನಾನು ಎದ್ದು ಫ್ಯಾನ್ ಸ್ವಿಚ್ ಹಾಕಿ, ಕುಳಿತೆ. ತಂಗಾಳಿ ಬೀಸಿ ಹಾಯೆನಿಸಿತ್ತು.

"ಎದುರಿಗೆ ಚಂದ ಮಾತಾಡಿ, ಹಿಂದೆ ಬಾಕು ಹಾಕೋಣವೇ ಸಾರ್, ಇವರಿಗೆ?"

ನನ್ನ ಮಾತು ಅವನಿಗೆ ಅರ್ಥವಾಗಲಿಲ್ಲವೆಂದು ಮುಖ ಮಾಡಿದ. ಅಥವಾ ಅವನ ಜೀವನ ದೃಷ್ಟಿ, ಗುಣ, ಕರ್ಮ, ನೀತಿ ಸಾರ ನನಗೆ ಹೇಗೆ ತಿಳಿಯಿತೆಂದು ಚಕಿತಗೊಂಡು, ಮುಖ ಆ ರೀತಿ ಮಾಡಿಕೊಂಡನೆ?

"ಸಾರ್! ಇವರನ್ನು ಬೇರೆ ಶಾಖೆಗೆ ವರ್ಗ ಮಾಡಿದರೆ, ಹಾಲಿಗೆ ನಿಂಬೆಹಣ್ಣು ಹಿಂಡಿದ ಹಾಗೆ ಎನ್ನುತ್ತಾರೆ. ಒಳ್ಳೇ ಶಾಖೆಗಳನ್ನು ಕೆಡಿಸಿ ಬಿಡುತ್ತಾರೆ ಇವರು ಎಂಬ ಭಯ ನಮ್ಮ ಮೇಲಧಿಕಾರಿಗಳಿಗೆ. ಬೇರೆ ಶಾಖೆಯಲ್ಲಿ ಇಂತಹವರು ಇದ್ದರೆ, ಅವರನ್ನು ಈ ಶಾಖೆಗೆ ವರ್ಗ ಮಾಡುತ್ತಾರಂತೆ. ಕೆಟ್ಟರೆ, ಒಂದೇ ಶಾಖೆ ಕೆಡಲಿ; ಎಲ್ಲಾ ಶಾಖೆಗಳು ಕೆಡಬಾರದು. ಇದು ಇಲ್ಲಿನ ನೀತಿ ಸಾರ್!" ಎಂದು ವಿವರಿಸಿದೆ.

"ಇದು ನಿಜ ಎನ್ನಿ. ವರ್ಗದಿಂದ ಉಪಯೋಗವಾಗುವುದಿಲ್ಲ. ಆದರೆ ಹೇಗೆ ಇವರನ್ನು ಸುಧಾರಿಸುವುದು?"

ಚಿಂತಿತನಾದ ಡೀ.ಎಮ್.

"ಇವರನ್ನು ಸುಧಾರಿಸಲು ಸಾಧ್ಯವಿಲ್ಲ ಸಾರ್! ಆದರೆ ಶಾಖೆಯನ್ನು ಸುಧಾರಿಸಬಹುದು. ಈಗಾಗಲೇ ಸಾಕಷ್ಟು ಸುಧಾರಿಸಿದೆ."

"ಶಾಖೆಯನ್ನು ಸುಧಾರಿಸಿದ್ದೀರಿ ಎಂದರೆ ಇವರನ್ನು ಸುಧಾರಿಸಿದ ಹಾಗೆ, ಅಲ್ಲವೇನ್ರೀ?"

"ಹೆತ್ತವರೇ ಇವರನ್ನು ಸುಧಾರಿಸಲಿಕ್ಕೆ ಸಾಧ್ಯವಾಗದಿರುವಾಗ, ನಾನು ಹೇಗೆ ಸುಧಾರಿಸಲಿ ಇವರನ್ನು?"

ಕುರ್ಚಿಯಿಂದ ಮೇಲೆದ್ದು, 'ಬರ್ತೇನೆ' ಎಂದು ಹೇಳಿ ಹೊರಟು ಹೋದ ಡೀ.ಎಮ್. ನನ್ನ ಮಾತು ಅವನಿಗೆ ಬೇಕಿರಲಿಲ್ಲ. ಅದು ಸ್ಪಷ್ಟವಾಗಿತ್ತು. ವಾಕ್-ಔಟ್ ಮಾಡಿ, ತನ್ನ ದಾರಿ ಹಿಡಿದು ಹೊರಟುಹೋದ ಮಂಗಳೂರು ಡೀ.ಎಮ್.

"ಹೇಗಿದ್ದರೂ ಹೊಸ ಡೀ.ಎಮ್. ಬಂದಿದ್ದಾರೆ ದಿಲ್ಲೀಗೆ. ಶಾಖೆಯಲ್ಲಿ ವಿಧಿ ಪ್ರಕಾರ ಒಂದು ಗಣಪತಿ ಹೋಮ ಮಾಡಿಸಿ ಬಿಡೋಣ, ಸಾಬ್."

ಹೊಸದಾಗಿ ಮದುವೆಯಾಗಿ, ಇಂಗ್ಲಿಷ್ ಸೂಟ್ ಹಾಕಿಕೊಂಡು ಒಳಗೆ ಬಂದು ನಿಂತ ಸಾಗೂ ಹೇಳುತ್ತಿದ್ದ. ತಲೆ ಎತ್ತಿ ಅವನನ್ನು ನೋಡಿದೆ. ಜಬರ್ದಾಗಿ, ಸೂಟ್

ಹಾಕಿ, ಟೈ ಕಟ್ಟಿಕೊಂಡು, ಸ್ವದೇಶೀ ಹಿಂದೀ ಭಾಷೆಯಲ್ಲಿ ಸ್ವದೇಶೀ ದೇವರನ್ನು ಪೂಜಿಸಬೇಕೆಂದು, ಸಲಹೆ ನೀಡುತ್ತಿದ್ದ ಈ ಸಾಗುವನ್ನು ಸಿಗಿದು ತೋರಣ ಕಟ್ಟಿ, ಕೆಂಪು ಕೋಟೆಯ ಲಾಹೋರಿ ಗೇಟ್ ಮೇಲೆ ಏಕೆ ತೂಗಿ ಹಾಕಬಾರದು? ಅಥವಾ ಅವನ ತಲೆ ಬುರುಡೆಯನ್ನು ಹೌಸ್ ಖಾಸ್‌ನಲ್ಲಿರುವ ಕಳ್ಳರ ಕಂಭದ ಬಿಲಕ್ಕೆ ತುರುಕಬಾರದು?

ನನ್ನ ಅನಿಸಿಕೆಯ ಬಗ್ಗೆ ನನಗೇ ಹೇಸಿಗೆಯುಂಟಾಯಿತು. ಆದರೆ, ದೇವರ ಮೇಲೆ ಅಪಾರ ಭಕ್ತಿ, ಆಸಕ್ತಿ, ನಂಬಿಕೆ ಇಟ್ಟಿರುವ ಈ ಸಾಗೂವಿನ ಮನೋಭಾವಕ್ಕೆ ಏನು ಕಾರಣ? ದೇವರನ್ನು ನಂಬಿ, ವಿಧಿ ಆಚರಣೆಗಳಲ್ಲಿ ತೊಡಗಿಸಿ, ಶ್ರದ್ಧೆಯಿಂದ ತಮ್ಮ ಕೆಲಸವನ್ನು ಮಾಡಿದರೆ, ದೈವವು ಒಲಿಯದೇ ಇರುತ್ತದೆಯೇ? ಪುರುಷ ಪ್ರಯತ್ನ ಮಾಡದೆ, ಶ್ರದ್ಧೆಯಿಂದ ಕಾಯಕ ಮಾಡದೆ, ವಿಧಿ ಆಚರಣೆ ಮಾಡಿ, ವಿಧಿಯನ್ನು ನಿಂದಿಸಿ, ತಾನೂ ಹಾಳಾಗಿ, ತನ್ನನ್ನು ನಂಬಿದವರನ್ನು ಕೆಡಿಸಲು ಸತತ ಪ್ರಯತ್ನ ಮಾಡುತ್ತಿರುವ ಈ ಸಾಗೂವಿನ ತಾಮಸ ಗುಣಕ್ಕೆ ಮದ್ದಿಲ್ಲವೇ?

ಕುರ್ಚಿಯಲ್ಲಿ ಕುಳಿತ ನಾನು ಸ್ವಲ್ಪ ಕಾಲು ನೀಡಿದೆ. ಸೊಂಟ ನೋವೂ ಕಡಿಮೆಯಾಗಿರಲಿಲ್ಲ. ಈ ಸಾಗೂವಿನ ದೆಸೆಯಿಂದ ತಲೆನೋವು ಶುರು ಆಗಿತ್ತು. ನನ್ನ ಮಿಸುಗಾಟ, ಮುಖದಲ್ಲಿ ನೋವಿನ ಗೆರೆಗಳು ಕಾಣಿಸಿಕೊಂಡಿದ್ದನ್ನು ನೋಡಿ, ಸಾಗುವಿಗೆ ಅನುಮಾನವಾಗಿರಬೇಕು.

"ಮೈ ಸರಿಯಾಗಿದೆಯೇ ಸಾಬ್?"

"ಸೊಂಟ ನೋವು" ಎಂದೆ ಕ್ಷೀಣವಾಗಿ.

"ಡಾ. ಕಾಲ್ರಾನ ನೋಡಿ ಬಂದಿರಾ? ಅವನಿಂದ ಢೆಂಗೂ ರೋಗ ಸಾಲವಾಗಿ ಪಡೆದಿರಾ?"

ನಾನು ಉತ್ತರಿಸಲಿಲ್ಲ.

"ನಾನು ಬ್ಯಾಂಕ್‌ನಲ್ಲಿ ಇಲ್ಲದಿದ್ದಾಗ, ಗಲಾಟೆ, ತಕರಾರು ಆಯಿತಾ, ಸಾಬ್?"

"ಇಲ್ಲ. ಯಾಕೆ?"

"ಸೊಂಟ ನೋವಾಗಿರಬೇಕಾದರೆ, ಯಾರಾದರೂ ನಿಮಗೆ........"

"ಮುಚ್ಚು ಬಾಯಿ!"

ಕೂಗಿದೆ ನಾನು.

ಇವನಿಗೆ ಎಷ್ಟು ಅಹಂಕಾರ? ಈ ಅಹಂಕಾರದಿಂದ ದೇವರ ಪೂಜೆ ಮಾಡುತ್ತಾನಂತೆ!

ಶಾಖೆಯಲ್ಲಿ ನಿಷ್ಠೆಯಿಂದ, ಗೌರವದಿಂದ, ತೃಪ್ತಿ ನೀಡುವ ಹಾಗೆ, ತನಗೆ ದೊರಕುವ ಸಂಬಳಕ್ಕೆ ತಕ್ಕ ಹಾಗೆ, ಕೊಟ್ಟ ಕಾರ್ಯ ಮಾಡಿದರೆ, ದೇವರಿಗೆ ಹಿಡಿಸುವು ದಿಲ್ಲವೇ? ದೇವರಿಗೆ ಇದರಿಂದ ತೃಪ್ತಿಯಾಗುವುದಿಲ್ಲವೇ? ಬೇಸರವಾಗುವುದೇ? ಶಾಪ ಕೊಡುವವನೇ? ನಮ್ಮ ಜೀವನ ಅತೃಪ್ತಿ, ಅಶಾಂತಿ, ಅನಾರೋಗಗಳಿಂದ ನರಳಿಸುವನೇ? ಕೆಲಸ ನಿಷ್ಠೆಯಿಂದ, ಶ್ರದ್ಧೆಯಿಂದ ಮಾಡುವ ಸಂಸ್ಕೃತಿ ಬೆಳೆಸದೇ, ಬರಿದೇ ದೇವರ ಪೂಜೆ, ಪುನಸ್ಕಾರ, ವಿಧಿ ಸಂಸ್ಕಾರಗಳಲ್ಲೇ ಕಾಲ ಕಳೆಯುವ ಸಾಗೂ ವಿನಂತವರಿಗೆ ಹೇಗೆ ತಿದ್ದಿ ಹೇಳಿ ಕೊಡುವುದು?

"ಸ್ಟೇಟ್‌ಮೆಂಟ್ಸ್ ಮತ್ತು ರಿಟರ್ನ್ಸ್ ಎಲ್ಲಾ ಪೂರೈಸಿದೆಯಾ?"

"ನನಗೆ ಟೈಮೇ ಇಲ್ಲ ಸಾಬ್!"

ಸಲೀಸಾಗಿ ಉತ್ತರಿಸಿದ ಭೂಪ. ಶಾಖೆಯಲ್ಲಿ ಗಣಹೋಮ ಮಾಡಲಿಕ್ಕೆ ಸಮಯವಿದೆ, ಕೆಲಸ ಮಾಡಲಿಕ್ಕೆ ಟೈಮೇ ಇಲ್ಲ ಅಂತಾನೆ!

ಈ ಕುಡುಕನಿಗೆ ಸಮಯವೆಲ್ಲಿ ಸಿಗುತ್ತದೆ ಕೆಲಸ ಮಾಡಲು? 'ದುಡಿಯುವುದು ಕುಡುಕರ ಶಾಪ' ಎಂದು ಹೇಳಿದ್ದಾನಲ್ಲವೇ ಆಸ್ಕರ್ ವೈಲ್ಡ್.

ಸಮಯ ಪ್ರಜ್ಞೆಯೇ ಇಲ್ಲದವನಿಗೆ ಕಾರ್ಯ ಪ್ರಜ್ಞೆ ಎಲ್ಲಿರುತ್ತದೆ?

ತಲೆ ಯಾವಾಗಲೂ ಚಕ್ಕರ್ ಹೊಡೆಯುವವನಿಗೆ ಕಾಲಚಕ್ರದ ಅನುಭವ ಹೇಗೆ ಆದೀತು? 'ಕಾಲ ನಿಯಮವಿಲ್ಲದ ಕೆಲಸ ಸಾವಿಗೆ ಸಮ' ಎಂದು ಹೇಳಿದ ಹಿರಿಯರ ಮಾತು ಸಾಗೂವಿಗೆ ಎಷ್ಟು ಸೂಕ್ತ, ಎಷ್ಟು ಸಮಂಜಸ? ಹೆಂಡತಿಯ ಕೊಲೆ ಮಾಡುವವನು, ಕಾಲವನ್ನು ಕೊಲೆ ಮಾಡುವುದು ಕಷ್ಟವೇ?

"ನೂರಾರು ರಿಟರ್ನ್ಸ್ ಸ್ಟೇಟ್ಮೆಂಟ್ಸ್‌ಗಳಿಂದ ಏನು ಪ್ರಯೋಜನ ಸಾಬ್ ಬ್ಯಾಂಕ್‌ನವರಿಗೆ? ಸುಮ್ಮನೆ ಪೇಪರ್, ಹಣ, ಸಮಯ ಹಾಳು!" ಎಂದ ಸಾಗೂ.

ಪೇಪರ್ ಹಣವನ್ನು ಹಾಳು ಎಂದು ಹೇಳಿ ತನ್ನ ಮತ್ತು ನನ್ನ ಸಮಯವನ್ನು ಹಾಳು ಮಾಡುತ್ತಿರುವ ಸಾಗುವಿನ ಕತ್ತು ಹಿಡಿದು ಹೊರಗೆ ದಬ್ಬುವ ಮನಸ್ಸಾಯಿತು.

"ಈ ರಿಟರ್ನ್ಸ್, ಸ್ಟೇಟ್‌ಮೆಂಟ್ಸ್ ಬದಲು, ಡಿಪಾಸಿಟ್ ಕೂಡಿಸಿ, ಸಾಲ ವಸೂಲಿ ಮಾಡಿ ಎಂದು ಹೇಳಿದ್ದರೆ ಎಷ್ಟು ಚೆನ್ನ!"

"ನನ್ನ ಜೊತೆ ಚರ್ಚೆ ಮಾಡಿ, ಸಮಯ ಹಾಳು ಮಾಡುವ ಬದಲು ಹೋಗಿ ಕೆಲಸ ಮಾಡಿ!"

ನನ್ನ ಗದರಿಕೆಯ ಧ್ವನಿ ಕೇಳಿ, ಅವನಿಗೆ ಅಚ್ಚರಿಯಾಗಿರಬೇಕು.

"ರಕ್ತ ಪರೀಕ್ಷೆ ಮಾಡಿಸಿ ಸಾಬ್! ಢೆಂಗೂ ಜ್ವರ ಇರಬಹುದು."

ಮಾತು ಬದಲಿಸುವ ಜಾಣ್ಮೆ ಸಾಗೂವಿಗೆ ಸಿದ್ಧ ಹಸ್ತವಾಗಿತ್ತು.

"ಹೊರಗೆ ಹೋಗಿ ಕೆಲಸ ಮಾಡಿ, ಇಲ್ಲವಾದರೆ, ನಿಮಗೆ ಢೆಂಗೂ ಜ್ವರ ಬರಿಸಿಬಿಡುತ್ತೇನೆ."

ನನಗೆ ಜ್ವರ ಬಂದಿದ್ದ ಹಾಗೆ ತೋರಿತು. ಅಷ್ಟು ಕೋಪ ಬಂದಿತ್ತು.

"ಢೆಂಗೂ ಜ್ವರ, ಕಾಲರಾ ಜ್ವರದ ತರಹ ಅಂತೆ. ಬ್ಯಾಕ್ಟೀರಿಯಾದಿಂದ ಬರುತ್ತದೆಯಂತೆ ಸಾಬ್! ಲೋನ್ ಮೇಳಕ್ಕೆ ಬರುವ ಗ್ರಾಹಕರಂತೆ, ಈ ಬ್ಯಾಕ್ಟೀರಿಯಾ ಜಮಾಯಿಸಿವೆಯಂತೆ ಗೊತ್ತಾ ಸಾಬ್!"

ನಾನು ಉತ್ತರ ಕೊಡಲಿಲ್ಲ.

"ನೀವು ಢೆಂಗೂ ಜ್ವರ ಬರಿಸುವ ಬ್ಯಾಕ್ಟೀರಿಯಾನ ಸಾಬ್?"

ನನ್ನ ಕೋಪ ಭುಗಿಲ್ ಎಂದು ಹೊರಹೊಮ್ಮುವ ಮೊದಲೇ ಸಾಗೂ ಹೊರಗೆ ಓಡಿದ್ದ!

ಸಾಗೂ ನಿರ್ಗಮಿಸಿದ ಹಾಗೇ, ಜಾಟ್ ಜವಾನನ ಹೆಂಡತಿ ಒಳಗೆ ಬಂದು ಮೂಲೆಯಲ್ಲಿ ನಿಂತಳು. ತಲೆ ತಗ್ಗಿಸಿ ನಿಂತಳು. ಮಾತನಾಡಲಿಲ್ಲ. ನಾನು ಮಾತನಾಡದೆ ಅವಳನ್ನೇ ನೋಡತೊಡಗಿದೆ. ಲಕ್ಷಣವಾದ ಹೆಣ್ಣು. ಜಾಟ್ ಜಾತಿಗೆ ಹೇಳಿ ಹೆಸರಿದಂತೆ ಮೈ ಕಟ್ಟು ಹೊಂದಿದ, ಸುಮಾರು ೨೪-೨೫ ವರ್ಷದ ಹೆಂಗಸು. ತಲೆ ಮೇಲೆ ಸೆರಗು ಹೊದ್ದು ಅಪರೂಪಕ್ಕೆ ಸೀರೆ ಉಟ್ಟು ಬಂದಿದ್ದಳು. ಜಾಟ್‌ರು ಉಡುವ ಸಲ್ವಾರ್ ಕಮೀಜ್ ಅಥವಾ ಹರಿಯಾಣದ ತೊಡಿಗೆ ಉಟ್ಟಿರಲಿಲ್ಲ.

"ಏನು ಬೇಕು?"

"ಔಷಧಿಗೆ ಹಣ ಬೇಕು. ಮನೆಯಲ್ಲಿ ಗೋಧಿ ಇಲ್ಲ."

ಜಾಟ್ ಗಡಸುತನ ಇರಲಿಲ್ಲ; ಮೆದುವಾಗಿತ್ತು ಅವಳ ಧನಿಯಲ್ಲಿ. ನನ್ನ ಕರುಳು 'ಚುರ್' ಎನ್ನಿತು. ವರ್ಮನಿಗೆ ಹೇಳಿ ಕಳುಹಿಸಿದೆ. ಅವನು ಬಂದ ಕೂಡಲೇ, ಅವಳಿಗೆ ಪ್ರಶ್ನೆ ಹಾಕಲಾರಂಭಿಸಿದೆ.

"ಮನೆಗೆ ಕರೆದುಕೊಂಡು ಬಂದೆಯಾ?"

"ಕರೆದುಕೊಂಡು ಬಂದೆ."

"ಶರಾಬು ಕುಡಿಸಿದೆಯಾ?"

ಅವಳು ಉತ್ತರ ನೀಡಲಿಲ್ಲ.

"ಕುಡಿಸು" ಆಜ್ಞಾಪಿಸಿದೆ.

ಅವಳು ಉತ್ತರ ಕೊಡಲಿಲ್ಲ.

"ತೆಗೆದುಕ್ಕೋ" ಎಂದು ಹೇಳಿ ನೂರರ ಒಂದು ನೋಟು ತೆಗೆದು ಅವಳಿಗೆ ನೀಡಿದೆ.

ಶಾಖೆಯಲ್ಲಿ ನಿಷ್ಠೆಯಿಂದ, ಗೌರವದಿಂದ, ತೃಪ್ತಿ ನೀಡುವ ಹಾಗೆ, ತನಗೆ ದೊರಕುವ ಸಂಬಳಕ್ಕೆ ತಕ್ಕ ಹಾಗೆ, ಕೊಟ್ಟ ಕಾರ್ಯ ಮಾಡಿದರೆ, ದೇವರಿಗೆ ಹಿಡಿಸುವುದಿಲ್ಲವೇ? ದೇವರಿಗೆ ಇದರಿಂದ ತೃಪ್ತಿಯಾಗುವುದಿಲ್ಲವೇ? ಬೇಸರವಾಗುವುದೇ? ಶಾಪ ಕೊಡುವವನೇ? ನಮ್ಮ ಜೀವನ ಅತೃಪ್ತಿ, ಅಶಾಂತಿ, ಅನಾರೋಗಗಳಿಂದ ನರಳಿಸುವನೇ? ಕೆಲಸ ನಿಷ್ಠೆಯಿಂದ, ಶ್ರದ್ಧೆಯಿಂದ ಮಾಡುವ ಸಂಸ್ಕೃತಿ ಬೆಳೆಸದೇ, ಬರಿದೇ ದೇವರ ಪೂಜೆ, ಪುನಸ್ಕಾರ, ವಿಧಿ ಸಂಸ್ಕಾರಗಳಲ್ಲೇ ಕಾಲ ಕಳೆಯುವ ಸಾಗೂ ವಿನಂತವರಿಗೆ ಹೇಗೆ ತಿದ್ದಿ ಹೇಳಿ ಕೊಡುವುದು?

"ಸ್ಟೇಟ್‌ಮೆಂಟ್ಸ್ ಮತ್ತು ರಿಟರ್ನ್ಸ್ ಎಲ್ಲಾ ಪೂರೈಸಿದೆಯಾ?"

"ನನಗೆ ಟೈಮೇ ಇಲ್ಲ ಸಾಬ್!"

ಸಲೀಸಾಗಿ ಉತ್ತರಿಸಿದ ಭೂಪ. ಶಾಖೆಯಲ್ಲಿ ಗಣಹೋಮ ಮಾಡಲಿಕ್ಕೆ ಸಮಯವಿದೆ, ಕೆಲಸ ಮಾಡಲಿಕ್ಕೆ ಟೈಮೇ ಇಲ್ಲ ಅಂತಾನೆ!

ಈ ಕುಡುಕನಿಗೆ ಸಮಯವೆಲ್ಲಿ ಸಿಗುತ್ತದೆ ಕೆಲಸ ಮಾಡಲು? 'ದುಡಿಯುವುದು ಕುಡುಕರ ಶಾಪ' ಎಂದು ಹೇಳಿದ್ದಾನಲ್ಲವೇ ಆಸ್ಕರ್ ವೈಲ್ಡ್.

ಸಮಯ ಪ್ರಜ್ಞೆಯೇ ಇಲ್ಲದವನಿಗೆ ಕಾರ್ಯ ಪ್ರಜ್ಞೆ ಎಲ್ಲಿರುತ್ತದೆ?

ತಲೆ ಯಾವಾಗಲೂ ಚಕ್ಕರ್ ಹೊಡೆಯುವವನಿಗೆ ಕಾಲಚಕ್ರದ ಅನುಭವ ಹೇಗೆ ಆದೀತು? 'ಕಾಲ ನಿಯಮವಿಲ್ಲದ ಕೆಲಸ ಸಾವಿಗೆ ಸಮ' ಎಂದು ಹೇಳಿದ ಹಿರಿಯರ ಮಾತು ಸಾಗೂವಿಗೆ ಎಷ್ಟು ಸೂಕ್ತ, ಎಷ್ಟು ಸಮಂಜಸ? ಹೆಂಡತಿಯ ಕೊಲೆ ಮಾಡುವವನು, ಕಾಲವನ್ನು ಕೊಲೆ ಮಾಡುವುದು ಕಷ್ಟವೇ?

"ನೂರಾರು ರಿಟರ್ನ್ಸ್ ಸ್ಟೇಟ್ಮೆಂಟ್ಸ್‌ಗಳಿಂದ ಏನು ಪ್ರಯೋಜನ ಸಾಬ್ ಬ್ಯಾಂಕ್‌ನವರಿಗೆ? ಸುಮ್ಮನೆ ಪೇಪರ್, ಹಣ, ಸಮಯ ಹಾಳು!" ಎಂದ ಸಾಗೂ.

ಪೇಪರ್ ಹಣವನ್ನು ಹಾಳು ಎಂದು ಹೇಳಿ ತನ್ನ ಮತ್ತು ನನ್ನ ಸಮಯವನ್ನು ಹಾಳು ಮಾಡುತ್ತಿರುವ ಸಾಗುವಿನ ಕತ್ತು ಹಿಡಿದು ಹೊರಗೆ ದಬ್ಬುವ ಮನಸ್ಸಾಯಿತು.

"ಈ ರಿಟರ್ನ್ಸ್, ಸ್ಟೇಟ್‌ಮೆಂಟ್ಸ್ ಬದಲು, ಡಿಪಾಸಿಟ್ ಕೂಡಿಸಿ, ಸಾಲ ವಸೂಲಿ ಮಾಡಿ ಎಂದು ಹೇಳಿದ್ದರೆ ಎಷ್ಟು ಚೆನ್ನ!"

"ನನ್ನ ಜೊತೆ ಚರ್ಚೆ ಮಾಡಿ, ಸಮಯ ಹಾಳು ಮಾಡುವ ಬದಲು ಹೋಗಿ ಕೆಲಸ ಮಾಡಿ!"

ನನ್ನ ಗದರಿಕೆಯ ಧ್ವನಿ ಕೇಳಿ, ಆವನಿಗೆ ಅಚ್ಚರಿಯಾಗಿರಬೇಕು.

"ರಕ್ತ ಪರೀಕ್ಷೆ ಮಾಡಿಸಿ ಸಾಬ್! ಢೆಂಗೂ ಜ್ವರ ಇರಬಹುದು."

ಮಾತು ಬದಲಿಸುವ ಜಾಣ್ಮೆ ಸಾಗೂವಿಗೆ ಸಿದ್ಧ ಹಸ್ತವಾಗಿತ್ತು.

"ಹೊರಗೆ ಹೋಗಿ ಕೆಲಸ ಮಾಡಿ, ಇಲ್ಲವಾದರೆ, ನಿಮಗೆ ಢೆಂಗೂ ಜ್ವರ ಬರಿಸಿಬಿಡುತ್ತೇನೆ."

ನನಗೆ ಜ್ವರ ಬಂದಿದ್ದ ಹಾಗೆ ತೋರಿತು. ಅಷ್ಟು ಕೋಪ ಬಂದಿತ್ತು.

"ಢೆಂಗೂ ಜ್ವರ, ಕಾಲರಾ ಜ್ವರದ ತರಹ ಅಂತೆ. ಬ್ಯಾಕ್ಟೀರಿಯಾದಿಂದ ಬರುತ್ತದೆಯಂತೆ ಸಾಬ್! ಲೋನ್ ಮೇಳಕ್ಕೆ ಬರುವ ಗ್ರಾಹಕರಂತೆ, ಈ ಬ್ಯಾಕ್ಟೀರಿಯಾ ಜಮಾಯಿಸಿವೆಯಂತೆ ಗೊತ್ತಾ ಸಾಬ್!"

ನಾನು ಉತ್ತರ ಕೊಡಲಿಲ್ಲ.

"ನೀವು ಢೆಂಗೂ ಜ್ವರ ಬರಿಸುವ ಬ್ಯಾಕ್ಟೀರಿಯಾನ ಸಾಬ್?"

ನನ್ನ ಕೋಪ ಭುಗಿಲ್ ಎಂದು ಹೊರಹೊಮ್ಮುವ ಮೊದಲೇ ಸಾಗೂ ಹೊರಗೆ ಓಡಿದ್ದ!

ಸಾಗೂ ನಿರ್ಗಮಿಸಿದ ಹಾಗೇ, ಜಾಟ್ ಜವಾನನ ಹೆಂಡತಿ ಒಳಗೆ ಬಂದು ಮೂಲೆಯಲ್ಲಿ ನಿಂತಳು. ತಲೆ ತಗ್ಗಿಸಿ ನಿಂತಳು. ಮಾತನಾಡಲಿಲ್ಲ. ನಾನು ಮಾತನಾಡದೆ ಅವಳನ್ನೇ ನೋಡತೊಡಗಿದೆ. ಲಕ್ಷಣವಾದ ಹೆಣ್ಣು. ಜಾಟ್ ಜಾತಿಗೆ ಹೇಳಿ ಹೆಸರಿದಂತೆ ಮೈ ಕಟ್ಟು ಹೊಂದಿದ್ದ, ಸುಮಾರು ೨೪-೨೫ ವರ್ಷದ ಹೆಂಗಸು. ತಲೆ ಮೇಲೆ ಸೆರಗು ಹೊದ್ದು ಅಪರೂಪಕ್ಕೆ ಸೀರೆ ಉಟ್ಟು ಬಂದಿದ್ದಳು. ಜಾಟ್‌ರು ಉಡುವ ಸಲ್ವಾರ್ ಕಮೀಜ್ ಅಥವಾ ಹರಿಯಾಣದ ತೊಡಿಗೆ ಉಟ್ಟಿರಲಿಲ್ಲ.

"ಏನು ಬೇಕು?"

"ಔಷಧಿಗೆ ಹಣ ಬೇಕು. ಮನೆಯಲ್ಲಿ ಗೋಧಿ ಇಲ್ಲ."

ಜಾಟ್ ಗಡಸುತನ ಇರಲಿಲ್ಲ; ಮೆದುವಾಗಿತ್ತು ಅವಳ ಧನಿಯಲ್ಲಿ. ನನ್ನ ಕರುಳು 'ಚುರ್' ಎನ್ನಿತು. ವರ್ಮನಿಗೆ ಹೇಳಿ ಕಳುಹಿಸಿದೆ. ಅವನು ಬಂದ ಕೂಡಲೇ, ಅವಳಿಗೆ ಪ್ರಶ್ನೆ ಹಾಕಲಾರಂಭಿಸಿದೆ.

"ಮನೆಗೆ ಕರೆದುಕೊಂಡು ಬಂದೆಯಾ?"

"ಕರೆದುಕೊಂಡು ಬಂದೆ."

"ಶರಾಬು ಕುಡಿಸಿದೆಯಾ?"

ಅವಳು ಉತ್ತರ ನೀಡಲಿಲ್ಲ.

"ಕುಡಿಸು" ಆಜ್ಞಾಪಿಸಿದೆ.

ಅವಳು ಉತ್ತರ ಕೊಡಲಿಲ್ಲ.

"ತೆಗೆದುಕೋ" ಎಂದು ಹೇಳಿ ನೂರರ ಒಂದು ನೋಟು ತೆಗೆದು ಅವಳಿಗೆ ನೀಡಿದೆ.

"ಸ್ವಲ್ಪ ಹಣ ಕೊಡಿ ಸಾಬ್" ಎಂದು ನನಗೆ ಹೇಳಿದ.

ಜೇಬಿನಿಂದ ಹಣ ತೆಗೆದು ಅವನಿಗೆ ನೀಡಿದೆ.

ಹಣ ತೆಗೆದುಕೊಂಡು ಅವಳು ಹೊರಟುಹೋದಳು.

"ಅವನಿಗೆ ಶರಾಬು ಕುಡಿಸಲಿಕ್ಕೆ ಯಾಕೆ ಹೇಳಿದೆ?"

"ಸಾಬ್! ಅವನು ಆಸ್ಪತ್ರೆಯಲ್ಲಿರುವ ತನಕ ಬದುಕಿರುತ್ತಾನೆ. ಮನೆಗೆ ಬಂದರೆ ಕುಡಿಯಲಿಕ್ಕೆ ಶುರು ಮಾಡುತ್ತಾನೆ. ಸಂಸಾರ ನಡೆಸಲಿಕ್ಕೆ ಕಾಸಿಲ್ಲ. ಕುಡಿಯಲಿಕ್ಕೆ ಎಲ್ಲಿಂದ ತರುತ್ತಾಳೆ ಕಾಸು ಇವನ ಹೆಂಡತಿ?"

"ಇವನ ಸ್ಥಿತಿ ಹೀಗಿದೆ ಎಂದು ಹೇಳಿ, ಇವಳಿಗೆ ಬ್ಯಾಂಕ್‌ನಲ್ಲಿ ಕೆಲಸ ಕೊಡಿಸಲಿಕ್ಕೆ ನಾವು ಪ್ರಯತ್ನಿಸಬಹುದಲ್ಲವೆ?"

ವರ್ಮಾ ನಕ್ಕ.

"ಗಂಡ ಬದುಕಿದ್ದಾಗ, ಹೆಂಡತಿಗೆ ಕೆಲಸ ಯಾವ ಬ್ಯಾಂಕ್ ಕೆಲಸ ಕೊಡುವುದಿಲ್ಲ ಸಾಬ್! ಇವನು ಸತ್ತರೆ, ಕೆಲಸ ಗಟ್ಟಿ!"

"ಹಾಗಾದರೆ ಹೇಗೆ ಈ ಸಮಸ್ಯೆ ಬಗೆಹರಿಸುವುದು?"

"ಸುಲಭ. ಇವ ಸಾಯಬೇಕು. ಶರಾಬು ಕುಡಿಸಿದರೆ ಸಾಯುತ್ತಾನೆ ಬೇಗ. ಹೆಂಡತಿಗೆ ಸಿಗುತ್ತದೆ ಕೆಲಸ ಬೇಗ!"

ನನ್ನ ಮೈ ಬೆವರಿ ಒದ್ದೆಯಾಯಿತು ವರ್ಮನ ಮಾತು ಕೇಳಿ.

"ಕೆಲಸಕ್ಕೋಸ್ಕರ ಒಬ್ಬನ ಸಾವನ್ನು ಬಯಸಬೇಕೆ?"

"ಬದುಕುವುದಕ್ಕೋಸ್ಕರ ಇವನ ಸಾವನ್ನು ಬಯಸಬೇಕು ಸಾಬ್!"

ಎಂದು ಹೇಳಿ ವರ್ಮಾ ಹೊರಗೆ ಹೋದ. ಕೆಲವೇ ನಿಮಿಷಗಳಲ್ಲಿ ಓಡಿ ಬಂದ.

"ಸಾಬ್! ಇಂದಿರಾ ಗಾಂಧಿಯವರಿಗೆ ಗುಂಡಿಟ್ಟು, ಹೊಡೆದರಂತೆ!"

# 22

ಮೂರು ಗಂಟೆ ಸುಮಾರಿಗೆ ಸುದ್ದಿ ಬಿತ್ತರಿಸಲ್ಪಟ್ಟಿತು. ಇಂದಿರಾ ಗಾಂಧಿ ಇನ್ನಿಲ್ಲ. ಜನ ಹುಚ್ಚರಾದರು, ಉನ್ಮತ್ತರಾದರು, ಸೇಡಿನ ಕಿಡಿ ಭುಗಿಲ್ ಎಂದು ಹತ್ತಿ ಉರಿಯಿತು. ನೋಡುತ್ತಿದ್ದಂತೆಯೇ, ಕೈಗೆ ಸಿಕ್ಕ ಆಯುಧಗಳಿಂದ ಕಂಡ ಕಂಡ ಸಿಖ್‌ರನ್ನು ಹಿಡಿದು ಚಚ್ಚಿದರು. ಬಸ್ಸಿನಿಂದ ಹೊರಗೆಳೆದು ಅವರ ಕೈ ಕಾಲು ಮುರಿದರು. ಪೊಲೀಸರು ತಕ್ಷಣ ಕಾರ್ಯ ನಿಮಿತ್ತರಾದರು. ಲಾಠಿ ಚಾರ್ಜು, ಅಶ್ರು ವಾಯುಗಳ ಪ್ರಹಾರ ಸ್ವಲ್ಪಮಟ್ಟಿಗೆ ಪರಿಸ್ಥಿತಿ ಹತೋಟಿಗೆ ಬಂದಿತು.

ಮಾರನೆಯ ಬೆಳಿಗ್ಗೆ ಎಂದಿನಂತೆ ಬ್ಯಾಂಕ್‌ಗೆ ಬಂದಾಗ ವರ್ಮಾ ಕಾಯುತ್ತಾ ಇದ್ದ. " ಮೊದಲು ಮನೆಗೆ ಹೋಗಿ. ಎಲ್ಲೆಲ್ಲೂ ರಕ್ತದ ವಾಸನೆ ಹರಡುತ್ತಾ ಇದೆ."

ಮೋಟರ್ ಸೈಕಲ್ ಹತ್ತಿ ಒಡನೆಯೇ ಹೊರಟೆ.

ದಾರಿಯಲ್ಲಿ ಎಲ್ಲೂ ಜನ ಸಂಚಾರವಿರಲಿಲ್ಲ. ಅಂಗಡಿಗಳು ಮುಚ್ಚಿದ್ದವು. ಕೆಲವು ಅಂಗಡಿಗಳು ಸುಟ್ಟು ಬೂದಿಯಾಗಿದ್ದವು. ಸ್ವಲ್ಪ ದೂರ ಸವೆಸಿದೊಡನೆ ಒಬ್ಬ ಗಲ್ಲಿಯಿಂದ ಓಡಿ ಬಂದು ನನ್ನ ಗಾಡಿಗೆ ತಡೆ ಹಾಕಿ ನಿಲ್ಲಿಸಿದ. ತಲೆಗೆ ಹಾಕಿದ ಹೆಲ್ಮೆಟ್‌ಗೆ ಕೈ ಹಾಕಿದ. ಹೆಲ್ಮೆಟ್ ಸರಿಸಿ ನನ್ನ ತಲೆ ನೋಡಿ 'ಜಾವ್!' ಎಂದ.

ಗಾಡಿಯ ಚಕ್ರ ತಿರುಗಿದ ಹಾಗೆ ನನ್ನ ತಲೆ ತಿರುಗಿತು. ಎದೆ ನಡುಗಿ, ಬೆವರು ಕಿತ್ತು ರಕ್ತ ಗರಿದ ಹಾಗೆ ಮೈ ತುಂಬ ಹರಿದಾಡಿತು. ರಕ್ತದ ವಾಸನೆ ಮೂಗಿಗೆ ಬಡಿಯಿತು. ಮನೆಗೆ ಬಂದು ಸೇರಿ, ಹಾಸಿಗೆಯ ಮೇಲೆ ಬಿದ್ದವ ಸತ್ತವನಂತೆ ಮಲಗಿದೆ.

ತೀವ್ರ ಭೀತಿ ಭಯಗಳಿಂದ ಮೈ ಮನ ತತ್ತರಿಸಿತ್ತು. 'ತೀವ್ರ ಭೀತಿ ಸಾಂಕ್ರಾಮಿಕ ವಂತೆ' ನನ್ನಿಂದ ಇನ್ನು ಯಾರಿಗೂ ಭೀತಿ ಹರಡಬಾರದೆಂದು, ಮೇಲೆದ್ದು ಬಾಗಿಲು ಭದ್ರಪಡಿಸಿ ಮತ್ತೆ ಮಲಗಿದೆ.

ಆ ರಾತ್ರಿ ದಿಲ್ಲೀಯ ರಸ್ತೆಗಳಲ್ಲಿ, ಮನೆಗಳಲ್ಲಿ, ಬಸ್ತಿಯಲ್ಲಿ, ಓಣಿಗಳಲ್ಲಿ, ಗಲ್ಲಿಗಳಲ್ಲಿ ಎಲ್ಲೆಲ್ಲೂ ಸಿಖ್‌ರು ಬಹು ಸಂಖ್ಯೆಯಲ್ಲಿ ವಾಸಿಸುತ್ತಿದ್ದರೋ ಅಲ್ಲಲ್ಲಿ ರಕ್ತದ ಓಕಳಿ ಜರುಗಿತು. ಮತ್ತೊಮ್ಮೆ ದಿಲ್ಲೀ ನಗರದ ಹಸುಗೂಸುಗಳ, ನಿಷ್ಕಳಂಕ ಜನರ, ನಿರಪರಾಧಿ ಹೆಂಗಸರ ಕಗ್ಗೊಲೆ ತೈಮೂರ್‌ಲೇನ್, ತೊಘಲಕ್, ನಾದಿರ್ ಶಹಾ, ಅಬ್ದಾಲಿಯವರೆಲ್ಲಾ ಒಂದಾಗಿ ಪುನರ್ಜನ್ಮ ತಾಳಿ, ಒಟ್ಟಾಗಿ ಒಮ್ಮೆಲೆ ನಡೆಸಿದ್ದರು. ಈ ಕಟುಕರೆಲ್ಲಾ, ಪುನರ್ಜನ್ಮ ತಳೆದ ಭಾರತೀಯರೇ ಆಗಿದ್ದರು. ಇವರು ನಡೆಸಿದ ಘನಘೋರ ನರಹತ್ಯೆ ಗಗನದಿಂದ ಬೀಳಿಸಿದ ಬಾಂಬ್‌ನ ಹೊಡೆತಕ್ಕಿಂತ, ಸೈನಿಕರ ಬಂದೂಕಗಳ ಗುಂಡಿನ ರಭಸಕ್ಕಿಂತ, ಟ್ಯಾಂಕ್ ಗನ್‌ಗಳಿಂದ ಉಂಟಾದ

ವಿನಾಶಕ್ಕಿಂತ, ಮಿಗಿಲಾಗಿ ಎದೆ ನಡುಗುವಂತಹದಾಗಿತ್ತು. ಮನೆಯಿಂದ ಅವರ ಜುಟ್ಟು ಹಿಡಿದೆಳೆದು ಹೊರಗೆಳೆದು, ಸೀಮೇ ಎಣ್ಣೆ ಸುರಿದು ಜೀವಿತ ಸುಟ್ಟು, ಬೂದಿ ಮಾಡುವುದರ ಮೂಲಕ ಮನುಷ್ಯ ಪ್ರಾಣಿ ತನ್ನ ಪಿಶಾಚತನ, ತನ್ನ ಕ್ರೌರ್ಯ, ನೀಚತನ, ರಕ್ತಪಿಪಾಸತನ ತೋರಿಸಿ ರುಜುವಾತು ಪಡಿಸಿದ. ನಾಗರೀಕತೆಯ ಕತೆ ಶುರುವಾದಾಗಿನಿಂದ ಇಂದಿನವರೆವಿಗೂ ಮನುಷ್ಯರು ಜಗಳಗಳಲ್ಲಿ, ಕದನಗಳಲ್ಲಿ, ಧರ್ಮಯುದ್ಧಗಳಲ್ಲಿ, ಮಹಾಯುದ್ಧಗಳಲ್ಲಿ, ಲಕ್ಷಾಂತರ ಮನುಷ್ಯರನ್ನು ಕೊಂದಿದ್ದಾರೆ. ಆದರೆ ಒಬ್ಬ ನಾಯಕನನ್ನು ಕೊಂದಿದ್ದಕ್ಕೆ, ಇಡೀ ಜನಾಂಗವನ್ನು ನಾಶ ಮಾಡಲು ಹೊರಟ ಜನರ ಪಾಶವೀ ಕೃತ್ಯ ಮಾನವ ಕುಲಕ್ಕೆ ಕಳಂಕಪ್ರಾಯವಾದಂತಾಯಿತು.

ಇನ್ನೊಬ್ಬರ ರಕ್ತ ಚೆಲ್ಲುವುದು ಅಷ್ಟು ಸುಲಭವೇ? ಹೆಂಗಸರ ಶೀಲಹರಣ ಮಾಡಿ, ಅವರ ಹತ್ಯೆ ಮಾಡುವುದು, ನಾಗರೀಕ ಮನುಷ್ಯನ ಗುಣವೇ?

ಒಂದು ವಂಶ, ಬುಡಕಟ್ಟಿಗೆ ಸೇರಿದ ಜನ ಇನ್ನೊಂದು ಬುಡಕಟ್ಟಿನ ಜನರ ಮೇಲೆ ಹಿಂಸೆ, ಅತ್ಯಾಚಾರ, ಕೊಲೆ ಮಾಡುತ್ತಾ ಇರುವುದು ಬುಡಕಟ್ಟುಗಳು ಹುಟ್ಟಿದಾಗಿನಿಂದ ನಡೆದು ಬಂದ ರೀತಿ. ಒಂದು ಜಾತಿ, ಪಂಗಡ, ಧರ್ಮದವರು ಮತ್ತೊಂದು ಧರ್ಮೀಯರ ವಿರುದ್ಧ ದ್ವೇಷ, ಭಯೋತ್ಪಾದನೆ, ಆತಂಕ, ನಿರಂತರವಾಗಿ ನಡೆಸಿಕೊಂಡೇ ಬಂದಿರುತ್ತಾರೆ. ಆದರೆ, ಸಿಖ್‌ರು- ಹಿಂದೂಗಳು ಒಂದೇ ರಕ್ತ ಹಂಚಿಕೊಂಡವರು, ಒಂದೇ ಭಾಷೆ ಮಾತನಾಡುವವರು, ಒಂದೇ ಸಂಸ್ಕೃತಿ ಹೊಂದಿದವರು, ಒಂದೇ ನೆಲದಲ್ಲಿ ಹುಟ್ಟಿದವರು, ಒಂದೇ ದೇವರನ್ನು ನಂಬಿದವರು, ಈ ಪರಿಯ ರಕ್ತಕಾಂಡದಲ್ಲಿ ಭಾಗಿಗಳಾಗಿ ಮಾನವನ ನಾಗರೀಕತನಕ್ಕೆ, ಸದ್ಭಾವನೆಗಳಿಗೆ, ಒಳ್ಳೆಯತನಕ್ಕೆ, ಸರಳತೆಗೆ, ಅಹಿಂಸಾತತ್ವಕ್ಕೆ, ಸತ್ಯದ ಅನ್ವೇಷಣೆಗೆ, ಸಂಭಾವಿತನಕ್ಕೆ, ಧರ್ಮವಿದ್ಯೆಯ ಪಾಲಿಕೆಗೆ, ಧಾರಾಳತನಕ್ಕೆ, ಕ್ಷಮಾಭಾವನೆಗೆ, ಬೆಲೆಯೇ ಇಲ್ಲವಾದಂತೆ ಮಾಡಿದ್ದಾನಲ್ಲವೇ?

ಪ್ರೀತಿಸುವ ಹೆಂಗಳಯರನ್ನು ಕಣ್ಣೀರಿಟ್ಟು, ಗೋಳಾಡುತ್ತಿದ್ದ ತಾಯಿಯವರನ್ನು ಮೊಲೆ ಹಾಲು ಕುಡಿಯುತ್ತಿದ್ದ ಹಸುಳೆಗಳನ್ನು ಅವರ ಮುಂದೆಯೇ ಅಂಗಳದಲ್ಲಿ, ಬೀದಿಗಳಲ್ಲಿ ಆಟವಾಡುತ್ತಿದ್ದ ಎಳೇ ಮಕ್ಕಳನ್ನು, ಶಾಲೆಗೆ ಹೋಗಲು ಅಣಿಯಾಗುತ್ತಿದ್ದ ಬಾಲಕಬಾಲಕಿಯರನ್ನು, ಚಿತ್ರಹಿಂಸೆ ಮಾಡಿ ಕೊಂದ, ಜನರ ರಕ್ತಪಿಪಾಸಿತನಕ್ಕೆ ದಿಲ್ಲೀಯ ನೆಲದ ಗುಣ ಹೊಣೆಯೇ? ಅಥವಾ ಆಕ್ರಮಣಕಾರಿ, ವಿಧ್ವಂಸಕಾರಿ, ಅನಾಗರೀಕ, ಅಸಂಸ್ಕೃತ, ಕ್ರೂರಿ ಉಗ್ರಗಾಮಿಗಳಾದ, ಘೋರಿ, ಘಸ್ನೀ, ಐಬಕ್, ತೊಘಲಕ್, ಖಿಲ್ಜೀ, ತೈಮೂರ್, ಮೊಘಲ್, ಆಫ್ಘನ್, ನಾದರ್ ಶಾ ಮುಂತಾ

ದವರು ಲಕ್ಷಾಂತರ ದಿಲ್ಲೀ ಜನರ ಹತ್ಯಾಕಾಂಡ ಜರುಗಿಸಿ, ದಿಲ್ಲೀ ನಗರ ಧ್ವಂಸ ಮಾಡಿದ ಅವರ ಪ್ರೇತಗಳು ಇನ್ನೂ ಈ ನಗರದ ಆಕಾಶದಲ್ಲಿ, ಗಾಳಿಯಲ್ಲಿ ಹಾರಾಡುತ್ತಾ, ಚೀರುತ್ತಾ, ಸೇಡಿಗಾಗಿ ಹಾತೊರೆಯುತ್ತಾ ಇದ್ದು, ಇದೇ ಸುಸಮಯ ವೆಂದು ಬಗೆದು, ಮತ್ತೊಮ್ಮೆ ರಕ್ತ ಚೆಲ್ಲುವಂತೆ ಮಾಡಿದವೆಯೇ? ದಿಲ್ಲೀ ಯನ್ನು ಯಾಕೆ ನರಕವನ್ನಾಗಿ ಮಾಡಲು ಹೆಣಗಿದ್ದಾರೆ? ಇತಿಹಾಸದ ಪುಟಗಳಲ್ಲಿ ದಿಲ್ಲೀ ನಗರ ನರಕವನ್ನಾಗಿ ಮಾಡಲು ಎಷ್ಟು ಜನ, ಎಷ್ಟು ರಾಜರು, ಸಾಮ್ರಾಟರು, ಸುಲ್ತಾನ್‌ರು, ಬಾದ್‌ಶಹಾರು, ಆಕ್ರಮಣಕಾರರು ತಮ್ಮ ನೆತ್ತರು ಹರಿಸಿದ್ದಾರೆ? ನರಕವೆಂದರೆ ಕೇಡು, ದುಃಖ, ಮನಃಕ್ಲೇಷ, ಹಿಂಸೆ, ದುಗುಡ, ಕಳವಳಗಳ ಬೀಡು ಎನ್ನುತ್ತಾರೆ. ಕಾಮ, ಕ್ರೋಧ, ಲೋಭ, ನೆಲದ ದಾಹ, ಅಧಿಕಾರದಾಹ ಮತ್ತಿತರ ಕಾರಣಗಳು ಎನ್ನುತ್ತಾರೆ. ಆದರೆ, ಅನಗತ್ಯ, ಅಕಾರಣ, ಅನಾವಶ್ಯಕವಾಗಿ ಮನುಷ್ಯ ತನ್ನ ಸಹಜೀವಿಯನ್ನು ಯಾಕೆ ಹಿಂಸಿಸಿ ಕೊಲ್ಲುವುದಕ್ಕೆ ಪ್ರಯತ್ನಸುತ್ತಾನೆ?

ಒಂದು ವಾರ ಸತತವಾಗಿ ನಡೆದ ರಕ್ತಕಾಂಡದಲ್ಲಿ ಸಾವಿರಾರು ಜನರ ಹತ್ಯಾಕಾಂಡ ಜರುಗಿ, ಪರಿಸ್ಥಿತಿ ಹತೋಟಿಗೆ ಬಂದಿತೆಂದು ತಿಳಿದ ನಂತರ, ಶಾಖೆಯ ಬಾಗಿಲನ್ನು ತೆರೆದೆ. ದಿಲ್ಲೀ ಸಾಧಾರಣ ಸ್ಥಿತಿಗೆ ಕುಂಟುತ್ತಾ, ತೆವಳುತ್ತಾ ಬಂದಿತ್ತು. ದಿಲ್ಲೀವಾಲರು ಹೆದರಿ ಮುದುರಿದ್ದರೂ, ತಮ್ಮ ತಮ್ಮ ಮನೆಗಳನ್ನು ಬಿಟ್ಟು ಕಚೇರಿ, ಮಳಿಗೆಗಳನ್ನು ತೆರೆದಿದ್ದರು. ಪೊಲೀಸ್, ಸೈನ್ಯ ಕಾವಲು ಬಲವಾಗಿತ್ತು. ನಾನು ಹೆದರಿಕೊಂಡೇ ಶಾಖೆಗೆ ಬಂದು, ನನ್ನ ಕೋಣೆಯಲ್ಲಿ ಕುಳಿತೆ. ನೌಕರರು ಅರ್ಧದಷ್ಟು ಹಾಜರಿರಲಿಲ್ಲ. ಕೆಲಸ ಸಾಗಿಸಿದೆವು.

ಫೋನ್ 'ಟ್ರಿನ್' ಎಂದಿತು. ಆ ಕಡೆಯಿಂದ ವಕೀಲ ನರಪೇತಲ ಮಾತನಾಡುತ್ತಿದ್ದ.

"ನಿಮ್ಮ ಗ್ರಾಹಕರಲ್ಲಿ ಯಾರಾದರೂ ಸಿಖ್‌ರಿದ್ದಾರೆಯೇ? ಅವರ ಅಂಗಡಿ ಸುಟ್ಟು ಹಾಕಿದ್ದಾರೆಯೇ?"

"ಯಾಕೆ?"

ಸೋಜಿಗವಾಗಿತ್ತು ನನಗೆ.

"ಅವರ ಕೇಸ್‌ಗಳನ್ನು ನನಗೆ ಕೊಡಿಸುತ್ತೀರಾ?"

'ಥತ್' ಎಂದು ಫೋನ್ ಕುಕ್ಕಿದೆ. ಯಾರಾದರೂ ಸತ್ತರೆ, ಸುಟ್ಟರೆ ಈ ವಕೀಲನಿಗೆ ಎಷ್ಟು ಲಾಭ?

ವರ್ಮಾ, ಸ್ವಲ್ಪ ಹೊತ್ತಿನನಂತರ ನನ್ನ ಬಳಿ ಬಂದ. ಬಂದು ನಿಂತು ನನ್ನ ಮುಖವನ್ನು ದಿಟ್ಟಿಸಿ ನೋಡಿದ. ಅವನ ಮುಖ ಬಾಡಿತ್ತು. ನಿದ್ರೆ ಇಲ್ಲದೆ ಕಣ್ಣುಗಳು

ಗುಳಿಬಿದ್ದಿದವು. ಮುಖ ಕ್ಷೌರ ಮಾಡದೆ, ಗಡ್ಡ ಬೆಳೆದು ಒಮ್ಮೆಲೆ ವಯಸ್ಸಾದ ಹಾಗೆ ತೋರಿತು.

"ಸಾಬ್! ನಿಮಗೆ ಒಂದು ವಿಷಯ ಹೇಳಬೇಕು."

ಅವನ ಧ್ವನಿ ಕ್ಷೀಣವಾಗಿತ್ತು. ಎಂದೂ ಗೆಲುವು, ನಲಿವುಗಳ ಚಿಲುಮೆಯಂತಿದ್ದ ಈತ ಇಂದು ಏಕೆ ಹೀಗಾಗಿದ್ದನೆ? ದಿಲ್ಲೀ ಹತ್ಯಾಕಾಂಡ ಇವನ ಮೇಲೆ ಭಾರಿ, ಭಯಂಕರ ಮಹತ್ತರ ಪರಿಣಾಮ ಉಂಟು ಮಾಡಿತೆ?ಅಥವಾ ಇವನ ಹತ್ತಿರದ ಸಂಬಂಧಿಗಳು ಈ ರಕ್ತಕಾಂಡದಲ್ಲಿ ಮಿಂದಿದ್ದಾರೆಯೆ? ಇವನ ಹೆಂಡತಿ ಸಿಖ್ ಳಲ್ಲವೇ? ಅವಳಿಗೇನಾದರೂ ಆಯಿತೆ? ಅವಳ ಸಂಬಂಧಿಕರು ಈ ರಕ್ತಪಾತದಲ್ಲಿ ಕೊಚ್ಚಿಹೋದರೆ?

"ಯಾಕೆ? ಏನಾಯಿತು?"

ನಡುಗುವ ಧ್ವನಿಯಲ್ಲಿ ಕೇಳಿದೆ.

"ಸಾಬ್!......"

ಅವನ ಧ್ವನಿ ನಡುಗಿ, ಕಣ್ಣೀರು ಧುಮುಕಿತು ಕೆನ್ನೆಯ ಮೇಲೆ.

ಗಾಭರಿಯಾಗುವ ಸರದಿ ನನ್ನದಾಯಿತು.

"ಏನು ವರ್ಮಾ? ಏನಾಯಿತು?"

"ಸಾಬ್!.... ಕಪೂರ್ ಮತ್ತು ಸರ್ದಾರ್ಜೀ ಇಬ್ಬರನ್ನು ಕೊಲೆ ಮಾಡಿಬಿಟ್ಟರು ಪಾಪಿಗಳು!"

ಸಿಡಿಲಿನಂತೆ ಎರಗಿತ್ತು ಅವನ ಮಾತುಗಳು!

"ಸರ್ದಾರ್ಜೀಯನ್ನು ಬಚಾವ್ ಮಾಡಲೆಂದು, ರಾತ್ರೋರಾತ್ರಿ ಜಮುನಾ ಪಾರ್‌ನಲ್ಲಿದ್ದ ಅವನ ಮನೆಗೆ ಹೋಗಿ ಅವನನ್ನು ಕರೆದುಕೊಂಡು, ತನ್ನ ಸ್ಕೂಟರ್‌ನಲ್ಲಿ ಬರುವಾಗ, ಗುಂಪೊಂದು ಇಬ್ಬರನ್ನು ಹಿಡಿದು, ಕೊಂದು ಬಿಟ್ಟಿತು!"

ತಲೆ ತಿರುಗಿ ಮೇಜಿನ ಮೇಲೆ ಅಪ್ಪಳಿಸಿತು ನನ್ನ ತಲೆ!

* * *



ಶ್ರೀ ಎ.ಎಸ್. ನಟರಾಜ್ ಅವರ 'ಬಾತುಕೋಳಿ' ಕುರಿತು

ಪ್ರಿಯ ಶ್ರೀ ನಟರಾಜ್

ನಮಸ್ಕಾರ

ನಿಮ್ಮ ಕಾದಂಬರಿ [illegible] ಯನ್ನು ಓದಿ ಎಷ್ಟು ಸಂತೋಷವಾಯಿತು ಎಂದು ನಿಮಗೆ [illegible] ದನ್ನು ಬರೆಯುತ್ತಿದ್ದೇನೆ. ಬಹು ಸೊಗಸಾದ ಕಾದಂಬರಿಯ [illegible] ಕಥೆಯು ಸ್ವಾರಸ್ಯವಾಗಿದೆ. ಜೊತೆಗೆ ಪಾತ್ರಗಳು ಜೀವಂತ. [illegible] ಆವನ 'ಹೆಂಡತಿ' ಯಾಗಲಿ, ಮನೆಯಾಗಲಿ ಶ್ರೀಧರನ್ [illegible] ದ 'ನಾನಾ'ಗಲಿ ಜೀವಂತವಾಗಿ ನಮ್ಮ ಮುಂದೆ ನಿಲ್ಲುತ್ತಾರೆ. [illegible] ಸಂಭಾಷಣೆಯ ನಿರ್ವಹಣೆ ಕಷ್ಟ. ನಿತ್ಯ ಜೀವನದ [illegible] ದ್ದರೂ ಅದರ ನೀರಸತೆಯನ್ನು ಕಳೆದುಕೊಳ್ಳಬೇಕು. ಸಂಭಾಷ [illegible] ಷಣೆ ನಿಮಗೆ ಸಹಜವಾಗಿ ಬಂದಿದೆ ಎಂದು ತೋರುತ್ತದೆ. [illegible] ವಾಗಿ ಬರುವ ಹತ್ತಾರು ದೃಷ್ಟಿಕೋನಗಳು, ಪಾತ್ರಗಳ [illegible] ಪ್ರಕಟವಾಗುವ ಮೌಲ್ಯಗಳು. ಕರ್ಕಗಾರ್ಡನ್ ಪ್ರಸ್ತಾಪವನ್ನು [illegible] ವೂ ಆಯಿತು, ಆಶ್ಚರ್ಯವೂ ಆಯಿತು. ಒಳ್ಳೆಯ ಕಾದಂಬರಿ. [illegible] ಗಮನಕ್ಕೆ ಬಂದು ಅದಕ್ಕೆ ಯೋಗ್ಯ ಸ್ವಾಗತ ದೊರೆಯುವ [illegible] ಸುತ್ತೇನೆ.

[illegible] ಮನೆಯವರಿಗೆ ನನ್ನ ನಮಸ್ಕಾರಗಳು.

ವಿಶ್ವಾಸದ

ಎಲ್.ಎಸ್. ಶೇಷಗಿರಿ ರಾವ್


**ಹಂಸ ಪ್ರಕಾಶನ**

ನಂ. 947, 3ನೇ ಮುಖ್ಯ ರಸ್ತೆ,

ವಿಜಯನಗರ,

ಬೆಂಗಳೂರು - 560 040.